# ಕರ್ಮವೀರ

ದೀಪಾವಳಿ ಸಂಚಿಕೆ

೧೯೫೭




ಬೆಲೆ ೧ ರೂ

ದೀಪಾವಳಿಯ ಹಾರ್ದಿಕ ಅಭಿನಂದನೆಗಳು ಹಾಗೂ ಶುಭ ಚಿಂತನೆಗಳು





ನೀವು ಮೈಸೂರಿಗೆ ಬಂದಾಗ್ಗೆ

# ಇಂದ್ರ ಭವನ

ಫೋನ: ೫೯೦

ತಂತಿ: INDBAN

ಧನ್ವಂತ್ರಿ ರೋಡ. ಮೈಸೂರ

ಸ್ವಂತ ಮನೆಯಂತೆಯೇ ಉಳಿದುಕೊಳ್ಳಲು ಹಾಗೂ ರುಚಿಕರ ಊಟಕ್ಕಾಗಿ ಇಲ್ಲಿ ಇಳಿದುಕೊಳ್ಳಿರಿ







ನಮ್ಮೆಲ್ಲ ಗ್ರಾಹಕರಿಗೆ
ಸುಖಮಯ ದೀಪಾವಳಿಯ ಅಭಿನಂದನೆಗಳು





# ಆಫಗಾನ ಸ್ನೊ

ಸೌಂದರ್ಯ ಸಾಧನಗಳು

ತಯಾರಕರು

ಈ. ಎಸ್. ಪಾಟನವಾಲಾ

ಕ್ಯಾನೋಟ ರೋಡ- ಮುಂಬಯಿ- ೧೨




अफगान स्नो
सौंदर्य प्रसाधनें






## INDEX TO ADVERTISERS



**Cover Pages**



**Inside art pages.**



**Book Mark**



# ಪರಿಪೂರ್ಣ ಪರಿಮಳಕ್ಕೆ

## ಸದಾ ತಾಜಾ

# ಸಿ.ಸಿ.ಸಿ.ಕಾಫಿ

ರುಚಿ ರುಚಿಕರವಾದ "ಬ್ಲೆಂಡು"ಗಳಲ್ಲಿಯೂ
ವಿವಿಧ ನಮೂನೆಯ ಪ್ಯಾಕಿಂಗುಗಳಲ್ಲಿಯೂ ದೊರೆಯುತ್ತ

— ತಯಾರಕರು —

**ಕರ್ನಾಟಕ ಕಾಫಿ ಕಂಪನಿ;**
ಗಾಂಧಿಸರ್ಕಲ್ — ದಾವಣಗೆರೆ ಸಿಟಿ.
(ಮೈಸೂರು ಸಂಸ್ಥಾನ)

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ.

---

# ದಿ ಕೆನರಾ ಇಂಡಸ್ಟ್ರಿಯಲ್ & ಬೇಂಕಿಂಗ್ ಸಿಂಡಿಕೇಟ್ ಲಿಮಿಟೆಡ್,

H. O.: ಉಡುಪಿ. ESTD: 1925

. . .ದೀಪಾವಳಿಯ ಪುಣ್ಯದಿನದಂದು . . . . . . .

ಗತವರ್ಷದ ಆಯುವ್ಯಯಗಳ ಪರಿಶೀಲನೆ, ಮುಂದಿನ ವರುಷದ ವ್ಯವಹಾರದ ಕಲ್ಪನೆಗಳನ್ನು ಮಾಡುವುದರ ಜೊತೆಗೆ ನಿಮ್ಮ ಆರ್ಥಿಕ ವ್ಯವಹಾರಕ್ಕೆ ಅನುಕೂಲವಾದ ಒಂದು ಬೇಂಕನ್ನೂ ನೀವು ಆರಿಸಬೇಕಾಗಿದೆ.



## "ಸಿಂಡಿಕೇಟ್ ಬೇಂಕು"

96 ಶಾಖೆಗಳಿಂದಲೂ ರೂ. 11 ಕೋಟಿಗೂ ಮಿಕ್ಕಿದ ಚಲಾವಣಾನಿಧಿಯಿಂದಲೂ 32 ವರುಷಗಳಿಗೂ ಮಿಕ್ಕಿದ ಅನುಭವದಿಂದಲೂ ನಿಮ್ಮ ಸೇವೆಗೆ ಸಿದ್ಧವಿದೆ.



★ ದೀಪಾವಳಿಯ ಶುಭಾಶಯಗಳು ★

**THE CANARA INDUSTRIAL & BANKING SYNDICATE LTD., UDIPI**

---

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ!

ಮೋಹಿನಿಯರ ಮನಸೆಳೆಯುವ ಪತ್ತಲಗಳು, ಸೀರೆಗಳಿಗಾಗಿ ಜ್ಞಾಪಕವಿಡಿ!

**ಚಿದಾನಂದ ಹ್ಯಾಂಡಲೂಮ ಇಂಡಸ್ಟ್ರೀಜ,** ಹಾಗೂ
**ವಿಶ್ವಂಬರ ವೀವ್ಹಿಂಗ ಫ್ಯಾಕ್ಟರಿ**
ಇಚಲಕರಂಜಿ, (ಜಿ. ಕೊಲ್ಹಾಪುರ).

ನಮ್ಮಲ್ಲಿ ೬೦×೩೦, ೮೦×೮೦ ಉತ್ತಮ ಪೈಕಿ ಬಣ್ಣ ಗ್ಯಾರಂಟಿ ಮಾಲುಗಳು ತಯಾರಾಗುತ್ತವೆ

ಪ್ರೊ. ಬಿ. ಬಿ. ಬೋಜಣೆ — ಪ್ರೊ. ಬಿ. ಎಫ್. ದೇವನಾಳ

---

ನೂತನ ದೀಪಾವಳಿಯು
ಸಕಲರಿಗೂ ಸಮೃದ್ಧಿಯನ್ನೀಯಲಿ!!

ಫೋ. ನಂ. ಆಫೀಸ್ ೧೮ — ರೆಸಿಡೆನ್ಸ್ ೧೨೮
ಟೆಲಿಗ್ರಾಂ: 'ಭಾರತ್'

# ಭಾರತ್ ಆಯಿಲ್ ಮಿಲ್ಸ್ ಲಿ.,

ಶೇಂಗಾ ಎಂಣೆ ತಯಾರಕರು ಮತ್ತು
— ಮಾರಾಟಗಾರರು —
ಪೋಸ್ಟ್ ಬಾಕ್ಸ್ ನಂ. ೨೮
**ದಾವಣಗೆರೆ ಸಿಟಿ**

ನಿಮಗೆ ಬೇಕಾಗುವ ಶ್ರೇಷ್ಠ ದರ್ಜೆಯ ಶೇಂಗಾ ಎಣ್ಣೆ ಮತ್ತು ಶೇಂಗಾ ಹಿಂಡಿಗಳನ್ನು ಅತ್ಯಂತ ಪ್ರಾಮಾಣಿಕ ರೀತಿಯಿಂದ ಪೇಟೆಯ ನ್ಯಾಯವಾದ ಬೆಲೆಗಳಲ್ಲಿ ಪೂರೈಸುತ್ತೇವೆ.

**ಇಂದೇ ನಿಮ್ಮ ಆರ್ಡರಗಳನ್ನು ಕೊಟ್ಟು ವ್ಯವಹರಿಸಿರಿ.**

ಮ್ಯಾನೇಜಿಂಗ್ ಏಜೆಂಟ್ಸ್:
**ಜಯ ಇಂಡಸ್ಟ್ರಿಯಲ್ ಏಜನ್ಸಿ,**
**ದಾವಣಗೇರೆ ಸಿಟಿ**

ಪಾರ್ಟನರರು:
ಐನಳ್ಳಿ ಶರಣಪ್ಪ, ನವಲೆ ಬಸವಣ್ಣೆಪ್ಪ.

---

ದೀಪಾವಳಿಯ ಶುಭಾಶಯಗಳು

## ಕೂಪರ ಆಯಿಲ್ ಎಂಜಿನ್ನಗಳು



**COOPER OIL ENGINES**
8 To 64 HP. Available From Stock
Visit Or Write.
Agents
**S. A. PATIL & Co.**
Shahupuri Kolhapur

೮ ರಿಂದ ೬೪ ಎಚ್. ಪಿ. ವರೆಗೆ
ಸಂಗ್ರಹದಿಂದ ಲಭ್ಯ. ಸಂಪರ್ಕವಿಡಿರಿ.

ಏಜಂಟರು:
**ಎಸ್. ಎ. ಪಾಟೀಲ ಮತ್ತು ಕಂಪನಿ**
ಶಾಹುಪುರಿ .... ಕೊಲ್ಹಾಪೂರ

# ಪರಿವಿಡಿ



[ ಯಕ್ಷಗಾನ ಲೇಖನದ ಲೇಖಕರ ಹೆಸರು ಲೇಖನದ ಪುಟದಲ್ಲಿ ತಪ್ಪಾಗಿ ಬಿದ್ದಿದ್ದು ಪರಿವಿಡಿಯಲ್ಲಿದ್ದಂತೆ ಓದಿಕೊಳ್ಳಬೇಕು. ]

# ಕರ್ಮವೀರ

## ದೀಪಾವಳಿ ಸಂಚಿಕೆ ೧೯೫೭

ಸಂಪಾದಕರು: **ಹ. ರಾ. ಪುರೋಹಿತ**

### ನಮ್ಮ ನುಡಿ

ದೀಪಾವಳಿಯ ಈ ಶುಭದಿನದಂದು 'ಕರ್ಮವೀರ'ದ ಹತ್ತನೆಯ ದೀಪಾವಳಿ ಸಂಚಿಕೆಯನ್ನು ವಾಚಕರಿಗೆ ಸಮರ್ಪಿಸಲು ನಮಗೆ ತುಂಬ ಸಂತೋಷವಾಗುತ್ತದೆ. ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕದ ಏಕೀಕರಣ ಈ ಎರಡು ಮುಖ್ಯ ಧ್ಯೇಯಗಳನ್ನಿಟ್ಟುಕೊಂಡು ಕರ್ಮವೀರವು ಸ್ಥಾಪಿತವಾದುದು. ಈ ಧ್ಯೇಯಸಾಧನೆಗಾಗಿ ಪತ್ರಿಕೆಯು ಪಟ್ಟ ಕಷ್ಟನಿಷ್ಠುರ, ಹಾನಿ ಕನ್ನಡಿಗರೆಲ್ಲರಿಗೆ ಗೊತ್ತುಂಟು. ಆದರೆ ಇವೆರಡೂ ಧ್ಯೇಯಗಳು ಕೈಗೂಡಿದ್ದರಿಂದ ಹಿಂದಿನ ಕಷ್ಟನಿಷ್ಠುರಗಳನ್ನೆಲ್ಲ ಮರೆತು ಕರ್ಮವೀರವು ರಾಷ್ಟ್ರ ಪುನಾರಚನೆಯ ಕಾರ್ಯದಲ್ಲಿ ಯಥಾಶಕ್ತಿ ಸೇವೆ ಸಲ್ಲಿಸಲು ಮುಂದಾಗಿದೆ.

ಇದೇ ಮಾರ್ಚ ತಿಂಗಳಲ್ಲಿ ಭಾರತದಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದು ಕೇರಳ ಒಂದನ್ನು ಬಿಟ್ಟು ಎಲ್ಲ ರಾಜ್ಯಗಳಲ್ಲಿ ಕಾಂಗ್ರೆಸ್ಸು ಅಧಿಕಾರ ಸೂತ್ರಗಳನ್ನು ವಹಿಸಿಕೊಂಡಿದೆ. ಕೇರಳದಲ್ಲಿ ಕಮ್ಯೂನಿಸ್ಟ ಪಕ್ಷವು ವಿಧಾನಸಭೆಯಲ್ಲಿ ಬಹುಮತವನ್ನು ಪಡೆದು ಮಂತ್ರಿಮಂಡಳ ಸ್ಥಾಪಿಸಿ ಆಡಳಿತೆಯನ್ನು ಸಾಗಿಸಿದೆ. ನಮ್ಮ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ಸು ಪ್ರಚಂಡ ಬಹುಮತವನ್ನು ಪಡೆದು ಅಧಿಕಾರ ವಹಿಸಿಕೊಂಡಿದೆ. ವಿಧಾನಮಂಡಳದ ಕಾಂಗ್ರೆಸ ಪಕ್ಷವು ಶ್ರೀ ಎಸ್. ನಿಜಲಿಂಗಪ್ಪನವರನ್ನು ಧುರೀಣರನ್ನಾಗಿ ಆರಿಸಿಕೊಂಡಿದ್ದರಿಂದ ಅವರು ಹನ್ನೊಂದು ಜನರ ಮಂತ್ರಿಮಂಡಳ ಸ್ಥಾಪಿಸಿಕೊಂಡು ಆಡಳಿತೆಯನ್ನು ಸಾಗಿಸಿದ್ದಾರೆ. ಬೇರೆಬೇರೆ ಭಾಗಗಳಲ್ಲಿಯ ಕನ್ನಡಿಗರು ರಾಜ್ಯ ಪುನರ್ಘಟನೆಯನ್ವಯ ಈಗ ಒಂದೇ ರಾಜ್ಯದಲ್ಲಿ ಒಗ್ಗೂಡಿದ್ದರೂ ಇನ್ನೂ ಕನ್ನಡಿಗರಲ್ಲಿ ಹೃದಯಸಮ್ಮಿಲನ ಆಗಿಲ್ಲೆಂದು ಬರೆಯಲು ವಿಷಾದಿಸುತ್ತೇವೆ. ಹಳೆಯ ಮೈಸೂರಿಗರಲ್ಲಿ ಪ್ರತ್ಯೇಕತಾ ಭಾವನೆಯು ಇನ್ನೂ ಉಳಿದುಕೊಂಡಿದ್ದು ಆಡಳಿತೆಯಲ್ಲಿ ಅದು ಎದ್ದುಕಾಣುತಿದೆ. ಈ ಭಾವನೆಯು ಮಾಯವಾಗಿ ಕನ್ನಡಿಗರೆಲ್ಲ ಒಂದೆಂಬ ಭಾವನೆಯು ಎಲ್ಲರಲ್ಲಿ ಬಲಿದು ಬಂದು ರಾಷ್ಟ್ರದ ಸಾರ್ವಾಂಗಿಕ ಅಭಿವೃದ್ಧಿಗಾಗಿ ಭಾರತೀಯರೆಲ್ಲರೂ ಮನಮುಟ್ಟಿ ಪ್ರಯತ್ನಿಸಲಿ ಎಂದು ಹಾರಯಿಸುತ್ತೇವೆ.

ಭಾರತವು ಪಂಚವಾರ್ಷಿಕ ಯೋಜನೆಯನ್ನಿಟ್ಟುಕೊಂಡು ಪ್ರಗತಿ ಸಾಧಿಸುತಿದೆ. ಆದರೂ ಕಾಶ್ಮೀರ, ಗೋವಾ ಮೊದಲಾದ ಸಮಸ್ಯೆಗಳು ಇನ್ನೂ ಜಟಿಲವಾಗಿವೆ. ಕಾಶ್ಮೀರ ಪ್ರಶ್ನೆ ಭದ್ರತಾಮಂಡಲದಲ್ಲಿ ಇದೆ. ಭಾರತವು ಅಂತಾರಾಷ್ಟ್ರೀಯ ಪ್ರಶ್ನೆಗಳನ್ನೆಲ್ಲ ಒಡಂಬಡಿಕೆಯ ಶಾಂತಿ ಧೋರಣೆಯಿಂದಲೆ ಬಿಡಿಸುವ ಧೋರಣವನ್ನು ತಾಳಿದೆ. ಜಾಗತಿಕ ಶಾಂತಿಗಾಗಿ ಪಂಚಶೀಲಗಳನ್ನು ಅನುಸರಿಸುತಿದೆ. ಅನೇಕ ರಾಷ್ಟ್ರಗಳು ಈ ಪಂಚಶೀಲಗಳಿಗೆ ಒಪ್ಪುತಿದ್ದರೂ ನೆರೆರಾಷ್ಟ್ರವಾದ ಪಾಕಿಸ್ತಾನವು ಮಾತ್ರ ಭಾರತದೊಡನೆ ಸಹಕರಿಸಲು ಸಿದ್ಧವಿಲ್ಲ. ಅಲ್ಲಿ ಕಳೆದ ಹತ್ತು ವರುಷಗಳಲ್ಲಿ ಒಮ್ಮೆಯೂ ಚುನಾವಣೆಗಳಾಗದೆ ಐದು ಮಂತ್ರಿಮಂಡಳಗಳು ಉರುಳಿದ್ದರಿಂದ ಭಾರತದೊಡನೆ ಮೈತ್ರಿಯನ್ನು ಬೆಳೆಸಲು ಅದಕ್ಕೆ ಶಕ್ಯವಾಗಿಲ್ಲೆಂದು ಹೇಳಬಹುದು. ಪರಿಣಾಮವಾಗಿ ಕಾಶ್ಮೀರ ಪ್ರಶ್ನೆಯಷ್ಟೇ ಅಲ್ಲ ಕಾಲುವೆ ನೀರಿನ ತಂಟೆ ನಿರ್ವಾಸಿತರ ಪ್ರಶ್ನೆ, ಸಾಲಮೊತ್ತದ ಸಮಸ್ಯೆ ಇವು ಬಗೆಹರಿದಿಲ್ಲ.

ಈ ವಿಶೇಷ ಸಂಚಿಕೆಯನ್ನು ಸರ್ವಾಂಗಸುಂದರ ಮಾಡಲು ಶಕ್ತಿವಿದ್ದಷ್ಟು ಪ್ರಯತ್ನಿಸಿದ್ದೇವೆ. ಹಾಗೆ ಮಾಡಲು ನೆರವಾದ ನಮ್ಮ ಸಹಕಾರಿಗಳಿಗೆ, ಲೇಖ, ಕವನ, ಕತೆ, ಭವಿಷ್ಯಾದಿಗಳನ್ನು ಬರೆದು ಕೊಟ್ಟ ವಿದ್ವಾಂಸರಿಗೆ, ಮುಖಚಿತ್ರವನ್ನು ಬರೆದು ಕೊಟ್ಟ ಶ್ರೀ ಜಿ. ಕೆ. ಮೂರ್ತಿ, ಚಿತ್ರ ವ್ಯಂಗ್ಯಚಿತ್ರಾದಿಗಳನ್ನು ತೆಗೆದುಕೊಟ್ಟ ಶ್ರೀ ತಾಂಬೆ, ಪರ್ವತಿ, ಕಂಚಿ, ವಿನಯ, ನಯನ, ಅರ್ಕಸಾಲಿ, ಪ್ರಭು, ಇವರಿಗೆ, ಪಡಿಯಚ್ಚು ಮಾಡಿಕೊಟ್ಟ ಪ್ರಸಾದ ಪ್ರೊಸೆಸ್ ವರ್ಕ್ಸ ಮದ್ರಾಸ, ಐಡಿಯಲ್ ಫೋಟೋ ಝಿಂಕೋ ವರ್ಕ್ಸ ಹುಬ್ಬಳ್ಳಿ, ರವಿ ಪ್ರೊಸೆಸ ವರ್ಕ್ಸ ಹುಬ್ಬಳ್ಳಿ ಇವರಿಗೆ ಚಿರಋಣಿಯಾಗಿದ್ದೇವೆ. ಜಾಹೀರಾತುಗಳನ್ನು ಕೊಟ್ಟು ಸಹಾಯ ಮಾಡಿದ ಕಾರಖಾನೆದಾರರು, ವ್ಯಾಪಾರಸ್ಥರು ಮೊದಲಾದವರನ್ನು ಮತ್ತು ಈ ಸಂಚಿಕೆಯನ್ನು ಆಕರ್ಷಕವಾಗುವಂತೆ ಮಾಡಲು ಪರಿಶ್ರಮಿಸಿದ ಮೊಳೆ ಜೋಡಿಸುವ, ಮುದ್ರಣ ಮತ್ತು ಬಾಯಿಂಡಿಂಗ ವಿಭಾಗಗಳ ಕೆಲಸಗಾರರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇವೆ.

# ಪರಿಪೂರ್ಣ ಜೀವನ

ಪರಿಪೂರ್ಣ ಜೀವನವೆಂದರೆ ಮಾನವನ ಇಹಲೋಕದಲ್ಲಿಯ ಪರಿಪೂರ್ಣ ಜೀವನ. ಪರಿಪೂರ್ಣ ವ್ಯಕ್ತಿಯ ಶರೀರ ಆರೋಗ್ಯಪೂರ್ಣ ಸೌಷ್ಟವದಿಂದ ಮತ್ತು ಲಾವಣ್ಯದಿಂದ ಮುಕ್ತವಾದುದಿರಬೇಕು. ಅವನ ಸ್ಮೃತಿ ಮತ್ತು ಬುದ್ದಿಗಳು ತೀಕ್ಷ್ಣವಾಗಿ, ಚುರುಕಾಗಿ ಇರಬೇಕು. ಭಾವನಾಶಕ್ತಿಗಳು ವಿಕಸಿತವಾಗಿದ್ದು ಪ್ರೇಮ ಕರುಣೆ ಶ್ರದ್ಧೆ ಸೌಂದರ್ಯದ ಗುಣಗ್ರಹಣಶಕ್ತಿ ಇವುಗಳಿಂದ ಕೂಡಿದುವಿರಬೇಕು. ಸತ್ ಅಸತ್ ಇವುಗಳ ವಿಮರ್ಶಾಬುದ್ಧಿ ಬೇಕು. ಜಾಗೃತ ಜಿಜ್ಞಾಸೆ ತಿಳಿದುಕೊಳ್ಳುವ ಆತುರ ಭಾವ ಇರಬೇಕು. ಆಗ ನಾವು ಪರಿಪೂರ್ಣ ಜೀವನದತ್ತ ಹೊರಟಿರುವೆನೆಂದು ತಿಳಿಯಬೇಕು.

ಲೇಖಕರು : ಶ್ರೀ ರಂ. ರಾ. ದಿವಾಕರ

ಸ್ವರ್ಗ, ಮೋಕ್ಷ ಮುಂತಾದವುಗಳ ಬಗ್ಗೆ ಸಾಹಿತ್ಯದಲ್ಲಿ ಹಾಗೂ ಧರ್ಮಗ್ರಂಥಗಳಲ್ಲಿ ಸಾಕಷ್ಟು ವರ್ಣನೆಗಳು ದೊರೆಯುತ್ತವೆ. ಈಗ ನಾನು ಮಾನವನ ಪರಿಪೂರ್ಣ ಜೀವನವನ್ನು ಕುರಿತು ನಾಲ್ಕು ವಿಚಾರಗಳನ್ನು ಇಲ್ಲಿ ವ್ಯಕ್ತಗೊಳಿಸಲಿಚ್ಛಿಸುವೆ.

ಪರಿಪೂರ್ಣ ಜೀವನ ಎಂದರೆ ಮಾನವನ ಇಹಲೋಕದಲ್ಲಿಯ ಪರಿಪೂರ್ಣ ಜೀವನ, ಎಂದು ಅರ್ಥ. ಈ ಜೀವನದ ಬಗ್ಗೆ ಹಲವಾರು ವಿಚಾರಗಳು ಹಾಗೂ ಕಲ್ಪನೆಗಳು ಪ್ರಚಲಿತವಿರುವವು. ಚಾರ್ವಾಕರಂಥ ಜಡವಾದಿಗಳನ್ನು ಮೊದಲು ಮಾಡಿ ಜೀವನ್ಮುಕ್ತರಂಥ ಆಧ್ಯಾತ್ಮವಾದಿಗಳ ವರೆಗೆ ತಮ್ಮ ತಮ್ಮ ವಿಚಾರಪ್ರಣಾಲಿಯ ಪ್ರಕಾರ ಇವರು ಇಹಲೋಕದ ಜೀವನವನ್ನು ರೂಪಿಸಿಗೊಳ್ಳುವದುಂಟು. ಅಂಥ ಜೀವನವು ಒಂದು ಬಗೆಯ ಜೀವನ ಎಂಬುದು ನಿಜವಿದ್ದರೂ ಅದು "ಪರಿಪೂರ್ಣ ಜೀವನ" ಎಂಬ ವರ್ಣನೆಗೆ ಪಾತ್ರವಿರುವದೊ? ಆ ದೃಷ್ಟಿಯಿಂದ ಈ ಮಾತನ್ನು ವಿಮರ್ಶಿಸಬೇಕಾಗಿದೆ.

ಜೀವನವಿಕಾಸ ಅಥವಾ ಉತ್ಕ್ರಾಂತಿ (ಎವ್ಹೊಲ್ಯೂಶನ್) ಎಂಬುದು ಲಕ್ಷಾಂತರ ವರುಷಗಳಿಂದ ನಡೆದುಬಂದಿರುವ ಹಾಗೂ ಈಗಲೂ ನಡೆದ ಸತತ ಕ್ರಮ ಎಂಬುದನ್ನು ಎಲ್ಲರೂ ಒಪ್ಪುವರು. ಆ ವಿಕಾಸದಲ್ಲಿ ಮಾನವಜೀವನ ಎಂಬುದು ಒಂದು ಮೆಟ್ಟಿಲು. ವಿಕಾಸವು ನಿರಂತರವೂ ಗತಿಶೀಲವಿರುವದರಿಂದ ಅದಕ್ಕೆ ತಡೆಯಿಲ್ಲ. ಅದು ಅನಾದಿಯಿದ್ದು ಅನಂತವೂ ಇರುವದು. ಹೀಗಿರುವದರಿಂದ ಈ ಕ್ಷಣಕ್ಕೆ ನಾವು ಯಾವುದಕ್ಕೆ ಪರಿಪೂರ್ಣ ಜೀವನವೆನ್ನಬಹುದೊ ಅದೇ ಕಾಲಾಂತರದಿಂದ ಅಪೂರ್ಣವೆನಿಸಬಹುದು. ಆದರೆ ಆಯಾ ಕಾಲಕ್ಕೆ ಆಯಾ ಪರಿಸ್ಥಿತಿ ಹಾಗೂ ಆದರ್ಶಗಳನ್ನನುಸರಿಸಿ ನಾವು ಈ ಪರಿಪೂರ್ಣಜೀವನದ ಚಿತ್ರವನ್ನು ರೇಖಿಸಬೇಕಾಗುವದು. ನಾನು ಇಲ್ಲಿ ಮಾಡುತಿರುವ ಪ್ರಯತ್ನ ಆ ಬಗೆಯದು.

ಸದ್ಯಕ್ಕೆ ನಡೆದ ಮಾನವಜೀವನವಿಕಾಸದ ಮುಖ್ಯ ಲಕ್ಷಣವೆಂದರೆ ಅಂತರ್ಬಾಹ್ಯ ಜಗತ್ತುಗಳ ಜ್ಞಾನದ ಬೆಳೆವಣಿಗೆ. ಇತರ ಪ್ರಾಣಿಗಳು ಲಕ್ಷಾಂತರ ವರುಷ ಇದ್ದ ಸ್ಥಿತಿಯಲ್ಲಿಯೇ ಇವೆ. ಅವುಗಳ ಜೀವನಕ್ರಮದಲ್ಲಿ ಎಳ್ಳಷ್ಟೂ ಬದಲಾವಣೆಯಿಲ್ಲ. ಆದರೆ ಮಾನವನ ಜೀವನಕ್ರಮದಲ್ಲಿ ನಿತ್ಯವೂ ಬದಲಾವಣೆ ಆಗುತಿದೆ ಹಾಗೂ ಆ ಬದಲಾವಣೆಗೆ ಅವನ ಜ್ಞಾನವಿಕಾಸವೇ ಕಾರಣ. ಈ ರೀತಿ ಮಾನವನು ಅಲ್ಪಮಟ್ಟಿಗಾದರೂ ತನ್ನ ವಿಕಾಸದ ಶಿಲ್ಪಿಯಾಗಿ ಪರಿಣಮಿಸಿದ್ದಾನೆ. ಬಾಹ್ಯ ಸೃಷ್ಟಿಯಲ್ಲಿ ಮಾರ್ಪಾಡು ಮಾಡುವಷ್ಟು, ಅದನ್ನು ತಕ್ಕಮಟ್ಟಿಗೆ ಪರಿವರ್ತಿಸುವಷ್ಟು ಸಾಮರ್ಥ್ಯ ಮನುಷ್ಯನಲ್ಲಿ ಸ್ವಲ್ಪ ಬಂದಿದೆ. ಅದೇ ಕ್ರಮವು ಅಂತಃಸೃಷ್ಟಿಯಲ್ಲಿ ಅಂದರೆ ಅವನ ಚಿತ್ ಕ್ಷೇತ್ರದಲ್ಲಿಯೂ ನಡೆದಿದೆ. ಆ ಕ್ರಮದ ಗತಿಯು ಬಹಳ ಮಂದವಿದ್ದರೂ ಆ ಕ್ರಮವು ನಡೆದಿದೆ ಎಂಬುದರಲ್ಲಿ ಸಂಶಯವಿಲ್ಲ. ತನ್ನ ಮನೋರಂಗದ ವ್ಯಾಪಾರಗಳ ನಿಯಮಗಳನ್ನರಿತುಕೊಂಡು ಏಕಾಗ್ರತೆ, ಮನನ, ಧ್ಯಾನ, ಯೋಗಾಭ್ಯಾಸಾದಿಗಳಿಂದ ಮನುಷ್ಯನು ಆ ನಿಯಮಗಳಿಗನುಸರಿಸಿ ತನ್ನ ಮನಸ್ಸಿನಮೇಲೆ ಪ್ರಭುತ್ವವನ್ನು ಸ್ಥಾಪಿಸುವ ಉದ್ಯೋಗವನ್ನು ನಡಸಿರುವನು. ಸಂಯಮಿಗಳು, ಯತಿಗಳು, ಯೋಗಿಗಳು ಈ ಮಾತಿಗೆ ಸಾಕ್ಷಿರೂಪರಾಗಿರುವರು. ಪೂರ್ಣ ಆತ್ಮಸಾಕ್ಷಿತ್ವದ ಪದವನ್ನು ಪಡೆದವರು ಪೂರ್ಣ ಆತ್ಮಸಂಯಮನ ಮಾಡುವ ಸಾಮರ್ಥ್ಯವುಳ್ಳವರಾಗಬಲ್ಲರು. ಆ ಸ್ಥಿತಿ ಈಗ ಕ್ವಚಿತ್ ವ್ಯಕ್ತಿಗಳಿಗೆ ಮಾತ್ರ ಪ್ರಾಪ್ತವಾಗುತಿರುವದು.

ಮಾನವವಿಕಾಸದ ಈ ಮೆಟ್ಟಲಿನಲ್ಲಿ ನಾವು ಇರುವಾಗ 'ಪರಿಪೂರ್ಣ ಜೀವನ' ಇದರ ರೇಖಾಚಿತ್ರ ಎಂತಿರಬೇಕು? ಈ ಜೀವನಕ್ಕೆ ಅಂತರಂಗ ಬಹಿರಂಗ ಎಂಬ ಎರಡು ಬದಿಗಳಿದ್ದಂತೆ, ವೈಯಕ್ತಿಕ ಹಾಗೂ ಸಾಮಾಜಿಕ ಎಂಬ ಎರಡು ಮುಖಗಳಿರುವವು. ಅವು ಪರಸ್ಪರ ಒಂದಕ್ಕೊಂದು ಹಾಸು-ಹೊಕ್ಕಿನಂತೆ ಹೊಂದಿಕೊಂಡಿರುವವು. ವೈಯಕ್ತಿಕ ಪರಿಪೂರ್ಣ ಜೀವನದ ಚಿತ್ರವು ನಮ್ಮೆದುರು ಸ್ಪಷ್ಟವಾಯಿತೆಂದರೆ ಸಾಮಾಜಿಕ ಪರಿಪೂರ್ಣ ಜೀವನದ ಕಲ್ಪನೆ ಮಾಡಲು ಸುಲಭವಾಗಿ ಬಿಡುವದು.

ನಾವು ಒಂದು ಕಲಾಕೃತಿಯನ್ನು, ಒಂದು ಚಿತ್ರವನ್ನೊ ಶಿಲಾಮೂರ್ತಿಯನ್ನೊ ಸೌಂದರ್ಯದ ದೃಷ್ಟಿಯಿಂದ ವಿಮರ್ಶಿಸುತಿರುವೆವೆಂದು ತಿಳಿಯುವಾ. ಹಾಗೆ ಮಾಡುವಾಗ ನಾವು ಅದರ ಅಂಗಾಂಗಗಳನ್ನು ನಿರಿಕಿಸಿ ಪರೀಕ್ಷಿಸುವೆವು. ಪ್ರಮಾಣಬದ್ಧತೆ, ನ್ಯಾಸ, ಭಂಗಿ, ಒಯ್ಯಾರ ಹೀಗೆ ಒಂದಲ್ಲ, ಎರಡಲ್ಲ, ಅನೇಕ ದೃಷ್ಟಿಯಿಂದ ನಾವು ನೋಡುವೆವು. ಆ ಬಳಿಕ ಒಟ್ಟಿನ ಮೇಲೆ ಆ ಕಲಾಕೃತಿಯ ಪರಿಣಾಮವು ನಮ್ಮ ಮನಸಿನ ಮೇಲೆ ಏನಾಗುವದು ಇದನ್ನು ನೋಡಿ ಅದು ಸುಂದರವೊ ಅಲ್ಲವೊ ಎಂಬುದನ್ನು ನಿರ್ಣಯಿಸುವೆವು.

ಒಂದು ವ್ಯಕ್ತಿಯ ಜೀವನ ಪರಿಪೂರ್ಣವೊ ಅಲ್ಲವೊ ಎಂಬುದನ್ನು ಕೂಡ ಇದೇ ಬಗೆಯಿಂದ ನೋಡಿ ಪರಿಕಿಸಬಲ್ಲೆವು. ಒಂದು ಮಾನವ ವ್ಯಕ್ತಿ ಎಂದರೆ ಶರೀರಾದಿಗಳಿಂದ ಯುಕ್ತವಾದ ಒಂದು ಚಿತ್ಕಣ. ಅದು ಹುಟ್ಟಿ ಬೆಳೆದು, ಶೈಶವ, ಬಾಲ್ಯ ಕೌಮಾರ, ತಾರುಣ್ಯ, ಇಳಿವಯಸ್ಸು, ಮುಪ್ಪು ಇತ್ಯಾದಿ ಅವಸ್ಥೆಗಳೊಳಗಿಂದ ಹಾಯ್ದು ಇಲ್ಲದಂತಾಗುವದು. ಚಿತ್ಕಣ ಅಥವಾ ಜೀವ ಒಂದೇ ಇದ್ದರೂ ಅದರ ಅಂಗಾಂಗಗಳು ಹಾಗೂ ಶಕ್ತಿಗಳು ಹಲವು. ಈ ಹಲವು ಶಕ್ತಿಗಳ ಕುದುರೆಯ ಮೇಲೆ ಸವಾರಿ ಮಾಡಿ ಚಿತ್ಕಣವು ತನ್ನ ಪಯಣ ಬೆಳೆಸುವುದು, ಎಂದು ಹೇಳಬಹುದು.

ಸ್ಥೂಲವಾಗಿ, ಶರೀರ, ಇಂದ್ರಿಯಗಳು, ಭಾವನೆಗಳು, ವಿಮರ್ಶಾತ್ಮಕ ಬುದ್ಧಿ, ನೀತಿಶಕ್ತಿ, ಆತ್ಮಶಕ್ತಿ ಇವು ಪ್ರತಿವ್ಯಕ್ತಿಯಲ್ಲಿ ಒಡೆದು ಕಾಣುವ ಅಂಗಗಳು ಅಥವಾ ಅಂಶಗಳು. ಇವೆಲ್ಲ ಏಕರಸಮಯವಾಗಿ ಕೂಡಿ ಒಂದು ವ್ಯಕ್ತಿ ಎಂಬ ವಸ್ತು ಸಿದ್ಧವಾಗುವುದು. ಈ ಶಕ್ತಿಗಳ ಯೋಗ್ಯ ವಿಕಾಸ, ಪ್ರಮಾಣಬದ್ಧ ಬೆಳೆವಣಿಗೆ, ಪರಸ್ಪರ ಸಂವರ್ಧನ ಮತ್ತು ಸಹಕಾರ, ಅವುಗಳಲ್ಲಿಯ ಸಮ್ಮೇಳ ಹಾಗೂ ಸಮರಸತ್ವ, ಈ ಶಕ್ತಿಗಳ ಯೋಗ್ಯ ಉಪಯೋಗ, ಕೊನೆಗೆ ಅವುಗಳ ಯೊಗ್ಯ ಉಪಸಂಹಾರ ಇವುಗಳನ್ನು ನೋಡಿಯೆ ನಾವು ಆಯಾ ಜೀವದ ಅಥವಾ ವ್ಯಕ್ತಿಯ ಜೀವನದ ಪೂರ್ಣಾಪೂರ್ಣತೆಯನ್ನು ಅಳೆಯಬೇಕಾಗುವದು. ಈ ದೃಷ್ಟಿಯಿಂದ ಮಾನವಜೀವನದತ್ತ ನೋಡಿ ಅದನ್ನು ಪರಿಪೂರ್ಣಗೊಳಿಸುವ ಪ್ರಯತ್ನವು ಈಗ ಆಗಬೇಕಾದುದು ಅವಶ್ಯ. ಇಲ್ಲದಿದ್ದರೆ ಈಗಿದ್ದಂತೆಯೆ ವ್ಯಕ್ತಿಯ ಹಾಗೂ ಸಾಮಾಜಿಕ ಜೀವನವು ಅವ್ಯವಸ್ಥಿತ, ಏಕಾಂಗಿ, ಅಪರಿಪೂರ್ಣವಾಗಿಯೇ ಉಳಿಯುವದು.

ಇನ್ನು ಆಯಾ ಶಕ್ತಿಗಳನ್ನು ಹಾಗೂ ಅಂಗಾಂಗಗಳನ್ನು ಯಾವ ರೀತಿ ವಿಕಾಸಗೊಳಿಸಬೇಕು, ಅವುಗಳ ಸಮನ್ವಯವನ್ನು ಹೇಗೆ ಸಾಧಿಸಬೇಕು, ವ್ಯಕ್ತಿಯ ಹಾಗು ಸಮಾಜದ ಜೀವನಗಳಲ್ಲಿ ಅವುಗಳ ಸುಂದರ ಪ್ರಮಾಣಬದ್ಧ ಸಮ್ಮೇಳ ಹೇಗೆ ಆಗಬೇಕು, ಈ ಎಲ್ಲ ಪ್ರಶ್ನೆಗಳಿಗೆ ಸುಸಂಸ್ಕಾರಗಳ

ಮೂಲಕ, ಸತ್‌ಶಿಕ್ಷಣದ ಮೂಲಕ ಎಂದು ಒಂದೇ ಉತ್ತರವನ್ನು ಕೊಡಬೇಕಾಗುವದು.

ಸದ್ಯಕ್ಕೆ ನಾವು ನಮ್ಮ ಸಮಾಜದತ್ತ ಹಾಗೂ ನಮ್ಮ ಸಮಾಜದ ವ್ಯಕ್ತಿಗಳತ್ತ ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಸಂಪೂರ್ಣತೆ ಸುಸಂಬದ್ಧತೆ, ಸಮ್ಮೇಳ, ಸಮರಸತೆ, ಪೂರ್ಣವಿಕಾಸ ಇವು ಅತ್ಯಂತ ಅಲ್ಪಪ್ರಮಾಣದಲ್ಲಿ ಕಂಡುಬರುವವು. ಶರೀರತಃ ತುಷ್ಟ ಪುಷ್ಟರಿದ್ದವರು ಬುದ್ಧಿಯಿಂದ ಬಲಹೀನರು, ಬುದ್ಧಿಯಿಂದ ಚುರುಕು ಇದ್ದವರು ಶರೀರತಃ ನಿರ್ಬಲರು, ಈ ಎರಡರಲ್ಲಿ ಪೂರ್ಣರಿದ್ದವರು ಭಾವನಾಶಕ್ತಿಯಲ್ಲಿ ದರಿದ್ರರು, ಅಥವಾ ನೀತಿಯಲ್ಲಿ ಭ್ರಷ್ಟರು, ಹೀಗೆ ವಿಧ ವಿಧದ ಅಪೂರ್ಣತೆ ವ್ಯಕ್ತಿಗಳ ಹಾಗೂ ಸಮಾಜದ ಜೀವನದಲ್ಲಿ ನಮಗೆ ಕಾಣುವದು.

ಒಂದು ಪರಿಪೂರ್ಣ ವ್ಯಕ್ತಿಜೀವನದ ಚಿತ್ರವನ್ನು ನಾವು ನಮ್ಮ ಕಲ್ಪನೆಯಿಂದ ಕಣ್ಣುಮುಂದೆ ತಂದುಕೊಂಡರೆ ಅದು ಹೀಗಿರಬೇಕು: ಪಾತಂಜಲ ಯೋಗಸೂತ್ರಗಳಲ್ಲಿ ಹೇಳಿರುವಂತೆ ಅವನ ಶರೀರ ಆರೋಗ್ಯಪೂರ್ಣ, ಸೌಷ್ಟವದಿಂದ ಮತ್ತು ಲಾವಣ್ಯದಿಂದ ಯುಕ್ತವಾದುದಿರಬೇಕು; ಅದೇ ರೀತಿ ಅವನ ಸ್ಮೃತಿ ಮತ್ತು ಬುದ್ಧಿಗಳು ಚುರುಕು, ತೀಕ್ಷ್ಣ ಮತ್ತು ಯಾವುದಕ್ಕೆ ತೈಲಬುದ್ಧಿ ಎನ್ನುವರೊ ಹಾಗಿರಬೇಕು, ಭಾವನಾಶಕ್ತಿಗಳು ವಿಕಸಿತವಾಗಿದ್ದು ಪ್ರೇಮ, ಕರುಣೆ, ಶ್ರದ್ಧೆ, ಸೌಂದರ್ಯದ ಗುಣಗ್ರಹಣಶಕ್ತಿ ಇವುಗಳಿಂದ ಕೂಡಿದುದಿರಬೇಕು, ಸದಸತ್ ಇವುಗಳನ್ನು ಪೂರ್ಣ ವಿಮರ್ಶಿಸಿ ಅಸತ್ತನ್ನು ಬಿಟ್ಟು ಸತ್ ಎಂಬುದನ್ನೆ ಹಿಂಬಾಲಿಸಿ ಧೃತಿ ಹಾಗೂ ಸಾಹಸ ಇರಬೇಕು, ತಾನು ಯಾರು ಎಂಬುದರ ಬಗ್ಗೆ ಜಾಗ್ರತ ಜಿಜ್ಞಾಸೆ ಅದನ್ನು ತಿಳಿದುಕೊಳ್ಳಲು ಸತತ ಆತುರಭಾವ ಇರಬೇಕು- ಇಷ್ಟೆಲ್ಲ ಪ್ರಮಾಣಭೂತ ರೀತಿಯಲ್ಲಿ ಬೆಳೆದು ಬಂದು ಅವುಗಳ ಸಮ್ಮೇಳವಾಗಿ ಸಮರಸದ ಅನುಭವ ಆದರೆ ಮಾತ್ರ ನಾವು ಪರಿಪೂರ್ಣಜೀವನದತ್ತ ಹೊರಟರುವೆನೆಂದು ತಿಳಿಯಬೇಕು.

ಸತ್‌ಶಿಕ್ಷಣ, ಸತ್‌ಸಂಸ್ಕಾರ, ಹಾಗೂ ವ್ಯಕ್ತಿಯ ಎಲ್ಲ ಅಂಗಾಂಗಗಳ ಹಾಗೂ ಶಕ್ತಿಗಳ ಪೂರ್ಣ ವಿಕಾಸ, ಪ್ರಮಾಣಬದ್ಧ ಮತ್ತು ಪರಸ್ಪರ ಪೋಷಕವಾಗುವಂತೆ ಅವುಗಳ ಬೆಳೆವಣಿಗೆ ಇವುಗಳನ್ನು ಸಾಧಿಸುವ ಉದ್ದೇಶಗಳನ್ನಿಟ್ಟುಕೊಂಡ ಶಿಕ್ಷಣ ಪ್ರಣಾಲಿ ಇವೇ ಪರಿಪೂರ್ಣ ಜೀವನದ ಆದರ್ಶವನ್ನು ರೂಪುಗೊಳಿಸಬಲ್ಲವು. ಈ ದೃಷ್ಟಿಯಿಂದ ನಮ್ಮ ಸದ್ಯದ ಶಿಕ್ಷಣಪದ್ಧತಿಯನ್ನು ಮತ್ತು ನಮ್ಮ ಜೀವನವನ್ನು ನೋಡಿದರೆ ಅವುಗಳ ದೋಷಗಳು ನಮಗೆ ಒಡೆದು ಕಾಣುವವು. ಕೇವಲ ಶಾಲೆಕಾಲೇಜುಗಳಲ್ಲಿಯಷ್ಟೆ ಸುಧಾರಣೆಯಾದರೆ ಸಾಲದು. ಸಮಾಜವು ಪರಿಪೂರ್ಣಜೀವನದ ಧ್ಯೇಯವನ್ನು ತನ್ನೆದುರು ಇಟ್ಟುಕೊಳ್ಳುವದು ಅವಶ್ಯವು. ಯಾವದೊಂದು ವ್ಯಕ್ತಿಯು ಇಂದ್ರಿಯ ಊನವಿದ್ದರೆ ಸಮಾಜವು ಅದನ್ನು ಯಾವರೀತಿ ಕೂಡಲೆ ತಿಳಿದುಕೊಳ್ಳುತ್ತದೊ ಆ ರೀತಿ ಯಾವನೊಬ್ಬನ ಸೌಂದರ್ಯವಿಮರ್ಶಾಶಕ್ತಿ ಅಥವಾ ನೈತಿಕಶಕ್ತಿ ಕಡಿಮೆ ಇದ್ದರೆ ಅದನ್ನು ಗುರುತಿಸುವ ಶಕ್ತಿ ಸಮಾಜದಲ್ಲಿ ಬೆಳೆದು ಬರಬೇಕು. ವ್ಯಕ್ತಿಯು ಕೂಡ ತನ್ನ ಇಂದ್ರಿಯ ನ್ಯೂನತೆಯು ಬಗ್ಗೆ ಯಾವರೀತಿ ನಾಚಿಕೊಳ್ಳುವನೋ ಅದೇ ರೀತಿ ತನ್ನಲ್ಲಿಯ ಬೌದ್ಧಿಕ, ನೈತಿಕ, ಆತ್ಮವಿಷಯಕ ನ್ಯೂನತೆಗಳ ಬಗ್ಗೆ ನಾಚಿಕೆಪಟ್ಟು ಅವುಗಳನ್ನು ಹೋಗಲಾಡಿಸುವ ಯತ್ನದಲ್ಲಿ ತೊಡಗಬೇಕು. ಈ ರೀತಿ ಬಹುಮುಖ ಪ್ರಯತ್ನಗಳು ನಡೆದರೆ ಪರಿಪೂರ್ಣಜೀವನದ ಆದರ್ಶದತ್ತ ನಾವು ಸರ್ವತೋಪರಿಯಿಂದ ಸಾಗಿ, ಇಂದಿಲ್ಲ ನಾಳೆ ಅದನ್ನು ಸಾಧಿಸಬಲ್ಲೆವು.

---

**ಜೀವನ ?**

ಯಾರ ಮಾತು ಸರಸವಾಗಿದೆಯೋ, ಪತ್ನಿಯು ಪುತ್ರವತಿಯಾಗಿರುವಳೋ,
ಸಂಪತ್ತುದಾನ ಶೀಲವಾಗಿರುವುದೋ, ಅವನ ಜೀವನ ಸಫಲವಾದುದು. — ಸುಭಾಷಿತ

# ಕವಿ ಕಂಡ ಕರ್ನಾಟಕ

" ರವಿ ಕಾಣದ್ದನ್ನು ಕವಿ ಕಾಣುತ್ತಾನೆ" ಎನ್ನುವದು ಸುಳ್ಳಲ್ಲ. ಕನ್ನಾಡಿನ ಚೆಲುವನ್ನು, ನಿಸರ್ಗ ಸಂಪತ್ತನ್ನು ಬಣ್ಣಿಸಿದ ಕವಿ ಅಯಿದು ಆಧಿಪತ್ಯಗಳಲ್ಲಿ ಹಂಚಿಹೋದ ಕನ್ನಡ ನಾಡಿನ ಏಕೀಕರಣದ ಕನಸನ್ನು ಕಂಡಿದ್ದನು. ಕವಿ ಕಂಡ ಈ ದರ್ಶನವೇ ಕರ್ನಾಟಕದ ಅಭಿವೃದ್ಧಿಯ ಸಾಧನೆಯ ನಾಂದಿಯಾಗಬೇಕಾಗಿದೆ.

ಲೇಖಕರು : ಶ್ರೀ ಆರ್. ವಾಯ್. ಧಾರವಾಡಕರ,
ಪ್ರಿನ್ಸಿಪಾಲ, ಜನತಾ ಕಾಲೇಜ, ಧಾರವಾಡ

ತಾಯಿ ಮತ್ತು ತಾಯನಾಡು ಸ್ವರ್ಗಕ್ಕಿಂತಲೂ ಶ್ರೇಷ್ಠವೆಂದು ಪ್ರಾಚೀನರ ನುಡಿ. ತಾಯನಾಡ ಸೇವೆಗಾಗಿ ಸುರಿಸಿದ ಬೆವರಿನ ಆಳತೆಗೆ ಕೆನ್ನೀರ ಆಳಕ್ಕೆ ಲೆಕ್ಕವಿಲ್ಲ. ಸ್ವ-ದೇಶಾಭಿಮಾನಿಯಾದ ಕವಿಯು ತನ್ನ ನಲುನೆಯ ನಾಡು ಮುಂದಾಗುವಂತೆ ತಾನು ದುಡಿದು, ತನ್ನ ಜನಮನದಲ್ಲಿ ಚೈತನ್ಯ ಸಂಚಾರವನ್ನುಂಟುಮಾಡಿದ್ದಾನೆ. ರಾಜಕಾರಣಿಗಳ ಕೊಂಬು ಕಹಳೆಗಳು ಕೇಳಿಬರುವ ಮುನ್ನ, ಪಟುಭಟರಾರ್ಭಟ ಪ್ರದರ್ಶಿತವಾಗುವ ಮುನ್ನ ಕವಿ ನಿಧಾನವಾಗಿ ಜನಮನವನ್ನು ಹರಗಿ ಅಣಿಗೊಳಿಸುತ್ತಾನೆ. ಕವಿಯು ಈ ದರ್ಶನದ ಎತ್ತರಕ್ಕೆ ಅವನ ಮತ್ತು ಇತರರ ಕೃತಿ ಬಂದು ನಿಲ್ಲಲು ಯತ್ನಿಸುತ್ತವೆ. ಕವಿ ಜನಮನದ ನಿಧಿಯಿದ್ದಷ್ಟೇ, ಪ್ರತಿನಿಧಿಯೂ ಪ್ರವಾದಿಯೂ ಆಗಿದ್ದಾನೆ. ಷೆಲಿ ಕವಿಯು ಹೇಳಿದಂತೆ "Poets are the mirrors of the gigantic shadows which futurity casts upon the present."

ಆ ರೀತಿ ಕನ್ನಡ ಕವಿ ತನ್ನ ಪ್ರಚಂಡವಾದ ಜಾಗೃತ ಶಕ್ತಿಯಿಂದ ನಾಡಿನ ವಿದ್ಯುಲ್ಲಸಿತ ರೇಖೆಗಳನ್ನು ಜನರೆದುರಿಗಿಟ್ಟಿದ್ದಾನೆ. ನಾಡಿನ ಪ್ರಾಚೀನತೆಯ ಆಳ-ಅಗಲಗಳನ್ನು ಗುರುತಿಸಿ, ಇಂದಿನ ಕನಿಕರವನ್ನು ನೆನೆದು ನಾಡು ಮುಂದು ರೂಪುಗೊಳ್ಳಬೇಕಾದ ಮಾರ್ಗವನ್ನು ಸೂಚಿಸಿ ತೋರಿಸಿದ್ದಾನೆ. ಅಸಂತೃಪ್ತ ಕವಿಯು ನಾಡಿನ ನೆಮ್ಮದಿಗೆ ಆತಂಕವಾಗುವಂತೆ, ಸ್ವದೇಶಾಭಿಮಾನಿಯಾದ ಕವಿಯು ನಾಡನಿರ್ಮಾಪಕನಾಗುತ್ತಾನೆ. ಅವನದು ದಾರ್ಶನಿಕನ ಕೆಲಸ; ಇತರ ರಾಜಕಾರಣಿಗಳು, ಕಾರ್ಯಕರ್ತರು ಇಟ್ಟಿಗೆ ಮತ್ತು ಗಚ್ಚುಗಳನ್ನು ಪೂರೈಸುತ್ತಾರೆ. ಗಾಡಿ ಹೊರಡಬೇಕಾದ ಮಾರ್ಗ ಮತ್ತು ವೇಳೆಗಳನ್ನು ಹಾಕಿ ಕೊಡುವ ವೇಳಾಪತ್ರಿಕೆಯನ್ನು ಅವನು ಸಿದ್ಧಮಾಡಿದ ನಂತರ ಕಾರ್ಯದ ರೈಲು ಚಲಿಸಲು ಪ್ರಾರಂಭಿಸುತ್ತದೆ. ನಿಜ; ಕಾಣಲಿಕ್ಕೆ ರೈಲೇ ಹೆಚ್ಚಾಗಿ ಕಂಡರೂ ವೇಳಾಪತ್ರಿಕೆಗೂ ಬಹು ಮಹತ್ವದ ಸ್ಥಾನವಿದೆ. ತಳಪಾಯಕ್ಕೆ ಹಾಕಬೇಕಾದ ಕಲ್ಲು ಯಾವಾಗಲೂ ಗಟ್ಟಿಯೇ ಇರಬೇಕಾದರೂ ಕಟ್ಟಡ ಸಿದ್ಧವಾದ ನಂತರ ಮೊದಲು ನೆಲದಲ್ಲಿ ಮುಳುಗಿ ಕಾಣದಂತಾಗಿರುವವು ಆ ತಳಪಾಯದ ಕಲ್ಲುಗಳು ಮಾತ್ರ. ಮೇಲೆ ಕಾಣಿಸುವ ಕಲ್ಲುಗಳನ್ನೇ ಕಂಡು ತಳಪಾಯವನ್ನು ಕಡೆಗಣಿಸಲಾಗದು.... ಕನ್ನಡ ಕವಿ ಕನ್ನಡ ನಾಡಿನ ಪ್ರಾಚೀನ ವೈಭವ, ಮೊನ್ನಿನ ವರೆಗಿನ ಕನಿಕರ, ನಾಳಿನ ಆಶೋತ್ತರ—ಭಯ, ಕನಲಿಕೆಗಳನ್ನು ತನ್ನ ಕಾವ್ಯದಲ್ಲಿ ಸುಂದರವಾಗಿ ಕೊರೆದು ತೋರಿಸಿದ್ದಾನೆ.

## ಆಂಗ್ಲ ಕವಿಗಳ ಸ್ವದೇಶಾಭಿಮಾನ

ಆಂಗ್ಲ ಕವಿಗಳ ಸ್ವದೇಶಾಭಿಮಾನವನ್ನು ಕಂಡಾಗಲೂ ಹೃದಯ ಉಕ್ಕೇರುತ್ತದೆ. " ಇದು ತನ್ನ ದೇಶವೆಂದು ಹೆಮ್ಮೆ ಪಡದಂಥ ಸತ್ತ ಹೃದಯದ ಮನುಷ್ಯನೆಂದಾದರೂ ಜೀವಿಸುತ್ತಿರುವನೇ ? " ಎಂದು ಕವಿ ಸ್ಕಾಟ್ ಕೇಳುತ್ತಾನೆ. ಇಂಗ್ಲಂಡ್ ದೇಶದ ಅಸರಿಕೆ-ಬೇಸರಿಕೆಗಳಲ್ಲಿ, ಆಪತ್ತು-ವಿಪತ್ತುಗಳಲ್ಲಿ ಯಾವಾಗಲೂ ತನ್ನ ಜೀವನವನ್ನು ಮುಡುಪಿಡಲು ಸನ್ನದ್ಧನಾದ Henley ಕವಿ–

" ಏನು ಮಾಡಿದೆ ನಾನು ನಿನಗೆ ಇಂಗ್ಲೆಂಡ್
ನನ್ನಿಂಗ್ಲೆಂಡ್
ಏನು ಮಾಡೆನು ಹೇಳು ನಿನಗೆ ಇಂಗ್ಲೆಂಡ್ "

ಎಂದು ಅಲ್ಪರಿದು ಕೇಳಿಕೊಳ್ಳುತ್ತಾನೆ. ಇಂಗ್ಲೆಂಡು ತನ್ನನ್ನು ತುಳಿದರೂ ಸರಿ; ಕೊಂದರೂ ಸರಿ: ಕವಿ ಎಲ್ಲದಕ್ಕೂ ಸಿದ್ಧನಾಗಿದ್ದಾನೆ. ' ಶಾಧಿ ಮಾಂ ತ್ವಾಂ ಪ್ರಪನ್ನಮ್ '

ಬಳಕುವೆವೆ ಭಕ್ತಿಯಲಿ ನಾವು
ಇಂಗ್ಲೆಂಡ್, ನನ್ನಿಂಗ್ಲೆಂಡ್ ;
ಕೊಳು, ಕೊಲಿಸು ; ನಿನ್ನವರು ನಾವು
ನನ್ನ ಇಂಗ್ಲೆಂಡ್ !
ನಿನ್ನ ಹೊಲ ಮನೆ, ಚೆಂದ
ಬಾಳು ಮಿಗಿಲಾನಂದ !
ಸಾವ್ ಅಳಿವು-ಸಾಯುವೆವು
ಗಾನದಲಿ ತುತ್ತುರಿಯ ನೀನೂದಲು ಇಂಗ್ಲೆಂಡ್,

ಸ್ವರ್ಗದಲಿ ತುತ್ತುರಿಯ ನೀನೂದಲು ಸಾವ್-ಅಳಿವು ! ಸಾಯುವೆವು ! ಸ್ವರ್ಗದಲಿ ತುತ್ತುರಿಯ ನೀನೂದಲು ! ಎಂಥ ದೇಶಾಭಿಮಾನ ! ಇಂಗ್ಲೆ ಕ್ಕಾಗಿ ಕವಿ ಏನು ಮಾಡಲೂ ಸಿದ್ಧ. ಇಂಗ್ಲಂ ದರೂ ಎಂತಹದು ? " ತುಳಿದು ಬಹ ನಾವೆ ತಾಯಿ ! ಹಳೆ-ಉಗ್ರಸಾಗರನ ಕೆಳದಿ ! ಧವ ಖಡ್ಗದ ಮಡದಿ " ಇಂಥ ದೇಶದ ಸಲುವ ಯಾರು ತಾನೆ ಅಭಿಮಾನಪಟ್ಟುಕೊಳ್ಳಲಾರರ ಅಂತಲೇ, ಇಂಗ್ಲಂಡಿನ ಸಾಮ್ರಾಜ್ಯದ ಮೆ ಹೊಂಬಣ್ಣವನ್ನು ಪಸರಿಸುತ್ತಿದ್ದ ಸೂರ್ಯ ಎಂದಿಗೂ ಅಸ್ತವಾಗಲಾರನೆಂದು ಕವಿಗಳು ಜನ ಎಲ್ಲರೂ ನಂಬಿದ್ದಾರೆ. ಇಂಗ್ಲಿಷರ ರಾಷ್ಟ್ರೀ ಚಾರಿತ್ರ್ಯ ಮತ್ತು ಅವರು ಧೈರ್ಯವಾಗಿ ಎದ ಸಿದ ಕಷ್ಟಪರಂಪರೆಗಳನ್ನು ಕಂಡಾಗ ಈ ಮಾ ನಿಜವೆಂದೂ ಎನಿಸುತ್ತದೆ. ಆಂಗ್ಲರು ನೂರಾ ಯುದ್ಧಗಳನ್ನು ಎದುರಿಸಿದರೂ ಎಲ್ಲಿಯ ಶಾಶ್ವತ ಗುಲಾಮರಾಗಲಿಲ್ಲ. ನೀಲ ಜಲರ ಯಿಂದ ಇಂಗ್ಲೆಂಡ್ ಪ್ರಾಚೀನ ಕಾಲದಲ್ಲಿ ಉ ವಿಸಿದ ದಿನದಿಂದಲೇ ದೇವರು ಅವಳಿಗೆ ಈ ಶಾಸ ವನ್ನು ಹಾಕಿ ಕೊಟ್ಟಿದ್ದಾನೆ.

" ಆಳೌ ಬ್ರಿಟಾನಿಯಾ ! ಆಳು ತೆರೆಗಳನು !
ಎಂದಿಗೂ ಬ್ರಿಟನನು ಅಡಿಯಾಳು
ಎನಿಸಿಕೊಳನು

ವೈರಿಗಳು ಹೊಡೆದಷ್ಟು, ಬಿರುಗಾಳಿ ಕಿತ್ತಷ್ಟು ಬೇರೂರಿ ನಿಲ್ಲುವ ತೇಗಿನ ಹಾಗೆ, ಇಂಗ್ಲೆಂ ಸ್ಥಿರತೆಯನ್ನು ಪಡೆದಿದೆ ಎಂದು Thomas ಎಂ ಕವಿ ಹೇಳುತ್ತಾನೆ. ಸುಪ್ರಸಿದ್ಧ ಕವಿ ಸೈನಿಕನಾ Rupert Brooke ನಂತೂ ತನ್ನ ದೇಶಕ್ಕಾ ಹೊರ ನಾಡಿನಲ್ಲಿ ಎಲ್ಲಿಯಾದರೂ ಹೋರಾ ವಾಗ ತಾನು ಮಡಿದರೆ, ತನ್ನನ್ನು ಅಲ್ಲಿ ಹುಗಿದಷ ನೆಲ ಇಂಗ್ಲೆಂಡದ ಸ್ವತ್ತಾಯಿತೆಂದು ಹೇಳುತ್ತಾ ಹೀಗೆ ಹೊರ ಭೂಮಿಯಲ್ಲಿ ಸಾವಿರ ಸೈನಿಕ ಸತ್ತರೆ, ಅವರನ್ನು ಹೂಳಿದ ಅಷ್ಟು ನೆ ಇಂಗ್ಲೆಂಡಿನ ವಸಾಹತೇ ಆಯಿತು.

## ಕನ್ನಡ ನೆಲದ ವೈಭವ

ಕನ್ನಡ ನೆಲದ ವೈಭವವೂ ಯಾವ ದೇಶ ವೈಭವಕ್ಕೂ ಕಡಿಮೆಯಾಗಿಲ್ಲ. ಏನು ಸೌಂದರ್ಯ ಕನ್ನಡ ನೆಲದ ಸೌಂದರ್ಯ ! ಆ ಉತ್ತುಂಗ ಪರ್ವ ಸಾಲುಗಳು ! ಆ ನದೀ - ನದಗಳು ! ಆ ಭತ್ತ ಗದ್ದೆಗಳು ! ಕಬ್ಬಿನ ತೋಟಗಳು ! ತೆಂ ಕೌಂಗುಗಳು! ದೇವತಾ ನಿಲಯುಗಳು! ಬಯಲ ಸೀಮೆ ! ಕಡಲ ಸಂಪತ್ತು ! ಕನ್ನಡದಲ್ಲಿ ಯಾ ದಿಲ್ಲ ?

ಊರೂರ್ ತಪ್ಪದೆ ಪೂತ ಚೂತಲತೆಯಿಂ
ಮತ್ತಾಳಿಯಿಂ ಶಾಳಿಯಿ
ಊರೂರ್ ತಪ್ಪದೆ ದೇವತಾನಿವಹದಿಂ—

—ಕನ್ನಡ ನೆಲ ರಮಣೀಯವಾಗಿದೆ. ಉಳಿ ದೇಶದಲ್ಲಿ ಬರಿಯ ಮಳೆ ನೀರು ಮತ್ತು ಕಾಲು ಗಳ ನೀರಿನಿಂದ ಬನ ಬೆಳೆಯುತ್ತಿದ್ದರೆ, ಕರ್ನಾ ಟಕದ ಬನ ಬೆಳೆಯುವ ರೀತಿ ಹೀಗೆ ?—

ಅಡರ್ದೇರಿ ಕೋಡಗಂಗಳ್
ಕಡುಬಿಂದ ಈಡಾಡೆ ಘಳಿಲನೊಡೆದ ಎಳಗಾಯಿ

ಎಡಬಿಡದೆ ಒಸರ್ವ ಎಳನೀರ್ಗಳ್
ಮಡುಗೊಂಡು ಓವುತ್ತಿರ್ಪ ಇರ್ಪುವು ಅಲ್ಲಿಯ
ಬನಮಂ ॥ *

ಫಲಭರಿತವಾದ ತೆಂಗಿನ ಮರಗಳನ್ನು ರಭಸದಿಂದ ಏರಿದ ಮಂಗಗಳು ಆ ತೆಂಗಿನಕಾಯಿಗಳನ್ನು ಸೂರಾಡುವಾಗ, ಕಾಯಿಗಳು ಒಡೆದು ಹರಿವ ನೀರಿನಿಂದ ಅಲ್ಲಿಯ ವೃಕ್ಷರಾಜಿಗಳು ಬೆಳೆದು ನಿಂತಿವೆ. ಅಷ್ಟೇ ಅಲ್ಲ; ಅಲ್ಲಿಯ ಕಬ್ಬು ಸಹಿತ ಹಾಗೆಯೇ. ಸ್ವಲ್ಪ ತಟ್ಟಿದರೆ ಸಾಕು! ಕಬ್ಬಿನ ರಸ ಒರತೆ ಒರತೆಯಾಗಿ ಹರಿಯುತ್ತದೆ. “ಮಿಡಿದೊಡೆ ತನಿಗರ್ಬು ರಸಂಬಿಡುವವು.” ಭೃಂಗಗಳಿಗೆ ಹೂವಿನ ಕೆಂಪನ್ನೇ ಉಂಟಬೇಕೆಂದಿಲ್ಲ. ಅರಳಿದ ಒಂದು ಮುಗಳ ಕಂಪನ್ನು ಮೂಸಿದರೆ ಸಾಕು; ಅವಕ್ಕೆ ಅಜೀರ್ಣವಾಗುತ್ತಿದೆ. ಕರ್ನಾಟಕದಲ್ಲಿ ಎಲ್ಲಿ ನೋಡಿದಲ್ಲಿ ಸೊಗಯಿಸಿಬಂದ ಮಾಮರ; ಕೂಡಿಕೊಂಡ ಎಲೆಬಳ್ಳಿ; ಅರಳಿದ ಜಾಜಿ; ಸಂಪಿಗೆ; ಕುಕಿಲುವ ಕೋಗಿಲೆ; ಹಾಡುವ ಭೃಂಗ; ಪರಸ್ಪರ ಪ್ರೀತಿಸುವ ಜನ.$

## ನಾಡಿನ ಸಂಪತ್ತು

ಇದು ಕನ್ನಡಸಂಪತ್ತು. ಆದ್ದರಿಂದ ಹುಟ್ಟಬೇಕು ಇಂಥ ಕನ್ನಡದ ನಾಡಿನಲ್ಲಿ, ರಸಿಕನಾಗಿ ಮನುಷ್ಯನಾಗಿ: ಮನುಷ್ಯನೆಂದರೆ ಯಾರು? “ತ್ಯಾಗದ ಭೋಗದ ಅಕ್ಕರದ ಗೇಯದ ಗೊಟ್ಟಿ ಅಲಂಪಿನ ಇಂಪುಗಳ್ಗೆ ಆಗರಮಾದ ಮಾನಿಸರೆ ಮಾನಿಸರ್.” ಅಂಥವನಾಗಿ ಹುಟ್ಟಲು ಮನುಷ್ಯನು ಯಾವ ಬೇಕಾದ ತಪಸ್ಸನ್ನು ಮಾಡಬಹುದು. ಇಂಥ ಮನುಷ್ಯನಾಗಿ ಕನ್ನಡನಾಡಿನ ಬನವಾಸಿಯಲ್ಲಿ ಹುಟ್ಟಲು ಪಂಪಕವಿ ಏನನ್ನೂ ಮಾಡಲು ಸಿದ್ಧ. ಆದರೆ, ದುರ್ದೈವದಿಂದ ಇಂಥ ದೇಶದಲ್ಲಿ ಮನುಷ್ಯನಾಗಿ ಹುಟ್ಟಲು ದೇವರು ಏನಾದರೂ Chance ಕೊಡದಿದ್ದರೆ, ಕೊನೆಗೆ “ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್” ಕವಿ ಎಲ್ಲೆಲ್ಲಿ ಸಂಗೀತವನ್ನು ಕೇಳುತ್ತಾನೋ ಎಲ್ಲೆಲ್ಲಿ ಸೌಂದರ್ಯವನ್ನು ಕಾಣುತ್ತಾನೋ— ಆ ದೇಶವೆಲ್ಲ ಕನ್ನಡನಾಡೇ ಇರಬೇಕೆಂದು ಅವನಿಗೆ ಭಾಸವಾಗುತ್ತದೆ. ಇಲ್ಲವಾದರೆ ಇಂಥ ವಾತಾವರಣದಲ್ಲಿ ಕನ್ನಡನಾಡಿಗೆ ಓಡಿಹೋಗಬೇಕೆಂದು ಅವನಿಗೆ ಎನಿಸುತ್ತದೆ.

ತೆಂಕಣಗಾಳಿ ಸೋಂಕಿದೊಡಂ, ಒಳ್ನುಡಿ
ಗೇಳ್ದೊಡಂ,
ಇಂಪನಾಳ್ದಗೇಯಮ್ ಕಿವಿವೊಕ್ಕೊಡಂ
ಬಿರಿದ ಮಲ್ಲಿಗೆ ಕಂಡೊಡಂ, ಕೆಂದಲಂಪಂ-
ಗೆಡೆಗೊಂಡೊಡಂ, ಮಧುಮಹೋತ್ಸವಮ್
ಆದೊಡಂ, ಅದಂ ಏನಂ ಎಂಬೆಂ
ಆರ್ ಅಂಕುಸಂ ಇಟ್ಟೊಡಂ ನೆನವುದೆನ್ನಮನಂ
ಬನವಾಸಿದೇಶಮಂ ॥

ಎಲ್ಲಿಯೇ ಅಗಲಿ ಸುಂದರ ಮಾತುಗಳನ್ನು ಕೇಳಿದರು ಸಹ ಕವಿಗೆ ಆರ್ ಅಂಕುಸಂ ಇಟ್ಟೊಡಂ ಕನ್ನಡದ ನೆಲದ ನೆನಪಾಗುತ್ತದೆ. ಇಂಗ್ಲೆಂಡಿನ ಸೌಂದರ್ಯ ಎಪ್ರಿಲ್ ತಿಂಗಳಲ್ಲಿ ನೋಡಬೇಕೆಂದು ಹೇಳುತ್ತಾರೆ. ಅಂತಲೇ, ಬ್ರೌನಿಂಗ ಕವಿ, ಪ್ರಪಂಚದಲ್ಲಿ ತಾನು ಎಲ್ಲಿಯೇ ಇರಲಿ; ಎಪ್ರಿಲ್ ಬಂದಕೂಡಲೇ ಇಂಗ್ಲಂಡಕ್ಕೆ ಧಾವಿಸಬೇಕೆಂದು ಅಪೇಕ್ಷಿಸುತ್ತಾನೆ.

“Oh! to be in England!
Now that April's there.”

ಪಂಪನಿಗೂ ಕನ್ನಡ ನೆಲದ ಆಕರ್ಷಣೆ ಅಂತ ಹದೇ! ಆರ್ ಅಂಕುಸಂ ಇಟ್ಟೊಡಂ ನೆನವುದೆನ್ನ ಮನಂ ಬನವಾಸಿದೇಶಮಂ. ಸುತ್ತಲೂ ಸೌಂದರ್ಯವು ಹೀಗೆ ಚೆಲ್ಲವರಿದು ನಿಂದಾಗ ಸ್ವರ್ಗದಲ್ಲಿ-ಯಾದರೂ ಏನಿದೆ! “ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ.” “ಪೆಜತಾವುದು ಸಂಸಾರಸಾರ ಸರ್ವಸ್ವ ಫಲಂ?” *
ಮಲೆನಾಡಿನ ಸೌಂದರ್ಯವನ್ನು ವರ್ಣಿಸುವ ಸರ್ವಜ್ಞ.

ಅಲ್ಲವರಿಷಣವುಂಟು ಬೆಲ್ಲ ಬಳಿಯಲಿವುಂಟು
ಮೆಲ್ಲಲ್ಕೆ ಮಲೆನಾಡ ಅಲ್ಲೆನ್ನಬಹುದೆ

ಎಂದುಕೇಳುತ್ತಾನೆ.

ಮಲೆನಾಡಿನ ಸೌಂದರ್ಯವು ಹೀಗಿದ್ದರೆ, ಕನ್ನಡದ ವಿಜಾಪುರದ ಬಯಲುಸೀಮೆಯ ಸೌಂದರ್ಯ ಹೇಗೆ?, ನಿಜ; ಅಲ್ಲಿ “ಬಟ್ಟಿಬಟ್ಟಿಯೊಳಿಲ್ಲ ಹೊಟ್ಟೆ ಜಾಲಿಯ ಮುಳ್ಳು.” ಆದರೆ, ಇರಬೇಕು, ಉಣಬೇಕು ಬಯಲುಸೀಮೆಯಲ್ಲಿ!

ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ
ಕಾಳೆಮ್ಮೆ ಕರೆದ ಹಯನಾಗೆ
ಬೆಳವಲದ ಮೇಳ ನೋಡಂದ ಸರ್ವಜ್ಞ.

ಜನವೂ ಹಾಗೆಯೇ. ಭವ್ಯಾಕೃತಿಗಾರ-ಶ್ರವಣಬೆಳಗೊಳದ ಗೊಮ್ಮಟ ವಿಗ್ರಹವಿದ್ದ ಹಾಗೆ.

ಕನ್ನಡದ ಕಡಲಸಂಪತ್ತು ನೋಡಬೇಕು ಭರತೇಶ ವೈಭವದಲ್ಲಿ.

ಅಟ್ಟುವ ತೆರೆ, ಮುಂದೋಡುವ ತೆರೆ, ಪೆರ್ಚಿಟ್ಟದಂತೇರ್ವ ತೆರೆಗಳ ಸೌಂದರ್ಯವೆನ್ನೆಲ್ಲಾ ನಾವಲ್ಲಿ ಕಾಣುತ್ತೇವೆ.

ಕನ್ನಡದ ಭಾಗಗಳ ಸೌಂದರ್ಯ ಹೀಗಿದ್ದರೆ, ಊರಸೌಂದರ್ಯ? ‘ಧಾರವಾಡದಾ ತಾಯಿ’ ಶ್ರೀ ಬೇಂದ್ರೆ ಅವರಿಗೆ ಅಚ್ಚು ಮೆಚ್ಚು. ಅಲ್ಲಿಯ ಸಾಧನಕೆರೆಯ ನಿಸರ್ಗಸೌಂದರ್ಯ, ಶ್ರಾವಣ ಮಾಸದಲ್ಲಿ ಮದುವಣಿಗನ ಹಾಗೆ ತಲೆಗೆ ಬಾಸಿಂಗ ಕಟ್ಟಿಕೊಂಡ ಗುಡ್ಡಗಳ ಸಾಲು, ಆ ಶ್ರಾವಣದ ವೈಭವ ಕಾಣಬೇಕು ಧಾರವಾಡದಲ್ಲಿ—

ಬಂತು ಶ್ರಾವಣಾ
ಬಂತು ಕಾಡಿಗೆ ಬಂತು ನಾಡಿಗೆ-
ಬಂತು ರಾವಣಾ ಕುಣಿಧಾಂಗ.....

ಇಂಥ ಧಾರವಾಡವನ್ನು ಬಿಟ್ಟು ಹೋಗಲು ಕವಿ ಹೃದಯ ಮುರುಗುತ್ತದೆ. ಕೃತಜ್ಞತೆಯ ಕಣ್ ಹನಿಯನ್ನು ತುಳುಕಿಸಿ ಕವಿ ಹೇಳುತ್ತಾನೆ—

ಹೋಗಿಬರತೇನಿನ್ನ ನಮಸ್ಕಾರ ನಿಮಗೆ
ಕಾಯ್ದಿರಿ ತಾಯಿಹಾಂಗ—

ಇದು ಧಾರವಾಡ. ಮೈಸೂರು? ಬೇಂದ್ರೆ ಅವರಿಗೆ ಮೈಸೂರಿನ ಬಗ್ಗೆಯೂ ಅಷ್ಟೇ ಅಭಿಮಾನವಿದೆ. “ಮೈಸೂರ ಮೈಸಿರಿಯು ಸೂರೆಗೊಂಬುದು ಮನವ.” ಮಾತುಕತೆ ಸಂಗೀತ. ಬಿ. ಎಂ. ಶ್ರೀ ಹೇಳಿದ ಹಾಗೆ, ಮೈಸೂರು ಗಂಧದಗುಡಿ, ಚಿನ್ನದ ನಾಡು, ವೀಣೆಯ ಬೆಡಗು, ಇಳೆಯ ಮಾದರಿ. ಮೈಸೂರ ಭದ್ರಾವತಿಯ ಉಕ್ಕಿನತೊಲೆಯ ಮನೆಯಲ್ಲಿ, ಮೈಸೂರಶ್ರೀಗಂಧವ ಪೂಸಿಕೊಂಡು, ಮೈಸೂರ ಗಂಧದ ಸಾಬೂನಿನಿಂದ ಮೈ ತೊಳೆದು, ಮೈಸೂರುವಸ್ತ್ರದಿಂದ ಒರೆಸಿಕೊಂಡು, ಮೈಸೂರ ರೇಶ್ಮೆಯನ್ನು ಧರಿಸಿ, ಮೈಸೂರುಕಾಗದದ ಮೇಲೆಯೇ ಬೇಕಾದ ಲೇಖವನ್ನು ಬರೆಯಬಹುದು. ಗಂಧದಗುಡಿ ಮೈಸೂರು.

## ಕನ್ನಡರ ಪ್ರಾಣಪದಕ: ಕೊಡಗು

ಸರಿ, ಇನ್ನು ಸ್ವಲ್ಪವೈಲು ಮುಂದು ಹೋದರೆ ಸಾಕು; ಅಲ್ಲಿ ಕಾಣುವುದು ಕೊಡಗು. ಕೊಡಗು ಕನ್ನಡದ ಪ್ರಾಣಪದಕ; ಕ್ಷಾತ್ರ, ಸೌಂದರ್ಯಗಳ ನೆಲೆವೀಡು. ನಿಸರ್ಗಸೌಂದರ್ಯ ಮತ್ತು ವ್ಯಕ್ತಿಸೌಂದರ್ಯ ಸ್ಪರ್ಧಿಸುತ್ತಿವೆ ಆ ಭೂಮಿಯಲ್ಲಿ. ಸ್ವತಂತ್ರಭಾರತದ ಇಬ್ಬರು ಮಹಾದಂಡನಾಯಕರನ್ನು ಕಾಣಿಕೆಯಿತ್ತ ಪುಣ್ಯಕೊಡಗಿಗಿದೆ; ನಮ್ಮ ಕನ್ನಡ ನಾಡಿಗಿದೆ. ಕೊಡಗಿನ ರಮಣೀಯತೆಯನ್ನು ಕಾಣಬೇಕಾದರೆ, “ನಡೆದು ನೋಡು ಕೊಡಗಿನ ಬೆಡಗಂ” ಎಂದು ಸಾ. ರಾ. ಹೇಳುತ್ತಾರೆ. ಭೂದೇವಿ ದೇವಸನ್ನಿಧಿಯನ್ನು ಬಯಸಿ ಮೋಹನಗಿರಿಯ ರೂಪವನ್ನು ಧರಿಸಿ ನಿಂತ ಸ್ಥಾನ ಕೊಡಗು. ಮುಗಿಲಿನಲ್ಲಿ ಮಿಂಚುಹೊಳೆದ ಹಾಗೆ ಕಾವೇರಿ ನದಿ ಕೊಡಗಿನಲ್ಲಿ ಅಲ್ಲಲ್ಲಿ ತುಳುಕಾಡುತ್ತಾಳೆ. ಬ್ರಹ್ಮಗಿರಿಯಿಂದ ಪುಷ್ಪಗಿರಿ ಪರ್ಯಂತ ಬೆಳೆದ ಈ ದೇಶದ ಜನ ಧರ್ಮದಾನದ ಕಟ್ಟುಕಟ್ಟಳೆ ನೀತಿರೀತಿಯ ಕೋಶ. ಅಲ್ಲಿಯ ಜನರಾದರೂ ಎಂಥವರು? ಅವರು ಕ್ಷಾತ್ರ ವೀರರು. ಹುಲಿಯ ಹಾಲನ್ನೇ ತಮ್ಮ ಆಹಾರವನ್ನಾಗಿ ಮಾಡಿಕೊಂಡವರು. ಅಲ್ಲಿಯ ಮಕ್ಕಳು ಸಹ ಕವಣೆ ಆಟಕ್ಕಾಗಿ ಅಂತಿಂತ ಕವಣೆ ಮತ್ತು ಕಲ್ಲುಗಳನ್ನು ಉಪಯೋಗಿಸಲಿಲ್ಲ. ಆದಿಶೇಷನನ್ನೇ ಕವಣೆಯ ಹಗ್ಗವನ್ನಾಗಿ ಮಾಡಿ ಪರ್ವತಗಳನ್ನೇ ಹರಳಾಗಿ ಹಚ್ಚಿ ಬೀಸಿದ ವೀರರು ಕೊಡಗರು. ತಮ್ಮ ನಾಡಿನ ಕೊರಳು ದಾಸ್ಯದ ನೊಗದ ಭಾರಕ್ಕೆ ಬಗ್ಗಬಾರದೆಂದು ಹುಲಿಯ ಹಾಗೆ ಆರ್ಭಟಿಸಿ ಕಾದಿದ ವೀರರು ಕೊಡಗರು. ರಣರಂಗದಲ್ಲಿ ಅರಿಗಳ ರುಂಡಗಳನ್ನು ಪುಟನೆಗೆದಾಡಿ ವೈರಿಗಳನ್ನು ಸಂಹರಿಸಿದ ವೀರರವರು. ತಮ್ಮ ವಿಜಯವನ್ನು ಸಾರಲು ಅವರು ಮೊಳಗಿದ ಕಹಳೆಗಳಾವುವು? ಅವು ಕಂಚು, ತಾಮ್ರದ ಬಣಗು ಕಹಳೆಗಳಲ್ಲ. ರಣರಂಗದಲ್ಲಿ ತಾವು

---

* ಆಂಡಯ್ಯ.
$ ಪಂಪ—ಭಾರತ

* ಪಂಪ—ಭಾರತ.

ಉರುಳಿ ಕೆಡಹಿದ ವೈರಿಗಳ ಆನೆಗಳ ಸೊಂಡಿಲಗಳನ್ನೇ ಕಿತ್ತುಕೊಂಡು ಅವನ್ನೇ ಕಹಳೆಯನ್ನಾಗಿ ಮಾಡಿ ತಮ್ಮ ಪರಾಕ್ರಮವನ್ನು ಉಗ್ಘಡಿಸಿದ ವೀರರವರು. ಅವರ ಈ ಹಿರಿಮೆಯನ್ನು ದಿವಂಗತ ಪಂಜೆ ಅವರ ಬಾಯಿಂದಲೇ ಕೇಳಬೇಕು.

ಸವಿದು ಮೆದ್ದರೊಯಾರು ಪೂರ್ವದಿ ಹುಲಿಯು ಹಾಲಿನ ಮೇವನು.

ಕವಣೆ ತಿರೆ ಕಲ್ಲಾಟ ಹಗ್ಗಕೆ ಸೆಳೆದರೊ ಹೆಬ್ಬಾವನು.

ಸವರಿದಾನೆಯ ಸೊಂಡಲಿನ ರಣಕೊಂಬ ನಾರ್ ಭೋರ್ಗರೆದರೋ.

ಸವಿದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೊ.

ಅವರು ಸೋಲ್‌ಸಾವ್ ಅರಿಯರು
ಅವರೆ ಕೊಡಗಲಿ ಗರಿಯರು
ಅವರೆ ಕೊಡಗಿನ ಹಿರಿಯರು.

ಇಂಥ ಕೊಡಗರು ಇಬ್ಬರು ಮಹಾ ದಂಡನಾಯಕರನ್ನು ಕಾಣಿಕೆಯಾಗಿ ಕೊಟ್ಟದ್ದರಲ್ಲಿ ಏನಾಶ್ಚರ್ಯ!

## ಗಡಿನಾಡು

ಹಾಂ: ಹೌದು; ಬರಿಯ ಕನ್ನಡದ ಒಳದೇಶದ ಸಿರಿಯನ್ನಷ್ಟೇ ಕಂಡೆವಲ್ಲವೇ? ಪಾಪ ಗಡಿನಾಡಿನ ಬಾಂಧವರ ಗತಿಯೇನು? ಅಣ್ಣ ಬಾಗಿಲು ಕಾಯ್ದರೇ ತಮ್ಮ ಅಂಗಳದಲ್ಲಿ ಊಟ ಮಾಡಬಹುದಲ್ಲವೇ? ಹೆರವರ ಪ್ರಭಾವ ಮತ್ತು ಆಕ್ರಮಣಗಳನ್ನು ಪ್ರತಿ ನಿಮಿಷವೂ ತಡೆದು ಕನ್ನಡದ ನಡು ಅಂಗಳು ಹಸನಾಗಿರುವಂತೆ ಮಾಡಿದ ವೀರರು ಈ ಗಡಿನಾಡ ಬಾಂಧವರು. ನಿತ್ಯ ಸಂಗ್ರಾಮ ಅವರ ಬಾಳಿಗೆ ಕಹಿಯನ್ನೊದಗಿಸಿಲ್ಲ. ಸಮಗ್ರ ಭಾರತೀಯ ಸಂದರ್ಶನವನ್ನು ಕರುಣಿಸಿದೆ. ಅಥಣಿ ತಾಲೂಕಿನ ತರುಣ ಕವಿ ಭುಜೇಂದ್ರ ಮಹಿಷವಾಡಿ ಅವರು ಹೇಳಿದಂತೆ —

ನಾಡ ನುಡಿಯ ಮೇಲೆ ಪ್ರೀತಿ
ಉಕ್ಕುತಿರಲಿ; ಆ...ದ...ರೂ...
ದೇಶಭಕ್ತಿ ಹೃದಯ ತುಂಬಿ
ತುಳುಕುತಿರಲಿ!
ನುಡಿಯ ಗಡಿಯೆ ಪಂಜರ
ಆಗದಿರಲಿ! ಎಚ್ಚರ!!

ನಿತ್ಯ ಹೋರಾಡುವವನೇ ಯುದ್ಧ ಸನ್ಯಾಸವನ್ನು ಸಾರುವವನು; ಅಡುಗೆಮನೆಮಲ್ಲನೇ ಯುದ್ಧದ ಬಗ್ಗೆ ಭಾಷಣ ಕೊಡುವವನು. ಕನ್ನಡದ ಉತ್ತರ ಗಡಿ ಕರ್ನಾಟಕದ ಕೆಚ್ಚು, ಮಹಾರಾಷ್ಟ್ರದ ಸ್ಥೈರ್ಯ ಮತ್ತು ನಯಗಳೆರಡನ್ನೂ ಅಳವಡಿಸಿಕೊಂಡಿದೆ. ಇಂಥ ಗಡಿನಾಡಿನ ಬಗ್ಗೆ ಅಲ್ಲಿಯ ತರುಣ ಕವಿಗಳಿಗೆ ತುಂಬಾ ಅಭಿಮಾನ! ಅವರ ಊರಿನ ಹೆಸರುಗಳಲ್ಲಿಯೂ ಇಂಥ ಸೌಂದರ್ಯ ಸಂಗೀತ ಅಡಗಿವೆ. ಮಹಿಷವಾಡಿ ಅವರ ಈ ಕುಣಿವ ಪದದ ವೈಖರಿ ನೋಡಿರಿ:—

ಬೆಡಕಿಹಾಳ ಬೋರಗಾವಿ
ನೇಜ, ಭೋಜ, ಗಳತಗಿ,
ಶಿರದವಾಡ ಜಾನವಾಡ
ಶಮನೆವಾಡ ಸದಲಗಿ,
ಎನಿತು ಚಂದ... ಚಂದ... ಹಳ್ಳಿ!
ಹೆಸರ ಬಳ್ಳಿ ಹಬ್ಬದೆ!
ಚಾಚಿ ಕುಡಿವ ಬಿಡ:ತ ಮಿಡಿಯ
ನಾಡಗುಡಿಯ ತಬ್ಬದೆ.*

ಪದಸಮೂಹ ಊರಿನ ಸೌಂದರ್ಯದ ಹಾಗೆಯೇ ಇಲ್ಲಿ ಕುಣಿಯುತ್ತದೆ. ಈ ಗಡಿನಾಡಿನಲ್ಲಿ ಕರಿನಾಡು ವೇದಗಂಗೆಯಾಗಿ, ಮಹಾರಾಷ್ಟ್ರಮಾತೆ ದೂಧಗಂಗೆಯಾಗಿ ಹರಿದಿದ್ದಾಳೆ. ಇಂಥ ನಾಡು ತನ್ನದೆಂದು ಹೇಳಲು ಕವಿಗೆ ಅಭಿಮಾನ ಉಕ್ಕಿ ಹರಿಯುತ್ತದೆ.

## ಕನ್ನಡ ಜನ

ಕನ್ನಡ ದೇಶ ಹೀಗಿದ್ದರೆ ಕನ್ನಡ ಜನ! ಅವರು ಶೂರರು; ಉದಾರರು; ಅತ್ಯುಗ್ರರು: ಗಭೀರಚಿತ್ತರು. ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳು; ಕಿಱಿಯಮಕ್ಕಳು, ಮೂಮೂಗುರುಂ ಅರಿಪಲ್ಕೆ ಅರಿವರ್ ವಿವೇಕವಂ ಮಾತುಗಾರಂ. ಕನ್ನಡದ ರಾಜಕೀಯ ಜೀವನವೂ ಅಷ್ಟೇ ಉಜ್ವಲವಾದದ್ದು. ಅನೇಕ ಕನ್ನಡ ಅರಸರು ಗಂಗೆಯಲ್ಲಿ ತಮ್ಮ "ಅತೃತುರಂಗವನ್ನು" ಸ್ನಾನ ಮಾಡಿಸಿದರು. ಒಂದು ಕಾಲಕ್ಕೆ ಕನ್ನಡ ನಾಡಿನ ಮಹತ್ವಾಕಾಂಕ್ಷೆ ಉತ್ತರದ ಗಂಗೆಯವರೆಗೆ ವ್ಯಾಪಿಸಿತ್ತು. ಆಕಾಶದ ನಕ್ಷತ್ರಗಳೆಲ್ಲ ಕನ್ನಡದ ನೆಲದ ಮೇಲೆ ಬಂದು ಬೀಡುಬಿಟ್ಟದ್ದವು.

ತಾರೆಗಳು ಮೇಳವಿಸಿ ಬೀಡುಬಿಟ್ಟಿಹ ನಾಡು
ನಮ್ಮ ಕನ್ನಡನಾಡು †

ನಮ್ಮ ನಾಡು ತಾರೆಗಳ ಒಡನಾಡಿ. ಆದರೆ ಕಾಲಕ್ರಮದಲ್ಲಿ ತನ್ನ ವೈಭವವನ್ನು ಕಳೆದುಕೊಳ್ಳಬೇಕಾಯಿತು.

ಧವಳಗಿರಿಗಂಗೆಯನು ಆಮಂತ್ರಿಸಲು ಹೊರಟ
ಕನ್ನಡದ ತಾಯಿ
ಕೃಷ್ಣೆಗಿಹ ಸೌಹಾರ್ದವನು ಕಳೆದುಕೊಂಡಿಹಳು
ಇಲ್ಲ ಬಾಯಿ

ಯಾವ ನಾಡಿನಲ್ಲಿ ತೊಟ್ಟಿಲಲ್ಲಿ ಮಲಗಿದ ಕೂಸು ಸಹ ವೈರಿಯ ಹೆಸರನ್ನು ಕೇಳಿ ಕಿಡಿಕಿಡಿಯಾಗುತ್ತಿತ್ತೊ, ಆ ನಾಡಿನ ಜನರು ಕಾಲಕ್ರಮೇಣ ಹಗೆಯ ಬಾಯ್ ತಂಬುಲಕ್ಕೆ ಕೈ ಆಂತರು. "ಎಂಥ ನಾಡಿದು ಎಂಥ ಕಾಡಾಯಿತೋ!" ಹುಲುಸಾದ ಬೆಳೆ ಹೋಗಿ ಹುಲ್ಲು ಕೊಳೆ ತುಂಬಿಹುದೊ! ಜನರು ಕೂಡ.

ಹಗೆಯ ಹೆಸರನು ಕೇಳಿ ಹುಲಿಯಂತೆ ಹಸುಗೂಸು ನೆಗೆದು ತೊಟ್ಟಿಲ ತುಳಿದು ನುಗ್ಗುತಿಹ ನಾಡಿನಲಿ ಹಗೆಯ ಊಳಿಗವಾಗಿ ಬಾಳುತಿಹರು.§

ಕವಣೆತಿರೆಕಲ್ಲಾಟಕ್ಕೆ ಹೆಬ್ಬಾವನ್ನೇ ಸೆಳೆದವರು! ಸವರಿದ ಆನೆಯ ಸೊಂಡಿಲನ್ನೇ ತಮ್ಮ ಕಹಳೆಯನ್ನಾಗಿ ಊದಿದವರು. ಅಂಥ ಜನ ಅನ್ಯರ ಆಳಾಗಿ, ಸ್ವತ್ವವನ್ನೇ ಮರೆತರು- ಯಾಕೆ? ಕನ್ನಡರು ದೊಡ್ಡವರು. ದೊಡ್ಡವರದೆಲ್ಲವೂ ಹೀಗೆಯೇ. ಯಾವ ಕೆಲಸವನ್ನು ಮಾಡಿದರೂ ಅವರು ದೊಡ್ಡ ರೀತಿಯಲ್ಲಿಯೇ ಮಾಡುವರು. ಕೆಲಸ ಮಾಡಿದರೆ ದೊಡ್ಡರೀತಿ; ಓದಿದರೆ ದೊಡ್ಡರೀತಿ; ಬರೆದರೆ ದೊಡ್ಡ ರೀತಿ; ಮಲಗಿದರೆ—ಹೂಂ—ಮಲಗಿದರೂ ದೊಡ್ಡ ರೀತಿಯೇ.

"ದೊಡ್ಡವರದೆಲ್ಲವೂ ದೊಡ್ಡದೆಂಬುವ ಮಾತು ಸುಳ್ಳಲ್ಲ." ಕನ್ನಡಿಗರು ಎಂಥೆಂಥ ಪವಾಡಗಳನ್ನು ಮೆರೆದರು! ಶ್ರವಣಬೆಳಗೊಳದಲ್ಲಿ ಸಾವಿರ ವರುಷ ನಿಂತ ಗೊಮ್ಮಟ! ವಿಜಯವಿಠ್ಠಲನ ನಲ್ಲ ರೂಹಿನ ಕಲ್ಲು! ವಿಜಯಪುರದಲ್ಲಿ ಆಡಿದ್ದ ನಾಡಾಡಿ ಏಳೇಳು ಸಲ ನುಡಿವ ಗೋಳಗುಮ್ಮಟ! ಒಂದೇ ಎರಡೇ ಕನ್ನಡಿಗರ ಕೈವಾಡದಿಂದ್ರಜಾಲಕೆ ಕಲ್ಲುಕುಸುರಿತು.‡ ಕನ್ನಡರ ಕೈಯಲ್ಲಿ ಕಲ್ಲು ಮೇಣವಾಯಿತು- ದೇಗುಲಗಳೆಲ್ಲ ಮೇಣದ ಬಸದಿಗಳಾದುವು. ಕಲ್ಲು ಕಂಡಲ್ಲೆಲ್ಲ—ಅಷ್ಟೇ ಅಲ್ಲ; ಪರ್ವತ ಕಂಡಲ್ಲೆಲ್ಲ—ವಿಗ್ರಹಗಳನ್ನು ಕಂಡರಸಿದರು. ಕಲ್ಲು! ಕಲ್ಲು! ಕಂಡಲ್ಲೆಲ್ಲ ಕಲ್ಲು—ವಿಗ್ರಹ; ವಿಗ್ರಹ—ಕಲ್ಲು. ಸಂಗತಿಯಿಂದ ಕೆಲವು ಸಲ ಸಂಗಸ್ವಭಾವವೂ ಬರುವುದುಂಟು. ಕಲ್ಲಿನ ಬಗ್ಗೆ ವಿಚಾರ ಮಾಡಿ ಮಾಡಿ,—ಶಿಲಾಧ್ಯಾನದಿಂದ ಧೇನಿಸುವವರ ಚೇತನಕೆ—ಅಚೇತನ ಸಮಾಧಿಯೆ ಕವಿಯಿತು. ಹೀಗಾಗಿ ಕಲ್ಲು ಕಟೆಯುವಾಗ ಅದ್ಭುತವಾಗಿ ಕಟೆದರು. ಕಟೆಯುತ್ತ, ಕಟೆಯುತ್ತ ಮಲಗಿದರು. ಮಲಗಿದವರು ಮಲಗಿಯೇ ಬಿಟ್ಟರು! ಯಾಕಂದರೆ, ಅದೂ ದೀರ್ಘಕಾಲಾವಧಿ. "ದೊಡ್ಡವರದೆಲ್ಲವೂ -ನಿದ್ದೆ ಸಹ-ದೊಡ್ಡದೆಂಬುವ ಮಾತು ಸುಳ್ಳಲ್ಲ." ಕನ್ನಡದ ಈ ದಿಙ್ಮೂಢತೆಗೆ ಕಾರಣವೇನು? ಅವರ ಸ್ವಾಭಿಮಾನಹೀನವಾದ ಸೌಜನ್ಯವೇ ಕಾರಣ. ಔದಾರ್ಯದ ಉರುಲಿನಲ್ಲಿ ಸ್ವತ್ವವನ್ನೇ ಕಳೆದುಕೊಳ್ಳುವ ಬಂಟರು ಕನ್ನಡಿಗರು.

"ಸಲಗೆಯನು ಬೆಳೆಸುತ್ತ ಸುಲಿಗೆಯನು ಮಾಡಿದರು: ಕನ್ನಡಕೆ ಬಂತು ಗೋಳು," ಇಂಥ ದುರ್ದೆಸೆಯ ಮೂಲಕ ಕರ್ನಾಟಕದ ಅಂಗಾಂಗಗಳೆಲ್ಲ ಆ ಕಡೆ ಈ ಕಡೆ ತೂರಲ್ಪಟ್ಟವು. ಕನ್ನಡದ ಪಂಚಪ್ರಾಣಗಳನ್ನು ಸೂರೆಮಾಡಿದ ಹಾಗೆ ಆ ಐದು ಆಧಿಪತ್ಯಗಳಲ್ಲಿ ಹರಿದು ಕರ್ನಾಟಕ ಹಂಚಿಹೋಯಿತು.

## ಕನ್ನಡದ ಒಂದುಗೂಡುವಿಕೆ

ಕ್ರಾಂತಿದರ್ಶಿಯಾದ ಕವಿ ಕನ್ನಡದ ಒಂದುಗೂಡುವಿಕೆಗಾಗಿ ಪುನಃ ತನ್ನ ಕಹಳೆಯನ್ನು ಎತ್ತಿದನು. "ಗಂಡುಸಾದರೆ ನಿನ್ನ ಬಲಿ ಕೊಡುತಿಯಾ ನೀನು?" ಎಂದು ಶ್ರೀ ಬೇಂದ್ರೆ ಅವರು ಕೇಳಿದರು. ಕನ್ನಡದ ದಾಸಯ್ಯನಾಗಿ ಶಾಂತ ಕವಿ

* 'ಐದಳ ಮಲ್ಲಿಗೆ' ಪುಟ ೫೬.
† ವಿನಾಯಕ
§ ರಂ. ಶ್ರೀ. ಮುಗಳಿ
‡ ಅಂಬಿಕಾತನಯದತ್ತ

ಗಳು ಮನೆ ಮನೆಗೆ ಹೋಗಿ ಅಂತಃಕರಣದ ಭಿಕ್ಷೆಯನ್ನು ಬೇಡಿದರು. ಕನ್ನಡ ನಾಡನ್ನೆಲ್ಲ ಸುತ್ತಿ, ಚೆಲುವ ಕಣಿ ಕಾರ್ವಾರದಲಿ ಎದೆ ತುಂಬಿ, ಪವಿತ್ರ ಗೋಕರ್ಣದಲ್ಲಿ ಮಿಂದು, ಉಡುಪಿಯಲ್ಲಿ ಕೃಷ್ಣಂಗೆ ಕೈಮುಗಿದು, ಮಂಗಳೂರಿನ ಹಿರಿಯ ನಂಪಿರಲಿನಿಂದು, ಚಾರ್ಮಾಡಿ ಘಾಟಿಯನ್ನು ಬಳಸಿ, ಕನ್ನಡದ ಸಮಗ್ರತೆಯ ಕಲ್ಪನೆಯನ್ನು ಕಂಡ ದಿವಂಗತ ಬಿ. ಎಂ. ಶ್ರೀ ಅವರು ಕನ್ನಡ ತಾಯ ಪ್ರಫುಲ್ಲ ಮುಖದ ನೋಟವನ್ನು-ವಾಸ್ತವತೆಯ ಮೊದಲು ಕಾವ್ಯದಲ್ಲಿ ಕಂಡರು. ಇನ್ನೂ ತನ್ನ ಇಂದಿನ ವೈಭವದ ದಿನವನ್ನು ಕಂಡರಿಯದಿದ್ದ ಕನ್ನಡದ ಆ ತಾಯಿ ಸಾನಂದವಾಗಿ ನಕ್ಕಳು.

ನಕ್ಕಳಾತಾಯಿ !

ಮುದುಕಿ ಎಳೆಯವಳಾಗಿ, ಮಾಸು ಮಿಂಚಳೆ
ಯಾಗಿ,
ಸವೆದ ಮೈತುಂಬಿ, ಕಡಲ ತೆರಗಳನುಟ್ಟು,
ಬೆಟ್ಟ ಬಯಲನು ತೊಬ್ಬು, ಅರಿಲ ಮುಡಿಗಿಟ್ಟು.
ಮುಗುಳ್ ನಗೆಯ ನಸು ನಕ್ಕಳಾತಾಯಿ

ನನ್ನ ತಲೆಯಲಿ ಕಯ್ಯತಾವರೆಯನಿಟ್ಟು ಕವಿ ಕಾವ್ಯದಲ್ಲಿ ಕಂಡ ದೃಶ್ಯವಿದು! ನಕ್ಕಳಾತಾಯಿ. ಕನ್ನಡದ ರಾಜ್ಞಿ ಸಾಮ್ರಾಜ್ಞಿ

ಭುವನೇಶ್ವರೀದೇವಿ ರಥವನೇರಿದಳು.
ಕೂಗಿದರು ಎಲ್ಲರೂ ಒಕ್ಕೊರಲ್—
"ತಾಯ್ ಬಿಜಯ ಮಾಡುವಳು, ದಾರಿ
ಬಿಡಿ, ದಾರಿ ಬಿಡಿ ಅಡ್ಡ ಬಾರದಿರಿ"

ಕರ್ನಾಟಕ ಏಕೀಕರಣದ ಆಕಾಶ ಕುಸುಮ ನಕಾಶಕ್ಕಿಳಿಯುವ ಮೊದಲು ಕವಿಕಂಡ ಕನ್ನಡ ತಾಯನೋಟವಿದು. ರವಿಕಾಣದನು ಕವಿ ಕಾಣುತ್ತಾನೆ. ಆ ಪುಣ್ಯಜೀವಿಗಳು ಏಕೀಕರಣವನ್ನೇ ಪ್ರತ್ಯಕ್ಷ ಕಾಣಲಿ, ಬಿಡಲಿ; ಕಾವ್ಯದಲ್ಲಾದರೂ ಅವರ ಮನಸ್ಸು ಒಮ್ಮೆಯಾದರೂ ತುಂಬಿಕೊಂಡಿತ್ತು.

ಮೆರವಣಿಗೆ ಮಿಗಿಲಾಯ್ತು
ಸಾಹಸವು ಹಿರಿದಾಯ್ತು
ಧರೆಯೊಳುದಿಸಿದ ಕಾರ್ಯ ಸಫಲವಾಯ್ತು.

## ಕರ್ನಾಟಕ ಒಂದಾಯ್ತು ........

ನೂರಾರು ಕವಿಗಳ ತಪೋಬಲದಿಂದ, ವಾಣಿಯ ಸಾಮರ್ಥ್ಯದಿಂದ, ಕಾರ್ಯಕರ್ತರ ತೇಜ ಮತ್ತು ತ್ಯಾಗಗಳಿಂದ ನಮ್ಮ ಕರ್ನಾಟಕ ಒಂದಾಯಿತು. ನಾವೆಲ್ಲ ಅಣ್ಣ ತಮಂದಿರೆಂಬ ಭಾವ ಮೂಡಿತು. ನಕ್ಕಳಾತಾಯಿ—ಮಾಸು ಮಿಂಚೆಳೆಯಾಗಿ. ತನ್ನ ಮಕ್ಕಳೆಲ್ಲಾ ಪುನಃ ಕೂಡಿದರಲ್ಲಾ ಎಂದು. ಆದರೆ, ಆದರೆ, ಎಲ್ಲ ಸುಖಸನ್ನಿವೇಶಗಳಲ್ಲಿಯೂ ಅನೇಕ ಸಲ ಅಪಸ್ವರಗಳೂ ಕೇಳಿ ಬರುವುದುಂಟು. ವರ್ಷಾಕಾಲದ ಅನಂತ ಸ್ರೋತುವಿನ ಪರಿಣಾಮವಾಗಿ ಕೊಬ್ಬಿ ಪ್ರವಹಿಸುತ್ತಿರುವ ನದಿಯ ನೀರು ದಂಡೆಗಳನ್ನು ಮಿಕ್ಕಿ ತನ್ನ ರಭಸವನ್ನು ತೋರಿಸುವುದು ಸಹಜ. ನದಿಯ ಮನದ ತಳದಲ್ಲಿ ಅಡಗಿಕುಳಿತ ಕಸಕಡ್ಡಿ ಮಣ್ಣುರಾಡಿ ಇಂಥ ಸಮಯದಲ್ಲಿ ಕಲಕಿ ಮೇಲೆ ಬಂದು ನೀರು ಕುಡಿಯುವುದನ್ನೆ ಅಸಾಧ್ಯವಾಗಿ ಮಾಡುವುದೂ ನಿತ್ಯದ ಅನುಭವ. ರಭಸದಿಂದ ಹರಿಯುತ್ತಿರುವ ಈ ನೀರನ್ನು ನಿಯಂತ್ರಿಸಿಕೊಂಡು ನಮ್ಮ ಬಾಳಿಗೆ ಅದನ್ನು ಅನುಗೊಳಿಸಿಕೊಂಡಾಗಲೇ ಅದು ಜೀವನವಾಗುವುದು. ಆದ್ದರಿಂದ ಪ್ರಾಂತವೇನೋ ಬಂದಿತು; ಅದರ ಜೊತೆಗೆ ಹೊಸ ಕನಲಿಕೆ

ಭಯುಗಳೂ ತಂಡಗಟ್ಟಿಕೊಂಡು ಬರುವ ಭಯುವಿದೆ. ಕವಿ ಕಂಡ ಕರ್ನಾಟಕದ ಸಮುಗ್ರ ಚಿತ್ರ—ದಿವಂಗತ ಬಿ. ಎಂ. ಶ್ರೀ. ಮುದವೀಡು ಮೊದಲಾದವರು ನಾಡನ್ನೆಲ್ಲ ಸುತ್ತಿತೋರಿದ ದಿವ್ಯ ಚಿತ್ರ—ರಾಜಕಾರಣದ ಕೋಲಾಹಲದಲ್ಲಿ ಪುನಃ ಮ್ಲಾನವಾಗುವ ಭಯುವಿದೆ. ಹೊಸ ಗಾಯುಗಳಾಗುವ ಹೆದರಿಕೆ ಇರದಿದ್ದರೂ ಹಳೆಯು ಬರೆಗಳನ್ನೇ ನೆನಸಿ ಫೂತ್ಕರಿಸುವ ಅಪಾಯುವಿದೆ. ಧಾರವಾಡ ಮೈಸೂರು, ಮಂಗಳೂರು, ಹೈದರಾಬಾದ, ಮುದ್ರಾಸಗಳ ಗಡಿರೇಖೆ ಬರಿಯು ನಕಾಶದಲ್ಲಿ ಮಾತ್ರ ಅಳಿಸಲ್ಪಟ್ಟರೆ ಏಕೀಕರಣವಾಗಲಿಲ್ಲ; ಜನರ ಮನಸ್ಸಿನಿಂದ, ಅವರ ರೀತಿ ಪದ್ಧತಿಗಳಿಂದ ವಿಭಿನ್ನತೆ ಅಳಿಸಿ ಹೋಗಬೇಕು. ಕರ್ನಾಟಕ ಮುಂದುವರಿಯುಬೇಕಾದರೆ, ಭಾವನೋಟ ಸಮೀಕರಣವು ಮತ್ತು ಎಲ್ಲ ಭಾಗಗಳಿಗೂ ಅನುಭವಗಳೆಲ್ಲಾ ಒಂದೇ ಆಗಿವೆ ಎಂಬ ತೀವ್ರ ಕಲ್ಪನೆಯು ಸದ್ಯವೇ ಒಡಮೂಡಬೇಕು. ಈ ಮಿಡಿನಾಗರ ಬೆನ್ನ ಹಿಂದೆ ಇನ್ನೊಂದು ಹೆಡೆನಾಗರ ತಲೆತೂಗಹತ್ತಿದೆ. ಅದು ಮೊದಲಿನಿಂದಲೂ ಬಂದ ಜಾತಿಯು ತಳಹದಿಯು ಪರಂಪರಾಗತವಾದ ಸಮಾಜರಚನಾವ್ಯವಸ್ಥೆ. ಈ ಎರಡೂ ನಾಗಗಳ ಬಾಲ ತುಳಿದರೂ ಸಾಕು; ಫೂತ್ಕಾರ ಎದುರಿಸುವ ಭಯುವಿದೆ. ಆದಕ್ಕಾಗಿ ಇಂದಿನ ಸಾಹಿತ್ಯಕರು ಮತ್ತು ರಾಜಕಾರಣದ ಮುಖಂಡರು ಮೈಯೆಲ್ಲಾ ಕಣ್ಣಿಟ್ಟು ಮಾತಾಡಬೇಕಾಗಿದೆ. ಇಲ್ಲವಾದರೆ ಏಕೀಕರಣ, ಮಾನಸಿಕ ಸಮೀಕರಣವನ್ನು ನಾವು ಪಡೆಯುವ ಮೊದಲೇ ಬಂದಿತೇನೋ ಎನ್ನುವ ಭಯುವನ್ನುಂಟು ಮಾಡೀತು. ಮನುಷ್ಯ ಪೂರ್ಣ ಎಚ್ಚತ್ತಾಗ ದೊರಕಿಸುವ ವಸ್ತುವನ್ನು ಉಳಿಸಿಕೊಳ್ಳಬಲ್ಲ; ಅರೆಮರೆವಿನ ನಿದ್ರಾವಸ್ಥೆಯಲ್ಲಿ ಕೈಯಲ್ಲಿ ಕೊಟ್ಟ ವಸ್ತುವನ್ನು ಮಾಣವಕನ ಹಾಗೆ ಹೆರವರ ಪಾಲೇ ಮಾಡಬಲ್ಲ. ಭವಿಷ್ಯ ಗರ್ಭವನ್ನು ಭೇದಿಸಬಲ್ಲ ಕವಿ ಈ ಹೆದರಿಕೆಯುನ್ನು ಸುಸ್ಪಷ್ಟವಾಗಿ ಗುರುತಿಸಿದ್ದಾನೆ. ಜನರ ಆಕಾಂಕ್ಷೆಯು ತೀವ್ರತೆಯು ಮೂಲಕ, ಅವರ ಅವಿರತವಾದ ಪ್ರಯತ್ನದ ಮೂಲಕ, ಪರಮಾತ್ಮನ ಅನುಗ್ರಹದಿಂದ ಕರ್ನಾಟಕವೇನೋ ರೂಪುಗೊಂಡಿತು. ಪುರುಷ ಪ್ರಯತ್ನ ದೊರಕಿಸಿದ್ದನ್ನು, ಪರಮೇಶ್ವರೀ ಅಂತಃಕರಣ ಇಂದು ಕಾಪಾಡಬೇಕಾಗಿದೆ.

ಈಶ್ವರನಿರ್ಮಿಸಿದೀ ಸೃಷ್ಟಿಯನು
ಪಾರ್ವತಿ ನೀನೇ ಸಲಹು.
ನಿನ್ನದೆ ಶಿಲೆಯು, ನಿನ್ನದೆ ಕಲೆಯು
ಶಿವಶಕ್ತಿಗೆ ಇದೆ ಗೆಲವು!

ಸತ್ಯದ ಪೂರ್ಣಸ್ವರೂಪವನ್ನು ಮನುಷ್ಯ ಅರಿತುಕೊಳ್ಳಬೇಕು.

ಅನೇಕಾಂಗವಿದೆ ಐಕ್ಯದ ಕೀಲ,
ಅನೈಕ್ಯವಾದರೆ ಒಂದಲ್ಲ.
'ನಾ' 'ನಾ' ಎನ್ನುತ ನಾನಾತೆರದಲಿ
ವಿಭಕ್ತವಾದರೆ ಚೆಂದಲ್ಲ.

ಆದ್ದರಿಂದ, ಬಡೆದಾಡಿ ಕೂಡುವುದು ಒಳಿತು; ಕೂಡಿ ಬಡೆದಾಡುವುದು ಮೂರ್ಖರ ಲಕ್ಷಣ.

ಬಾಂಧವ್ಯವು ಇದು ಬಂಧನವಾದರೆ,
ಮುಕ್ತ ಜೀವನಕೆ ತೆರವಿಲ್ಲಾ.

ಇದನ್ನು ಸಂರಕ್ಷಿಸಬೇಕಾದವಳು ಆ ಮಹಾತಾಯಿ ಮಾತ್ರ. ಬಿತ್ತಿದವಳೂ ಅವಳೇ; ಬೆಳೆಸಿದವಳೂ ಅವಳೇ; ಸಂರಕ್ಷಿಸಬೇಕಾದವಳೂ ಅವಳೇ.

ಕನ್ನಡ ಬೀಜವ ಹೂವಾಗಿಸಿದೆ
ಹಣ್ಣಾಗುವವರ ನೀ ಕಾಯಿ

ಈ ಸಮುಗ್ರತೆಯು ದೃಷ್ಟಿ ಕನ್ನಡಿಗರಿಗೆ ಬಂದರೆ ಕನ್ನಡ ನಾಡಿನ ಪುಣ್ಯಕ್ಕೇನು ಕಡಿಮೆ ? ಮೈಸೂರಿನ ಶ್ರೀಗಂಧ, ಕಾರವಾರದ ಏಲಕ್ಕಿ,-ನಿಸರ್ಗ ಸಂಪತ್ತು, ಧಾರವಾಡದ ದರ್ಶನ ಮತ್ತು ಸಾಮರ್ಥ್ಯ, ಹೈದರಾಬಾದದ ಫಲವತ್ತೆ ಮತ್ತು ಪರಿಶ್ರಮ, ಮಂಗಳೂರಿನ ಬುದ್ಧಿವಂತಿಕೆ ಮತ್ತು ಕಡಲಸಂಪತ್ತು —ಕನ್ನಡದ ನಾಡನ್ನು ಭಾರತದ ಪ್ರಪ್ರಥಮ ಪ್ರಾಂತವನ್ನಾಗಿಯೇ ರೂಪಿಸಬಲ್ಲವು. ಪರಿಶ್ರಮ ಮಾಡುವವರಿಗೆ ಯಾವುದಕ್ಕೆ ಕಡಿಮೆ?

ನಡೆದಷ್ಟಿದೆ ನೆಲ; ಹರಿದಷ್ಟಿದೆ ಜಲ,
ಏರಿದಷ್ಟು ಇದೆ ಹಿರಿಬಯಲು.
ದುಡಿದಷ್ಟಿದೆ ಬಲ, ಪಡೆದಷ್ಟಿದೆ ಫಲ,
ಪಯೆರಿಗೆ ತಕ್ಕಷ್ಟಿದೆ ಕುಯಿಲು!

ಕವಿಕಂಡ ಈ ದರ್ಶನ, ಕರ್ನಾಟಕದ ಅಭಿವೃದ್ಧಿಯು ಸಾಧನೆಯು ನಾಂದಿಯಾಗಲಿ !



ಚಿತ್ರ : ಡಿ. ಎನ್. ಕೋನೇರಿ

ಉದಕಮಂಡಲದಲ್ಲಿಯ ಸ್ವರ್ಗದಂತಹ ನಿಸರ್ಗಸೌಂದರ್ಯ

" ಆಹ ! ನಾಕವೇ ನಮ್ಮ ಲೋಕಕೆ
ಕಳಚಿ ಬಿದ್ದಿದೆ ಬನ್ನಿರಿ
ತುಂಬಿಕೊಳ್ಳಲು ನಿಮ್ಮ ಹೃದಯದ
ಹೊನ್ನಬಟ್ಟಲ ತನ್ನಿರಿ ! "

— ಕುವೆಂಪು



ಗ್ರೀಷ್ಮ : ಕಾಂಗಡಾ ಶೈಲಿಯ ಒಂದು ಚಿತ್ರದ ಪ್ರತಿಕೃತಿ

ಬೇಸಿಗೆಯ ಬಿರುಬಿಸಲು ಜಗವೆಲ್ಲವನು ಸುಟ್ಟು,
ಗಾಳಿಯನು ಧೂಳಿಯಿಂ ಕುರುಡಾಗಿಸೆ,
ಆನೆಗಳು ಹುಚ್ಚೆದ್ದು ಘೀಳಿಟ್ಟು ಅಲೆಯುವವು
ಹಾವುಗಳು ಬಿಲಬಿಟ್ಟು ಹರಿಯುತ್ತಿವೆ;
ನಲ್ಲಿ, ನಿನ್ನಯ ಕಣ್ಣ ಬೆಳ್ದಿಂಗಳಿರಲು
ಈ ಬೇಸಗೆಯೆ ನನಗೆ ಶರದದಿರುಳು !

# ಹರಿಣ

ಹೆಸರು ನನಗೆ ನೆನಪಿಲ್ಲ ;  ಬಲ್ಲೆನವನೊಬ್ಬ ಬಿಲ್ಲುಗಾರ
ಅವನ ನೀರೆ ನಿಲಿಸಿಹಳು ನಾದ-ನಭದಲ್ಲಿ ಜೀವ ಮೂರ
ಇಂದು ಹಾಡುತಿಹೆ ಎಂದೊ ಕೇಳಿದಾ ಸರಸಕಥೆಯ ಸಾರ
ಹಾಡಿವಲ್ಲದೆಯೆ ಜೀವ ನಿಲ್ಲದಿದು ;  ಕೇಳು ಪುಟ್ಟ ಪೂರ

೨

ಒಂದು ವನದ ಕೇಂದ್ರದಲಿ ಸೊಬಗ ಬೀರಿತ್ತು ಪರ್ಣಶಾಲೆ
ಅದನು ಬಳಸಿ ಬರೆದಿಹಳು ಪ್ರಕೃತಿಸೌಂದರದ ವರ್ಣಮಾಲೆ
ಚೆಲ್ಲವರಿದ ಹೂ-ಬಳ್ಳಿ ಕಂಪ ಹರಡಿರಲು ಗಾಳಿಯಲ್ಲಿ
ಬಿಲ್ಲುಗಾರ ಮೇಣವನ ನಲ್ಲೆ ತೇಲುವರು ಲಹರಿಯಲ್ಲಿ

೩

ದಿನವು ಅವಳ ಅನುರಾಗ ಪ್ರಕೃತಿಯಾಯೋಗದಿಂದ ತಾನೆ
ರಾಗವಾಗಿ ತೆರೆಯೇರಿ ಬಹುದು ಮಿಡಿ ಮಿಡಿಯೆ ಕೈಯ ವೀಣೆ
ಅಂತರಂಗದಿಂದಮೃತವುಕ್ಕಿ ಬಂದಂತೆ ತಾನ ತಾನ
ಹೆರುಷದೊಂದು ಹೊನಲಾಗಿ ಹರಿಯುವುದು ಸರಳ ಕೊರಳ ಗಾನ

೪

ರಂಗನಿಡುವುದಲರಿಂಗೆ ಗೀತ ಚುಂಬಿಪುದು ಚುಕ್ಕಿಗಳನೆ
ತೆರೆದು ತೋರುವುದು ತನನದಲ್ಲಿ ಗಂಧರ್ವಲೋಕವನ್ನೆ
ಉದಯರಾಗ ಮಾಡುವುದು ಮೂಡಲಿ, ಆಡಲವಳ ವೀಣೆ
ಸಂಜೆಗೆಂಪು ರಂಜಿಸದೆ ಪಡುವಲು ಸುರಿಯೆ ಸ್ವರದ ಸೋನೆ ?

೫

ಜೀವವಾಗಿ ನುಡಿಯುವುದು ಜಡವು ಇಂಚರದ ಸೋಂಕಿನಿಂದ
ನೆಲವು ಜಲವು ಬನ ಬಾನು ಪುಳಕವೇರುವವು ಸೊಗಸಿನಿಂದ
ನಿತ್ಯ ಹರಿಯುವುದು ಗೀತಯಾತ್ರೆಯಲಿ ಅವರ ಭವರ ಭವದ ಬಂಧ
ಬಾಳತೋಟದಲಿ ತಾನೆ ತೀಡುವುದು ಇಂದ್ರವನದ ಗಂಧ

೬

ರಸಿಕನಾಗಿ ರಸವಂತಿಯೊಡನೆ ಬಿಲ್ಲೋಜನಿರಲು ಇಂತು
ಅವರ ಒಲವಿನಲೆ ಚೆಲುವ ಗಂಡೆರಳೆಯೊಂದು ಬೆಳೆದು ಬಂತು
ನಲಿವುದೆರಳೆ ದಿನದಿನವು ಮಧುರ ಸಂಗೀತಸುಧೆಯನುಂಡು
ಪೂರ್ವಪುಣ್ಯ ಕೈಸಾರಿಬಂದ ತೆರದಲ್ಲಿ ಹರುಷಗೊಂಡು

೭

ಇಂತಿರಲು ಸೊಗಸು ಎಂದಿನೊಲು ಪುರುಷ ತೆರಳಿರಲು ಬೇಂಟೆಗೆಂದು
ಎತ್ತಿದಳು ಜಾಣೆ ವೀಣೆಯನು ಬೇಸರದ ಹೊತ್ತ ನೂಂಕಲೆಂದು
ಆಡಿದುವು ಬೆರಳು ತಂತಿಗಳ ಮೇಲೆ ಲಯಲೀಲೆಗೈದವೋಲು
ಕೂಡಿತ್ತು ವೀಣೆಯಿಂಚರಕೆ ಅವಳ ಸವಿಗೊರಳನುಲಿಯ ಜೇನು

೮

ನಸು ದೂರದಲ್ಲಿ ಪಸಲೆಯಲಿ ಹಸಿರು ಹುಲ್ಲಗಿಯುತಿದ್ದ ಎರಳೆ
ಇನಿದನಿಯ ಕೇಳಿ ನವಿರಾಂತು ಬಂತು ಪುಟನೆಗೆದು ತಾಯಿಯೆಡೆಗೆ
ಪಂಚಮದಿ ಹೊಮ್ಮಿ ತನುಮನವ ತುಂಬಿದಿಂಚರಕೆ ಸೋಲ್ತು ಜೋಲ್ದು
ಚೆಂದಲೆಯನವಳ ಮುಂದೊಡೆಯೊಳಿಟ್ಟು ಒರಗಿತ್ತು ಮೈಯ ಮರೆದು

೯

ಹೊಸತೇನೊ ಛಾಯೆ ಸುಳಿಸುಳಿಯೆ ತಾನೆ ಆ ದಿನದ ಗಾನದಲ್ಲಿ
ಭವಿತವ್ಯದೊಂದು ನಿಬ್ಬರದ ವಾಣಿ ಆಡಿತ್ತು ಪ್ರಾಣದಲ್ಲಿ
ಎಳೆದಿತ್ತು ಎರಳೆಯಾ ಚಿತ್ತವನ್ನು ಏಂ ಮಾಯೆ ನಾದದಲ್ಲಿ ?
ಎಲ್ಲವನು ಮರೆಸಿ ತಲ್ಲೀನಗೊಳಿಸಿ ಹಿಡಿದಿತ್ತು ಜಾಲದಲ್ಲಿ !

೧೦

ಕೇಳಿಕೇಳಿದೊಲು ಸ್ವರತರಂಗದಲಿ ತೇಲಿ ಮುಳುಗಿ ತೇಲಿ
ತೃಪ್ತಿಯಾಳವನೆ ಮುಟ್ಟಿ ಜಿಂಕೆ ಜೊಂಪಿಸಿತು ಸುಪ್ತಿಯಲ್ಲಿ
ಪೂರ್ಣ ಯೋಗದಲಿ ಲೀನವಾಗಿರಲು ಪ್ರಕೃತಿಯಾತ್ಮದಲ್ಲಿ
ಮರಳಿ ಬಂದನಾ ಬಿಲ್ಲುಗಾರ ಜೊನ್ನದಲಿ ಹೆಜ್ಜೆ ಚೆಲ್ಲಿ

೧೧

ಏಕೊ ಏನೊ ಆ ನಿಮಿಷ ಕೆರಳಿಸಿದೆ ಸುಪ್ತಚೇತನವನು
ಚಂದ್ರಿಕಾಜಲದಿ ಮಿಂದ ಹೊಸತಿಲಲಿ ನಿಂತು ಕಂಡನೇನು ?
ಕೈಯ ವೀಣೆಯಾ ಗಾನರಾಣಿಯಾ ಭಾವಲೀನ ಮುದ್ರೆ
ಲಲನೆಯಂಕದಲಿ ಜಿಂಕೆ ಸಲುಗೆಯಲಿ ಗೈವ ಸುಖದ ನಿದ್ರೆ !

೧೨

ಪರಿಶುದ್ಧ ಭಾವ ಮೈದಳೆದ ಹಾಗೆ ತೊಳಗಿದ್ದರೇನು ಚಿತ್ರ ?
ಅದನಾವ ಬಲ್ಲ ಬಿಲ್ಲೋಜನಲ್ಲಿ ಉದಿಸಿತ್ತು ರೋಷ ಮಾತ್ರ
ಹುಚ್ಚೇನೊ ಎದ್ದು ಕುಣಿದಾಡೆ ಮನದಿ ಬತ್ತಳಿಕೆಯಿಂದ ಬಾಣ
ಚಚ್ಚರದಿ ಹಿರಿದು ಮಚ್ಚರದೊಳುರಿದು ಅಕಟಕಟ ಹೊಡೆದ ಹರಿಣ

೧೩

ನಟ್ಟಿತ್ತು ಅಲಗು, ಚಿಮ್ಮಿತ್ತು ರಕ್ತ ಗಂಡೆರಳೆಯಂಗದಿಂದ,
ಆದರೂ ಚಿತ್ತ–ಚಾರಿತ್ರೆ ಗಾನ–ಧ್ಯಾನಾದ್ರಿಶೃಂಗದಿಂದ ?
ತಟ್ಟೆಂದು ತಂತಿ ಹರಿದಂತೆ ವೀಣೆ ಬಿಕ್ಕಿತ್ತು ಮಧ್ಯದಲ್ಲಿ
ನುಣ್ಗೊರಳ ಬೆರಳ ಕೆಳೆ ತಪ್ಪಿ ನಾದ ಲಯವಾಯ್ತು ಬಯಲಿನಲ್ಲಿ

೧೪

ಅರೆನಿಮಿಷದಲ್ಲಿ ಎಚ್ಚತ್ತಳವಳು ಸಂಗೀತ-ಸ್ವಪ್ನದಿಂದ
ಹರಡಿತ್ತು ಹೊರಗಣಾವರಣದಲ್ಲಿ ಬೇರೊಂದು ಕನಸಿನಿಂದ
ನಿಂತಿದ್ದನಲ್ಲ ಬಿಲ್ಲೆತ್ತಿ ಮುಂದೆ ಅರೆದೆರೆದ ಬಾಗಿಲಲ್ಲಿ
ಮೂಡಿತ್ತು ರುದ್ರನಾವೇಶ ಅಂತು ಅವ ನಿಂತ ನಿಲವಿನಲ್ಲಿ

೧೫

ಕೂರಲಗು ಮೃದುಲ ಮೃಗದಂಗದೊಡನೆ ತನ್ನಂಗ ಇರಿದ ತೆರದಿ
ವೇದನೆಗೆ ಸಿಲುಕಿದಾ ಸಾಧ್ವಿ ಮುದ್ದು ಮೃಗಕಾಗಿ ಮರುಗೆ ಮನದಿ
ಅಲೆದಿತ್ತೊ ಶೋಕದಾ ಮೂಕ ರಾಗ ಕಾನನದ ಎದೆಯ ಸೀಳಿ
ಬಾಡಿತ್ತು ಬಳ್ಳಿಯಾ ನಾಡು; ಹೋಯ್ತು ಚಂದ್ರಿಕೆಯ ಚೆಲುವು ತೀರಿ

೧೬

ಉಚ್ಚ್ವಳಿಸುತಿರಲು ಕೆನ್ನೀರ ಧಾರೆ ತೊಡೆದಿಂಬಿಗೊರಗಿದೆರಳೆ
ಸಂಚರಿಸುತಿತ್ತ ಗಂಧರ್ವರಿಳೆಯೊಳೊಂದಾಗಿ ಇಂಚರದೊಳೆ
ಸುಖ ಸೂಸುತ್ತಿದ್ದ ಸಂಗೀತ ನಿಲ್ಲಲರೆ ಗುಟುಕಿನಮೃತದಂತೆ
ಪರಿಣಮಿಸೆ ಕೊರಗಿತಾ ಹರಿಣ; ಹರಣಕೆಂದಲ್ಲ ಅದರ ಚಿಂತೆ

೧೭

ಮುಂವಲೆಯ ಒಡತಿಯಡಿಯಲ್ಲಿ ಚೆಲ್ಲಿ ಹೊರಳಾಡಿ ಬೇಡಿತೆರಳೆ
" ಬೇಡಮ್ಮ, ನಿಲಿಸ ಬೇಡಾಣೆ, ಹಾಡು, ನುಡಿಸೆನ್ನ ಎದೆಯ ವೀಣೆ
ಕರಗುತ್ತಲಿರುವ ಈ ಕರಣ ಹರಣ ಸಂಗೀತದೊಡಲ ಸೇರಿ
ಸೀಲಕ್ಕೆ ಏರಿ ನಿನದಿಸಲಿ ಮುಸಿಸು ಮರಣಗಳನೆಲ್ಲ ಮೀರಿ. "

೧೮

ಮಿದು ಬೆರಳು ಮೆಲ್ಲನಾಡಿದುವು ರಾಗ ತೋಡಿದುವು ತಂತಿ ತಂತಿ
ಸ್ಪಂದಿಸುವ ತಂತಿಯಲಿ ಬೆರೆಯೆ ಕಂಠ ಚಿಮ್ಮಿತ್ತು ಮತ್ತೆ ಕಾಂತಿ
ತಡೆಯಾಂತ ವೀಣೆ ತಾನುಲಿಯೆ ಮುರಳಿ ತುಳುಕಿತ್ತು ಗಾನ ಸಲಿಲ
ಅಂತರ್ಯವೆಲ್ಲ ರಸರಂಗವಾಗಿ ನಿಂದಿತ್ತು ಕೊನೆಗೆ ಮೌನ.

೧೯

ನಾದಸಾಗರಕೆ ಸೇರಿತಿಂತು ಜೀವಪ್ರವಾಹವೊಂದು
ಜೀವನಕ್ಕೆ ಸಂಗೀತರಸವನೂಡುವುದು ಮತ್ತೆ ಬಂದು
ಒಂದುಗೂಡುವವು ವಿಶ್ವಗಾನದೊಡಲಿನಲಿ ಜನನ ಮರಣ
ಇರುಳಿನೊಡಲಿನಿಂದಿಳಿದು ಹರಡವೇ ಹಗಲ ಮೆರೆವ ಕಿರಣ ?

—ಡಿ. ಎಸ್. ಕರ್ಕಿ






# ಮರನೊಂದ ಕಾಣುತಲಿ

೧

ದೂರದಲಿ ಬೆಳೆದಿದ್ದ ಮರನೊಂದ ಕಾಣುತಲಿ
ಮನವು ತೆರಳಿತು ಆಗ ಅದರ ಬಳಿಗೆ— ;
ಅದರ ದರುಶನದಿಂದ ಹಿರಿಯ ಮಾತೊಂದಾಗ
ಮೂಡಿ ನಿಂತಿತು ಅಲ್ಲಿ ಮನದ ಒಳಗೆ—:

೨

ಚಳಿ, ಗಾಳಿ, ಮಳೆ, ಬಿಸಿಲುಗಳನೆಲ್ಲ ತಾ ಸಹಿಸಿ
ಮರವದುವು ಬೆಳೆಯುತಲಿ ನಿಲ್ಲುತಿಹುದು;
ಏನೆ ಸಂಕಟ ಬರಲಿ ತನ್ನ ಜೀವನದಲ್ಲಿ,
ಎದುರಿಸುತ ಅವನೆಲ್ಲ ಗೆಲ್ಲುತಿಹುದು.

೩

ಹಾದಿಯಲಿ ಸಾಗಿರುವ ಹತ್ತಾರು ಪಯಣಿಗರು
ಮರದಡಿಗೆ ಬರುತಿಹರು ತಂಗಲೆಂದು—;
ಮನದ ಚೇತನಕಾಗಿ ಅವರೆಲ್ಲ, ಮುನ್ನಡೆದು
ಬರುವರಲ್ಲಿಗೆ ದಣಿವು ಹಿಂಗಲೆಂದು—.

೪

ತನ್ನ ಮುಡಿಲೊಳಗಿದ್ದ ಫಲಪುಷ್ಪಗಳನೆಲ್ಲ
ಜನಕೆ ನಿತ್ಯವು ತಾನು ಸಲ್ಲಿಸುವುದು—;
ಅದರಿಂದ ಸೊಗ ಪಡೆವ ಇಳೆಯು ಜನಜಂಗುಳಿಯು
ಸೊಗದ ಸೌಧವನಿಲ್ಲಿ ನಿಲ್ಲಿಸುವುದು.

೫

ಸುಳಿಗಾಳಿ, ಫಲಪುಷ್ಪ, ನೆಳಲುಗಳನರ್ಪಿಸುತ
ಈ ಜಗದ ಸೇವೆಯನು ಕೈಕೊಂಡಿದೆ—;
ಮನಮನಕೆ ಸಂದೇಶ ಬೀರುತಿಹ ಈ ಮರದಿ
ಜೀವನದ ನಯವೆಲ್ಲ ಮೈಗೊಂಡಿದೆ—.

— ಎಸ್. ಎಸ್. ಬಸುಪಟ್ಟದ, ಗುಳೇದಗುಡ್ಡ.

# ಮರಿಚಂದಿರ

ಏನಿದದ್ಭುತದ ಸಂದೇಶ ಬಂದೆರಗುತಿದೆ
ಬಾನಾಚೆಯಿಂದ ಕಿವಿ ಕೇಳಿ ಕಾಣಿಸದೆಂಬ
ಗುರಿಯಿಂದ; ತೂರಿ ಬಿಟ್ಟವರು ರಶಿಯನರೆಂಬ
ಮಾಸಾಸಿಗರು. ಕಡಲು ಬುವಿ ಬಾನುಗಳನಳೆದೆ
ನೋಡಿ ಬಿಡುವಂಥ ವಾಮನರು. ಎಡೆಬಿಡದೆ
ಭೌತವಿಜ್ಞಾನದಲಿ ಸೆಣಸುತ್ತ ಹಿರಿದೆಂಬ
ಜಸವ ಪಡೆದಿಹರಿಂದು. ತಿರೆ ಸಾಲದೆಮಗೆಂಬ
ಹೆವ್ಯಾಸವಿಂದವರನಾಗಸಕೆ ಸೆಳೆಯುತಿದೆ
ಮರಿಚಂದ್ರನಿಂದುಲೋಕಕೆ ಮೆಟ್ಟಲಾಗಿಹನೆ !
ವ್ಯಕ್ತದಿಂದವ್ಯಕ್ತದೆಡೆ ಕೊಂಡುಹೋಗುವನೆ !
ತನ್ನ ಗತಿ ತಾನೆ ಕಾಣದೆ ಬುವಿಯ ಕೈ ಬಿಡದೆ
ಮುದ್ದುಮಗುವಂತೆ ಸುತ್ತಾಡುತಿಹೆ ಬೆಂಬಿಡದೆ
ಬಾಂದಳದ ಸಂದೇಶವೇನನೀವನು ಪಾಪ !
ಉಶ್ಯಾಪವರಿಯದಿಹ ತವಸಿಯಿತ್ತಿಹ ಶಾಪ !!

—ದ. ಲ. ಕೆರೂರ

# ಬಾಳ ಊಹೆ

ಮನವನೆಲ್ಲ ಕಲಕಿನಿಂತು
ನೋಡಿಯಾಡುತಿಹುದು ಊಹೆ !
ಅತ್ತ–ಇತ್ತ ಸುತ್ತು–ಮುತ್ತ
ಹರಹಿನಿಂತ ಬಾಳ–ಊಹೆ !
ಜೀವ–ವೀಣೆಯನ್ನೆ ಮಿಡಿಯೆ :
ಒಲವು–ಚೆಲವು ಬಾಳ–ನೋವು
ಆಸೆ–ಮರುಕ ! ಭೀತಿ–ಭ್ರಾಂತಿ !
ಮನದ ಹೊನಲ ನೊರೆ–ಅಶಾಂತಿ
ಹರಣ–ಹರಣಗಳಲಿ ಹರಿದು
ಎದೆಯ ಚಿಮ್ಮಿ ಸಾವನಪ್ಪಿ
ಮಸಣಯಾತ್ರೆ ಕೊನೆಯದಾಗೆ :
" ಅಯ್ಯೊಪಾಪ ! " ಎನುವಲೋಕ
ಎತ್ತ–ಏನೊ ಮಾಯವಾಗೆ : —
ಮಸಣವಾರಿ ತುರಿದು ಉರಿದು !

" ಅಹುದು, ಎಲ್ಲ ದೈವದಾಟ ! "
ಎನುವ ನಿನ್ನ ಮಾತಿನೋಟ–
ನಿಲಿಸು ಇನ್ನು ಹಳೆಯ ಪಾಠ !
ಅರವಿಗೊಂದು ದೃಷ್ಟಿ ಇಹುದು ;
ಬುದ್ಧಿಗಣ್ಣಿನಿಂದ ನೋಡು.
ಮತ್ತೆ–ಮತ್ತೆ ಬೆದಕಿನೋಡು.
ಅಳುಕಬೇಡ–ಅಂಜಬೇಡ.
ಬಾಳಿಗೊಂದು ಅರ್ಥವಿಹುದು ;
ಇರುವ ಆಸೆ ಇಲ್ಲೆ ನಿನಗೆ ?
ನೂರು ಆಸೆ ಫಲಿಸದಿರಲಿ !
ಒಮ್ಮೆ ಕೂಡ ಸುಖದ ಕನಸು–
ನಿನ್ನ ಬಾಳಿಗಿಳಿಯದಿರಲಿ.
ಹೃದಯ ಸೋತು ನಿಲುವವರೆಗೆ
ಮಾನವತೆಯ ತೊರೆಯಬೇಡ.

ದೇವನಿತ್ತ ನಿನ್ನ ಬುದ್ಧಿ :
ಎತ್ತ ಸುಳಿಯುತಿಹುದು ನೋಡು !
" ಲೋಕವನ್ನೆ ಸುಡುವೆ " ಎನುವೆ !
' ಅಟಂಬಾಂಬ ' ಮುಂದೆ ಹಿಡಿವೆ !
ಏಳು ಕಡಲಿನೋಡಲ ಸುಡುವ–
ಹೊಂಚು ಹಾಕುತಿರುವೆಯೇನು ?
ಜೋಕೆ ! ಇಂಥ ಪಂಥಬೇಡ.
ತೀಕ್ಷ್ಣಮತಿಯು ಆಗಬೇಡ !
ನಿನ್ನ ಮನದ ವಿಷದ ಗಾಳಿ
ಜಗದ ಬಾಳನೆಲ್ಲ ಹೂಳಿ
ಜೀವ–ಜೀವಕೂನು ಬೆವರು !
ನೋವು–ಬೇನೆಗಳಿಗೆ ತವರು !
ನಿಷ್ಕರುಣೆಯೆ–ಹೊರಳಿನೋಡು–
ಕಣ್ಣೀರಿನ ಕಡಲ ಮಡುವ !

ಧರ್ಮ ಪುಣ್ಯ ಬಾಳಿನಲ್ಲಿ–
ಪ್ರಕೃತಿ ಬೇಟೆಯಾಡೆ ಮನವ :
– ಮಾಯೆ–ಛಾಯೆ ಸುಳಿವು ಏಕೆ ?
ಕಾಮ–ದಾಹ ಲೋಭ–ಮೋಹ
ಮತ್ತೆ ಮತ್ತೆ ಕುದಿಯಬೇಕೆ ?
ದಿವ್ಯ ದೃಷ್ಟಿ ಮಿಂಚಿ ಸರಿದ–
ಕಣ್ಣಿಗೂನು ಅಂಧಕಾರ–
– ನೋಡೆ : – ನೋಡದಂತೆ ಆಗೆ !
ಹೆಣ್ಣು ರೂಪಿನಲ್ಲಿ ಬಿದಿಯು–
ಕಾಮದೆರಕವನ್ನೆ ತೆಗೆಯೆ :
ಎನಿತು ಕಾಲ ಹುದುಗಿ ಕುಳಿತ
ಆಸೆ ಮತ್ತೆ ಚಿಮ್ಮಬೇಕೆ ?
ಬಯಕೆ ಬೆಳಸಿ ಕೊರಗಬೇಡ !
ಆತ್ಮಯಜ್ಞ ಹೂಡಬೇಡ.

— ರಾಘವೇಂದ್ರ

## ಕವಿರವೀಂದ್ರ ಉವಾಚ

ಯಾರೇನನೆಂದರೂ ನೋಯದಿರು ಬಾಲಕನೆ
ಎಣಿಸಿಬಿಡುವರು ನಿನ್ನ ತಪ್ಪುಗಳನೆ
ಸವಿ ಸವಿಯ ಸವಿಯಬೇಕೆನ್ನುವೀ ನಿನ್ನಾಸೆ-
ಗಂಬುದಲ್ಲವೆ ಜನವು ಸ್ವಾರ್ಥದಾಸೆ
ಇಂತು ಛಿದ್ರಾನ್ವೇಷಿಯಾದ ಜನವೇನೆಂದು
ಕಾಂಬರೊ ನಿನ್ನ ಮುದ್ದಿಪ ನಮ್ಮನಿಂದು.

— ದಲಕೆ


ಬಿಸಿ ಬೆಣ್ಣೆ




ಗುಬ್ಬಕ್ಕಾ, ಇಂದು ರಾತ್ರಿ ನಿನ್ನ ಮನೆಯಲ್ಲಿ ಮಲಗಲೇ ?
ಹೂಂ, ಕಾಗಕ್ಕಾ, ಎಲ್ಲಿ ಮಲಗುವಿ?


ನನ್ನ ಹತ್ತಿರವೋ ಮರಿಗಳ ತೊಟ್ಟಿಲ ಹತ್ತಿರವೋ?
ತೊಟ್ಟಿಲ ಹತ್ತಿರ! ಅಲ್ಲಿ ಅಗ್ಗಿಷ್ಟಿಕೆ ಇದೆ, ಚಳಿಯಾಗದು.


ಠಫ್


ಕಾಗಕ್ಕಾ, ಏನು ಸಪ್ಪಳ?
ನನ್ನ ಮಾವ ನಾಲ್ಕು ಶೇಂಗಾ ಬೀಜ ಕೊಟ್ಟಿದ್ದ, ಒಂದು ಹುರಿದು .... ತಿಂದೆ.


ಠಫ್
ಇನ್ನೊಂದು ಬೀಜ ಹುರಿದೆ.. ತಿಂದೆ.
ಕಾಗಕ್ಕಾ, ಮತ್ತೇನದು ಸಪ್ಪಳ?


ಅಯ್ಯೋ! ನನ್ನ ಮರಿಗಳ ಕಣ್ಣೆರಡೂ ಕಿತ್ತುಬಿಟ್ಟದೆಯಲ್ಲಾ!


ಮಾಡುತ್ತೇನೆ ಈ ದುಷ್ಟ ಕಾಗೆಗೆ ಶಾಸ್ತಿ!




ಕಾಗಕ್ಕಾ, ಏಳು ನಿನಗೆ ಹಸಿವೆಯಾಗಿರಬಹುದು ನಿನಗೆ ಹಸಿಬೆಣ್ಣೆ ಕೊಡಲೋ ಬಿಸಿ ಬೆಣ್ಣೆ ಕೊಡಲೊ ?
ಬಿಸಿ ಬೆಣ್ಣೆಯೇ ಬಹಳ ರುಚಿ ಅಲ್ಲವೇ? ಅದನ್ನೇ ಕೊಡು.




Prabhu
RAVI



# ನಮ್ಮ ಸಾಹಿತ್ಯ ಸಾಗಿರುವ ದಾರಿ

**ಪ್ರಪಂಚದಲ್ಲೆಲ್ಲ ಸಾಹಿತ್ಯದ ಸ್ವರೂಪ ಒಂದೇ ಬಗೆಯದಾಗಿರುವದು. ಆದರೆ ಜೀವನದ ರೀತಿನೀತಿಗಳಲ್ಲಿಯ ಪ್ರಭೇದಗಳ ಪರಿಣಾಮ ಅದರ ಮೇಲಾಗಿರುವದು ಕಂಡು ಬರುವದು. ಬಹು ಪ್ರಾಚೀನವಾದ ಕನ್ನಡ ಸಾಹಿತ್ಯ ಕನ್ನಡಿಗರ ಜೀವನದ ಮೌಲ್ಯಗಳನ್ನು ಬಹು ಚೆನ್ನಾಗಿ ತಿಳಿಸಿಕೊಟ್ಟಿರುವದು. ಈ ಸಾಹಿತ್ಯ ಸಾಗಿದ ದಾರಿಯನ್ನು ಕವಿಭೂಷಣರು ಇಲ್ಲಿ ಸೋದಾಹರಣವಾಗಿ ವಿವೇಚಿಸಿದ್ದಾರೆ.**

ಲೇಖಕರು : ಶ್ರೀ ಬೆಟಗೇರಿ ಕೃಷ್ಣಶರ್ಮ, ಧಾರವಾಡ

ಜಗತ್ತಿನಲ್ಲಿ ನಾಗರಿಕತೆಯಿಲ್ಲದ ದೇಶ ದೊರೆಯಬಹುದು ; ಆದರೆ ಸಾಹಿತ್ಯವಿಲ್ಲದ ದೇಶವು ಮಾತ್ರ ಎಲ್ಲಿಯೂ ದೊರೆಯಲಾರದು. ಏಕೆಂದರೆ, ನಾಗರಿಕತೆಯೆಂಬುದು ಮಾನವನಿರ್ಮಿತ ; ಸಾಹಿತ್ಯವೆಂಬುದು ನಿಸರ್ಗನಿರ್ಮಿತ. ನಿಸರ್ಗವು ಮಾನವನನ್ನು ನಿರ್ಮಿಸಿದಂದೇ ಆತನಿಗೆ ಬುದ್ಧಿ-ಭಾವನೆಗಳ ಜಾಗೃತಿಯ ವರವನ್ನು ದಯಪಾಲಿಸಿತು. ಆದರಿಂದ ಅವನು, ತನ್ನ ಬೇಕು-ಬೇಡಗಳನ್ನು ಕುರಿತು ವಿಚಾರ ಮಾಡಲು ತೊಡಗಿದನು. ಸೃಷ್ಟಿಯಲ್ಲಿಯ ಯಾವ ಯಾವ ವಸ್ತುಗಳೂ ಶಕ್ತಿಗಳೂ ತನಗೆ ಏಕೆ?—ಹೇಗೆ?—ಇಷ್ಟಾನಿಷ್ಟಗಳೆಂಬುದನ್ನು ಅರಿತುಕೊಳ್ಳತೊಡಗಿದನು. ತನ್ನ ಮನಸ್ಸು-ಹೃದಯಗಳ ವಿವಿಧ ಪ್ರಕಾರದ ಹರಿದಾಟ-ಕುಣಿದಾಟಗಳು, ಎಂತೆಂತಹ ಪರಿಣಾಮಗಳನ್ನು ಉಂಟುಮಾಡಬಲ್ಲವೆಂಬುದನ್ನು, ನಿತ್ಯ-ಜೀವನದ ಅನುಭವಗಳಿಂದ ಪ್ರತ್ಯಕ್ಷವಾಗಿ ಕಂಡುಕೊಳ್ಳತೊಡಗಿದನು. ಹಿಂದೆ ಅನುಭವಿಸಿದಂತಹ ಸಂಕಟಗಳನ್ನು ಮುಂದೆ ಅನುಭವಿಸುವ ಪ್ರಸಂಗ ಬರಬಾರದೆಂದು ಜಾಗೃತಿ ವಹಿಸಲು ತೊಡಗಿದನು. ಆದರಂತೆಯೆ, ನಿನ್ನೆ ಅನುಭವಿಸಿದಂತಹ ಸುಖದ ಸಂದರ್ಭಗಳನ್ನು ಇಂದು ನಾಳೆಗಳಲ್ಲಿಯೂ ತಂದುಕೊಳ್ಳಬೇಕಾದರೆ, ಅದಕ್ಕಾಗಿ ತಾನು ಹೇಗೆಹೇಗೆ ನಡೆದುಕೊಳ್ಳಬೇಕೆಂಬುದನ್ನು ಯೋಚಿಸತೊಡಗಿದನು. ಮಾನವನಿಗೆ ಮಾತು ಮೂಡಿದಾಗ, ಆತನ ಇವೆಲ್ಲ ವಿಚಾರ, ಅರಿವು, ಕಾಣ್ಕೆ, ಜಾಗೃತಿ, ಯೋಚನೆ, ಭಾವನೆಗಳು ಮಾತಿನ ಮಾಲೆಗಳಾಗಿ ಹೊರಹೊಮ್ಮತೊಡಗಿದುವು. ಇಂತಹ ಮಾತಿನ ಮಾಲೆಗಳನ್ನೇ ನಮ ನಾಗರಿಕ ಮಾನವಸಂತಾನ, ‘ ಸಾಹಿತ್ಯ ’ ಎಂದು ಹೆಸರಿಟ್ಟು ಕರೆಯತೊಡಗಿತು.

ಸಾಹಿತ್ಯದ ಅವತಾರವಾದುದು, ನಾಗರಿಕತೆಯ ಅವತಾರಕ್ಕಿಂತ ತೀರ ಹಿಂದಣ ಕಾಲದಲ್ಲಿ. ಏಕೆಂದರೆ, ಸಾಹಿತ್ಯವೆಂಬುದು ಮಾನವನ ಅಂತಃಸ್ವರೂಪದ ಪ್ರತಿಚ್ಛಾಯೆ ; ನಾಗರಿಕತೆಯೆಂಬುದು ಮಾನವನೇ ತನಗಾಗಿ ನಿರ್ಮಿಸಿಕೊಂಡ ಬಾಹ್ಯಾಂಗದ ವೇಷಭೂಷಣಗಳು. ಅದುದರಿಂದಲೇ ಮಾನವನಿಗೂ ಸಾಹಿತ್ಯಕ್ಕೂ ತ್ರಿಕಾಲಾಬಾಧಿತವಾದ ಅನಿವಾರ್ಯ ಸಂಬಂಧವಿದೆಯೆಂದು ಹೇಳಬಹುದು.

## ಪ್ರಪಂಚದಲ್ಲೆಲ್ಲ ಒಂದೇ ಸಾಹಿತ್ಯ ಸ್ವರೂಪ

ಸಾಹಿತ್ಯದ ಮೂಲಸ್ವರೂಪ, ಮಾನವ ಪ್ರಪಂಚದಲ್ಲೆಲ್ಲ ಒಂದೆ ಬಗೆಯಾಗಿರುವುದು. ಏಕೆಂದರೆ, ಮಾನವನ ಸ್ವಾಭಾವಿಕ ಬೇಕು-ಬೇಡಗಳೆಲ್ಲ—ಎಲ್ಲ ದೇಶದಲ್ಲಿಯೂ ಎಲ್ಲ ಕಾಲದಲ್ಲಿಯೂ—ಒಂದೆ ಬಗೆಯಾಗಿರುವುವು. ಆಸಕ್ತಿ, ಉತ್ಸಾಹ, ದುಃಖ, ಕೋಪ, ಭೀತಿ, ನಗೆ, ಆಶ್ಚರ್ಯ, ಜುಗುಪ್ಸೆ ಮೊದಲಾದ ಆತನ ಮನಸ್ಸಂವೇದನೆಗಳು—ಎಲ್ಲ ದೇಶ ಕಾಲಗಳಲ್ಲಿಯೂ—ಒಂದೆ ಬಗೆಯ ಗುಣಧರ್ಮದವು ಆಗಿರುವುವಲ್ಲವೆ? ಬಹಳವಾದರೆ, ಮಾನವನ ಈ ಮೂಲಸಂವೇದನೆಗಳಿಗೆ, ಆಲಂಬಕ-ಉದ್ದೀಪಕಗಳಾಗಿ— ದೇಶ-ಕಾಲಾನುಗುಣವಾದ—ಬೇರೆ ಬೇರೆ ಕಾರಣಗಳು ಇರಬಹುದು, ಅಷ್ಟೆ ! ಪ್ರಪಂಚದಲ್ಲಿ ನಾಗರಿಕತೆ ಬೆಳೆಯತೊಡಗಿದಂತೆ, ಸಾಹಿತ್ಯಕ್ಕೆ ಅದರಿಂದ ವಿವಿಧ ಮುಖವಾಗಿ ಆಲಂಬಕ-ಉದ್ದೀಪಕ ಸಾಧನಗಳು ದೊರೆಯತೊಡಗಿದುವು. ಇದರಿಂದ—ಅಂತಃಸ್ವರೂಪದಲ್ಲಿ ಒಂದೆಯಾಗಿದ್ದ ಸಾಹಿತ್ಯವು ನಾನಾ ಪ್ರಕಾರದಲ್ಲಿ ಹೊರ ರೂಪುಗಳನ್ನು ಪಡೆಯಿತು. ಭಾಷೆಯೆಂಬುದೂ ಸಾಹಿತ್ಯದ ಒಂದು ಹೊರರೂಪ. ಮಾನವಜೀವನದ ಅಂತಃಸ್ವರೂಪವು, ಎಂದಿನಿಂದಲೂ—ಕನ್ನಡ ಭಾಷೆಯಲ್ಲಿಯೂ—ಹೊರಹೊಮ್ಮುತ್ತ ಬಂದಿದೆ. ಇದನ್ನೇ ನಾವೆಲ್ಲ ‘ಕನ್ನಡ ಸಾಹಿತ್ಯ ’ ಎನ್ನುವೆವು.

ವ್ಯಕ್ತಿನಿಷ್ಠನಾದ ಮಾನವನನ್ನು ನಾಗರಿಕತೆ ಸಮಾಜನಿಷ್ಠನನ್ನಾಗಿ ಮಾಡಿತು. ಆಗ ವ್ಯಕ್ತಿಯು ತನ್ನ ಸ್ವೈರ ವೃತ್ತಿಯನ್ನು ಬಿಟ್ಟು ಕೊಟ್ಟು, ಅನಿವಾರ್ಯವಾಗಿ ಕೆಲವೊಂದು ನಿಯಮಗಳನ್ನು ಕಲ್ಪಿಸಿಕೊಂಡು ಅವುಗಳಿಗೆ ಅಧೀನನಾಗಿ ನಡೆಯಬೇಕಾಯಿತು. ಇದರಿಂದ ಮಾನವವ್ಯಕ್ತಿ ತನ್ನ ಸಂವೇದನೆಗಳ ಉತ್ಕಟತೆಗೆ ಒಂದು ಬಗೆಯ ಸಂಯಮದ ತಡೆಯನ್ನು ಕಟ್ಟಿಕೊಳ್ಳಬೇಕಾಯಿತು. ಸಾಮಾಜಿಕ ಸುಖಜೀವನಕ್ಕೆ ಇಂತಹ ನಿಯಮ—ಸಂಯಮಗಳು ಅಗತ್ಯವೆಂಬುದರ ಮನವರಿಕೆಯಾದಾಗ ವ್ಯಕ್ತಿ ಅವುಗಳನ್ನು ತನ್ನ ಬೇಕುಬೇಡಗಳ ಮಾಲಿಕೆಯಲ್ಲಿ ಸೇರಿಸಿಕೊಂಡು ಹೇಳತೊಡಗಿದ.

## ಮೂಲ ಸಂವೇದನೆಗಳ ಪ್ರತಿನಿಧಿ ಸಾಹಿತ್ಯ

ಮುಂದೆ ಸಮಾಜಕ್ಕೆ ಒಬ್ಬ ನಾಯಕನ ಅಗತ್ಯವೆನಿಸಿತು. ನಾಯಕನ ವಿಷಯದಲ್ಲಿ ಸಮಾಜದ ಸಂಪೂರ್ಣ ಶ್ರದ್ಧೆ-ನಿಷ್ಠೆಗಳ ಅವಶ್ಯಕತೆಯೆನಿಸಿತು. ಈ ಶ್ರದ್ಧೆ-ನಿಷ್ಠೆಗಳು ರಾಜ, ಮಹಾರಾಜರ ಸಮ್ರಾಟ, ಸಮ್ರಾಜರ, ರಾಜ-ದೇವರು— ಇವರನ್ನೆಲ್ಲ ಸೃಷ್ಟಿಸಿದುವು. ನಾಗರಿಕ ಮಾನವನಿಗೆ ಇದೆಲ್ಲವೂ ಬೇಕಾಗಿ, ಆತನಿಂದ ಇವುಗಳ ವಿಷಯದಲ್ಲಿ ಮೇಲ್ಮೆಯ ಮಾತುಗಳನ್ನಾಡಿಸಿದುವು. ಮಾನವನ ಮನಸ್ಸು-ಹೃದಯಗಳ ಮೂಲ ಸಂವೇದನಗಳ ಪ್ರಾತಿನಿಧ್ಯವನ್ನೇ ಮಾಡುತ್ತಿದ್ದ ಸಾಹಿತ್ಯ, ಈಗ ಈ ಆನುಷಂಗಿಕ ಸಂವೇದನೆಗಳನ್ನೂ ತನ್ನಲ್ಲಿ ಅಳವಡಿಸಿಕೊಂಡಿತು. ಬರುಬರುತ್ತ ಸಾಹಿತ್ಯವೆಂಬುದು ಈ ಆನುಷಂಗಿಕ ಸಂವೇದನೆಗಳಿಗೇ ಹೆಚ್ಚಿನ ಅವಕಾಶವನ್ನು ಕೊಟ್ಟು, ಉದ್ದೇಶಪೂರ್ವಕವಾಗಿ—ಮಾನವನ ಮೂಲಸಂವೇದನೆಗಳ ರಭಸವನ್ನು ಮರೆಗೊಳಿಸಿಬಿಟ್ಟಿತು. ಇಂದು ನಾಗರಿಕವೆನಿಸಿಕೊಳ್ಳುವ ಪ್ರತಿಯೊಂದು ಜನಾಂಗದ ಸಾಹಿತ್ಯವೂ ಈ ಬಗೆಯದೇ ಆಗಿರುವುದೆಂಬುದನ್ನು ಸಮಾಜವಿಜ್ಞಾನಿಗಳೂ ಮಾನವಮನೋವಿಜ್ಞಾನಿಗಳೂ ಒಪ್ಪಿಕೊಳ್ಳಲೇಬೇಕು.

ನಮ್ಮ ಕನ್ನಡ ಜನಾಂಗವು ತುಂಬ ಪುರಾತನದ್ದೆಂದು ಇತಿಹಾಸ ಹೇಳುವುದು ; ಆದರೆ ನಮ್ಮ ನಾಡಿನ ಸಾಹಿತ್ಯದ ಮೂಲಸ್ವರೂಪ ಎಂತಹದಿರಬೇಕೆಂಬುದು ನಮಗೆ ಸಂಪೂರ್ಣವಾಗಿ ತಿಳಿಯುವಂತಿಲ್ಲ. ಏಕೆಂದರೆ ನಮ್ಮಲ್ಲಿ ದೊರೆಯುವ ‘ ದೇಸಿ ’ ಸಾಹಿತ್ಯವೇ ಆಗಲಿ, ‘ ಮಾರ್ಗಿ ’ ಸಾಹಿತ್ಯವೇ ಆಗಲಿ ಎರಡೂ ಒಂದೊಂದು ಬಗೆಯ ನಾಗರಿಕತೆಯ ಹಂದರದ ಮೇಲೆಯೆ ಹಬ್ಬಿ ಬೆಳೆದುವಾಗಿವೆ. ‘ದೇಸಿ’ ಎಂದರೆ ಜಾನಪದ ಸಾಹಿತ್ಯದಲ್ಲಿ ಕಣ್ಣಿಟ್ಟು ಹುಡುಕಿದರೆ, ಮಾನವೀಯ ಶುದ್ಧ ಸಂವೇದನೆಗಳ ಅಂತಃಸ್ವರೂಪ, ಅಲ್ಲಿ ಇಲ್ಲಿ ಸ್ವಲ್ಪ ಸಿಕ್ಕೀತು ; ಆದರೆ ‘ ಮಾರ್ಗಿ ’ ಎಂದರೆ ನಾಗರಿಕ ಸಾಹಿತ್ಯದಲ್ಲಿ ಹೆಣೆದುಕೊಂಡಿರುವ ನಿಯಮ-ಸಂಯಮಗಳ ಸಂದಣಿಯಲ್ಲಿ, ಅಂತಹ ಶುದ್ಧ ಸಂವೇದನೆಗಳನ್ನು ಕಂಡುಹಿಡಿಯುವುದು ಕಠಿನವೆನಿಸುವುದು. ಈ ಸಾಹಿತ್ಯ ಮಾನವನ ಮೂಲಸ್ವಭಾವವನ್ನು ಅಜ್ಞಾನವೆಂದೂ ನಿಯಮಬದ್ಧವಾದ ಸಾಂಸ್ಕೃತಿಕ ಜೀವನವೇ ಜ್ಞಾನವೆಂದೂ ಸಾರಲು ಹೊರಟುದು. ಆದುದರಿಂದಲೇ ಇದು ಸ್ವಭಾವಕ್ಕಿಂತ ಸಂಸ್ಕೃತಿಯೇ ಶ್ರೇಷ್ಠವೆಂದು ಅದನ್ನು ಎತ್ತಿ ಹಿಡಿದಿರುವುದು. ದೇಸಿಸಾಹಿತ್ಯವೂ ಇಂತಹ ಸಂಸ್ಕೃತಿಯ ಪುರಸ್ಕಾರದಲ್ಲಿ ಹಿಂದೆ ಉಳಿದಿಲ್ಲ. ಮಾನವನು ಐಂದ್ರಿಯವಿಷಯಕವಾದ ಆನಂದವನ್ನು ಅಪೇಕ್ಷಿಸುವುದು ಸ್ವಾಭಾವಿಕವೆಂಬುದನ್ನು ಈ ಎರಡೂ ಸಾಹಿತ್ಯರೀತಿಗಳು ಒಪ್ಪಿದರೂ, ಅಂ-

ಅಂತಹ ಆನಂದ ಕ್ಷಣಿಕ-ನಶ್ವರ- ಎಂದು ಬೀಳು ಗಳೆದು, ಐಂದ್ರಿಯಿಕ ಆನಂದಕ್ಕಿಂತ ಶ್ರೇಷ್ಠವಾದ ಅಖಂಡಾನಂದದ ಆದರ್ಶವನ್ನು ತೋರಿಸಿ, ಮಾನವರೆಲ್ಲ ಅದನ್ನು ಸಂಪಾದಿಸಲು ಹೆಣಗಬೇಕೆಂದು ಉದ್ಬೋಧಿಸುತ್ತಿರುವವು.

ನಮ್ಮ ನಾಡಿನ ಜಾನಪದ ಸಾಹಿತ್ಯವು ಕೂಡ ನಾಗರಿಕ ಸಾಹಿತ್ಯದ ಸಂದೇಶಗಳನ್ನೇ ಜೀವನದ ಆದರ್ಶವೆಂದು ಹೇಳುವುದರ ಕಡೆಗೇ ಹೆಚ್ಚಾಗಿ ಒಲಿದುದು ಕಂಡುಬರುವುದು :

" ಹಸುವು ಕೊಟ್ಟಿಗೆಯೊಳಗ ಸಿಸುವು
ತೊಟ್ಟಿಲದೊಳಗ
ಪಾರಿಗೀರಾಯ ಒಳ-ಹೊರಗ—ಇದ್ದೀರ
ಹಸಿವಿ-ನೀರಡಿಕಿ ನನಗಿಲ್ಲ ! "

ಎಂಬ ಗರತಿಯ ಹಾರೈಕೆಯಲ್ಲಿಯೂ—

'' ಬೆಚ್ಚನೆಯ ಮನೆಯಾಗೆ ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯನರಿವ ಸತಿಯಾಗೆ—ಸ್ವರ್ಗಕ್ಕೆ
ಕಿಚ್ಚುಹಚ್ಚೆಂದ ಸರ್ವಜ್ಞ ''

ಎಂಬ ಸರ್ವಜ್ಞಕವಿಯ ಲೋಕದ ಕಾಣ್ಕೆಯು ಳ್ಳಿಯೂ—ಮಾನವನ ಮೂಲ ಸಂವೇದನೆ ಗಳನ್ನು ಗುರುತಿಸುವೆವಾದರೂ ಅದೇ ಗರತಿಯ:

'' ಅಂಗೈಲಿ ಪೂಜಸುವ ಲಿಂಗಯ್ಯಸ್ವಾಮಿಗೆ
ಮಂಗಳಾರತಿಯ ಬೆಳಗಿ ನಾ—ಬೇಡುವೆನು
ಮಾರಾಯನ ಮುಂದ ಮರಣವನು ! ?

ಎಂಬ ಭಾವನಾತ್ಮಕ ಉಕ್ತಿಗಳನ್ನು ಕೇಳಿ ದಾಗಲೂ ಅದೇ ಆ ಸರ್ವಜ್ಞಕವಿಯ :

'' ಖಂಡಿಸದೆ ಕರಣವನು, ದಂಡಿಸದೆ ದೇಹವನು,
ಉಂಡುಂಡು ಸ್ವರ್ಗಕೈದಲಿಕೆ—ಅದನೇನು
ರಂಡೆಯಾಳುವಳೆ ಸರ್ವಜ್ಞ ! "

ಎಂಬ ಖಂಡಿತವಾದ ನಿಷ್ಠುರ ನುಡಿಗಳನ್ನು ಕೇಳಿದಾಗಲೂ ನಮ್ಮ ಜಾನಪದಸಾಹಿತ್ಯವೂ ಸಮಾಜನಿಷ್ಠೆಯ ಬೆಲೆಯನ್ನು ತಿಳಿದು, ನಾಗರಿಕತೆಯು ಒಪ್ಪಿದ ಆದರ್ಶಗಳನ್ನೇ ಒಪ್ಪಿಕೊಂಡು ಮುಂದುವರಿದಿದೆ — ಎಂಬುದು ಕಂಡುಬರುವುದು. ಆದರೆ ಎದ್ದು ತೋರುವ ಒಂದು ಹೆಚ್ಚುಗಾರಿಕೆಯೆಂದರೆ ನಮ್ಮ ಜಾನಪದ ಸಾಹಿತ್ಯ ಐಹಿಕ ಜೀವನದ ಸುಖ-ಸೌಂದರ್ಯಗಳನ್ನೂ ಒಪ್ಪಿಕೊಂಡಿದೆ; ನಾಗರಿಕ ಸಾಹಿತ್ಯವು ದೈವಭಕ್ತಿ, ಜ್ಞಾನ, ವೈರಾಗ್ಯಗಳ ಧ್ವಜವನ್ನೇ ಎತ್ತಿಹಿಡಿದು, ಜನತೆಯನ್ನು ಐಹಿಕ-ಜೀವನದ ಸುಖ-ಸೌಂದರ್ಯಗಳಿಂದ ವಿಮುಖರನ್ನಾಗಿಸುವುದರ ಕಡೆಗೆ ತನ್ನ ಸತ್ತ್ವವನ್ನು ಹೆಚ್ಚಾಗಿ ವೆಚ್ಚ ಮಾಡಿರುತ್ತದೆ. ಪ್ರೇಯಸ್ಸಿಗಿಂತ ಶ್ರೇಯಸ್ಸನ್ನು ಕೊಂಡಾಡುವುದರಲ್ಲಿಯೆ ಅದಕ್ಕೆ ಹೆಚ್ಚಿನ ಆಸಕ್ತಿ. ಲೌಕಿಕ ಭೋಗಕ್ಕಿಂತ ಆದರ್ಶ ಸಾಧನೆಗಾಗಿ ವ್ಯಕ್ತಿ-ವ್ಯಕ್ತಿಗಳು ಮಾಡಬೇಕಾದ ತ್ಯಾಗದ ಪವಾಡವನ್ನೇ ಅದು ದನಿಯೆತ್ತಿ ಹಾಡುವುದು. ಅಂತಹ ಆದರ್ಶ ನರ-ನಾರಿಯರ ಜೀವನಚಿತ್ರಗಳನ್ನೇ ಶ್ರದ್ಧೆಯಿಂದ ಸಮಾಜದ ಮುಂದೆ ಇರಿಸುವುದು. ಕನ್ನಡ ಸಾಹಿತ್ಯದ ಸಾವಿರಾರು ವರ್ಷಗಳ ಚರಿತ್ರಾರಣ್ಯದಲ್ಲಿ ನಾವು ಹೊಕ್ಕು ಹುಡುಕಿದರೆ, ನೋಡಿದಲ್ಲೆಲ್ಲ ನಮಗೆ ಇವೇ ಮಾತುಗಳು ಒಂದಿಲ್ಲೊಂದು ಸ್ವರೂಪದಿಂದ ಕಾಣುವುವು.

### ಸಾಂಸ್ಕೃತಿಕ ಜೀವನತತ್ತ್ವ

ಆಧುನಿಕ ದೃಷ್ಟಿಯ— ಲೌಕಿಕ ಬುದ್ಧಿಯ ಕೆಲವು ಜನರಿಗೆ, ನಮ್ಮ ಸಾಂಪ್ರದಾಯಿಕ ಕಾವ್ಯವು ದೋಷಪೂರ್ಣವಾದುದೆಂದೂ ಕೊರತೆಯಿಂದ ಕೂಡಿದುದೆಂದೂ ಎನಿಸುತ್ತಲಿದೆ. ಕಾಲಿಕ ದೇಶಿಕ ಕೊರತೆಗಳಿಂದ ಕೂಡಿದೆಯೆಂಬುದನ್ನು ಒಪ್ಪಿದರೂ ಒಪ್ಪಬಹುದು; ಏಕೆಂದರೆ ಇಂದಿನ ಮಾದರಿಯ ವೈಜ್ಞಾನಿಕ ಪರಿಚಯ ಅಂದಿನವರಿಗಿರಲಿಲ್ಲ. ಆದರೆ ದೋಷಪೂರ್ಣವಾಗಿದೆಯೆಂದು ಹೇಳುವುದು ವಿವೇಕ ಬುದ್ಧಿಯ ಮಾತು ಅಲ್ಲವೆಂದು ಹೇಳಬೇಕಾಗುವುದು. ಏಕೆಂದರೆ ನಮ್ಮ ಸಾಹಿತ್ಯಕರು ಒಪ್ಪಿಕೊಂಡು ಸಾರುತ್ತ ಬಂದ ಸಾಂಸ್ಕೃತಿಕ ಜೀವನತತ್ತ್ವವು ಮೂರುದಿನ ಮಾತ್ರ ಮೊಳಗಿ ಮರೆಯಾದುದಲ್ಲ. ಸಾವಿರಾರು ವರ್ಷಗಳಿಂದಲೂ ನಮ್ಮ ಸಾಹಿತ್ಯಕರು ಅದನ್ನೇ ಅದನ್ನೇ ಹೇಳುತ್ತ ಬಂದಿರುವರು ; ಸಾಮಾಜಿಕರು ಅದನ್ನೇ ಕೇಳುತ್ತ ಬಂದಿರುವರು. ನಮ್ಮ ಜನಸಾಮಾನ್ಯವು ತನ್ನ ಲೌಕಿಕ ಜೀವನದಲ್ಲಿ—ಶಕ್ಯವಿದ್ದಮಟ್ಟಿಗೆ— ಸಾಹಿತ್ಯಿಕ ಆದರ್ಶಗಳನ್ನು ಅಳವಡಿಸಿಕೊಂಡು, ಅದರಿಂದ ದೊರೆಯುವ ಒಂದು ಭಾವನಾತ್ಮಕ ಆನಂದದಿಂದ ತೃಪ್ತಿಯನ್ನೂ ಶಾಂತಿಯನ್ನೂ ಅನುಭವಿಸುತ್ತಿದ್ದಿತು. ಸಮಾಜದ ಬಹುಜನರಲ್ಲಿ ದಯೆ, ದಾಕ್ಷಿಣ್ಯ, ಧರ್ಮ-ಬುದ್ಧಿ, ಸಹಕಾರ, ಸ್ನೇಹ, ಪ್ರೇಮ, ಭಕ್ತಿ, ಶ್ರದ್ಧೆ ಮೊದಲಾದ ಜೀವನಪೋಷಕ—ಹೃದಯವಿಕಾಸಕ— ಗುಣಗಳು ಬೆಳೆಯುತ್ತಿದ್ದುವು.

ಮಾನವನ ಮೂಲಸಂವೇದನೆಗಳಾದ ಕಾಮ-ಕ್ರೋಧಾದಿಗಳಿಗೆ ಸ್ವಾತಂತ್ರ್ಯವನ್ನು ಕೊಟ್ಟರೆ, ಗುಂಪುಗೂಡಿ ಬಾಳುವುದು ಸಾಧ್ಯವಿಲ್ಲವೆಂಬುದು ಎಲ್ಲ ದೇಶ-ಕಾಲಗಳಲ್ಲಿಯೂ ಒಪ್ಪತಕ್ಕ ಮಾತಾಗಿದೆ. ವೈದ್ಯರು ವಿಷಗಳನ್ನೂ ಔಚಿತ್ಯವರಿತು ಉಪಯೋಗಿಸಿಕೊಂಡರೆ ಗುಣಕಾರಿಯಾದ ಔಷಧಿಗಳಾಗುವುವೆಂಬುದನ್ನು ಅನುಭವದಿಂದ ಕಂಡುಹಿಡಿದಂತೆ, ನಮ್ಮ ಜೀವನ-ವೈದ್ಯರಾದ ಸಾಹಿತ್ತಿಕರು, ಮಾನವನ ಮೂಲ ಸಂವೇದನೆಗಳಾದ ಕಾಮಕ್ರೋಧಾದಿಗಳನ್ನೂ ಔಚಿತ್ಯವರಿತು ಉಪಯೋಗಿಸಿಕೊಳ್ಳಲು ಅವಕಾಶ ಕೊಟ್ಟಿದ್ದಾರೆ.

" ಕಾಮ ನಿಜದಾರದೊಳು, ಕ್ರೋಧ-
ಸ್ತೋಮ ದುರ್ಮಾರ್ಗರೊಳು, ಲೋಭದ
ಸೀಮೆ ಪುಣ್ಯಂಗಳೊಳು, ಮೋಹವು ಸಾಧು-
ಜನರೊಡನೆ—
ಆ ಮಹಾಮದ ಗರ್ವಿತರೊಳು-
ದ್ದಾಮ ಮತ್ಸರ ತಾನು ದುಷ್ಕೃತಿ-
ಕಾಮನೆಯ ಮಾಳ್ಪರೊಳು ತೋರಲು ಬೇಕು
ಸಜ್ಜನರು."

ಕುಮಾರವ್ಯಾಸ ಕವಿಯು ಹೇಳಿದ ಮೇಲಿನ ಕಾವ್ಯಶಾಸನವನ್ನು ನಮ್ಮ ಸಾಮಾಜಿಕ ಜನರು ಸಾವಿರಾರು ವರ್ಷಗಳಿಂದಲೂ ಒಪ್ಪಿಕೊಂಡು, ತಮ್ಮ ಬದುಕನ್ನು ಶ್ರೇಯೋಮಾರ್ಗದಲ್ಲಿ ನಡೆಸಿಕೊಂಡು ಬಂದಿದ್ದಾರೆ.

ವ್ಯಕ್ತಿಯ ಸ್ವೈರಸಂವೇದನೆಗಳು, ಅವನು ಸಮಾಜನಿಷ್ಠನಾಗಬೇಕಾಗಿ ಬಂದಾಗಲೇ ಸಂಯಮದ ಕಟ್ಟಿಗೆ ಒಳಗಾಗಬೇಕಾಯಿತು. ಇಲ್ಲವಾದರೆ ಸಮಾಜಜೀವನದಲ್ಲಿ ಐಕ್ಯ-ಸುಖ-ಶಾಂತಿಗಳೇ ಉಳಿಯುತ್ತಿರಲಿಲ್ಲ. ವ್ಯಕ್ತಿ-ವ್ಯಕ್ತಿಗಳ ಸ್ವೈರಸಂವೇದನೆಗಳಿಗೆ ತಡೆಹಾಕದೆ ಹಾಗೆಯೆ ಬಿಟ್ಟರೆ, ಅವು ಕೆರಳಿ ಒಂದರ ದಾರಿಯಲ್ಲೊಂದು ಅಡ್ಡವಾಗಿ, ಸಮಾಜವೆಂಬುದು ಒಂದು ಜೀವಂತ ಜ್ವಾಲಾಮುಖಿಯಾಗಿ ನಿಲ್ಲಬಹುದಲ್ಲವೆ ? ಈ ರಹಸ್ಯವನ್ನು ಅರಿತವರಾದುದರಿಂದಲೆ ನಮ್ಮ ಸಾಂಪ್ರದಾಯಿಕ ಸಾಹಿತ್ಯಿಕರು, ಪ್ರತಿಯೊಬ್ಬ ಸಾಮಾಜಿಕನ ಕಣ್ಣೆದುರು, ಪುರುಷಾರ್ಥಸಾಧನೆಯ ಆದರ್ಶವನ್ನು ಮೊದಲಿಗೆ ಇಟ್ಟರು. ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ಪುರುಷಾರ್ಥಗಳು ನಾಲ್ಕು ಬಗೆಯವಾಗಿವೆ. ಇವುಗಳಲ್ಲಿ ಮೊದಲಿನ ಮೂರರ ಸಾಧನೆ ಐಹಿಕ ಜೀವನದ ಸೌಂದರ್ಯ ಸಿದ್ಧಿಗೆ ಅತ್ಯಾವಶ್ಯಕವಾದುದು.

### ಸಾಹಿತ್ಯದ ಉದ್ದೇಶಗಳು

ವ್ಯಕ್ತಿಯ ಮತ್ತು ಸಮಾಜದ ಬಾಳು ಸಕಲ ವಿಧದಿಂದಲೂ ಸಸೂತ್ರವಾಗಿ ಹೇಗೆ ಸಾಗಬಲ್ಲದೆಂಬ ಬಗ್ಗೆ ಇರುವ ನಿತ್ಯ-ಶಾಶ್ವತ ನಿಯಮಗಳ

ಆ ತಿಳಿವಳಿಕೆ 'ಧರ್ಮ' ಎನಿಸುವುದು. ತಾನು ಹೊಟ್ಟೆ ತುಂಬ ಉಂಡು ನೆರೆಯವರು ಸುಖದಿಂದ ಬಾಳುವುದಕ್ಕಾಗಿ ದುಡಿದು ಧನವನ್ನು ಸಂಪಾದಿಸುವುದೂ ಸಮಾಜಸ್ವಾಸ್ಥ್ಯದ ಶಾಸನಗಳಿಗೆ ಒಳಗಾಗಿ ನಡೆಯುವುದೂ 'ಅರ್ಥ' ಎನಿಸಿಕೊಳ್ಳುವುದು. ವೈಯಕ್ತಿಕ ಆರೋಗ್ಯ, ಸಾಮಾಜಿಕ ಶಾಂತಿಗಳನ್ನು ಕಾಯ್ದುಕೊಂಡು, ಸೃಷ್ಟಿಯ ಮುಂದುವರಿತದ ಉದ್ದೇಶದಿಂದ ದಾಂಪತ್ಯಜೀವನವನ್ನು ನಡೆಸುವ ಕ್ರಮವು ಕಾಮಪುರುಷಾರ್ಥ ಎನಿಸಿಕೊಳ್ಳುವುದು. ಪ್ರತಿಯೊಬ್ಬ ಸಾಮಾಜಿಕನೂ ಈ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಬೇಕಾದುದರ ಅಗತ್ಯವನ್ನು ಕಂಡುಕೊಂಡ ನಮ್ಮ ಪುರಾತನರು, ಸಾಹಿತ್ಯದ ಉದ್ದೇಶಗಳಲ್ಲಿ ಈ ಪುರುಷಾರ್ಥಸಾಧನೆಯನ್ನು ಮೊದಲನೆಯದನ್ನಾಗಿ ಹೇಳಿದ್ದಾರೆ.

ಸಮಾಜಶಾಂತಿಯ ಮುಖ್ಯಾಂಗವನ್ನೇ ಗುರಿಯನ್ನಾಗಿಟ್ಟುಕೊಂಡ ನಮ್ಮ ಸಾಹಿತ್ಯಕರು, ಪರಂಪರೆಯಾಗಿ ನಮ್ಮ ಜನತೆಗೆ ಅದೇ ಅದೇ ಮಾತುಗಳನ್ನು ಹೇಳುತ್ತ ಬಂದಿದ್ದಾರೆ. ತಾವು ಹೇಳುವ ಮಾತುಗಳು ಸಮಾಜಕ್ಕೆ ನಿರುಪಯುಕ್ತವೆಂದು ಎನಿಸಿದ್ದರೆ, ಸಾವಿರಾರು ವರ್ಷಗಳ ವರೆಗೆ ಆ ವಿಚಾರಪ್ರವಾಹವನ್ನು ಸಾಗಿಸಿಕೊಂಡು ಬರುತ್ತಿದ್ದುದು ಹೇಗೆ ? ಜನತೆಗೆ ಅದು ಬೇಡವಾಗಿದ್ದರೆ, ಆಗಾಗ ಅಲ್ಲಲ್ಲಿ ಒಡ್ಡುಗಳು ಬಿದ್ದು, ಆ ಪ್ರವಾಹ ಹರಿಗಡಿದು ಬತ್ತಿಹೋಗಬಹುದಾಗಿತ್ತು. ಈಗ ಕೂಡ ಸಾಮಾಜಿಕ ಶಾಂತಿ-ಸ್ವಾಸ್ಥ್ಯಗಳ ಅಗತ್ಯವನ್ನರಿತವರು, ಆ ವಿಚಾರಪ್ರವಾಹವನ್ನೇ ತುಂಬುಹೊಳೆಯನ್ನಾಗಿ ಮುಂದುವರಿಸಬೇಕಾಗಿದೆ.

ನಮ್ಮ ಸಾವಿರಾರು ವರ್ಷಗಳ ಸಾಹಿತ್ಯಿಕ ವಿಚಾರಮಂಥನದಲ್ಲಿ ದೇವ-ದೇವತೆಗಳ ಸ್ಥಾನಮಾನಗಳಲ್ಲಿ ಪಲ್ಲಟವಾಗಿರಬಹುದು. ಮೋಕ್ಷಪುರುಷಾರ್ಥದ ಸಾಧನಕ್ರಮದಲ್ಲಿಯೂ ಸ್ವರೂಪದಲ್ಲಿಯೂ ಮಾರ್ಪಾಡಾದುದು ಕಂಡುಬರಬಹುದು. ಆದರೆ ಐಹಿಕ ಜೀವನ ಸೌಂದರ್ಯಸಾಧಕಗಳಾದ ಧರ್ಮ-ಅರ್ಥ-ಕಾಮಗಳ ಸಾಧನೆಯ ಕ್ರಮದಲ್ಲಿಯೂ ನೀತಿ-ನಿಯಮಗಳ ವಿಚಾರಗಳಲ್ಲಿಯೂ ಯಾವ ಬಗೆಯ ವ್ಯತ್ಯಾಸಗಳೂ ಕಂಡುಬರುವುದಿಲ್ಲ. ವೈದಿಕರು ಹೇಳುವುದು ಅದನ್ನೇ ; ಜೈನರು ಹೇಳುವುದು ಅದನ್ನೇ ; ವೀರಶೈವರು ಹೇಳುವುದೂ ಅದನ್ನೇ !

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ತನ್ನ ಹೊಗಳಲು ಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವನ ನೊಲಿಸುವ ಪರಿ !"

—ಶ್ರೀಬಸವಣ್ಣನವರು

"ಶೀಲವನು ಕೈಕೊಂಡು ನಡೆಸದವ ಹೊಲೆಯ,
ಹೇಳಿದಾ ಸತ್ಕಥೆಯ ಕೇಳದವ ಹೊಲೆಯ,
ಆಳಾಗಿ ದಣಿಗೆರಡ ಬಗೆವಾತ ಹೊಲೆಯ,
ಕೀಳುಮಾತಾಡುವವ ಬಲುಕೆಟ್ಟ ಹೊಲೆಯ !"

—ಶ್ರೀ ಪುರಂದರದಾಸರು

"ಭೋಗವಿಚಾರವು ಬೇಕು ನೃಪತಿಗಾತ್ಮ
ಯೋಗವಿಚಾರವು ಬೇಕು—
ರಾಗರಸಿಕನಾಗಬೇಕು ಭಾವಿಸೆ ವೀತ-
ರಾಗರಸಿಕನಾಗಬೇಕು !"

—ಶ್ರೀ ರತ್ನಾಕರವರ್ಣಿ

ಇಲ್ಲಿ ಹೇಳಿದ ಪದ್ಯಗಳಲ್ಲಿಯ ಯಾವ ಮಾತು ಯಾರಿಗೆ ವಿರೋಧವೆನಿಸುವುದು ? ನಮ್ಮ ಸಾಂಪ್ರದಾಯಿಕ ಕನ್ನಡ ಸಾಹಿತ್ಯವನ್ನು ನೋಡಿದರೆ, ಸಾಮಾಜಿಕ ಸುಖಶಾಂತಿಗಳನ್ನು ಕುರಿತು ಹೇಳಿದ ಎಲ್ಲ ಮತ-ಪಂಥದವರ ಮಾತುಗಳೂ ಅಭಿನವವಾಗಿವೆಯಲ್ಲದೆ, ಅನಂತ ಕಾಲದವರೆಗೂ ಸಮಾಜದ ಧಾರಣೆಗೆ ಅವು ಅಗತ್ಯವೆನಿಸುವಂತಿವೆ.

## ವಿಜ್ಞಾನದ ಪ್ರಭಾವ

ಆಧುನಿಕ ವಿಜ್ಞಾನತತ್ತ್ವವು ಪಶ್ಚಿಮದೇಶಗಳಲ್ಲೆಲ್ಲ ದಿಗ್ವಿಜಯ ಮಾಡಿ, ಈಗ ಪೂರ್ವದ ದೇಶದವರ ಮನಸ್ಸಿನ ಮೇಲೆಯೂ ತನ್ನ ಆಡಳಿತವನ್ನು ಹಬ್ಬಿಸಿರುವುದು. ನಮ್ಮ ಕನ್ನಡ ನಾಡೂ ಇದರ ಆಳಿಕೆಯಿಂದ ಹೊರತಾಗಿ ಉಳಿದಿಲ್ಲ. ನಮ್ಮ ಹೊಸ ವಿಚಾರದ ತರುಣರೆಲ್ಲರೂ ಈ ವಿಜ್ಞಾನದ ಪ್ರಭಾವಕ್ಕೆ ಮಾರುಹೋಗಿದ್ದಾರೆ. ವೈಜ್ಞಾನಿಕ ಪ್ರಗತಿಯ ಮೂಲಕ ದೊರೆತಿರುವ ಅನೇಕ ಸಾಧನಸೌಕರ್ಯಗಳ ಮೂಲಕ, ಈಗ ಜಗತ್ತಿನ ಜನರೆಲ್ಲರೂ ಹತ್ತಿರ-ಹತ್ತಿರಕ್ಕೆ ಬಂದಿದ್ದಾರೆ. ವಸ್ತುಗಳ ಸುಲಭವಿನಿಮಯದಂತೆ ವಿಚಾರಗಳ ವಿನಿಮಯವೂ ಸರಾಗವಾಗಿ ನಡೆದುಬಿಟ್ಟಿದೆ. ಬಹುದಿನದ ಪರಾಧೀನಜೀವನದ ಮೂಲಕ ನಮ್ಮ ಜನರಲ್ಲಿ ನೆಲೆಸಿದ 'ದೀನನಾನುತನದ' ಭಾವನೆ, ಅವರಿಗೆ, ತನ್ನದೆಲ್ಲವನ್ನು ಮಣ್ಣಿಂದೂ






ಹೆರವರದನ್ನೆಲ್ಲ ಹೊನ್ನೆಂದೂ ಭಾವಿಸಹಚ್ಚಿದೆ. ಆದುದರಿಂದ ನಮ್ಮ ಹೊಸ ಜನರಲ್ಲಿ ತಮ್ಮ ಪರಂಪರೆಯ ಆಚಾರ-ವಿಚಾರ-ಸೌಂದರ್ಯಗಳ ಬಗೆಗೆ ಅಲಕ್ಷ್ಯವಿಷ್ಣೆ ತಲೆದೋರಿರುವುದು. ಈ ಕಾರಣಕ್ಕಾಗಿಯೆ ನಮ್ಮ ಸಾಹಿತ್ಯದೇವಿ, ತನ್ನ ಮೊದಲಿನ ರಥಪ್ರಯಾಣವನ್ನು ಬಿಟ್ಟು, ಉಗೆಬಂಡಿ-ಉಗೆಹಡಗ-ವಿಮಾನಗಳಲ್ಲಿ ಕುಳಿತು ಸಾಗಿರುವಳು. ಇಂದಿನ ಸಾಹಿತ್ಯ ಮಾನವತೆಯ ವಿಕಾಸ, ಸಾಮಾಜಿಕಶಾಂತಿ ಇವುಗಳಿಗಿಂತ, ವೈಯಕ್ತಿಕ ಸಾಹಸ, ಮಹತ್ವಾಕಾಂಕ್ಷೆ, ಸ್ವೈರಸಂಚಾರ, ಹೋರಾಟ, ಭೋಗತೃಪ್ತಿ ಇವುಗಳ ಕಡೆಗೆ ಹೆಚ್ಚು ಗಮನವನ್ನು ಕೊಡುತ್ತಲಿದೆ.

ಮತ್ತೊಂದು ಮಹತ್ವದ ಸಂಗತಿಯೆಂದರೆ : ವೈಜ್ಞಾನಿಕ ಕ್ರಾಂತಿಯೂ ವಿಪರೀತವಾಗಿ ಹೆಚ್ಚಿರುವ ಜನಸಂಖ್ಯೆಯೂ ಸಮಾಜದ ಆರ್ಥಿಕ ಪರಿಸ್ಥಿತಿಯನ್ನು ತಲೆ ಕೆಳಗೆ ಮಾಡಿಬಿಟ್ಟವೆ. ಸಮಾಜದ ಸುಖ ಸ್ವಾಸ್ಥ್ಯಗಳು ಆಯಾ ದೇಶದ ಆರ್ಥಿಕ ಪರಿಸ್ಥಿತಿಯನ್ನೇ ಅವಲಂಬಿಸಿರುವುದಲ್ಲವೆ ? ಹಿಂದಿನ ಕಾಲದಲ್ಲಿ ಕನ್ನಡನಾಡಿನಲ್ಲಿ ಬಡತನವು ಇರಬಹುದಾದರೂ ಅದರ ದುಷ್ಪರಿಣಾಮಕ್ಕೆ ಅವಕಾಶವಿರಲಿಲ್ಲ. ಏಕೆಂದರೆ ಅಂದಿನ ಸಾಮಾಜಿಕ ಆಚಾರ-ವಿಚಾರಗಳ ಮೂಲಕ, ಯಾರಿಗೂ ಬರಿಹೊಟ್ಟೆಯಿಂದ ಕೊರಗಬೇಕಾಗುತ್ತಿರಲಿಲ್ಲ. ಎಂತಲೇ ಸಮಾಜಘಟಕಗಳಾದ ವ್ಯಕ್ತಿಗಳಲ್ಲಿ ಕ್ರೋಧ, ಮತ್ಸರ, ದ್ವೇಷ, ತ್ವೇಷ ಮೊದಲಾದ ಉಗ್ರಭಾವನೆಗಳು ಹುಟ್ಟಿ ಬೆಳೆಯಲು ಆಸ್ಪದವಿರಲಿಲ್ಲ. ಅಂದಿನ ಬಡವ ಸಿರಿವಂತನಿಗಾಗಿ ಕರುಬುತ್ತಿರಲಿಲ್ಲ; ಕೆರಳುತ್ತಿರಲಿಲ್ಲ. ಏಕೆಂದರೆ ಸಿರಿವಂತ, ತನ್ನ ಸಿರಿಯು ಪರರ ಉಪಕಾರಕ್ಕಾಗಿ ಇದೆಯೆಂದು ಪ್ರತ್ಯಕ್ಷ ಆಚರಣೆಯಿಂದ ತೋರಿಸುತ್ತಿದ್ದನು; ತನ್ನೊಬ್ಬನ ಭೋಗಕ್ಕಾಗಿಯೇ ಅದನ್ನು ಬಳಸುತ್ತಿರಲಿಲ್ಲ. ನಮ್ಮ ಸಾಹಿತ್ಯ ಸಿರಿವಂತರ ಕಿವಿಯಲ್ಲಿ ಈ ಮಂತ್ರವನ್ನು ಊದುತ್ತಿದ್ದಿತು:

" ದಾನವಿರದನ ಮನೆಯು ದೊಡ್ಡದಾದರೇನು ? "
" ಇದ್ದಾಗ ದಾನವನು ಮಾಡದವ ಹೊಲೆಯ ! "
( ಶ್ರೀ ಪುರಂದರದಾಸರು )

" ಆಗಬಾ ಈಗಬಾ ಹೋಗಿಬಾ ಎನ್ನದಲೆ
ಆಗಲೇ ಕರೆದು ಕೊಡುವನಾ ದಾನ ಹೊ-
ನ್ನಾಗದೇ ಬಿಡದು ಸರ್ವಜ್ಞ!
( ಸರ್ವಜ್ಞ ಕವಿ )

" ಅನ್ನದಾನವ ಪೋಲ್ವದಾನಗ-
ಳಿನ್ನು ಧರೆಯಲಿ ಹಿಂದು ಮುಂದಿ-
ಲ್ಲನ್ನವೇ ಪ್ರಾಣಕ್ಕೆ ಕಾರಣವೆನಿಪುದದರಿಂದ—
ತನ್ನನುಳಿದಾದೊಡೆಯು ಭಕ್ಷಿಸು-
ವನ್ನವನು ಬಂದತಿಥಿಚಯಕಾ-
ಪನ್ನ ಜನಕಿಕ್ಕಿದಡೆ ಉತ್ಕಟ ಪುಣ್ಯತರವೆಂಧ. "
( ಕುಮಾರವ್ಯಾಸ )

ಹಿಂದಿನ ಕಾಲದ ಸಿರಿವಂತರಿಗೆ ಈ ಸಾಹಿತ್ಯವಚನಗಳಲ್ಲಿ ಶ್ರದ್ಧೆಯಿದ್ದಿತು. ಇಂದಿನ ಸಿರಿವಂತರಲ್ಲಿ ಅಂತಹ ಶ್ರದ್ಧೆಯಿದೆಯೆ ? ಇನ್ನೊಬ್ಬರಿಗೆ ಕೊಟ್ಟರೆ ತನ್ನ ಸುಖೋಪಭೋಗಕ್ಕೆ ಕೊರತೆಯಾದೀತೆಂದು ಸಿರಿವಂತ, ಬಡವರನ್ನು ಹತ್ತಿರ ಕೂಡ ಹಾಯಗೊಡುವುದಿಲ್ಲ. ಇನ್ನು ಬಡವ, ತಾನು ಬರಿಹೊಟ್ಟೆಯಿಂದ ಕೊರಗುತ್ತಿರುವಾಗ, ಸಿರಿವಂತ ಇಷ್ಟೇಕೆ ಕೊಬ್ಬಿ ಕುಣಿಯಬೇಕೆಂದು ರೊಚ್ಚಿನಿಂದ ಕುದಿಯುತ್ತಿದ್ದಾನೆ. ಯಂತ್ರಗಳ ಪ್ರಭಾವದ ಮೂಲಕ, ಕುಲಪರಂಪರಾಗತ ಉದ್ಯಮಗಳಿಗೆ ಆಘಾತವೊದಗಿ, ಉದ್ಯಮಗಾರರೆಲ್ಲ ನಿರುದ್ಯೋಗಿಗಳಾಗಿ ಕುಳಿತಿದ್ದಾರೆ. ಎಲ್ಲೆಲ್ಲಿಯೂ ಆರ್ಥಿಕ ಅತೃಪ್ತಿ ; ಅಸಂತುಷ್ಟಿ ! ಇವುಗಳನ್ನು ಪಶ್ಚಿಮದ ಕಡೆಯಿಂದ ಬರುವ ಆರ್ಥಿಕವಾದಗಳು ಇನ್ನಿಷ್ಟು ಬೆಳೆಸುತ್ತಲಿವೆ. ಇಂತಹ ಜನರ ಬಿಸಿಯುಸಿರು, ನಿಟ್ಟುಸಿರುಗಳಾಗಿ ಹೊರಡುವ ಸಾಹಿತ್ಯವು, ಅತೃಪ್ತಿ ಅಸಂತುಷ್ಟಿಗಳನ್ನೇ ಅಲ್ಲದೆ, ಬೇರೆ ಉದಾತ್ತ ಭಾವಗಳನ್ನು ಹೇಗೆ ಹೊರಹೊಮ್ಮಿಸಬೇಕು ? ಇದರ ಪರಿಣಾಮವಾಗಿ, ಜಗತ್ತಿನಲ್ಲಿಯ ಬೀಭತ್ಸ-ಭಯಾನಕ ಚಿತ್ರಗಳನ್ನೇ ಬಣ್ಣಿಸಿ, ಜೀವಿತದ ಬಗೆಗೆ ನಿರಾಶೆಯನ್ನು ಹುಟ್ಟಿಸುವಂತಹ ಸಾಹಿತ್ಯವು ಇಂದು ಹುಟ್ಟುತ್ತಲಿದೆ.

## ನಮ್ಮ ಸಾಹಿತ್ಯ

ನಮ್ಮ ಕನ್ನಡಕುಲರಸಿಕ ನೇಮಿಚಂದ್ರಕವಿಯು ' ಧರೆಲೇಸೆಂಬ ಆಶೆಗಾರಂ ತಾಂ ' ಎಂದು ಬದುಕುವ ಮಾತನ್ನು ಹೇಳಿರುವ. ವೈರಾಗ್ಯನಿಧಿಗಳಾದ ಪುರಂದರದಾಸರು ' ಮಾನವಜನ್ಮ ದೊಡ್ಡದು ; ವ್ಯರ್ಥ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ !' ಎಂದು ಜೀವಿತದ ವಿಷಯದಲ್ಲಿ ಆಶಾವಾದದ ವಚನವನ್ನು ಹಾಡಿರುವರು. ಆದರೆ ಇಂದು ' ನವ್ಯಸಾಹಿತ್ಯ ' ಎಂಬ ಹೆಸರಿನಿಂದ ಬರುತ್ತಿರುವ ಕವನ-ಕಥೆ-ಕಾದಂಬರಿಗಳನ್ನು ನೋಡಿದರೆ, ಅವುಗಳಲ್ಲಿಯ ಮುಕ್ಕಾಲು ಮೂರುವೀಸಪಾಲೂ ಜಗತ್ತಿನ ಜೀವಿತದ ವಿಷಯದಲ್ಲಿ ಸಂಪೂರ್ಣ ನಿರಾಶೆಯನ್ನು ಹುಟ್ಟಿಸುವಂತಹದಾಗಿರುವುದು ; ಜೀವನನಾಣ್ಯದ ಒಂದು ಅಂಗವಾದ ದುಃಖ-ದುಮ್ಮಾನ-ದುರ್ಗುಣ-ದುರಾಚಾರಗಳ ರೌದ್ರ-ಭೀಭತ್ಸಬಣ್ಣನೆಗಳಿಂದಲೇ ಅದು ತುಂಬಿರುವುದು. ಇದರಿಂದ ಜನತೆಯಲ್ಲಿ ಜಗತ್ತಿನ ಜೀವಿತದ ಬಗೆಗೆ ಹೇಸಿಕೆ-ತಿರಸ್ಕಾರಗಳು ಮಾತ್ರ ಉಂಟಾಗುವುವು. ಈ ನವ್ಯಸಾಹಿತ್ಯ ಆದರ್ಶದ ಆಶಾವಾದವನ್ನು ಸಂಪೂರ್ಣ ಕಣ್ಮರೆಗೊಳಿಸುವಂತಹದಾಗಿದೆ. ಇದು ನಿರಾಶಾವಾದವನ್ನು ಹುಟ್ಟಿಸುವುದಿಷ್ಟೇ ಅಲ್ಲ, ಜನತೆಗೆ ' ನೀತಿ-ಆಚಾರಗಳ ಕಡೆಗೆ ಲಕ್ಷ್ಯ ಕೊಡದೆ, ದುಡುಕಿ ಮುನ್ನುಗ್ಗಿರಿ ; ಬೇಕಾದ ಮಾರ್ಗದಿಂದ ನಡೆದು ಉಂಡು ತಿಂದು ಐಹಿಕ ಸುಖವನ್ನು ಭೋಗಿಸಿರಿ ? ' ಎಂಬ ಸಮಾಜ-ವಿಘಾತಕವಾದ ಕಿಡಿಗೇಡಿತನವನ್ನು ಪ್ರಚೋದಿಸುತ್ತಲಿದೆ. ಈ ಪ್ರಚೋದನೆ ಎಂತಹ ಭವಿಷ್ಯವನ್ನು ತರಲಿದೆಯೋ ಏನೋ !

ಧರ್ಮ-ಅರ್ಥಗಳನ್ನು ಕಡೆಗಣಿಸಿರುವ ನಮ್ಮ ಇಂದಿನ ಜನತೆ, ಕಾಮಪುರುಷಾರ್ಥಸಾಧನೆಯ ಕಡೆಗೂ ಮೊಗದಿರುಹಿ ನಿಂತಿದೆ. ಪಶ್ಚಿಮಖಂಡದಿಂದ ಹರಿದುಬರುವ ಸ್ತ್ರೀ-ಪುರುಷ ಸಂಬಂಧ-ವಿಷಯಕವಾದ ವಿಚಾರಲಹರಿಗಳು, ನಮ್ಮ ಹೊಸ ಕಾಲದ ಅನೇಕ ಜನ ಸಾಹಿತ್ಯಿಕರಿಗೆ ತುಂಬ ಹಿತಕಾರಿಯೆನಿಸುತ್ತಲಿವೆ. ಹೆಣ್ಣು-ಗಂಡಿನ ಸಂಬಂಧದ ಪರಂಪರೆಯ ಪಾವಿತ್ರ್ಯ ವಿಚಾರವು ಅನಾಗರಿಕತನದ್ದೆಂದು, ಅವರು ತಮ್ಮ ವಿವಿಧ ರೂಪದ ಸಾಹಿತ್ಯವಾಹಕಗಳಿಂದ ಪ್ರಚಾರವನ್ನೇ ನಡೆಸಿದ್ದಾರೆ.

## ಕ್ಷಣಿಕ ಸಂತೋಷದ ವಾಚಕವರ್ಗ

ಇಂದು ನಮ್ಮ ನಾಡಿನಲ್ಲಿ ಸಾಕ್ಷರರ ಸಂಖ್ಯೆ ಬೆಳೆಯುತ್ತ ನಡೆದಿದೆ. ಅಕ್ಷರ ಕಲಿತವರೆಲ್ಲರೂ ಸಾಹಿತ್ಯನಿರ್ಮಾಣಕ್ಕಾಗಿ ತವಕಿಸುತ್ತಿದ್ದಾರೆ. ಕೇವಲ ಸಾಕ್ಷರತೆ ಸಾಹಿತ್ಯನಿರ್ಮಿತಿಗೆ ಸಾಲದೆಂಬ ವಿವೇಕದ ಅರಿವು ಮೂಡಿದವರು ಇವರಲ್ಲಿ ಬಹಳ ಜನರಿಲ್ಲ. ಯಾವುದೇ ಕಾಲದಲ್ಲಿಯೂ ದೇಶದಲ್ಲಿಯೂ ವ್ಯಕ್ತಿ ಸುಖ-ಶಾಂತಿಗಳಿಂದ ಬಾಳಬೇಕಾದರೆ, ಸಾಮಾಜಿಕ ನಿಯಮ-ಸಂಯಮಗಳಿಗೆ ಒಳಗಾಗಿ ನಡೆಯಬೇಕಾಗುವುದೆಂಬ ಸತ್ಯವನ್ನೇ ಅವರು ಮರೆತುಬಿಟ್ಟಿದ್ದಾರೆ. ಇಂತಹ ವರ್ತಮಾನಹಿತದ ಸಾಹಿತ್ಯವನ್ನೋದಿ, ಹುರುಕು ತುರಿಸಿಕೊಂಡಂತಹ ಕ್ಷಣಿಕ ಸಂತೋಷವನ್ನು ಪಡುವ ವಾಚಕವರ್ಗವೂ ನಮ್ಮಲ್ಲಿ ರೂಪುಗೊಳ್ಳುತ್ತಿದೆ. ಆದರೆ ತುರಿಸಿಕೊಂಡ ಉಗುರಿನ ನಂಜು ವ್ಯಕ್ತಿಗೂ ಸಮಾಜಕ್ಕೂ ಎಂತಹ ಆಪತ್ತಿಯನ್ನು ತಂದೊಡ್ಡೀತೆಂಬುದರ ಎಚ್ಚರ ಈ ಸಾಹಿತ್ಯಿಕರಿಗೂ ಇಲ್ಲ ; ಇವರ ವಾಚಕಸಮುದಾಯಕ್ಕೂ ಇಲ್ಲ. ತತ್ತ್ವವರಿಯದ ಜನತಾರಾಜ್ಯದ ಅನವಸ್ಥೆಯಂತೆಯೆ ಇಂದಿನ ತಥ್ಯವಿಲ್ಲದಿರುವ ಜನತಾ-ಸಾಹಿತ್ಯವೆಂಬುದೂ ನಮ್ಮ ಸಮಾಜಜೀವನದ ಭವಿತವ್ಯವನ್ನು ಹದಗೆಡಿಸುವುದೆಂದು, ಕಂಡುಂಡವರು ಕಳವಳಪಡುತ್ತಲಿದ್ದಾರೆ- ಸಾಹಿತ್ಯವೆಂಬುದು ಹೃದಯ-ಬುದ್ಧಿಗಳ ಸಂಸ್ಕಾರದ ಫಲವಾಗಿದೆಯಲ್ಲದೆ, ಕೇವಲ ಸಾಕ್ಷರತೆಯ ಫಲವೆನಿಸದು.

ಇಂತಹ ದುಷ್ಕಾಲದಲ್ಲಿಯೂ ಶುಭ ಭವಿಷ್ಯಕ್ಕಾಗಿ, ಸುಖವರ್ತಮಾನಕ್ಕಾಗಿ ಕರುಳಿನ ವೀಣೆಯನ್ನು ಮಿಡಿಸುವ ವಿವೇಕಿ ಸಾಹಿತ್ಯಕರೂ ನಮ್ಮ ನಾಡಿನಲ್ಲಿ– ಅಲ್ಲಲ್ಲಿ– ಇದ್ದಾರೆ. ಅವರು ತಮ್ಮ ಕೃತಿನಿರ್ಮಿತಿಗಾಗಿ ಹೊಸರೂಪದಲ್ಲಿ ಕಾಲಕ್ಕನುಗುಣವಾದ ಮಾರ್ಪಾಡನ್ನು ಮಾಡಿಕೊಂಡಿರುವರಾದರೂ ಅಂತಃಸ್ವರೂಪದಲ್ಲಿ ಶುದ್ಧಸಂಸ್ಕೃತಿ ವಿಚಾರವನ್ನೇ ಹುದುಗಿಸಿ ಹೇಳುತ್ತಿದ್ದಾರೆ. ಇವರ ಸದಿಚ್ಛೆಯನ್ನೇ ನಮ್ಮಲ್ಲಿಯ ತ್ರಿಕಾಲ ವಿವೇಕಿಗಳು ಆಶೆಯಿಂದ ನೋಡುತ್ತಲಿದ್ದಾರೆ. ಆದರೆ ಡೋಲು ಭೇರಿಯವರ ಬೆನ್ನು ಹತ್ತುವವರು ಸಮಾಜದ ಬಹುಸಂಖ್ಯಾಕರು, ವೀಣೆ–ಕೊಳಲುಗಳನ್ನು ಕೇಳಲು ಕೂಡುವವರು ಬೆರಳೆಣಿಕೆಯ ಜನರು. ಇದೀಗ ನಮ್ಮ ಸಾಹಿತ್ಯ ಇವ್ಮೊಗದ ಮಾರ್ಗದಿಂದ ನಡೆದಿದೆ. ಇದೊಂದು ಸಂಕ್ರಮಣ ಕಾಲ-ಸಾಗರ-ಮಂಥನದ ಕಾಲ.

# ಪುನರ್ಮಿಲನ

ರಹೀಮನಿಗೆ ತನ್ನ ತಂದೆ ತಾಯಿಗಳನ್ನು ಕೊಲ್ಲುವ ಪ್ರಸಂಗ ಬಂದಿತ್ತು. ಆವರೆ ಮುಂದೆ ಒಂದು ಪ್ರಸಂಗದಲ್ಲಿ ಅವರನ್ನುಗುರುತಿಸಿದ. ಆವರ ಪುನರ್ಮಿಲನ ವಾಯಿತು ! ಆದರೆ ಮತಾಂತರ ಅವರ ಸಂಬಂಧಕ್ಕೆ ಅಡ್ಡಬಂತು. ಧರ್ಮದ ಬಂಧನಕ್ಕೆ ಅವನು ಬಲಿಯಾದ !

ಕತೆಗಾರರು: ಶ್ರೀ ಆರ್. ಬಿ. ಕುಲಕರ್ಣಿ, ಹುಬ್ಬಳ್ಳಿ.

ಗಾಡಿಯು ಬರಲು ಇನ್ನೂ ಒಂದು ತಾಸು ಅವಧಿ ಇತ್ತು. ಇಂದು ಗಾಡಿಯನ್ನು ತಡೆದು ಅದರಲ್ಲಿದ್ದ ಹಿಂದೂ ಪ್ರವಾಸಿಕರನ್ನು ಕೊಲ್ಲುವದೂ ಅವರ ಎಲ್ಲ ಸಾಮಾನು ಲೂಟಮಾಡಿಕೊಂಡು ಹೋಗುವದೂ ರಜಾಕಾರರ ಒಳಸಂಚಿನ ಮುಖ್ಯ ಉದ್ದೇಶವಾಗಿದ್ದು, ಈ ಬಗ್ಗೆ ರಜಾಕಾರರ ತಂಡವು ಸನ್ನದ್ಧವಾಗಿ ಸ್ಟೇಶನದಲ್ಲಿ, ಪ್ಲಾಟಫಾರ್ಮಿನ ಮೇಲೆ ಮಾರ್ಗನಿರೀಕ್ಷಣೆಯಲ್ಲಿತ್ತು. ಈ ರಜಾಕಾರ ಪಡೆಯ ಮುಖ್ಯಸ್ಥನು ಒಳಸಂಚಿನ ಮುಖ್ಯ ಮುಖ್ಯ ಜನರನ್ನು ವೇಟಿಂಗ ರೂಮಿನಲ್ಲಿ ಕರೆದು ಗಾಡಿಯನ್ನು ಹೇಗೆ ನಿಲ್ಲಿಸುವದು, ಕೂಡಲೇ ಕಾರ್ಯಾರಂಭವನ್ನೆಂತು ಮಾಡುವದು, ಕೈಕೆಳಗಿನ ಜನರಿಗೆ ಲೂಟ ಮಾಡಲು ಆಜ್ಞೆ ಕೊಡುವದು ಹೇಗೆ? ಪ್ರವಾಸಿಕರನ್ನು ಗಾಡಿಯಿಂದ ಕೆಳಗಿಳಿಸಲು ಹಚ್ಚುವದು, ಅವರನ್ನು ತುಂಡರಿಸುವದು, ಮೊದಲಾದವುಗಳನ್ನು ಹೇಗೆ ಕಾರ್ಯರೂಪಕ್ಕಿಳಿಸುವದು? ಮೊದಲಾದ ವಿವರವಾದ ಸೂಚನೆಗಳನ್ನು ಕೊಡುತ್ತಿದ್ದನು. ಕೆಲವರ ಪಾಲಿಗೆ ೧ನೇ ವರ್ಗ, ೨ನೇವರ್ಗದ ಡಬ್ಬಿಗಳು ಬಂದರೆ ರಹೀಮನ ಪಾಲಿಗೆ ಮೂರನೇ ವರ್ಗದ ಡಬ್ಬಿಯಲ್ಲಿ ಹೊಕ್ಕು ಅದರಲ್ಲಿಯ ಪ್ರವಾಸಿಕರನ್ನು ಕೆಳಗಿಳಿಸುವ ಕಾರ್ಯ ಒಪ್ಪಿಸಿಕೊಡಲಾಯಿತು. ಉಸ್ಮಾನನು ರಹೀಮನು ಕೆಳಗೆ ದಬ್ಬಿದವರನ್ನು ತುಂಡರಿಸುವ ಹೊಣೆ ಹೊತ್ತನು.

ಸಿಗ್ನಲ ಬಿದ್ದು ಗಾಡಿ ಬರುವದೆಂದು ತಿಳಿದಕೂಡಲೇ ಎಲ್ಲರೂ ಪ್ಲಾಟಫಾರ್ಮಿನ ಮೇಲೆ ತಮ್ಮ ತಮ್ಮ ನಿಯೋಜಿತ ಸ್ಥಳಗಳಲ್ಲಿ ಬಂದು ನಿಂತುಕೊಂಡರು. ಗಾಡಿ ಬಂದಿತು. ರಹೀಮನು ತನ್ನ ಮುಂದೆ ಬಂದು ನಿಂತ ೩ನೇ ವರ್ಗದ ಡಬ್ಬಿಯಲ್ಲಿಯ ಜನರಿಗೆ ಕೆಳಗಿಳಿಯಲು ಅಜ್ಞಾಪಿಸಿದನು. ಯಾರೂ ಸುಸೂತ್ರ ಇಳಿಯುವ ಲಕ್ಷಣ ಕಂಡು ಬರಲಿಲ್ಲ. ಅಗ ರಹೀಮನು ತನ್ನ ಕೈಕೆಳಗಿನ ರಜಾಕಾರರಿಗೆ ಡಬ್ಬಿಯಲ್ಲಿ ನುಗ್ಗಿ ಜನರನ್ನು ಕೆಳಗೆ ದೂಡಲು ಸೂಚಿಸಿದನು. ರಜಾಕಾರರು ಒಳನುಗ್ಗಿದರು. ನಿಃಶಸ್ತ್ರರಾದ ಪ್ರವಾಸಿಕರು ಸಶಸ್ತ್ರ ರಜಾಕಾರರು ಗಾಡಿಯಲ್ಲಿ ನುಗ್ಗಿದ್ದು ಕಂಡು ಬೆದರಿ ನಡುಗಿದರು. ಕೆಳಗೆ ಇಳಿದವರನ್ನು ಹೊಡೆಯುವದೂ ಅವರ ದೃಷ್ಟಿಗೆ ಬಿದ್ದಿತ್ತು. ಈಗ ಒಳಗೆ ಕುಳಿತಲ್ಲಿಯೇ ಘುಂಡರು ನುಗ್ಗಿ ಬಂದರಲ್ಲಾ ಎಂಬ ವಿವೇಚನೆಯಿಂದ ಜನರ ಮುಖ ಕಪ್ಪಿಟ್ಟವು. ಒಬ್ಬಿಬ್ಬರು ಏರಿ ಬರುವ ರಜಾಕಾರರನ್ನು ತಡೆಯಲು ಬಾಗಿಲ ಇಕ್ಕಲು ಪ್ರಯತ್ನಿಸಿದರು. ಆಗ ರಜಾಕಾರರು ಪಿಸ್ತೂಲ ಹಿಡಿದು ಬಾಗಿಲ ತೆರೆದರೆ ಒಳಿತು ಇಲ್ಲವಾದರೆ ಇಲ್ಲಿಂದಲೇ ಎಲ್ಲರನ್ನು ಗುಂಡಿಕ್ಕಲಾಗುವದು, ಹಿಂದೂ ಜನರನ್ನಷ್ಟೇ ಇಳಿಸಲು ನಮಗೆ ಅಜ್ಞೆ ಇದೆ. ಉಳಿದವರು ಭಯ ಪಡಬೇಕಿಲ್ಲ ಎಂದು ಗುಡುಗಲು ಡಬ್ಬಿಯ ಬಾಗಿಲು ತೆರೆಯಿತು. ಒಳಗಿನಿಂದೊಬ್ಬ ೫೫ ವಯಸ್ಸಿನ ಮುದುಕ, ೪೫ ವಯಸ್ಸಿನ ಅವನ ಹೆಂಡತಿ ಇವರಿಬ್ಬರನ್ನೂ ಗಾಡಿಯಲ್ಲಿ ಕೂತ ಜನರು ಹೊರ ದೂಡಲು ಪ್ರಯತ್ನಿಸುತ್ತಿರುವದನ್ನು ರಹೀಮನು ಕಂಡನು. ಆ ಹೆಣ್ಣುಮಗಳು ದೂಡುವ ಜನರಿಗೆ ಕೈಮುಗಿದು ಪ್ರಾರ್ಥಿಸುತ್ತಿರುವದೂ ಅಲ್ಲಿಯೇ ನಿಂತ ರಹೀಮನಿಗೆ ನಿಚ್ಚಳವಾಗಿ ಕೇಳಿಸುತ್ತಿದ್ದವು. ದೂಡುವವರು "ನಮ್ಮ ಡಬ್ಬಿಯಲ್ಲಿ ಹಿಂದೂಗಳೆಂದರೆ ಇವರಿಬ್ಬರೇ. ನೋಡಿದಿರಾ ಇವರ ಕಾಟದಿಂದ ರಜಾಕಾರರು ಒಳನುಗ್ಗಿ ಉಳಿದವರನ್ನು ಥಳಿಸುವರು. ಹೊರಗೆ ಹೋಗಿರಿ" ಎಂದು ದೂಡುತ್ತಿದ್ದರು.

ಮುದುಕ "ಹೌದು ನಾನು ಹಿಂದೂ ಎಂದು ಹೇಳಲು ನನಗೆ ಅಭಿಮಾನವಿದೆ. ನನ್ನ ಧರ್ಮವನ್ನು ಬಿಟ್ಟುಕೊಟ್ಟು ಪ್ರಾಣ ಉಳಿಸಿಕೊಳ್ಳುವದೇನೂ ನನಗೆ ಬೇಕಾಗಿಲ್ಲ. ಏನೋ ಒಂದು ಆಸೆ ಇತ್ತು. ದೇವರ ಮನಸ್ಸಿಗೆ ಬರಲಿಲ್ಲ."

ಮುದುಕಿ— "ಇವರೆಲ್ಲರೂ ಹಿಂದು ಧರ್ಮದವರಲ್ಲವೆ? ನಿಮ್ಮ ಧರ್ಮ ಬಾಂಧವರನ್ನು ಹೀಗೆ ದೂಡಬಹುದೇ"

ಓರ್ವಪ್ರವಾಸಿ— ನಡಿ. ನಡಿ. ನಾವು ಹಿಂದೂಗಳಂತೆ. ಯಾರು ಹೇಳಿದರು ನಿನಗೆ? ನಾವು ಕ್ರಿಶ್ಚಿಯನ್ನರಾಗಿ ೧೦ ವರ್ಷ ಆಗಿ ಹೋದವು.

ಇಷ್ಟರಲ್ಲಿ ಗಾಡಿಯಲ್ಲಿ ಹತ್ತಿಬಂದ ರಜಾಕಾರರು ಮುದುಕನನ್ನು ರಟ್ಟೆ ಹಿಡಿದು ಹೊರಗೆ ದೂಡಿದರು. ಮುದುಕನು ಜೋಲಿಹೋಗಿ ಕೆಳಗೆ ಬಿದ್ದ. ಮುದುಕಿಯದೂ ಅದೇಗತಿಯಾಯಿತು. ರಜಾಕಾರರು ಗಾಡಿಯಲ್ಲಿ ಒಬ್ಬೊಬ್ಬ ಪ್ರವಾಸಿಕನನ್ನೇ ಹಿಡಿದು ಅವನನ್ನುಹೊರದೂಡಲುಪಕ್ರಮಿಸಿದರು.

ರಹೀಮನು ಹೊರಗೆ ದೂಡಲ್ಪಟ್ಟವರನ್ನು ತುಂಡರಿಸಲು ಅಜ್ಞೆ ಕೊಡಬೇಕಾಗಿತ್ತು. ಆದರೆ ಅವನಿಗೆ ಕೆಳಗೆ ಬಿದ್ದ ಮುದುಕನನ್ನೂ ಅವನ ಹೆಂಡತಿಯನ್ನೂ ಕಂಡು ಅದೇಕೋ -ಅಂತಃ



"ಅಪ್ಪಾ ನನ್ನನ್ನು ಗುರುತಿಸಲಾರೆಯಾ" ರಹೀಮನು ತನ್ನ ತಂದೆಯನ್ನು ನೋಡಿ ನುಡಿದ.

ಕರಣ ಕದಡಿತು. ಮುದುಕನ ತಲೆಗೆ ಗಾಯವಾಗಿ ರಕ್ತ ಹರಿಯುತ್ತಿರುವದನ್ನು ಕಂಡು ಅವನಿಗೆ ಮನಸ್ಸಿನಲ್ಲಿ ಒಂದು ಅಸಹ್ಯ ವೇದನೆಯಾಗಹತ್ತಿತು. ಮುದುಕಿಯು ಇವನ ಹತ್ತಿರ ಬಂದು " ಸಾಹೇಬರೇ ನಮ್ಮವರ ಪ್ರಾಣ ಉಳಿಸಿರಿ. ನನ್ನ ಮುತ್ತೈದೆತನ ಕಾಪಾಡಿರಿ " ಎಂದು ಅಂಗಲಾಚಿ ಬೇಡಿಕೊಂಡಳು.

ರಹೀಮನಿಗೆ ಆ ಹೆಣ್ಣುಮಗಳ ಧ್ವನಿ ಕೇಳಿ ಮೊದಲೇ ಕರಗಿದ ಅಂತಃಕರಣಕ್ಕೆ ಬರೆ ಕೊಟ್ಟಂತಾಯಿತು. ಏನು ಮಾಡಬೇಕೆಂಬದು ತೋಚದೆ ಮುಗ್ಧನಂತೆ ನಿಂತುಬಿಟ್ಟ.

ರಜಾಕಾರರು ಅವನಿಗೆ ಸಲಾಂ ಹೊಡೆದು ಮುಂದಿನ ಆಜ್ಞೆ ಕೊಡಲು ಕೇಳಿದರು. ರಹೀಮನ ಮನಸ್ಸು ಎಲ್ಲಿಯೋ ಹೋದಂತಾಗಿತ್ತು. ತಡೆಯಿರಿ ಎಂದು ಕೈಸನ್ನೆಮಾಡಿ ಮತ್ತೆ ಸುತ್ತಲೂ ನೋಡಿದ. ಮಗ್ಗುಲದ ಡಬ್ಬಿಯಲ್ಲಿದ್ದ ಜನರನ್ನು ಕೆಳಗೆ ದಬ್ಬಿದೊಡನೆ ಅವರ ಪ್ರಾಣ ಹೋಗುವಂತೆ ಥಳಿಸುವದೂ ಕೆಲವರನ್ನು ತುಂಡರಿಸಿದ್ದೂ ನೋಡಿ ರಹೀಮನಿಗೆ ತಾನೇನು ಸ್ವಪ್ನದಲ್ಲಿರುವೆನೋ ಎನ್ನಿಸಿತು. ಎಳೆಮಕ್ಕಳ ಆರ್ತಸ್ವರ, ಹೆಂಗಸರ ಅಳುವ ಚೀತ್ಕಾರ, ಗಾಯಗೊಂಡವರು ಬೊಬ್ಬೆ ಇಕ್ಕುವ ಧ್ವನಿ ಕೇಳಿ ರಹೀಮನಿಗೆ "ಛೇ. ಛೇ. ನಿಜವಾಗಿಯೂ ರಾಕ್ಷಸೀಕೃತ್ಯವನ್ನೇ ನಾವು ನಡೆಸಿದ್ದು " ಎಂದು ಮನಸ್ಸಿಗೆ ಹೊಳೆಯಿತು.

ಮುದುಕಿಯು ಮುಂದೆ ಬಂದು " ಸಾಹೇಬರೇ ನಿಮಗೆ ಅಂತಃಕರಣವಿಲ್ಲವೇ? ನಿಮಗೂ ನನ್ನಂಥ ತಾಯಿ ಅವರಂಥ ತಂದೆ ಮನೆಯಲ್ಲಿರುವದಿಲ್ಲವೇ ನಿಮ್ಮ ತಾಯಿ ತಂದೆಗಳ ಮೇಲೆ ಈ ರೀತಿ ಅತ್ಯಾಚಾರ ನಡೆದದ್ದು ನೋಡಿ ನೀವು ಸುಮ್ಮನಿರುತ್ತಿದ್ದಿರಾ. ನಿಮ್ಮ ಜನರಿಗೆ ಶಾಂತರಾಗಿರಲು ಹೇಳಬಾರದೇ. ನಮ್ಮ ಯಾವ ತಪ್ಪಿಗಾಗಿ ಈ ರೀತಿ ಚಿತ್ರಹಿಂಸೆ ನಡೆಸಿರುವಿರಿ " ಎಂದು ಅಳುತ್ತ ನುಡಿದಳು. ಮುದುಕನು ರಕ್ತ ಸುರಿಯುವ ತಲೆಯಿಂದಲೇ ಎದ್ದುಬಂದು " ನಿನಗೆ ಹಿಂದೂ ಜನರ ಮೇಲೆ ದ್ವೇಷವಿದ್ದರೆ ನಮ್ಮಿಬ್ಬರನ್ನು ತುಂಡರಿಸು. ಉಳಿದವರು ಹಿಂದೂ ಧರ್ಮದವರೇ ಅಲ್ಲವೆಂದು ಹೇಳುವಾಗ ಅವರನ್ನಾದರೂ ಬಿಟ್ಟುಬಿಡು. ನಮಗೇನು ಹಿಂದೆ ಮುಂದೆ ಯಾವ ಆಶೆಯೂ ಇಲ್ಲ. ಇದ್ದೊಬ್ಬ ಮಗನು ಎಂದೋ ಇಲ್ಲದಂತಾದ. ಪ್ರಾಣಬಿಡುವ ಮುನ್ನ ಅವನ ಮುಖ ನೋಡಲು ಸಿಕ್ಕೀತೆಂಬ ಆಸೆ ಇತ್ತು, ಇಂದು ಅದೂ ಬಯಲಾಯಿತು. ಸಾಗಲಿ, ನಿಮ್ಮ ಕೆಲಸ " ಎಂದು ನುಡಿದನು.

ರಹೀಮನಿಗೆ ಇಷ್ಟು ಜನರಲ್ಲಿ ಇವರಿಬ್ಬರ ಧೈರ್ಯ, ಆತ್ಮಾರ್ಪಣೆಯ ಬುದ್ಧಿಯನ್ನು ನೋಡಿ ಅವರನ್ನು ಕಂಡರೆ ಏನೋ ಆತ್ಮೀಯ ಭಾವನೆಯುಂಟಾಗಿತ್ತು. " ನಮ್ಮಂಥ ತಂದೆ-ತಾಯಿಗಳಿರುವುದಿಲ್ಲವೇ ? " ಎಂಬ ಶಬ್ದಗಳಿಂದ ಅವನ ಮನಸ್ಸು ತನ್ನ ಮನೆಯಲ್ಲಿ ತಾಯಿ ತಂದೆಗಳ ಕಡೆಗೆ ಹೋಗಿತ್ತು. ಅವನೀಗ ಸಂಪೂರ್ಣವಾಗಿ ಪರವಶನಾದಂತೆ ನಿಂತಿದ್ದ. ರಜಾಕಾರರು ಕಾಫರರ ಕೊಲೆಗೆ ಆಜ್ಞೆ ಇಲ್ಲವೇ? ಎಂದು ಪುನಃ ಕೇಳಿದರು. ರಹೀಮನು " ಇಲ್ಲ. ನನ್ನ ಡಬ್ಬಿಯಲ್ಲಿರುವ ಯಾವ ಪ್ರವಾಸಿಯನ್ನೂ ಕೊಲ್ಲುವ ಕಾರಣವಿಲ್ಲ. ನೀವು ಗಾಡಿ ಹತ್ತಿರಿ " ಎಂದು ಪ್ರವಾಸಿಕರಿಗೆ ಹೇಳಿದನು.

ಪ್ರವಾಸಿಕರು ಆನಂದದ ಅತಿರೇಕದಲ್ಲಿ ನಾ ಮುಂದೆ ನೀ ಮುಂದೆ ಎಂದು ಧಾವಿಸಿ ಗಾಡಿ ಹತ್ತಿದರು.

ಇದನ್ನು ಕಂಡು ಉಳಿದ ರಜಾಕಾರ ಮುಖಂಡರು ರಹೀಮನ ಮೇಲೆ ಕಿಡಿ ಕಾರಿದರು. ಅವರು ಅವನೆಡೆಗೆ ಬಂದು "ನೀನು ಇಂದು ಸಾಧಿಸಿದ್ದೇನು? ಹೇಡಿಯಂತೆ ನಿಂತುಬಿಟ್ಟೆ. ಕಾಫರರ ಕೊಲೆಗೆ ಆಜ್ಞೆಯನ್ನೇಕೆ ಕೊಡಲಿಲ್ಲ" ಎಂದು ಕೇಳಿದರು.

" ನನಗೆ ಅದು ಸರಿಯೆನಿಸಲಿಲ್ಲ. ನಾನು ಆಜ್ಞೆ ಕೊಡಲಿಲ್ಲ " ಎಂದು ರಹೀಮನು ಗಂಭೀರವಾಗಿ ಹೇಳಿದನು.

" ನೀನು ರಜಾಕಾರ ಸಂಘದ ಅಧಿಕಾರ ಸ್ಥಾನದಲ್ಲಿದ್ದು ಹೀಗೆ ಮಾತಾಡುವದು ನಿನಗೆ ಶೋಭಿಸುವದೇ ? "

" ನಿಶ್ಚಯವಾಗಿ ಶೋಭಿಸುವದರಿಂದ ನಾನು ಹಾಗೆ ಹೇಳಿದೆ "

" ನೀನು ಅಳ್ಳೆದೆಯವ. ಪುಕ್ಕ. ಮೊದಲು ಉದ್ದುದ್ದ ಮಾತಾಡಿ ಪ್ರಸಂಗ ಬಂದಾಗ ಹೀಗೆ ಹೇಡಿಯಂತೆ ನಿಂತುಬಿಟ್ಟೆ. ನೀನು ಅಸ್ಸಲ ಮುಸಲ್ಮಾನ ರಕ್ತದವನೇ ಅಲ್ಲ. ರಕ್ತದ ಹನಿ ನೋಡಿ ಅಂತಃಕರಣ ಕರಗುವದು ಹೇಡಿ ಹಿಂದುಗಳ ಲಕ್ಷಣ."

" ಇರಬಹುದು "

ಗಾಡಿಯು ಸ್ಟೇಶನ್ನ ದಾಟಿ ಹೋದನಂತರ ಈ ಒಳಸಂಚಿನ ಮುಖಂಡನು ಇಲ್ಲಿಗೆ ಬಂದು ನಡೆದ ಸಂಗತಿ ಕೇಳಿ ಕಿಡಿಕಣ್ಣಿನಿಂದ " ರಹೀಂಸಾಹೇಬ. ನೀನು ರಜಾಕಾರ ಸಂಸ್ಥೆಯ ಕೀರ್ತಿ ಬೆಳಗಿಸುವ ತರುಣನೆಂದು ಭಾವಿಸಿ ನಿನ್ನನ್ನು ಕಮಾಂಡರನನ್ನಾಗಿ ಮಾಡಿದ್ದೆ. ನಿನ್ನ ತಂದೆಯು ನಮ್ಮ ಸಂಸ್ಥೆಯ ಪೋಷಕನಾಗಿರದಿದ್ದರೆ ಇಂದೇ ನಿನ್ನನ್ನು ಇಲ್ಲಿಯೇ ತುಂಡರಿಸಬಹುದಿತ್ತು. ನೀನು ಇಂದು ಪಂಚಮ ದಲದವರಂತೆ ವರ್ತಿಸಿದೆ. ನಿನಗೆ ಇಂಥ ದುರ್ಬುದ್ಧಿ ಯಾಕೆ ಬಂದಿತೋ ನನಗೆ ತಿಳಿಯದು. ಶಿಸ್ತೇ ನಮ್ಮ ಸಂಸ್ಥೆಯ ಜೀವನ. ಶಿಸ್ತಿಗೆ ವಿರೋಧವಾಗಿ ವರ್ತಿಸಿದ ನಿನ್ನನ್ನು ಇಂದಿನಿಂದ ನಾವು ರಜಾಕಾರ ಸಂಸ್ಥೆಯಿಂದ ಹೊರಗೆ ಹಾಕಿದ್ದೇವೆ. ನೀನು ಬೇಕಾದಲ್ಲಿ ಹೋಗಬಹುದು. ನಿನ್ನ ತಂದೆಗೆ ನಾನೊಂದು ಪತ್ರ ಕೊಡುವೆ. ಒಯ್ದು ಮುಟ್ಟಿಸು " ಎಂದು ಹೇಳಿದವನೇ ಎಲ್ಲರಿಗೂ ಕೂಡಲೇ ಸ್ಟೇಶನದಿಂದ ದೂರ ಹೋಗಲು ಆಜ್ಞಾಪಿಸಿದನು.

ರಹೀಮನಿಗೆ ರಜಾಕಾರ ಸಂಸ್ಥೆಯಿಂದ ಹೊರದೂಡಿದ್ದು ಬಹಳ ಅವಮಾನಕರವೆನಿಸಿತು. ತಾನು ಯಾವ ಅಪರಾಧವನ್ನೂ ಮಾಡದೆ ಒಮ್ಮೆಲೆ ಇಂಥ ಉಗ್ರ ಶಿಕ್ಷೆಯೇ ಎಂದು ಮುಖ ಕೆಳಗೆ ಹಾಕಿಕೊಂಡು ತನ್ನ ಊರಿಗೆ ಹೊರಟನು.

* * *

ಜಮಾಲಸಾಬ ಕಾಜಿ ನಮಾಜ ಮುಗಿಸಿ ಅದೇ ಮನೆಗೆ ಬಂದ. ಆಗ ಮಗನು ಬಂದದ್ದು ಅವನ ದೃಷ್ಟಿಗೆ ಬಿತ್ತು. ಮಗನು ರಜಾಕಾರ ಸಂಸ್ಥೆಯಲ್ಲಿ ಹೋದ ನಂತರ ಅವನನ್ನು ನೋಡಿದ್ದು ಇದೇ ಮೊದಲನೆ ಸಲ. ಆನಂದದಿಂದ ರಹೀಮ ಯಾವಾಗ ಬಂದೆ " ಎಂದು ಕೇಳಿದನು.

" ಇದೇ ಒಂದು ತಾಸು ಆಯಿತು " ಎಂದು ರಹೀಮ ಮುಖ ಕೆಳಗೆ ಹಾಕಿ ಉತ್ತರ ಕೊಟ್ಟ.

ಜಮಾಲ ಕಾಜಿಗೆ ಮಗನ ನಿರುತ್ಸಾಹದ ಕಾರಣ ತಿಳಿಯಲಿಲ್ಲ. "ಪ್ರಕೃತಿ ಸರಿಯಾಗಿದೆಯಲ್ಲವೇ" ಎಂದು ಕೇಳಿದ.

"ಎಲ್ಲವೂ ಸರಿಯಾಗಿದೆ"

"ಹಾಗಾದರೆ ರಮಜಾನ ತಿಂಗಳ ಮುಗಿಯುವವರೆಗೆ ಇರುವಂತೆ ರಜೆ ಪಡೆದು ಬಂದಿರುವಿಯಷ್ಟೇ!

"ಇನ್ನು ನಾನು ಕಾಯಂ ಮನೆಯಲ್ಲಿಯೇ ಇರುವದಕ್ಕೆ ಬಂದಿರುವೆ"

"ಅಂದರೆ ರಜಾಕಾರ ಸಂಸ್ಥೆ ಬಿಟ್ಟು ಬಂದೆಯಾ"

"ಇಲ್ಲ. ಅವರೇ ನನ್ನನ್ನು ತಳ್ಳಿ ಹಾಕಿದರು"

ಇಷ್ಟರಲ್ಲಿ ಫತೀಮಾ—ಜಮಾಲ ಕಾಜಿ ಹೆಂಡತಿ—ಹೊರಗೆ ಬಂದು ಮಗನನ್ನು ರಜಾಕಾರ ಸಂಸ್ಥೆಯವರು ಹೊರಗೆ ಹಾಕಿದ ಕಾರಣ ವಿವರಿಸಿದಳು.

ಜಮಾಲನ ಕಣ್ಣುಗಳಲ್ಲಿ ಆನಂದಬಾಷ್ಪಗಳು ಬಂದವು. "ಮಗೂ ರಹೀಮ. ನೀನು ಅಲ್ಲಾನ ಆದೇಶದಂತೆ ನಡೆದು ನನಗೆ ಕೀರ್ತಿ ತಂದೆ. ರಜಾಕಾರರು ಧರ್ಮಯುದ್ಧಕ್ಕೆಂದು ನನಗೆ ನಿನ್ನನ್ನು ಬಲಿದಾನ ಮಾಡಲು ಕೇಳಿದರು. ನನ್ನ ಪ್ರಾಣಕ್ಕಿಂತಲೂ ಪ್ರಿಯವಾದ ನಿನ್ನನ್ನು ಧರ್ಮಕಾರ್ಯಕ್ಕೆಂದು ನಾನು ಅವರಿಗೆ ಒಪ್ಪಿಸಿದೆ. ಜನರ ಪ್ರಾಣ ರಕ್ಷಣೆಗಾಗಿ ಸೈನ್ಯ ಶಿಕ್ಷಣ ಕೊಡುವದಾಗಿ ಹೇಳಿದರು. ನಾನೂ ಒಪ್ಪಿದೆ. ಲಕ್ಷಾಂತರ ರೂಪಾಯಿ ಕೂಡಿಸಿಕೊಟ್ಟೆ. ಈಗ ಅವರು ನಿರಪರಾಧಿ ಜನರ ಕೊಲೆ ಮಾಡಲು ಈ ಸಂಸ್ಥೆಯ ಉಪಯೋಗ ಮಾಡಿದರೆ ಅದನ್ನು ನೀನು ಮೊದಲೇ ಪ್ರತಿಭಟಿಸಬೇಕಿತ್ತು. ತಡವಾದರೂ ಚಿಂತೆ ಇಲ್ಲ; ನೀನು ದುಷ್ಕೃತ್ಯ ಮಾಡಲಿಲ್ಲ. ಇದನ್ನು ಕಂಡು ನನಗೆ ಪರಮಾನಂದವಾಗಿದೆ" ಎಂದು ಉದ್ಗಾರ ತೆಗೆದನು.

ರಹೀಮನಿಗೆ ತಂದೆಯ ಮಾತಿನಿಂದ ತಾನು ಮಾಡಿದ್ದು ಸರಿ ಎಂಬ ಆತ್ಮವಿಶ್ವಾಸ ಹುಟ್ಟಿ ನಡೆದ ಸಂಗತಿಯನ್ನು ವಿಶದವಾಗಿ ಹೇಳಿದ. ತನ್ನ ಸಹಕಾರ್ಯಕರ್ತರು "ನೀನು ಅಸ್ಸಲ ಮುಸಲ್ಮಾನನೇ ಅಲ್ಲ. ಹಿಂದೂನ ರಕ್ತದಿಂದ ಹುಟ್ಟಿದ ಹೇಡಿ" ಅಂದರೆಂದು ಹೇಳಿದಾಗ ಜಮಾಲ ಕಾಜಿಯ ಮುಖ ವಿವರ್ಣವಾಯಿತು. ಫತಿಮಾನಂತೂ "ನೀಚರು ನನ್ನ ಮಗನಿಗೆ ಇಂಥ ಶಬ್ದ ಅನ್ನಲಿಕ್ಕೆ ನಾಚಿಕೆಯಾದರೂ ಹೇಗೆ ಬರಲಿಲ್ಲ ಅವರಿಗೆ. ನೀನು ಅನಿಸಿಕೊಂಡು ಸುಮ್ಮನೇ ಬಂದೆಯಾ" ಎಂದಳು.

ಜಮಾಲ ಕಾಜಿಯು "ನಿಜ. ಅವರು ಹೇಳಿದ್ದು ಸುಳ್ಳಲ್ಲ." ಅಂದನು.

ರಹೀಮನಿಗೆ ಆಶ್ಚರ್ಯವಾಯಿತು. "ಏನು ಅವರು ಹೇಳಿದ್ದು ನಿಜ? ಅಂದರೆ ನಾನು ನಿಮ್ಮ ಮಗನಲ್ಲವೇ?" ಎಂದು ಕೇಳಿದನು.

ಜಮಾಲ ಕಾಜಿಯು ತಾನು ಅಂದ ಮಾತಿನ ಪರಿಣಾಮ ಹೀಗಾಗುವದೆಂದು ಭಾವಿಸಿರಲಿಲ್ಲ. ಮಗನನ್ನು ಸಂತೈಸಲು ಹಾಗೆ ನುಡಿದಿದ್ದ. ಯಾವದನ್ನು ಹೇಳಬಾರದೆಂದು ಈ ೨೫ ವರ್ಷಗಳಿಂದ ಯಶಸ್ವಿಯಾಗಿ ಪ್ರಯತ್ನಿಸುತ್ತಿದ್ದನೋ ಅದೇ ಇಂದು ಚರ್ಚೆಗೆ ಬಂದದ್ದರಿಂದ ಸ್ವಲ್ಪ ಗೊಂದಲಮಯ ಮನಸ್ಥಿತಿಗೆ ಇಳಿದನು. ಆದರೂ ಮಾತಿಗೆ ಸಮರ್ಪಕ ಉತ್ತರ ಕೊಡದೆ ನಿರ್ವಾಹವಿಲ್ಲದ್ದರಿಂದ "ಹಾಗಲ್ಲ ಮಗೂ ಹಿಂದುಸ್ತಾನದಲ್ಲಿ ಅಸ್ಸಲ ಮುಸಲ್ಮಾನರು ಯಾರು ಇದ್ದಾರೆ. ನನ್ನ ಅಜ್ಜ ಹಿಂದೂ ಆಗಿದ್ದ. ದೊಡ್ಡ ಶಾಸ್ತ್ರಿ. ನಾಲ್ಕು ಶಾಸ್ತ್ರಗಳ ಪಂಡಿತ. ನಿಜಾಮ ದರ್ಬಾರದಲ್ಲಿ, ಆಗಿನ ಕಾಲದಲ್ಲಿ, ಯಾವದೋ ಒಂದು ಪ್ರಸಂಗದಲ್ಲಿ ಸಿಕ್ಕು ಬಿದ್ದು ಧರ್ಮಾಂತರ ಹೊಂದಿದ. ಆದರೂ ಅವನ ರಕ್ತ ಹಿಂದೂ ರಕ್ತ. ಅವನಿಂದ ಹುಟ್ಟಿದ ವಂಶದಲ್ಲಿಯವರು ಅಸ್ಸಲ ಮುಸಲ್ಮಾನನಲ್ಲವೆಂದು ಹೇಳಿದರೆ ಅದು ತಪ್ಪಲ್ಲ ಎಂದು ನನ್ನ ಮಾತಿನ ಗೂಢವಾಗಿತ್ತು. ಈಗ ವಿಚಾರಮಾಡಿದರೆ ಎಲ್ಲರೂ ಹಿಂದೂ ಧರ್ಮದಿಂದ ಮತಾಂತರ ಹೊಂದಿದ ಮುಸಲ್ಮಾನರೇ ಇಲ್ಲಿರುವರು. ಅವರಿಗೆ ಹೀಗೆ ಒಬ್ಬರನ್ನು ಟೀಕಿಸುವ ಅಧಿಕಾರವೇ ಇಲ್ಲ" ಎಂದು ಹೇಳಿ ಮಗನ ಸಂಶಯ ನಿವಾರಣೆ ಮಾಡಿದನು.

ಫತೀಮಾಳೂ ಈ ಉತ್ತರದ ಪರಿಣಾಮ ಮಗನ ಮನಸ್ಸಿನ ಮೇಲೆ ಚೆನ್ನಾಗಿ ಆದುದು ಅವನ ಮುಖ ಲಕ್ಷಣದಿಂದ ತಿಳಿದುಕೊಂಡು "ನನ್ನ ಅಜ್ಜನ ತಂದೆಯೂ ಹಿಂದೂ ಗೃಹಸ್ಥ. ನಮ್ಮ ಅಜ್ಜಿ ಓರ್ವ ಸರದಾರನ ಮಗಳು. ಅವಳನ್ನು ಲಗ್ನವಾಗಿ ಅವನು ಮುಸಲ್ಮಾನನಾದ. ಹಾಗೆ ವಿಚಾರ ಮಾಡಿದರೆ ನನ್ನ ರಕ್ತದಲ್ಲಿಯೂ ಹಿಂದೂ ರಕ್ತವೇ ಇದೆ" ಎಂದು ಗಂಡನ ಮಾತಿಗೆ ಪುಷ್ಟಿ ಕೊಟ್ಟಳು.

ಅಂದು ಜಮಾಲಕಾಜಿಗೆ ಮಗನು ಮರಳಿ ಮನೆಗೆ ಬಂದುದರಿಂದ ವಿಶೇಷ ಆನಂದವಾಗಿತ್ತು. ರಹೀಮನಿಗೂ ತನ್ನ ಕೃತ್ಯವನ್ನು ತಂದೆ ಮೆಚ್ಚಿದ್ದಕ್ಕೆ ಆನಂದವಾಗಿತ್ತು. ಇಬ್ಬರೂ ಹರಟೆಹೊಡೆಯುತ್ತ ಮಲಗಿದಾಗ ಜಮಾಲಕಾಜಿ ಮಗನಿಗೆ ಇನ್ನು ಮೇಲೆ ತನ್ನ ಜಹಗೀರಿಯ ವ್ಯವಸ್ಥೆಯನ್ನು ನೀನೇ ವಹಿಸಿಕೊಳ್ಳಬೇಕೆಂದೂ ಅದಕ್ಕಾಗಿ ಜಹಗೀರ ಹಳ್ಳಿಗೆ ಹೋಗಿ ರೈತರ ಪರಿಚಯ ಮಾಡಿಕೊಳ್ಳಬೇಕೆಂದೂ ಹೇಳಿದನು.

* * * *

ರಹೀಮನು ತನ್ನ ಜಹಗೀರಿಯ ವ್ಯವಸ್ಥೆಯನ್ನು ನೋಡಲು ಹಳ್ಳಿಗೆ ಬಂದುದು ಇದೇ ಪ್ರಥಮ ಸಲ. ಅವನು ತೀರ ಚಿಕ್ಕ ಬಾಲಕನಿದ್ದಾಗ ಅವನ ತಂದೆಯು ಮಗನ ಶಿಕ್ಷಣಕ್ಕೆಂದು ಹೈದರಾಬಾದಿಗೆ ಹೋದವನು ಮರಳಿ ಕುಟುಂಬಸಹಿತ ಈ ಊರಿಗೆ ಬಂದಿರಲಿಲ್ಲ. ಜಹಗೀರಿಯ ವಹಿವಾಟದಾರನೆಂದು ಕೆಲಸಮಾಡುತ್ತಿದ್ದ ಇಸ್ಮಾಯಿಲ ಸಾಹೇಬನೇ ವಸೂಲಮಾಡಿ ಹೈದರಾಬಾದಕ್ಕೆ ಹಣ ಕಳಿಸುತ್ತಿದ್ದನು. ಹಳ್ಳಿಗೆ ಬಂದನಂತರ ತಾನೂ ಒಬ್ಬ ದೊಡ್ಡ ಜಹಗೀರದಾರನೆಂಬ ಅರಿವು ರಹೀಮನಿಗಾಯಿತು. ರೈತರು ಬರುವದು, ಸಲಾಂ ಹೊಡೆಯುವದು ಸುಖ ದುಃಖ ವಿಚಾರಿಸುವದು, ಒಂದೆರಡು ದಿನ ನಡೆದವು. ರಹೀಮನು ವಹಿವಾಟದಾರ ಇಸ್ಮಾಯಿಲನ ಹತ್ತರ ಲೆಕ್ಕಪತ್ರ ನೋಡಿ ರೈತರನ್ನು ಕರೆಸಿ ಇಷ್ಟೇಕೆ ಬಾಕಿ ಉಳಿದಿದೆ ಎಂದು ವಿಚಾರಿಸಹತ್ತಿದನು.

ಪ್ರತ್ಯಕ್ಷ ಪರಿಶೀಲನೆಯಲ್ಲಿ ರೈತರ ದುಃಸ್ಥಿತಿಯ ಅರಿವು ಅವನಿಗಾಯಿತು. ಇಂಥದರಲ್ಲಿ ಹಳೇ ಸಾಲ ತೀರಿಸಬೇಕೆಂದು ಒತ್ತಾಯಪಡಿಸುವದು ಸರಿಯಾಗದೆಂಬ ವಿಚಾರ ಮೂಡತೊಡಗಿತು. ಇಸ್ಮಾಯಿಲನು ಇದನ್ನರಿತು "ನೀವು ಹೀಗೆ ಮಾಡಿದರೆ ಒಂದು ಪೈ ಸಹ ವಸೂಲಾಗುವದಿಲ್ಲ. ಕಾಂಗ್ರೆಸ್ಸಿಗರು ಜನರ ತಲೆ ಕೆಡಿಸತೊಡಗಿದ್ದಾರೆ ನಿಮ್ಮ ತಂದೆಯ ಮೇಲೆ ರೈತರು ಬಹಳ ಆದರವಿಟ್ಟುಕೊಂಡಿರುವದರಿಂದ ಆಂದೋಲನ ಹೂಡಿಲ್ಲ. ಇಷ್ಟೇ ನಮ್ಮ ಪುಣ್ಯ. ಮೊದಲಿನ ಹಣ ಕೊಡುತ್ತಿಲ್ಲ. ನೀವು ಹೀಗೆ ಮೆತ್ತಗೆ ಕಂಡರೆ ಅವರು ಅಂಜುವದೇ ಇಲ್ಲ" ಎಂದನು.

ರಹೀಮನಿಗೆ ಹಳ್ಳಿಯ ತನ್ನ ಆಸ್ತಿಯ ಒಡೆತನ ಸಾಗಿಸಿಕೊಂಡು ಹೋಗಬೇಕಾದರೂ ನಿಜಾಮನು ಸಂಸ್ಥಾನ ಉಳಿಸಿಕೊಳ್ಳುವದಕ್ಕೆ ಮಾಡುವಷ್ಟೇ ರಾಜಕಾರಣ ಮಾಡಬೇಕಾಗುವದೆಂಬ ಮಾತು ಇಸ್ಮಾಯಿಲನಮಾತಿನಿಂದ ಮನವರಿಕೆಯಾಯಿತು.

ರೈತರ ಮನೆಗೆ ಹೋಗಿ ಅವರ ಜೀವನವನ್ನು ಕಣ್ಣಾರೆ ಕಾಣುವ ಉತ್ಸಾಹದಲ್ಲಿ ಅವನು ರೈತರ ಮನೆಗೆ ಹೋಗಹತ್ತಲು ಅವನ ಬಗ್ಗೆ ರೈತರಲ್ಲಿ ಒಳ್ಳೇ ಆತ್ಮೀಯ ಭಾವನೆಯುಂಟಾಯಿತು. ಓರ್ವ ಮುದುಕಿಯು "ಆ ಯಾವ ತಾಯಿ ಹೊಟ್ಟೇಪುಣ್ಯಾದಿಂದ ಬಂದನೋ ನಮ್ಮ ಅಪ್ಪ. ಬಹಳ

ದೊಡ್ಡ ಮನಸ್ಸಿನವ. ಜಮಾಲಕಾಜಿ ಜನ್ಮದಾಗ ಒಂದಿನಾ ನಮ್ಮ ಸುಖ ದುಃಖ ವಿಚಾರಿಸಿರಲಿಲ್ಲ. ದೇವರು ನಮ್ಮ ದೈವ ತೆರೆಯಲೆಂದೇ ಅವನಿಗೆ ಇವನನ್ನು ಸಾಕುವ ಬುದ್ಧಿ ಹಾಕಿರಬೇಕು'' ಎಂದು ರಹೀಮನು ಮನೆ ಬಿಟ್ಟು ಹೊರಬೀಳಲು ತನ್ನ ಮಗನಿಗೆ ಹೇಳಿದ ಮಾತು ರಹೀಮನಿಗೆ ಕೇಳಿಸಿತು. ಇಸ್ಮಾಯಿಲನ ಮುಂದೆ ಈ ಬಗ್ಗೆ ಮಾತು ತೆಗೆಯಲು ಅವನು ತನಗೆ ಒಂದೂ ಗೊತ್ತಿಲ್ಲ. ನಿಮ್ಮ ತಾಯಿ ತಂದೆಗಳನ್ನೇ ಈ ಬಗ್ಗೆ ಕೇಳುವದು ಲೇಸು ಎಂದು ಸಲಹೆ ಇತ್ತ.

ಇಂದಿನ ವರೆಗೆ ರೈತರು ಅದೆಷ್ಟೋ ಸಾರೆ 'ನಿನ್ನ ಸಾಕಿದವನು' ಎಂದು ರಹೀಮನ ಮುಂದೆ ಜಮಾಲಕಾಜಿಯ ಬಗ್ಗೆ ಹೇಳುವಾಗ ಅಂದದ್ದುಂಟು. ಆಗ ರಹೀಮನಿಗೆ ಈ ಜನರು ತಂದೆಗೆ 'ಸಾಕಿದವ'ನೆಂದು ಹೇಳುವ ರೂಢಿ ಇರಬಹುದು ಎಂದು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಆದರೆ ಇಂದು ಅವನಿಗೆ ಆ ಮುದುಕಿಯ ಮಾತಿನಿಂದ ತಾನು ನಿಜವಾಗಿ ಜಮಾಲಕಾಜಿ ಮಗನಾಗಿರದೆ ಅವನು ಸಾಕಿದ ಹುಡುಗನಿರಬಹುದೆ? ಎಂಬ ವಿಚಾರ ಬರಹತ್ತಿತು. ಅವನಿಗೆ ತಾನು ನಿಜವಾಗಿ ಬೇರೊಬ್ಬರ ಮಗನಾಗಿದ್ದರೆ ತನ್ನ ತಾಯಿ ತಂದೆಗಳು ಇನ್ನೂ ಜೀವಿಸಿರಬಹುದೇ? ಅವರಿಗೆ ತನ್ನನ್ನು ಕಂಡರೆ ಅದೆಷ್ಟು ಆನಂದವಾಗಬಹುದು? ಎಂದು ನಾನಾ ವಿಧವಾಗಿ ವಿಚಾರಿಸುತ್ತ ಕುಳಿತನು. ಇದರ ಬಗ್ಗೆ ಹೆಚ್ಚಿಗೆ ಜನರಲ್ಲಿ ವಿಚಾರ ಮಾಡುವದು ತನ್ನ ಕೀಳ್ತನವನ್ನು ತಾನೇ ಒಪ್ಪಿಕೊಂಡಂತಾಗುವದೆಂಬ ಭಾವನೆಯಿಂದ ಯಾರನ್ನಾದರೂ ಕೇಳುವ ಗೋಜಿಗೆ ಹೋಗಲು ಮನಸ್ಸು ಹಿಂಜರಿಯುತ್ತಿತ್ತು. ಊರಿಗೆ ಹೋಗಬೇಕು; ತನ್ನ ತಂದೆ ತಾಯಿಗಳಿಗೆ ಈ ಪ್ರಶ್ನೆಯನ್ನು ಕೇಳಬೇಕೆಂದು ಅವನು ನಿರ್ಧರಿಸಿದ.

ಅಂದು ಒಬ್ಬ ಸಾಧುವು ಅಕಸ್ಮಾತ್ ಆ ಹಳ್ಳಿಗೆ ಆಗಮಿಸಿದ. ಅವನು ರಹೀಮನ ಮುಖ ನೋಡಿ "ಪುಣ್ಯಶಾಲಿ ನೀನು. ತಿನ್ನಲು ಉಣ್ಣಲು ನಿನಗೆ ಕೊರತೆ ಇಲ್ಲ. ಆದರೆ ನಿನ್ನ ಹೃದಯದಲ್ಲಿ ಒಂದು ಚಿಂತೆ ಕೊರೆಯುತ್ತಿದೆ. ಇನ್ನೊಂದು ತಿಂಗಳಲ್ಲಿ ದೊಡ್ಡ ದುಃಖವೂ ಆನಂದವೂ ನಿನಗಾಗಿ ಕಾದಿವೆ. ನಿನ್ನ ತಾಯಿ ತಂದೆಗಳ ಲಾಭ ನಿನಗಿದೆ. ಆದರೆ.... ನಿನ್ನ ದುಃಖ ಅವರ ದರುಶನದಿಂದ ಹೆಚ್ಚುವದು' ಎಂದು ಭವಿಷ್ಯ ನುಡಿದ. ಸಾಧು-ಫಕೀರರು ಹೊಟ್ಟೆಗಾಗಿ ಏನಾದರೊಂದು ಹೇಳುತ್ತ ಅಲೆಯುವ ಮನುಷ್ಯರು ಎಂದು ಒಂದು ಬಗೆಯ ಜಿಗುಪ್ಸೆ ರಹೀಮನಿಗಿತ್ತು. ಆದರೆ ಇಂದು ಈ ಸಾಧು ಹೇಳಿದ ಮಾತು ತನ್ನ ಹೃದ್ಗತವನ್ನು ಅರಿತು ಆಡಿದಂತಿದ್ದ ಕಾರಣದಿಂದ ಅವನ ಮಾತಿನಲ್ಲಿ ವಿಶ್ವಾಸ ಹುಟ್ಟಿ ಅವನಿಗೆ ಸಂತೋಷವಾಗುವಂತೆ ದುಡ್ಡು ಕೊಟ್ಟು "ದುಃಖ-ಆನಂದ'' ಎರಡೂ ಆಗುವವೆಂದರೆ ಇದರ ಗೂಢವೇನು? ಎಂದು ಕೇಳಿದ. "ಅದನ್ನು ಹೇಳಲು ನಾನೇನು ದೇವರಲ್ಲ. ಏನೋ ನಿನ್ನನ್ನು ನೋಡಿದೊಡನೆ ನನ್ನ ಮನಸ್ಸಿನಲ್ಲಿ ಮೂಡಿದ ವಿಚಾರಗಳನ್ನು ಆಡಿತೋರಿಸಿದೆ. ಹೆಚ್ಚಿಗೆ ಹೇಳಲು ಬರುವದಿಲ್ಲ. ಅನುಭವದಿಂದ ಅದು ನಿನಗೆ ಗೊತ್ತಾಗಬಹುದು'' ಎಂದು ಸಾಧು ಹಾರಿಕೆ ಉತ್ತರ ಕೊಟ್ಟು ಹೊರಟುಹೋದ.

ಅಂದು ರಹೀಮನಿಗೆ ಸಾಯಂಕಾಲ ಒಂದು ಪತ್ರ ಬಂದಿತು. ಅವರಲ್ಲಿ ಜಮಾಲಕಾಜಿಗೆ ಮೈಯಲ್ಲಿ ಅಸ್ವಸ್ಥವಾಗಿರುವದರಿಂದ ಕೂಡಲೇ ಹೊರಟು ಬರಬೇಕೆಂದೂ ಪ್ರತ್ಯಕ್ಷಬಂದನಂತರ ಹೆಚ್ಚಿನ ವಿವರಗಳು ತಿಳಿಯುವವೆಂದೂ ಬರೆಯಲಾಗಿತ್ತು. ಅದನ್ನು ಓದಿ ರಹೀಮನಿಗೆ ಅಂದು ನಿದ್ರೆಯೇ ಹತ್ತಲಿಲ್ಲ. ಮಾರನೇ ದಿನ ಹೈದರಾಬಾದಕ್ಕೆ ತಲುಪಿದನು.

ತಂದೆಯು ತಲೆಗೆ ಪಟ್ಟಿಕಟ್ಟಿಕೊಂಡದ್ದು ನೋಡಿ ರಹೀಮನಿಗೆ ಎದೆಯೊಡೆಯಿತು. ಇದೇನು? ತನ್ನ ತಂದೆಯ ತಲೆಗೆ ಗಾಯ, ಪತ್ರದಲ್ಲಿ ತಿಳಿಸಬಾರದಿತ್ತೇ ಎಂದು ತಾಯಿಗೆ ಕೇಳಿದ.

"ಪತ್ರದಲ್ಲಿ ಈ ವಿಷಯ ಬರೆಯುವಂತಿರಲಿಲ್ಲ ಮಗೂ. ನಿನ್ನ ತಂದೆಯನ್ನು ರಜಾಕಾರರು ಕೊಲ್ಲುವವರಿದ್ದರು. ಅಲ್ಲಾನ ಕೃಪೆಯಿಂದ ಹೀಗೆ ಬದುಕಿದ.'' ಎಂದು ಫಾತಿಮಾ ಹೇಳಿದಳು. "ರಜಾಕಾರರು ತಂದೆಯ ಮೇಲೆ ಕೈ ಎತ್ತಲು ಕಾರಣ'' ಎಂದು ಆತುರದ ಪ್ರಶ್ನೆ ರಹೀಮನ ಬಾಯಿಂದ ಹೊರಬಿದ್ದಿತು. ಅವನ ದೇಹವೆಲ್ಲ ಸಿಟ್ಟಿನಿಂದ ನಡಗುತ್ತಿತ್ತು-

ಜಮಾಲಕಾಜಿ ಮಗನ ಮುಖನೋಡಿ "ರಹೀಮ ಇಲ್ಲಿ ಬಾ. ಅವಳಿಗೇನು ತಿಳಿಯುವದು. ನಾನು ಎಲ್ಲವನ್ನು ತಿಳಿಸುವೆ'' ಎಂದು ಕರೆದು ಮಗನನ್ನು ಸಮೀಪದಲ್ಲಿ ಕೂಡ್ರಿಸಿಕೊಂಡು ತನ್ನ ತಲೆಗೆ ಆದ ಗಾಯದ ವೃತ್ತಾಂತ ವಿವರಿಸಿದ-

"ರಜಾಕಾರರು ಧರ್ಮದಂತೆ ವರ್ತಿಸುವ ಜನರ ತಂಡ. ದೇವರ ಪ್ರೀತಿಗೆ ಪಾತ್ರರಾಗುವ ರೀತಿಯಲ್ಲಿ ಕೆಲಸ ಮಾಡುವವರು. ನೆರೆಹೊರೆಯವರ ರಕ್ಷಣೆಗಾಗಿ ಪ್ರಾಣಾರ್ಪಣ ಮಾಡಲು ಪ್ರತಿಜ್ಞೆ ಮಾಡಿದವರು ಎಂದು ಈ ಪುಣ್ಯಾತ್ಮರ ಸಂಸ್ಥೆಗೆ ಪ್ರತಿ ತಿಂಗಳು ನಾನು ಹಣ ಸಲ್ಲಿಸುತ್ತಿದ್ದೆ. ಅವರು ನಿರಪರಾಧಿ ಜನರ ಕೊಲೆ ಮಾಡುವವರೆಂದು ಅಂದು ನೀನು ಹೇಳಿದ್ದರಿಂದ ನಾನು ಧನ ಸಹಾಯ ನಿಲ್ಲಿಸಿದೆ. ಅವರಿಗೆ ನೀವು ಕುರಾಣದ ಆದೇಶದಂತೆ ವರ್ತಿಸುವದಿಲ್ಲವಾದುದರಿಂದ ನಾನು ಧನ ಸಹಾಯ ನಿಲ್ಲಿಸಿದ್ದನ್ನು ತಿಳಿಸಿದೆ. ಇದರಿಂದ ಅವರಿಗೆ ಸಿಟ್ಟು ಬಂದು. ನಾನು ಕಾಫರರ ಕೈವಾರಿ? ಸರಕಾರದ ವಿರುದ್ಧ ಸಂಚು ನಡೆಸಿದವ. ಇಸ್ಲಾಂ ದ್ರೋಹಿ ಎಂದು ಜರೆದರು. ಇಷ್ಟೇ ಅಲ್ಲ. ಒಂದು ವಾರದಲ್ಲಿ ಒಂದು ಸಾವಿರ ರೂಪಾಯಿ ಸಲ್ಲಿಸದಿದ್ದರೆ ನಿನ್ನ ಸರ್ವಸ್ವವನ್ನು ಲೂಟಿ ಮಾಡುವದಾಗಿ ಬೆದರಿಕೆ ಹಾಕಲೂ ಅವರು ಹಿಂಜರಿಯಲಿಲ್ಲ. ನಾನು ಆ ಪತ್ರವನ್ನು ಪೋಲೀಸರ ಕಡೆಗೆ ಕಳಿಸಿ ಇಂಥ ಪುಂಡಾಟಿಕೆ ನಡೆಸಿದವರನ್ನು ದಂಡಿಸುವದು ಅಗತ್ಯವೆಂದೂ ನನಗೆ ಸಂರಕ್ಷಣೆ ಕೊಡಬೇಕೆಂದೂ ಬಿನ್ನವಿಸಿದೆ. ಈ ಪತ್ರ ಹೋದ ಮಾರನೇ ದಿನ ರಜಾಕಾರರು ಬಂದವರೇ ಕೈಗೆ ಸಿಕ್ಕದ್ದನ್ನು ಲೂಟಿಮಾಡಹತ್ತಿದರು. ಅವರನ್ನು ಹೀಗೇಕೆಂದು ಕೇಳಲು ಹೋದಾಗ ನನ್ನ ಮೇಲೆ ಏರಿಬಂದು ಹೊಡೆದರು. ಬೇಲಿ ಕೂತು ಹೊಲ ಮೇಯಹತ್ತಿದರೆ ಬದಕುವದು ಹೇಗೆ? ಇಂದಿನ ವರೆಗೆ ನಾನು ಪತ್ರಿಕೆಯಲ್ಲಿ ರಜಾಕಾರರ ಅತ್ಯಾಚಾರದ ಬಗ್ಗೆ ಓದುತ್ತಿದ್ದೆ. ಈಗ ಅದೇ ಅನುಭವ ನನಗೂ ಬಂದಿತು. ಮೈಯಲ್ಲಿ ಹೊಸ ರಕ್ತವಿಲ್ಲ. ಗಾಯುವಾಯುದಾಗಿದೆ. ನಿನಗೆ ಈ ಸುದ್ದಿಯನ್ನು ತಿಳಿಸಿದರೆ ಅಲ್ಲಿ ನೀನು ರಜಾಕಾರರ ವಿರುದ್ಧ ಬಾಯಿ ಬಿಡಹತ್ತಿದರೆ ಅದು ಗುಪ್ತ ಪೋಲೀಸರಿಂದ ಅವರಿಗೆ ತಿಳಿದು ಅಲ್ಲಿಯೇ ನಿನ್ನ ಮೇಲೆ ದಾಳಿ ನಡೆಸಬಹುದೆಂದು ತಿಳಿಸಿರಲಿಲ್ಲ. ನಿನ್ನೊಬ್ಬನ ರಕ್ಷಣೆಯಾದರೆ ಸಾಕು. ನೀನು ಅವರ ವಿರುದ್ಧ ಚಕಾರಶಬ್ದ ಅನ್ನಬೇಡ.''

"ಅವರು ಅನ್ಯಾಯ ಮಾಡಿದರೂ ತಲೆಬಾಗಬೇಕೆ? "ಸ್ವತಃ ಅಲಾ ಹಜರತನೇ ಅವರಿಗೆ ತಲೆಬಾಗುತ್ತಿರುವಾಗ ನಾವೇನು ಮಾಡಿ ಈ ಪುಂಡರನ್ನು ದಂಡಿಸಲು ಸಾಧ್ಯವಿದೆ?'' ನಿರಾಶಾ ಭಾವದಿಂದ ಮುದುಕನು ಅಂದನು. ತಂದೆಯ ಗಾಯಗಳು ತೀವ್ರಸ್ವರೂಪದವಿದ್ದು ಮುಪ್ಪಿನ ವಯಸ್ಸಿನಲ್ಲಿ ಅವನಿಗೆ ಅದೆಷ್ಟು ವ್ಯಥೆಯಾಗಿರಬಹುದು? ಎಂದು ರಹೀಮನ ಅಂತಃಕರಣ ತಳಮಳಗೊಳ್ಳು

ತ್ತಿತ್ತು. ಈ ಪ್ರಸಂಗದಲ್ಲಿ ಜನರಲ್ಲಿ ವಿವೇಕೋ-ದಯ ಮಾಡಲು ಸಮರ್ಥನಾಗುನಂತೆ ಶಕಿಯನ್ನು ದೇವರು ಕೊಡಬಾರದೇ ? ಎಂದೊಮ್ಮೆ ವಿಚಾರ ಬಂದಾಗ ಮಹಾತ್ಮಾ ಗಾಂಧೀಜಿಯವರ ಪುಣ್ಯ ಮೂರ್ತಿಯು ಕಣ್ಣಮುಂದ ನಿಂತಂತಾಯಿತು. “ ಅವರ ಈ ದರುಶನದ ಸ್ಫೂರ್ತಿಯಿಂದ ನಾನು ಇನ್ನು ಜಾತೀಯ ಐಕ್ಯಕ್ಕಾಗಿ ದುಡಿಯುವೆ ಇಲ್ಲವೆ ಮಡಿಯುವೆ ” ಎಂದು ದೃಢಸಂಕಲ್ಪ ಮಾಡಿದಾಗ ಆಗಲೇ ಬೆಳಗಾಯಿತೆಂದು ಕೋಳಿ ಕೂಗಿ ಎಚ್ಚರಿಕೆ ಕೊಟ್ಟಿತು.

ಒಂದೆರಡು ದಿನಗಳುರುಳುವಷ್ಟರಲ್ಲಿ ಜಮಾಲ ಕಾಜಿ ಪ್ರಕೃತಿ ತೀರ ಕೆಟ್ಟಿತು. ಅವನು ಮಗನಿಗೆ ತಾನು ಕೊಡುವ, ತನಗೆ ಬರುವ ವಿವರಗಳನ್ನು ತಿಳಿಸಿ. ಮಗನಿಗೆ ನಿನ್ನ ಲಗ್ನಮಾಡಿ ಪ್ರಾಣಬಿಡುವ ಇಚ್ಛೆ ಇತ್ತು. ಆದರೆ ಅಲ್ಲಾನು ಈಗಲೇ ಬರಬೇಕೆಂದು ಕರೆ ಕಳಿಸಿದ್ದಾನೆ. ಅವನೇ ನಿನ್ನ ರಕ್ಷಕನು. ನಿನ್ನ ತಾಯಿಯನ್ನು ರಕ್ಷಿಸುವದು ನಿನ್ನ ಕರ್ತವ್ಯವೆಂದು ನಾನು ಹೇಳಬೇಕಾಗಿಲ್ಲ. ಕಾಜಿ ಜಮಾಲನ ಮನೆತನದ ಗೌರವಕ್ಕೆ ಕುಂದುಬಾರದಂತೆ ಇಸ್ಲಾಂಧರ್ಮದ ತತ್ವದಂತೆ ಆಚರಿಸು. ಎಂದು ಹೇಳಿ ಪರಲೋಕದ ಯಾತ್ರೆಗಾಗಿ ಸಿದ್ಧನಾದನು. ರಹೀಮನಿಗೆ ತಾನು ಹಳ್ಳಿಯಲ್ಲಿ ರೈತರ ಬಾಯಿಂದ ಕೇಳಿದ ಶಬ್ದಗಳ ಸ್ಪಷ್ಟೀಕರಣ ಕೇಳುವ ಕುತೂಹಲ ಊರಿಗೆ ಬಂದಾಗಿನಿಂದ ಇದ್ದರೂ ಮನೆಯಲ್ಲಿ ಇಂಥ ಪರಿಸ್ಥಿತಿ ಇರುವಾಗ ಕೇಳುವದು ಸಮಂಜಸವಲ್ಲನೆಂದು ಕೇಳುವ ಧೈರ್ಯ ಮಾಡಿರಲಿಲ್ಲ. ಆದರೆ ತನ್ನ ತಂದೆ ಜೀವಿಸಿರುವ ಕಾಲದಲ್ಲಿ ಕೇಳದಿದ್ದರೆ ಮುಂದೆ ಪಶ್ಚಾ-ತ್ತಾಪ ಪಡುವ ಪ್ರಸಂಗ ಬಂದೀತೆಂದು, ಮೊದಲು ಫಾತಿಮಾನ ಮುಂದೆ ರೈತರು ತನಗೆ ಸಾಕುಮಗನೆಂದ ಸಂಗತಿ ಪ್ರಸ್ತಾಪಿಸಿದ. ಅವಳಿಗೆ ಗಾಬರಿಯಾಗಿ ಮುಖ ವಿವರ್ಣವಾಯಿತು. ಹಳ್ಳಿಯ ಜನರು ಅಂದ ಮಾತನ್ನೇ ನೀನು ನಂಬಿದೆಯಾ ? ತಾಯಿ-ತಂದೆಗಳ ಅಂತಃಕರಣ ನಮ್ಮ ಹೃದಯದಲ್ಲಿ ನಿನ್ನ ಬಗ್ಗೆ ಇದ್ದುದು ನಿನ್ನ ಹೃದಯಕ್ಕೆ ಮನವರಿಕೆಯಾಗಿಲ್ಲವೆ? ನಿನಗೆ ಅಂಥ ಸಂಶಯ ಬಂದದ್ದೇ ವಿಚಿತ್ರವಾದುದು ಎಂದು ವಿಷಯ ಮುಗಿಸಿದಳು. ಈ ಮಾತು ಕಾಜಿಜಮಾಲನ ಮುಂದೆ ತೆಗೆಯಬೇಡ. ಅವರ ಪ್ರಕೃತಿ ಮತ್ತಷ್ಟು ಕೆಟ್ಟೀತು ಎಂದು ಎಚ್ಚರಿಕೆ ಕೊಟ್ಟಳು. ಹಾಗೂ ಹೀಗೂ ದಿನ ಉರುಳಿದವು. ಕಾಜಿಜಮಾಲನು ಒಂದು ರಾತ್ರಿ ಪೈಗಂಬರವಾಸಿಯಾದ.

ಜಮಾಲಕಾಜಿ ಮರಣ ಹೊಂದಿದ ಸುದ್ದಿ ಕೇಳಿ, ಈಗ ರಹೀಮನಿರುವ ಮನೆಯ ಒಡೆಯನು ತಾನೆಂದೂ, ಜಮಾಲ ಕಾಜಿಗೆ ವಿಶ್ವಾಸದಲ್ಲಿ ತನ್ನ ತಂದೆ ಮನೆ ಕೊಟ್ಟದ್ದಾಗಿಯೂ ಈಗ ಬಾಡಿಗೆಯಲ್ಲಿ ಹಣ ಮುಟ್ಟದ್ದರಿಂದ ಮನೆ ಬಿಡಬೇಕೆಂದೂ, ತನ್ನ ಆಪ್ತರು ಮರಾಡದಿಂದ ಗುಳೇಕಿತ್ತಿ ಬಂದಿರುವದರಿಂದ ಮನೆಯವಶ್ಯಕತೆ ಬಹಳವಾಗಿದೆ ಎಂದೂ ಒಬ್ಬ ತರುಣನು ಬಂದು ಹೇಳಹತ್ತಿದನು.

ಫಾತಿಮಾ, ಇದು ಸುಳ್ಳು. ಪೂರ್ಣ ಹಣ ಕೊಟ್ಟು ಖರೀದಿ ಬರೆಸಿಕೊಂಡಿದೆ. ಮನೆ ಬಿಡುವದಿಲ್ಲವೆಂದು ವಾದಿಸಿದಳು. ಕೊನೆಗೆ ಖರೀದಿ ಬರೆದು ಕೊಟ್ಟ ಕಾಗದ ತೋರಿಸಿರಿ. ನಾನು ಹೊರಟೆ ಎಂದು ತರುಣ ಹಟಹಿಡಿದ. ಆಗ ಫಾತಿಮಾ ತಿಜೋರಿಯಲ್ಲಿದ್ದ ಒಂದು ಕಾಗದದ ಗಂಟು ರಹೀಮನ ವಶಕ್ಕೆ ಕೊಟ್ಟು ಈ ಕಾಗದದಲ್ಲಿ ಖರೀದಿ ಪತ್ರ ಹುಡುಕಿ ತೆಗೆ ಎಂದು ಹೇಳಿದಳು.

ಆ ಕಾಗದ ಪತ್ರಗಳು ಜಮಾಲಕಾಜಿಯು ಪ್ರೌಢವಯಸ್ಕನಾಗಿ ಮಾಡಿದ ಎಲ್ಲ ವ್ಯವಹಾರಗಳಿಗೂ ಸಂಬಂಧಿಸಿದ್ದವಾಗಿದ್ದವು. ಅವುಗಳನ್ನು ಹುಡುಕುತ್ತಿರಲು ಖರೀದಿಪತ್ರವು ದೊರಕಿತು. ಅದರ ಹೊಟ್ಟೆಯಲ್ಲಿ ಇನ್ನೊಂದು ಕಾಗದ ಅದೇ ವರ್ಷದಲ್ಲಿ ಆದ ವ್ಯವಹಾರಕ್ಕೆ ಸಂಬಂಧಿಸಿದ್ದು ಇದ್ದಿತು. ಅದನ್ನು ನೋಡಿ ರಹೀಮನಿಗೆ ಕಣ್ಣಲ್ಲಿ ನೀರು ದಳದಳ ಹರಿಯಹತ್ತಿದವು. ಅದೇನು ಆನಂದಬಾಷ್ಪವೋ ದುಃಖಾಶ್ರುವೋ ಹೇಳಲು ಬಾರದು. ಆ ಕಾಗದವನ್ನು ತೆಗೆದು ರಹೀಮ ತನ್ನ ಕಿಸೆಯಲ್ಲಿಟ್ಟುಬಿಟ್ಟ.

* * * *

ಹೊಗೆ ಬಂಡಿಯು ಹೊಗೆ ಕಾರುತ್ತ ಒಂದೇ ಸವನೇ ಓಡುತ್ತಿತ್ತು. ಕಿಡಿಕಿಯಲ್ಲಿ ಮುಖ ಹಾಕಿ ಸುತ್ತಲೂ ನೋಡುತ್ತಿದ್ದ ರಹೀಮನಿಗೆ ತನ್ನ ಕಣ್ಣಿಗೆ ಬೀಳುವ ಗುಡ್ಡ, ನದಿ, ಹಳ್ಳಗಳ ಪರಿ-ವೆಯೇ ಇರಲಿಲ್ಲ. ತನ್ನ ಜನಕ ತಂದೆ ತಾಯಿಗಳನ್ನು ಕಾಣುವ ಆನಂದದಲ್ಲಿ ಅವನು ತನ್ನ ಮುಂದಿನ ಜೀವನದ ನಾನಾತರದ ಸುಖಸ್ವಪ್ನಗಳ ವಿಚಾರದಲ್ಲಿ ದಂಗಾಗಿದ್ದನು. ನಡುವೆ ಗಾಡಿ ನಿಂತಾಗ ಇನ್ನೂ ಎಷ್ಟು ಸ್ಟೇಶನ ದಾಟಬೇಕು ? ಎಂದು ರೇಲ್ವೆ ಗಾಯಿಡ ನೋಡುವನು. ಅವನಿಗೆ ಗಾಡಿ ಆದೆಷ್ಟು ಮಂದವಾಗಿ ಸಾಗುತ್ತಿದೆ ಎಂದು ಒಮ್ಮೊಮ್ಮೆ ಸಿಟ್ಟು ಕೂಡಾ ಬರುವದು. ಆದ-ರೇನು ಅದು ನಿತ್ಯದಂತೆ ನಿಧಾನವಾಗಿ ಸಾಗುವಂತೆ ಸಾಗಿತ್ತು. ಅಂತೂ ಕೊನೆಗೆ ಗದಗ ಸ್ಟೇಶನ್ನು ಮುಟ್ಟಿತು ! ರಹೀಮನು ಉತ್ಸಾಹದಿಂದ ಇಳಿದು ಒಬ್ಬ ಟಾಂಗೆಯವನಿಗೆ ಪದ್ಮನಾಭಾಚಾರ್ಯ ಕಟ್ಟಿ

ಎಂಬವರ ಮನೆಗೆ ಒಯ್ಯಲು ಹೇಳಿದನು. ಈ ಹೆಸರಿನ ಮನೆ ಗೊತ್ತಿಲ್ಲವೆಂದರೆ ಬಂದ ಗಿರಾಕಿ ಕೈಬಿಟ್ಟು ಹೋದೀತೆಂಬ ಭಯದಿಂದ "ಓಹೋ ನಡೆಯಿರಿ ನನಗೆ ಮನೆ ಗೊತ್ತಿದೆ" ಎಂದು ಕೂಡ್ರಿಸಿಕೊಂಡು ಹೊರಟನು. ನಾಲ್ಕೆಂಟು ಮನೆಗಳ ಮುಂದೆ ನಿಂತು ವಿಚಾರಿಸಿ ಅದು ಪದ್ಮನಾಭಾಚಾರ್ಯರ ಮನೆ ಅಲ್ಲವೆಂದು ಗೊತ್ತಾಯಿತು. ಮನೆಯವರು ಟಾಂಗೆಯಲ್ಲಿ ಕುಳಿತ ಫೆಜಕ್ಯಾಪು, ಹೈದರಾಬಾದಿ ಕೋಟು ಧರಿಸಿದ ಇವನು ಯಾವನೋ ಹೈದರಾಬಾದ ಗುಪ್ತಚಾರನಿರಬೇಕು ಎಂದು ಸಂಶಯಬಟ್ಟರು. ಒಬ್ಬರಂತೂ ನೀವು ಎಲ್ಲಿಂದ ಬಂದಿರುವಿರಿ? ಎಂದು ಕೇಳಿ ಹೈದರಾಬಾದದಿಂದ ಎಂಬ ಉತ್ತರ ಬರಲು ತಮ್ಮ ತರ್ಕ ಸತ್ಯವಾಯಿತೆಂದು ಹಿಗ್ಗಿ ನೆರೆಹೊರೆಯವರಿಗೂ ಈ ಸಂಗತಿ ತಿಳಿಸಿದರು. ಅಂತೂ ಅತ್ತಿತ್ತ ಅಲೆದು ಕೊನೆಗೆ ಒಬ್ಬರು ಪದ್ಮನಾಭಾಚಾರ್ಯರ ಮನೆ ಇಂಥ ಬೀದಿಯಲ್ಲಿ ಇಂಥ ಸಂದಿಯಲ್ಲಿ ಇರುವದು ಎಂದು ಗುರ್ತು ಹೇಳಿದರು. ಅಲ್ಲಿ ಟಾಂಗೆ ಬಂದು ನಿಂತಿತು.

ಆಗ ಮೂರು ತಾಸು ರಾತ್ರಿಯ ಸಮಯ. ಮನೆಯಲ್ಲಿ ಮಂದವಾಗಿ ಚಿಮಣಿಯ ಮುಂದೆ ಒಬ್ಬ ಮುದುಕಿ ಗುಣಗುಣ ಹಾಡುತ್ತ ಕುಳಿತಿದ್ದಳು. ಅಪರಿಚಿತ ಮುಸಲ್ಮಾನರ ಉಡುಪಿನ ತರುಣನು ಮನೆಯ ಒಳಗೆ ಬಂದು ಪದ್ಮನಾಭಾಚಾರ್ಯ ಕಟ್ಟಿಯವರ ಮನೆ ಇದೇಯೇ ಎಂದು ಕೇಳಲು ಅವಳಿಗೆ ತೀರ ಗಾಬರಿಯಾಯಿತು.

"ಹೌದು; ಅವರು ಮನೆಯಲ್ಲಿಲ್ಲ." ಎಂದವಳೇ ಅವಳು ಮುಖತಿರುಗಿಸಿ ಒಳಗೆ ಹೊರಟಳು.

ಬಂದ ತರುಣನು ಇದೇ ಮುದುಕಿಯನ್ನೇ ತಾನು ಕೆಲತಿಂಗಳ ಹಿಂದೆ ಬದುಕಿಸಿದ್ದು. ಬಹಳ ಮಾಡಿ ಇವಳೇ ತನ್ನತಾಯಿ ಎಂದು ಹಿರಿಹಿರಿ ಹಿಗ್ಗಿ "ಅಮ್ಮಾ ಅವರು ಮನೆಗೆಬರುವದು ಯಾವಾಗ?" ಎಂದು ಕೇಳಿದನು. "ಈಗ ಬಂದಾರು. ನೀವು ಯಾವ ಊರಿನವರು?" ಎಂದು ಮುದುಕಿಯು ಕೇಳಿದಳು.

"ನಾನು ಹೈದರಾಬಾದದಿಂದ ಬಂದಿರುವೆ. ಅವರನ್ನು ಕಾಣಬೇಕಾಗಿದೆ. ನೀವು ಅವರಿಗೆ ಏನಾಗಬೇಕು."

"ಅದನ್ನೆಲ್ಲಾ ತಗೊಂಡು ನಿಮಗೇನು ಮಾಡಬೇಕಾಗಿದೆ."

"ಅವರನ್ನು ಕಾಣಬೇಕಿತ್ತು. ಅವರಿಗೆ ಒಂದು ಆನಂದದ ಸುದ್ದಿ ತಿಳಿಸಲು ಬಂದಿದ್ದೆ."

"ಆನಂದದ ಸುದ್ದಿ? ನಮ್ಮ ಮನೆಯವರಿಗೆ ನೀವು ತಿಳಿಸುವವರಿದ್ದೀರಾ? ನನಗೆ ಹೇಳಿರಿ ಬೇಕಾದರೆ, ನಾನು ಅವರಿಗೆ ತಿಳಿಸುವೆ."

"ಸುಮಾರು ೨೫ ವರ್ಷಗಳ ಹಿಂದೆ ನಿಮ್ಮ ಗಂಡುಮಗ ಒಂದು ಕಣ್ಮರೆಯಾಗಿತ್ತೇ?

ಗಂಡುಮಗ ಕಣ್ಮರೆಯಾದ ಸಂಗತಿ ನೆನಪಿಗೆ ತರಲು ಮುದುಕಿಯ ಕಣ್ಣಲ್ಲಿ ನೀರುಧಾರೆಯಾಗಿ ಹರಿದು ಬಂದಿತು. "ಅಪ್ಪಾ. ಇನ್ನೆಲ್ಲಿ ನಮ್ಮ ಮಗಾ. ದುರ್ದೈವಿಗಳು. ನಾವು ದೇವರು ಕೊಟ್ಟದ್ದು ಇಟ್ಟುಕೊಳ್ಳಲು ಬರಲಿಲ್ಲ. ಆ ಮಗ ನಿದ್ದರೆ ಇಂದು ಈ ದಾರಿದ್ರ್ಯ ನಮಗ್ಯಾಕೆ ಬರುತ್ತಿತ್ತು. ಆ ಮಗನ ವರ್ತಮಾನ ಏನಾದರೂ ತಂದಿರುವಿರಾ.

"ವರ್ತಮಾನವೇನು? ಆ ಮಗನು ಜೀವದಿಂದ ಇರುವನು.

ಮುದುಕಿ— ಆ ನನ್ನ ಮಗನು ಜೀವದಿಂದ ಇರುವನೊ?

ರಹೀಮ— ಹೌದು ತಾಯಿ, ಅವನು ಜೀವದಿಂದ ಇರುವನು.

ಮುದುಕಿ— ಎಲ್ಲಿ ಇರುವನು?

ರಹೀಮ— ಅವನೆಲ್ಲಿಯೇ ಇರಲೊಲ್ಲನೇಕೆ? ನೀವು ನಿಮ್ಮ ಮಗನ ಗುರ್ತು ಹಿಡಿಯಬಲ್ಲಿರಾ?

ಮುದುಕಿ— ನನ್ನ ಮಗನ ಗುರ್ತು ನನಗೆ ಹತ್ತಲಾರದೇ? ಅವನು ಬೆಳೆದು ಬೇಕಾದಷ್ಟು ದೊಡ್ಡವನಾಗಿರಬಹುದು. ಆದರೂ ನಾನು ಆಡಿಸಿ ಬೆಳೆಸಿದ ನನ್ನ ಕೂಸಿನ ಗುರ್ತು ನನಗೆ ಹತ್ತದೆ ಇರುವದೇ?

ರಹೀಮ— ಈಗ ಅವನು ಕೂಸಾಗಿಲ್ಲ. ದೊಡ್ಡವನಾಗಿದ್ದಾನೆ. ನನ್ನಷ್ಟು ದೊಡ್ಡವನಾಗಿದ್ದಾನೆ.

ಮುದುಕಿ— ಸಂತೋಷ. ನಿನ್ನ ಬಾಯಿಯಲ್ಲಿ ಸಕ್ಕರೆ ಬೀಳಲಿ. ಅವನನ್ನು ಕರೆತಂದು ನನಗೆ ಭೆಟ್ಟಿಮಾಡಿಸಬಾರದೇ:

ರಹೀಮ— ಅವನು ಬರಬಹುದು. ಆದರೆ ನೀವು ಅವನ ಗುರ್ತು ಹಿಡಿಯುವದು ಹೇಗೆ? ನಿಮ್ಮ ಮಗನಲ್ಲಿ ಅಂಥ ವಿಶೇಷ ಲಕ್ಷಣಗಳೇನಾದರೂ ಇದ್ದವೇ?

ಮುದುಕಿ— ನನ್ನ ಮಗನ ಗುರ್ತು ನನಗೆ ಹತ್ತದಿರುವದೇ? ಅವನ ಎಡಗೈಗೆ ಆರು ಬೆರಳುಗಳಿದ್ದವು. ಅದೊಂದು ಅವನ ವಿಶೇಷ ಲಕ್ಷಣ.

ರಹೀಮ— ಹಾಗಾದರೆ ಇಲ್ಲಿ ನೋಡಿರಿ. ಈ ಕೈಗೆ ಆರು ಬೆರಳುಗಳಿವೆ. ನಾನೇ ನಿಮ್ಮ ಮಗನೆಂದರೆ ನೀವು ಒಪ್ಪುವಿರಾ?

ಮುದುಕಿಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದೆ ಒಂದೇಸವನೇ ಅಳತ್ತೊಡಗಳು. ಅವಳು ಅಳುವದು ಆನಂದದಿಂದಲೋ ಅಥವಾ ಇವನು ತನಗೆ ಚೇಷ್ಟೆಮಾಡಿದನೆಂಬ ಭಾವನೆಯಿಂದಲೋ ಇದು ರಹೀಮನಿಗೆ ತಿಳಿಯಲಿಲ್ಲ. ತಾನೇ ಅವಳ ಮಗನೆಂದು ಹೇಳಿದಾಗ ಅವಳು ಸಂತೋಷದಿಂದ ಹಿಗ್ಗಿ ಕುಣಿದಾಡಬಹುದೆಂದು ಭಾವಿಸಿದ್ದ ರಹೀಮನಿಗೆ ಇದರಿಂದ ದೊಡ್ಡ ಆಘಾತವಾದಂತಾಗಿ ದಿಕ್ಕುಗಾಣದೆ ಅಲ್ಲಿಯೇ ಕುಳಿತುಬಿಟ್ಟನು. ಮುದುಕಿಯು ತನ್ನ ಮಗನ ರೂಪ, ಗುಣ, ಆಟ, ಎಲ್ಲವನ್ನೂ ನೆನಸಿ ಅಳಹತ್ತಿದಳು. ಅಷ್ಟರಲ್ಲಿ ನೆರೆಮನೆಯ ಮುದುಕಿಯೂ ಬಂದು ಅವಳಿಗೆ ಸಾಂತ್ವನಪರ ಮಾತು ಹೇಳಲು ಪ್ರಯತ್ನಿಸಿದಳು.

ಅಷ್ಟರಲ್ಲಿ ಪದ್ಮನಾಭಾಚಾರ್ಯರು ಬರಿ ಮೈ ಬೊಕ್ಕತಲೆಯಿಂದ ಬಾಗಿಲಲ್ಲಿ ಬಂದರು. ಅವರಿಗೆ

ಹೆಂಡತಿ ಮಗನನ್ನು ನೆನಿಸಿ ಅಳುವದನ್ನು ಅವರು ಅಲ್ಲಿಂದಲೇ ಕೇಳಿ " ಹುಚ್ಚು ಹಿಡಿಯುವದೊಂದು ನಿನಗೆ ಕಡಿಮೆ ಆಗಿದೆ. ದಣಿದು ಮನೆಗೆ ಬಂದಾಗೊಮ್ಮೆ ನಿನ್ನ ಅಳುವ ಸ್ವರ ಕೇಳುವ ದೌರ್ಭಾಗ್ಯ ನನ್ನದು " ಎನ್ನುತ್ತಲೇ ಒಳಗೆ ಪ್ರವೇಶಿಸಿದರು.

ಮುದುಕಿ ಮೂಲೆಯಲ್ಲಿ ಅಳುತ್ತಿರುವಾಗಲೇ ಕೈ ಮಾಡಿ " ಇವರು ನಮ್ಮ ಮಗಾ ಅಂತ ಹೇಳತಾರ ನೋಡಿರಿ " ಎಂದು ರಹೀಮನತ್ತ ತೋರಿಸಿದಳು.

ಪದ್ಮನಾಭಾಚಾರ್ಯರಿಗೆ ಆ ವ್ಯಕ್ತಿಯನ್ನು ನೋಡಿ ಮೈ ಜುಮ್ಮೆಂದಿತು. ರಜಾಕಾರ ಪಡೆಯ ಹಿರಿಯ. ತನ್ನನ್ನು ರಜಾಕಾರರು ಕೊಲ್ಲುವಾಗ ಪ್ರಾಣ ಉಳಿಸಿದವ ಎಂದು ಅವನ ಗುರ್ತ ಹಿಡಿದು " ನೀವು ಹಿಂದೆ ಗಾಡಿ ಹೊಡೆಯುವಾಗ ನಮ್ಮ ಪ್ರಾಣ ಉಳಿಸಲು ನೆರವಾದವರಲ್ಲವೇ ? " ಎಂದು ಕೇಳಿದರು.

" ಹೌದು. ಅಂದು ನಾನು ನಿಮ್ಮನ್ನು ಗುರುತಿಸಲಿಲ್ಲ. ಆದರೆ ಇಂದು ನೀವು ನನ್ನನ್ನು ಗುರುತಿಸಿದಿರಿ. ನಾನು ರಜಾಕಾರ ಪಡೆಯ ಅಧಿಕಾರಿ ಇಷ್ಟೇ ಅಲ್ಲ, ನಿಮ್ಮ ಮಗನು.,

ಆಚಾರ್ಯರು— ನಿನ್ನ ಹೆಸರೇನು ? ಎಂದು ಆತನನ್ನು ತೀಕ್ಷ್ಣ ದೃಷ್ಟಿಯಿಂದ ನೋಡತೊಡಗಿದರು.

ರಹೀಮ— ನನ್ನ ಹೆಸರು ರಹೀಮ. ನಾನು ನಿಮ್ಮ ಮಗ- ೨೫ ವರ್ಷದ ಹಿಂದೆ ನಾನು ಇನ್ನು ಚಿಕ್ಕ ಬಾಲಕನಿದ್ದಾಗ ನನ್ನನ್ನು ಒಬ್ಬ ಸಾಧು ಎತ್ತಿ ಒಯ್ದು ಹೈದರಾಬಾದದಲ್ಲಿ ಜಮಾಲಕಾಜಿಗೆ ಮಾರಿದ್ದ. ನಾನು ನಿಮ್ಮ ಮಗನೆಂದು ಈಗ ತಿಳಿದು ಬಂದಿದೆ. ಅದಕ್ಕಾಗಿ ಇಲ್ಲಿಗೆ ಬಂದಿರುವೆ.

ಆಚಾರ್ಯ—ನೀನೇನೋ ನಮ್ಮ ಮಗನೆಂದು ಹೇಳುವಿ. ಆದರೆ ನನಗೆ ನಂಬುಗೆ ಹುಟ್ಟದಾಗಿದೆ ನಾನು ಸ್ವಪ್ನದಲ್ಲಿರುವೆನೋ ಜಾಗೃತಾವಸ್ಥೆಯಲ್ಲಿರುವೆನೋ ಇದೇ ತಿಳಿಯದಂತಾಗಿದೆ. ನೀನು ನನ್ನ ಮಗನೆಂದು ಕಂಡುಹಿಡಿಯುವದು ಹೇಗೆ ?

ರಹೀಮ-ಇಲ್ಲಿ ನೋಡಿರಿ. ಈಕಾಗದ. ಇದರಲ್ಲಿ ನನ್ನ ಸಾಕು ತಂದೆಗೆ ಮರುಳಾರಾಧ್ಯಸ್ವಾಮಿಯು ನನ್ನನ್ನು ಮಾರಿದ ಬಗ್ಗೆ ನನ್ನ ಬೆಲೆ ೫೦೦ ರೂ. ಮುಟ್ಟಿದ ಪಾವತಿ ಕೊಟ್ಟಿದ್ದಾನೆ. ಈ ಪಾವತಿ ಮೊನ್ನೆ ನನ್ನ ದೃಷ್ಟಿಗೆ ಬಿತ್ತು. ಇದರಲ್ಲಿ ನಿಮ್ಮ ಹೆಸರು ಊರು ಎಲ್ಲವನ್ನು ಕಾಣಿಸಿರುವದರಿಂದ ನಾನು ಇಲ್ಲಿಗೆ ಬಂದೆ.'

ಆಚಾರ್ಯರ ಕಣ್ಣಲ್ಲಿ ನೀರು ತುಂಬಿ ಬಂದು ಮಗನನ್ನು ಅಪ್ಪಿಕೊಂಡರು. ಮುದುಕಿಯೂ ಇವನೇ ತನ್ನ ಮಗನೆಂದು ಹರ್ಷದಿಂದ ಅವನನ್ನು ಮುದ್ದಾಡಿದಳು. ಬೆಳಗಾಗುವದರೊಳಗಾಗಿ ಊರಲ್ಲೆಲ್ಲ ಪದ್ಮನಾಭಾಚಾರ್ಯರ ಮಗ ಬಂದಿರುವನೆಂಬ ಸುದ್ದಿ ಹತ್ತಿತು. ಎಲ್ಲಿಯ ಮಗ. ಅನನು ಹೈದರಾಬಾದ ಗುಪ್ತಚಾರನು. ಇಲ್ಲಿ ಇರಲು ಅನುಕೂಲವಾಗಲೆಂದು ಏನೋ ಸೋಗುಹಾಕಿ ಬಂದಿರುವನು. ಪಾವತಿ ಏನು ? ಬರಕೊಂಡು ಬರಲಿಕ್ಕೆ ಅಗುವದಿಲ್ಲವೇ ? ಮ್ಲೇಂಛನನ್ನು ಮನೆಯಲ್ಲಿಟ್ಟುಕೊಂಡು ಇಂಥ ಶಿಷ್ಟ ಆಚಾರ್ಯರು ನರಕಕ್ಕೆ ನಿಶ್ಚಿತ ಹೋಗುವರು. ಪೋಲೀಸರಿಗೆ ಈ ಸಮಾಚಾರ ತಿಳಿದರೆ ಅವರಿಗೆ ತೊಂದರೆ ನಿಶ್ಚಿತ' ಎಂದು ಕಟ್ಟೆಗೆ ಕುಳಿತು ಹರಟೇ ಕೊಚ್ಚುವ ಸುಖವಸ್ತುಗಳು ಆಡಿಕೊಳ್ಳಹತ್ತಿದರು. ಕೆಲವರು ಪದ್ಮನಾಭಾಚಾರ್ಯರ ಮುಂದೆ ಸಹ ಈ ಅಭಿಪ್ರಾಯ ಹೇಳದೆ ಬಿಡಲಿಲ್ಲ. ಮಗನೆಂದು ನಂಬಿದ ಪದ್ಮನಾಭಾಚಾರ್ಯರಿಗೆ ಈ ಮಾತು ಕೇಳಿ ತಾವು ಪ್ರಮಾದವಶರಾಗಿರಬಹುದೇ ಎಂದು ಸಂಶಯಮನಸ್ಕರಾದರು. ಆದರೆ ಮುದುಕಿಗೆ ಖಂಡಿತ ಇವನು ನನ್ನ ಮಗ. ಕೈಯಲ್ಲಿಯ ಆರು ಬೆರಳು, ಆ ಹಸ್ತರೇಖೆ, ಎಲ್ಲವೂ ತನ್ನ ' ರಾಮೂ 'ನಲ್ಲಿದ್ದಂತೆಯೇ ಇವೆ. ಇವನು ರಹೀಮನಲ್ಲ ರಾಮನೇ ಸೈ ಎಂದು ವಾದಿಸಿ ಗಂಡನ ಸಂಶಯ ನಿರಸನ ಮಾಡಿದಳು.

ಆದರೆ ಮಗನು ಮುಸಲ್ಮಾನನಾಗಿದ್ದಾನೆ. ಮೊದಲು ರಾಮನಿದ್ದವನು ರಹೀಮನಾಗಿದ್ದಾನೆ. ಅವನಿಗೆ ಉಪನಯನಾದಿ ಸಂಸ್ಕಾರಗಳಿಲ್ಲ. ಸುಂತಿ ಮಾಡಿಸಿದ್ದಾರೆ. ಇಂಥವನು ಈಗ ಜಾತಿಬಾಹಿರನು. ಇವನನ್ನು ಮನೆಯಲ್ಲಿ ಇಟ್ಟುಕೊಂಡರೆ ಸಮಾಜ ಸುಮ್ಮನಿರಲಾರದು. ಎಂಥ ಧರ್ಮ ಸಂಕಟ. ಮನೆಗೆ ಮರಳಿಬಂದ ಮಗನೊಡನೆ ಇರಬೇಕಾದರೆ ಧರ್ಮವನ್ನು ತ್ಯಜಿಸಬೇಕಾಗುವದು. ಅದು ಅಶಕ್ಯವಾದುದು. ಮಗನನ್ನು ಹೊರದೂಡುವದೂ ಅಶಕ್ಯ. ಹೀಗಾಗಿ ವೃದ್ಧ ದಂಪತಿಗಳಿಗೆ ಬಿಡಲಾರದ ಸಮಸ್ಯೆ ಮುಂದೆ ಬಂದು ನಿಂತಿತು.

ರಹೀಮನಿಗೆ ಈಗ ತನ್ನ ತಾಯಿ ತಂದೆಗಳು 'ರಾಮಾ' ಎಂದು ಪ್ರೀತಿಯಿಂದ ಕರೆಯುತ್ತಿದ್ದರೂ ಅವನ ಊಟ ಪಡಸಾಲೆಯಲ್ಲಿ. ಅವನ ಎಂಜಲ ಅವನೇ ಬಳಿದುಕೊಳ್ಳಬೇಕು. ಮನೆಯಲ್ಲಿ ಪ್ರವೇಶವಿಲ್ಲ. ಸ್ನಾನಕ್ಕೆ ನೀರು ತೋಡಿ ಕೊಟ್ಟರೂ ಅವನು ಮುಟ್ಟಿದ ನೀರು ಅವರು ಮುಟ್ಟರು. ಹೀಗೆ ಅವನನ್ನು ಅಸ್ಪೃಶ್ಯನಂತೆಯೇ ತಾಯಿ-ತಂದೆಗಳು ಕಾಣುತ್ತಿರುವದು ರಹೀಮನಿಗೆ ಬಂದ ಮೂರನೇ ದಿನವೇ ಅನುಭವಕ್ಕೆ ಬಂದಿತು.

ಇಂಥ ಪರಿಸ್ಥಿತಿಯಲ್ಲಿ ತಾನು ಇರುವದು ತನ್ನ ತಾಯಿ-ತಂದೆಗಳಿಗೆ ದೊಡ್ಡ ತೊಂದರೆ ಎಂದು ಬಗೆದು ಅವನು ಮರಳಿ ಹೋಗುವ ಪ್ರಸ್ತಾಪವನ್ನೆತ್ತಿದನು.

" ಮಗೂ ನೀನು ಹೀಗೆ ನಮ್ಮನ್ನು ಮುಪ್ಪಿನ ಕಾಲದಲ್ಲಿ ಕೈಬಿಟ್ಟು ಹೋಗಲು ಮನಸ್ಸಾದರೂ ಒಪ್ಪುವದೇ ? "

"ಮನಸ್ಸು ಒಪ್ಪದಿದ್ದರೂ ನಾನು ಹೋಗಬೇಕಾಗಿದೆ. ಅಲ್ಲಿ ನನ್ನ ಜಹಗೀರಿಯ ವ್ಯವಸ್ಥೆ ನೋಡಬೇಕು. ಸಾಕು ತಂದೆ ತೀರಿಕೊಂಡ ನಂತರ ಅಲ್ಲಿ ಮತ್ತೆ ಯಾವ ಗಲಭೆ ಎದ್ದಿದೆಯೋ ಯಾರು ಬಲ್ಲರು? ಫಾತಿಮಾ ನನ್ನನ್ನಗಲಿ ಚಡಪಡಿಸುತ್ತಿರಬಹುದು. ನಾನು ಹೋಗಿ ಬಂದು ಇರುವೆ. ನಿಮಗೆ ಈಗ ಇದ್ದ ಸಾಲವನ್ನು ಹರಿದು ಖರ್ಚಿಗೆ ಪ್ರತಿತಿಂಗಳು ಹಣ ಕಳಿಸುತ್ತ ಹೋಗುವೆ. ನೀವು ಆನಂದದಿಂದ ಇರಬೇಕು. ಅವಶ್ಯಬಿದ್ದಾಗ ನಾನು ಬಂದೇ ಬರುವೆ ". " ನಿನ್ನನ್ನು ಬಿಟ್ಟು ನಾವು ಸುಖದಿಂದ ಇರುವದು ಸಾಧ್ಯವೇ ರಾಮು. ನೀನು ನಮ್ಮನ್ನು ಸಂಗಡ ಕರೆದುಕೊಂಡು ಹೋಗು. "

" ಅಲ್ಲಿ ನಾನು ಮುಸಲ್ಮಾನನು. ಮನೆಯಲ್ಲಿ ಮಾಂಸಾದಿ ಭಕ್ಷಣ ನಡೆಯುವದು ನೀವು ಬೇರೆ ಮನೆಮಾಡಿಕೊಂಡು ಇರಬೇಕಾಗುವದು. ಅಲ್ಲಿ ಹಿಂದೂಜನರ ಮೇಲೆ ಯಾವಾಗ ಆಘಾತಬಿದ್ದೀತೆಂಬ ನಿಯಮವಿಲ್ಲ. ನಾನು ನಿಮ್ಮ ಮಗನೆಂದು ಅಲ್ಲಿ ಗೊತ್ತಾದರೆ ನನ್ನದೂ ನಿಮ್ಮದೂ ಕೂಡಿಯೇ ಅವಸ್ಥೆ ಮುಗಿಯುವದು. ಸದ್ಯದ ಪರಿಸ್ಥಿತಿಯಲ್ಲಿ ನೀವು ಇಲ್ಲಿಯೇ ಇರಬೇಕು ನನಗೆ ಹೋಗಲು ಆಶೀರ್ವಾದ ನೀಡಬೇಕು " ಎಂದು ಹೇಳಿ ಪದ್ಮನಾಭಾಚಾರ್ಯರ ಸಾಲ ಒಂದು ಸಾವಿರ ಚಿಲ್ಲರೆ ಇದ್ದದ್ದನ್ನು ಹರಿದು ರಹೀಮನು ಊರಿಗೆ ಹೊರಟ.

ಅವನನ್ನಗಲಿದ ತಾಯಿ ತಂದೆಗಳಿಗೆ "ಇದೇನು ನಾವು ಒಂದು ವಾರ ಕನಸಿಲ್ಲಿದ್ದೆವೇ" ಎಂದು ಅನಿಸಹತ್ತಿತು.

ರಹೀಮನು ಗಾಡಿಯಲ್ಲಿ ಕುಳಿತಾಗ ಅವನಿಗೆ ದೊಡ್ಡ ನಿರಾಶೆಯಾದಂತೆ ಅವನ ಮುಖದಲ್ಲಿಯ ನಿರುತ್ಸಾಹಭಾವದಿಂದ ಕಂಡು ಬರುತ್ತಿತ್ತು. ತಾಯಿ-ತಂದೆಗಳನ್ನು ಕಂಡೆ; ಮಗನೆಂದು ಅವರು ನಂಬಿದರು. ಮಗನೊಡನೆ ತಾಯಿ ತಂದೆಗಳು ಇರಲು ಬಾರದಂತಹ ಧರ್ಮಬಂಧನ. ಎಷ್ಟು ವಿಚಿತ್ರವಾದ ಸಮಸ್ಯೆ ಇದು. ನಾನು ಅವರ ಮಗನಾದರೂ ಧರ್ಮದಿಂದ ಪರಕೀಯನಾದುದರಿಂದ ಅವರಿಗೆ ಹೊರತಾಗಬೇಕೆ? ನಾನೇನು ಸ್ವೇಚ್ಛೆಯಿಂದ ಬೇರೆ ಧರ್ಮ ಸ್ವೀಕರಿಸಿರುವೆನೇ? ಸಾಕು ತಂದೆಯ ಧರ್ಮವೇ ನನ್ನ ಧರ್ಮವಾಯಿತು. ಧರ್ಮ ಬದಲಾದ ಮಾತ್ರಕ್ಕೆ ನನಗೆ ಇಂಥ ದೊಡ್ಡ ಆಪತ್ತಿ ಬರಬೇಕೆ? ಏನಿದು ಧರ್ಮ ! ಮಾನವನ ಧರ್ಮ ಒಂದೇ. ಆದರೆ ಹಲವು ಧರ್ಮಗಳ ಸೋಗು ಧರಿಸಿ ಧರ್ಮದ ಹೆಸರಿನಲ್ಲಿ ಕೋಟ್ಯಂತರ ಜನರ ಪ್ರಾಣಹರಣ ನಡೆದಿದೆ. ಇದಾವ ಯುಗದ ಧರ್ಮ. ಇಂಥ ಕ್ರೂರ ನೀತಿಯನ್ನು ಪ್ರತಿಪಾದಿಸುವದು ಎಂದಿಗೂ ಧರ್ಮವಾಗಿರದು. ಇಂಥ ಧಾರ್ಮಿಕ ಮೂಢ ಭಾವನೆಗೆ ನನ್ನಂತೆ ಅದೆಷ್ಟು ಕೋಟ್ಯಂತರ ಜನರು ಬಲಿಯಾಗಿರುವರೋ ನಾಕಾಣೆ ಧರ್ಮದ ಹೆಸರಿನಲ್ಲಿ ನಡೆಯುವ ಅನ್ಯಾಯಗಳನ್ನು ಪ್ರತಿಬಂಧಿಸಲು ಯಾರ ಮೊರೆ ಹೋಗಬೇಕು? ಸಮಾಜದಲ್ಲಿ ಧರ್ಮವೆಂಬುದು ಮೊದಲು ಸಮಾಜ ವ್ಯವಸ್ಥೆ ಸುಸೂತ್ರವಾಗಿ ಸಾಗುವ ಉದ್ದೇಶದಿಂದ ಪ್ರಸ್ಥಾಪಿಸಲ್ಪಟ್ಟದ್ದೋ ಅಥವಾ ದೇವನಿಂದ ಬಂದದ್ದೋ? ದೇವರು ಭೂಮಿಯಲ್ಲಿ ಮೊದಲು ಮಾನವ ಪ್ರಾಣಿ ಹುಟ್ಟಿಸಿದಾಗ ಎಲ್ಲರ ಧರ್ಮ ಒಂದೇ ಆಗಿರಬಹುದು. ಕ್ರಿಸ್ತ, ಮಹಮ್ಮದ, ಬುದ್ಧ, ಎಲ್ಲರೂ ಇತ್ತೀಚೆಗೆ ಹುಟ್ಟಿ ಬಂದು ಧರ್ಮ ಬೋಧ ಮಾಡಿದರು. ಅಂದ ಬಳಿಕ ಮನುಷ್ಯ—ನಿರ್ಮಿತ ಧರ್ಮವೆಂಬ ಬಂಧನವನ್ನೇ ಹರಿಯಬಾರದು ? ಮಾನವ ಧರ್ಮವೆಂಬ ಹೊಸಧರ್ಮವೇ ಜಗತ್ತಿನ ಎಲ್ಲ ಜನರಿಗೂ ಅನ್ವಯಿಸುವಂತಾಗ

ಬಾರದೇಕೆ ? ಹೀಗೆ ನಾನಾ ರೀತಿಯಲ್ಲಿ ವಿಚಾರಿಸುತ್ತ ಮಲಗಿದ. ಬಳ್ಳಾರಿಯಲ್ಲಿ ಒಬ್ಬ ಪೋಲಿಸ ಶಿಪಾಯಿ ಬಂದು ಎಬ್ಬಿಸಿದಾಗ ಅವನಿಗೆ ಎಚ್ಚರ.

ರಹೀಮನನ್ನು ರಜಾಕಾರ ಗುಪ್ತಚಾರನೆಂಬ ಸಂಶಯದಿಂದ ಹಿಡಿಯಲು ಗದುಗಿನ ಗುಪ್ತ ಪೋಲೀಸರ ಸೂಚನೆ ಬಂದಿತ್ತು. ಅವನು ರಹೀಮನನ್ನು ಎಬ್ಬಿಸಿ ಕೆಳಗೆ ಕರೆದೊಯ್ದು ಹೈದರಾಬಾದದವ, ರಹೀಮ, ಮುಸಲ್ಮಾನ, ಗದುಗಿಗೆ ಹೋದವ, ಪದ್ಮನಾಭಾಚಾರ್ಯರಿಗೆ ಸಾವಿರ ರೂಪಾಯಿ ಕೊಟ್ಟು ಗುಪ್ತಚಾರ ಕೆಲಸಕ್ಕೆ ನೇಮಿಸಿ ಬಂದವ, ಈ ಬಗ್ಗೆ ಮಾಹಿತಿ ಕೇಳಲು ರಹೀಮನು ಎಲ್ಲವನ್ನು ಒಪ್ಪಿಕೊಂಡ. ಆದರೆ ತಾನು ಗುಪ್ತಚಾರನಲ್ಲವೆಂದೂ ಪದ್ಮನಾಭಾಚಾರ್ಯರ ಮಗನೆಂದೂ ಅವರ ಸಾಲ ತೀರಿಸಲು ಒಂದು ಸಾವಿರ ರೂ. ಕೊಟ್ಟಿದ್ದು ನಿಜವೆಂದೂ ಹೇಳಿದ.

ಬ್ರಾಹ್ಮಣನ ಹೊಟ್ಟೆಯಿಂದ ರಹೀಮ!'' ಭಲೆ ನಿನ್ನ ಬುದ್ಧಿವಂತಿಕೆಗೆ ಬೆಲೆ ಇಲ್ಲ. ನಡೆ ಕತ್ತಲೆ ಮನೆಗೆ' ಎಂದು ರಹೀಮನನ್ನು ಬಂಧಿಸಿ ಸೆರೆಮನೆಗೆ ಅಟ್ಟಲಾಯಿತು.

ರಹಿಮನಿಂದ ಬಹುದಿನಗಳವರೆಗೆ ಪತ್ರ ಬಾರದ್ದರಿಂದ ಪದ್ಮನಾಭಾಚಾರ್ಯರಿಗೆ ಚಿಂತೆಯುಂಟಾಯಿತು. ಧರ್ಮಬಂಧನದಿಂದಾಗಿ ಅವನನ್ನು ಮನೆಯೊಳಗೆ ಪೂರ್ಣ ಸೇರಿಸಿಕೊಳ್ಳಲಾಗದಿದ್ದರೂ ಅವನನ್ನು ಬಿಟ್ಟಿರುವದು ಅಸಾಧ್ಯವಾಯಿತು. ಅಂತೆಯೇ ಅವನನ್ನು ಕರೆತರಲು ಹೊರಟರು.

ಆಚಾರ್ಯರು ಹೈದರಾಬಾದಕ್ಕೆ ಹೋಗಿ ಅಲ್ಲಿ ಜಮಾಲಕಾಜಿ ಮನೆಯಲ್ಲಿ ತಮ್ಮ ಮಗನ ಬಗ್ಗೆ ವಿಚಾರಿಸಲು ಘಾತಿಮಾಳಿಗೆ ವಜ್ರಾಘಾತವಾದಂತಾಯಿತು. ಗಂಡನ ಮರಣ; ಮಗನು ತಿಂಗಳಿಂದ ಪತ್ತೆ ಇಲ್ಲ. ಹೀಗಾಗಿ ಮುದುಕಿ ಕಣ್ಣೀರು ಹರಿಸುತ್ತ ಕುಳಿತಿದ್ದಳು. ಪದ್ಮನಾಭಾಚಾರ್ಯರಿಂದ ಅವನು ತನ್ನ ನಿಜ ತಾಯಿತಂದೆಗಳ ಕಡೆಗೆ ಹೋದ ಸಂಗತಿ ತಿಳಿದುದೂ ಅವನು ಮರಳಿ ಬಾರದಿರುವದೂ ಘಾತಿಮಾಳ ದುಃಖಕ್ಕೆ ಪುಟಕೊಟ್ಟವು. "ನಿಮ್ಮ ಮಗನಾದರೂ ನನ್ನ ಪ್ರಾಣದಂತಿದ್ದಾನೆ. ಅವನನ್ನು ಕಳಿಸಿ ಕೊಡಬಾರದೇ ?'' ಎಂದು ಘಾತಿಮಾ ಅಂಗಲಾಚಿ ಬೇಡಿಕೊಂಡಳು. ಆಚಾರ್ಯರು ಅವನು ಊರ ಬಿಟ್ಟು ನಿಮ್ಮ ಕಡೆಗೆ ಹೊರಟವನು ಪುನಃ ಅವನ ಸುದ್ದಿಯೆ ಇಲ್ಲ. ಎಂದರು.

ಅಂತೂ ರಹೀಮನು ಅದೃಶ್ಯನಾದುದು ಇಬ್ಬರಿಗೂ ವಿಚಿತ್ರವಾಗಿ ತೋರಿತು. ಆಚಾರ್ಯರು ದುಃಖದಿಂದ ಮರಳಿ ಹೊರಟರು.

ಜಮಾಲಕಾಜಿ, ಅವನ ಮಗ ಪೂರಾ ಹಿಂದೂ ಜನರ ವಶವಾಗಿದ್ದು ರಜಾಕಾರರ ವಿರುದ್ಧ ಒಳಸಂಚು ನಡೆಸಿದ್ದಾರೆ ಎಂಬ ಸಂಶಯವಿದ್ದ ಮುಸಲ್ಮಾನರಿಗೆ ಈಗ ಆಚಾರ್ಯರು ಘಾತಿಮಾಳನ್ನು ಕಂಡು ಹೊರಟದ್ದರಿಂದ ಪೂರ್ಣ ಖಾತ್ರಿಯಾಯಿತು. ಅವರು ಈ ಕಾಫರನನ್ನು ಜೀವದಿಂದ ಬಿಡಬಾರದೆಂದು ನಿರ್ಧರಿಸಿದರೂ ಘಾತಿಮಾಳು ಆಚಾರ್ಯರನ್ನು ಜಾಗರೂಕತೆಯಿಂದ ಪಾರುಮಾಡಿದಳು. ಆದರೆ ಗಾಡಿಯಲ್ಲಿ ಅವರ ಹಿಂದೆ ಗುಪ್ತಚಾರರು ಬೆನ್ನು ಹತ್ತಿ ಕೊನೆಗೆ ಹೊಡೆತ ಕೊಟ್ಟರು. ಆಚಾರ್ಯರನ್ನು ಬಳ್ಳಾರಿ ಆಸ್ಪತ್ರಿಗೆ ಅವರ ಜೊತೆ ಪ್ರಯಾಣಿಕರು ತಂದು ಹಾಕಿದರು.

ರಹೀಮನು ನಿರ್ದೋಷಿ ಎಂದು ವಿಚಾರಣೆಯಲ್ಲಿ ಕಂಡು ಬಂದದ್ದರಿಂದ ಬಿಡುಗಡೆ ಮಾಡಲಾಗಿತ್ತು. ಅವನು ಗದಗಿಗೆ ಬರಲು ತಂದೆಯು ತನಗಾಗಿ ಹೈದರಾಬಾದಿಗೆ ಹೋದದ್ದು ತಿಳಿಯಿತು. ತಾಯಿಯೊಡನೆ ಮರುಗಾಡಿಯಿಂದ ಹೊರಟು ಬಳ್ಳಾರಿಗೆ ಬರಲು ಅಲ್ಲಿ ಪದ್ಮನಾಭಾಚಾರ್ಯರ ಮೇಲೆ ಆಘಾತವಾದ ಸುದ್ದಿಯನ್ನು ಪತ್ರಿಕೆಯಲ್ಲಿ ಓದಿ ಆಸ್ಪತ್ರೆಗೆ ಧಾವಿಸಿದನು. ಅಲ್ಲಿ ಅಂತ್ಯಾವಸ್ಥೆಯಲ್ಲಿದ್ದ ಆಚಾರ್ಯರು ಮಗನ ತಲೆಯ ಮೇಲೆ ಕೈಯಾಡಿಸಿ "ರಾಮೂ ನನ್ನ ಕೊನೆಯ ಇಚ್ಛೆ ಪೂರೈಸಿತು. ನಾನು ದುರ್ದೈವಿ, ದೇವರು ನಿನಗೆ ಕಲ್ಯಾಣ ಮಾಡಲಿ" ಎನ್ನುತ್ತಿರುವಾಗ ಬಿಕ್ಕು ಹತ್ತಿತು. ರಹೀಮನು ನೀರು ಹಾಕಹೋಗಲು ಆಚಾರ್ಯರು "ಬೇಡ, ನನ್ನ ಜೀವನದ ಪಾವಿತ್ರ್ಯಕ್ಕೆ ಧಕ್ಕೆ ಬೇಡ. ನನ್ನ ಧರ್ಮ ನನ್ನ ಸಂಪತ್ತು. ನಿನ್ನಿಂದ ನೀರು ಬೇಡ'' ಎಂದು ಕ್ಷೀಣ ಸ್ವರದಲ್ಲಿ ಹೇಳಿದರು. ಮುದುಕಿ ಗೋಳಿಟ್ಟು ಅಳುತ್ತಿರುವಾಗ ಆಚಾರ್ಯರು ಕಣ್ಣು ಮುಚ್ಚಿದರು.

ರಹೀಮನಿಗೆ ತಾಯಿಯನ್ನು ಬಿಟ್ಟುಹೋಗಲೂ ಬಾರದು. ಕರೆದುಕೊಂಡುಹೋಗಲು ಅವಳು ಒಪ್ಪಲಾರಳು. ಇಂಥ ಪರಿಸ್ಥಿತಿಯಲ್ಲಿ ಕೆಲವು ದಿನ ಕಳೆದನು. ಘಾತಿಮಾಳು ಮಗನ ಹಂಬಲದಿಂದ ಅಲ್ಲಿಗೇ ಬಂದಳು. ಅತ್ತ ಸಂಸ್ಥಾನ ಸರಕಾರವು ರಹೀಮನು ಸರಕಾರದ್ರೋಹಿ ಎಂದು ಎಲ್ಲ ಆಸ್ತಿಯನ್ನು ವಶಪಡಿಸಿಕೊಂಡಿತು. ರಹೀಮನಿಗೆ ಹಿಂದೂಗಳಲ್ಲಿ ಮುಸಲ್ಮಾನನೆಂದು ತಿರಸ್ಕಾರ, ಮುಸಲ್ಮಾನರಿಂದ 'ಕಾಫರ-ಕಾ-ಬಚ್ಚಾ' ಎಂದು ಅವಹೇಳನೆ. ಹೀಗಾಗಿ ಜೀವನದಲ್ಲಿ ಅವನು ಸಾಧಿಸಬೇಕೆಂದಿದ್ದ ವಿಚಾರಗಳು ಕನಸಿನಂತಾದವು. ತಾಯಿಗಳಿಬ್ಬರ ಪೋಷಣೆಯು ಅವನಿಗೆ ಕಠಿಣ ಹೋಗಹತ್ತಿತು.

ಜೀವನದಲ್ಲಿ ಅನುಭವಿಸಿದ ಕಷ್ಟದ ಪರಿಣಾಮವು ರಹೀಮನ ಮನಸ್ಸಿನ ಮೇಲೆ ಆಘಾತ ಮಾಡಿತು. ಅವನು ಯಾವ ಧರ್ಮದವನೂ ಅಲ್ಲದ ಸಂನ್ಯಾಸಿಯಾದ. ಅವನಿಗೆ ಜಗತ್ತೇ ತನ್ನ ಕುಟುಂಬ. ಮಾನವಕೋಟಿಯೇ ಬಾಂಧವರು, ಮಾನವತೆಯೇ ಧರ್ಮ ಎಂಬ ತನ್ನ ಸಿದ್ಧಾಂತವನ್ನು ಜನತೆಯಲ್ಲಿ ಬೀರುವ ಸಾಮರ್ಥ್ಯ ನೀಡೆಂದು ದೇವರನ್ನು ಪ್ರಾರ್ಥಿಸಿ ತಪಶ್ಚರ್ಯಕ್ಕೆ ಕುಳಿತ.

# ರಾಮಾಯಣದ ರಾಜನೀತಿ

ಲೇಖಕರು: ಶ್ರೀ ಮೊಹರೆ ಹನುಮಂತರಾಯರು

ಸೀತಾದೇವಿಯನ್ನು ಕಳೆದುಕೊಂಡ ಶ್ರೀರಾಮನು ದಂಡಕಾರಣ್ಯದಲ್ಲಿ ಲಕ್ಷ್ಮಣನ ಸಹಿತವಾಗಿ ಅಲೆದಾಡಹತ್ತಿದನು. ಸೀತಾನ್ವೇಷಣವು ಹೇಗೆ ನೇರವೇರಬೇಕೆಂಬ ಬಗ್ಗೆ ಅವನು ಚಿಂತೆ ಮಾಡುತ್ತಿದ್ದನು. ಆ ಅಲೆದಾಟದಲ್ಲಿ ಸುಗ್ರೀವನ ಮಂತ್ರಿಯಾದ ಹನುಮಂತನನ್ನು ಅವನು ಕಂಡನು. ಹನುಮಂತನು ಅರಣ್ಯದಲ್ಲಿ ಒಂದು ಗಿಡದ ಕೆಳಗೆ ತೂಕಡಿಸುತ್ತ ಕುಳಿತಿದ್ದನು. ಅತ್ತ ಸುಗ್ರೀವನು ವಾಲಿಯ ಪ್ರಾಬಲ್ಯದಿಂದ ನೊಂದು-ನುಚ್ಚಾಗಿದ್ದನು. ಶ್ರೀರಾಮನು ತೂಕಡಿಸುತ್ತ ಕುಳಿತಿದ್ದ ಹನುಮಂತನನ್ನು ಎಚ್ಚರಿಸಿದನು. ಅನಂತರ ಅವನ ಹೆಗಲ ಮೇಲೆ ಅಣ್ಣ ತಮ್ಮಂದಿರಿಬ್ಬರೂ ಪ್ರೀತಿಯಿಂದ ಹತ್ತಿದರು. ಹನುಮಂತನು ಅವರನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಸುಗ್ರೀವನ ಹತ್ತರ ಬಂದನು. ಸುಗ್ರೀವ ಮತ್ತು ಶ್ರೀರಾಮರ ನಡುವೆ ರಾಜಕೀಯ ಒಪ್ಪಂದವನ್ನು ಅಗ್ನಿ ಸಾಕ್ಷಾತ್ಕಾರವಾಗಿ ಮಾಡಿಸಿದನು. ಶ್ರೀರಾಮನು ವಾಲಿಯನ್ನು ಸಂಹಾರ ಮಾಡಬೇಕು; ಸುಗ್ರೀವನು ಸೀತಾದೇವಿಯನ್ನು ಹುಡುಕಿಕೊಡಬೇಕು, ಎಂಬವು ಆ ಒಪ್ಪಂದದ ಕರಾರು.

ಶ್ರುತ್ವಾಽಸ್ಯ ದುಃಖಮಥ ದೇವವರಃ ಪ್ರತಿಜ್ಞಾಂ
ಚಕ್ರೇ ಸ ವಾಲಿನಿಧನಾಯ ಹರೀಶ್ವರೋಽಪಿ ॥
ಸೀತಾನುಮಾರ್ಗಣಕೃತೇಽಥ ಸ ವಾಲಿನೈವ
ಕ್ಷಿಪ್ತಾಂ ಹಿ ದುಂದುಭಿತನುಂ ಸಮದರ್ಶಯಚ್ಚ ॥

ದೇವಶ್ರೇಷ್ಠನಾದ ಶ್ರೀರಾಮನು ಸುಗ್ರೀವನಿಗೆ ವಾಲಿಯಿಂದುಂಟಾದ ದುಃಖವನ್ನು ಕೇಳಿ ವಾಲಿಯನ್ನು ಸಂಹರಿಸುವ ಪ್ರತಿಜ್ಞೆ ಮಾಡಿದನು. ಕಪಿಶ್ರೇಷ್ಠನಾದ ಸುಗ್ರೀವನಾದರೂ ಸೀತಾದೇವಿಯನ್ನು ಹುಡುಕುವ ಪ್ರತಿಜ್ಞೆ ಮಾಡಿದನು.

ಈ ಮೇಲಿನಂತೆ ಒಪ್ಪಂದವಾದರೂ ಶ್ರೀರಾಮನಲ್ಲಿ ವಾಲಿಯನ್ನು ಕೊಲ್ಲುವ ಸಾಮರ್ಥ್ಯವು ಇದೆಯೋ ಇಲ್ಲವೋ ಎಂಬ ಸಂದೇಹವು ಸುಗ್ರೀವನಿಗೆ ಉಂಟಾಯಿತು. ಅದನ್ನು ಪರೀಕ್ಷಿಸುವದಕ್ಕಾಗಿ ಅವನು ಕೆಲವು ಸೂಚನೆಗಳನ್ನು ಶ್ರೀರಾಮನಿಗೆ ಮಾಡಿದನು.

ಜೇತುಂ ಚತುರ್ಗುಣಬಲೋ ಹಿ ಪುಮಾನ್ರಿಪುಃ ಸ್ಯಾ-
ದ್ಧಂತುಂ ಶತಾಧಿಕಬಲೋಽತಿಬಲಂ ಸುಶಕ್ತಃ ॥
ತಸ್ಮಾದಿಮಾನ್ಪರಿಹಯಾತ್ಮಜಬಾಹ್ವಲೋಪ್ಯ
ಪತ್ರಾನ್ನಿಭಿಂದ್ಯ ಮಮ ಸಂಶಯಮಾಶು ಭಿಂಧಿ ॥

ಶತ್ರುವನ್ನು ಗೆಲ್ಲಲಿಕ್ಕೆ ಅವನ ನಾಲ್ಕು ಪಟ್ಟು ಶಕ್ತಿಯು ಬೇಕು. ಶತ್ರುವನ್ನು ಕೊಲ್ಲಬೇಕಾದರೆ ನೂರುಪಟ್ಟು ಶಕ್ತಿಯು ಬೇಕಾಗುತ್ತದೆ. ಸೈನ್ಯಶಾಸ್ತ್ರದ ತತ್ವವಿದು. ಆದುದರಿಂದ ಸಪ್ತತಾಳ ವೃಕ್ಷಗಳನ್ನು ಅಲ್ಲಾಡಿಸಲಿಕ್ಕೂ ಅದರ ಎಲೆಗಳನ್ನು ಕಿತ್ತುಕೊಳ್ಳಲಿಕ್ಕೂ ಯಾವ ವಾಲಿಗೆ ಸಾಮರ್ಥ್ಯವಿಲ್ಲವೋ ಅಂಥ ಸಪ್ತತಾಳ ವೃಕ್ಷಗಳನ್ನು ಒಂದೇ ಬಾಣದಿಂದ ಕೆಡಿವಿ ನನ್ನ ಸಂಶಯವನ್ನು ನಿವಾರಣೆ ಮಾಡಬೇಕೆಂದು ಸುಗ್ರೀವನು ಶ್ರೀರಾಮನಿಗೆ ಹೇಳಿದನು. ಅದರಂತೆ ಆ ಸಪ್ತತಾಳವೃಕ್ಷಗಳನ್ನು ಶ್ರೀರಾಮನು ತನ್ನ ಬಾಣದಿಂದ ಕೆಡಿವಿ ವಾಲಿಯನ್ನು ಕೊಲ್ಲುವಷ್ಟು ಸಾಮರ್ಥ್ಯ ತನ್ನಲ್ಲಿದೆಯೆಂದು ಸುಗ್ರೀವನಿಗೆ ತೋರಿಸಿಕೊಟ್ಟನು. ನಂತರ ವಾಲಿಯನ್ನು ಬೈಲಿಗೆ ಕರೆದುಕೊಂಡು ಬರಲು ಶ್ರೀರಾಮನು ಸುಗ್ರೀವನಿಗೆ ಹೇಳಿದನು. ಸುಗ್ರೀವನು ಗುಹೆಯಲ್ಲಿದ್ದ ವಾಲಿಯ ಹತ್ತಿರ ಹೋಗಿ ಅವನನ್ನು ಸಿಟ್ಟಿಗೆಬ್ಬಿಸಿ ಹೊರಗೆ ಕರೆದುಕೊಂಡು ಬಂದನು. ಶ್ರೀರಾಮನು ವಾಲಿಯನ್ನು ಸಂಹಾರ ಮಾಡುವ ಉದ್ದೇಶದಿಂದ ದೂರದಲ್ಲಿ ನಿಂತುಕೊಂಡು ವಾಲಿ ಸುಗ್ರೀವರ ನಡುವಿನ ತಿಕ್ಕಾಟವನ್ನು ನೋಡುತ್ತಿದ್ದನು. ವಾಲಿಯು ಸುಗ್ರೀವನನ್ನು ಹೊಡೆದು ತಿರುಗಿ ಕಳಿಸಿದನು. ಆದರೂ ಶ್ರೀರಾಮನು ವಾಲಿಯನ್ನು ಬಾಣದಿಂದ ಹೊಡೆಯಲಿಲ್ಲ. ಇದನ್ನು ನೋಡಿ ಸುಗ್ರೀವನು ಶ್ರೀರಾಮನ ಹತ್ತರ ಬಂದು ನಮ್ಮ ನಿಮ್ಮ ನಡುವೆ ವಾಲಿಯನ್ನು ಸಂಹಾರ ಮಾಡಬೇಕೆಂಬ ಒಪ್ಪಂದವಾಗಿದ್ದರೂ ನೀನು ವಾಲಿಯನ್ನು ಸಂಹಾರ ಮಾಡಲಿಲ್ಲ. ಮತ್ತು ಅವನಿಗೆ ಒಂದು ಬಾಣವನ್ನಾದರೂ ಎಸೆಯಲಿಲ್ಲವೆಂದನು. ಇದಕ್ಕೆ ಶ್ರೀರಾಮನು ಸಮರ್ಪಕವಾದ ಒಳ್ಳೇ ಮಾರ್ಮಿಕವಾದ ರಾಜನೀತಿಯ ಉತ್ತರವನ್ನು ಹೇಳುತ್ತಾನೆ.

ಸೌಭ್ರಾತ್ರಮೇಷ ಯದಿ ವಾಂಛತಿ ವಾಲಿನೈವ
ನಾಹಂ ನಿರಾಗಸಮಥಾಗ್ರಜನಿಂ ಹನಿಷ್ಯೇ ॥
ದೀರ್ಘಸ್ಸಹೋದರಗತೋ ನ ಭವೇದ್ಧಿ ಕೋಪೋ
ದೀರ್ಘೋಽಪಿ ಕಾರಣಮೃತೇ ವಿನಿವರ್ತತೇ ಚ ॥

ವಾಲಿಸುಗ್ರೀವರು ಅಣ್ಣತಮ್ಮಂದಿರು; ತಾತ್ಪೂರ್ತಿಕವಾಗಿ ಅವರಲ್ಲಿ ದ್ವೇಷ ಉಂಟಾಗಿತ್ತು. ಅಣ್ಣತಮ್ಮಂದಿರ ನಡುವೆ ಉಂಟಾದ ಈ ಕೋಪ-ರಾಗ-ದ್ವೇಷವು ಕಾರಣವಿಲ್ಲದೆ ಮರಣಕಾಲದಲ್ಲಿ ನಿವೃತ್ತಿಯಾಗುತ್ತದೆ. ವಾಲಿಯನ್ನು ಕೊಲ್ಲುವ ಸಮಯದಲ್ಲಿ ಸುಗ್ರೀವನಲ್ಲಿರುವ ದ್ವೇಷಭಾವವು ನಿವೃತ್ತಿಯಾದರೆ ನಿರಪರಾಧಿಯಾದ ವಾಲಿಯನ್ನು ಕೊಂದಂತಾಗುವದೆಂದು ಶ್ರೀರಾಮನು ಆಲೋಚಿಸಿದನು. ಅದಕ್ಕಾಗಿ ಕೊಲ್ಲಲಿಲ್ಲವೆಂದು ಹೇಳಿದನು.

ವಾಲಿಯ ಸಂಹಾರವು ಒಪ್ಪಂದದ ಒಂದು ಕರಾರುವಾದುದರಿಂದಲೂ ವಾಲಿಯ ಸಂಹಾರವು ಆಗಿಯೇ ತೀರಬೇಕೆಂದು ನಿರ್ದಿಷ್ಟವಾದದ್ದರಿಂದಲೂ ಸುಗ್ರೀವನ ದ್ವೇಷಭಾವನೆಯು ಕಡಿಮೆಯಾಗುವದು ಶಕ್ಯವಿದ್ದಿಲ್ಲ. ಇದನ್ನೆಲ್ಲ ಅರಿತು ಶ್ರೀರಾಮನು ವಾಲಿಯನ್ನು ಸಂಹಾರಮಾಡಿದನು.

ಅನಂತರ ಸುಗ್ರೀವನನ್ನು ರಾಜ್ಯಕ್ಕೆ ಪಟ್ಟಗಟ್ಟಿದನು. ರಾಜ್ಯಾಭಿಷೇಕವೂ ನೇರವೇರಿತು. ಸುಗ್ರೀವನು ಪತ್ನೀಸಮೇತನಾಗಿ ರಾಜಧಾನಿಯಲ್ಲಿ ಕಾಲಕಳೆಯಹತ್ತಿದನು. ಮಳೆಗಾಲವು ಪ್ರಾರಂಭವಾದದ್ದರಿಂದ ಮಾಡಬೇಕಾಗಿದ್ದ ಸೀತಾನ್ವೇಷಣ ಕಾರ್ಯವನ್ನು ಮಳೆಗಾಲವು ಮುಗಿಯುವ ವರೆಗೆ ಶ್ರೀರಾಮನ ಅಪ್ಪಣೆಯನ್ನು ಪಡೆದು ಸುಗ್ರೀವನು ಮುಂದೂಡಿದನು. ಮಳೆಗಾಲವು ಮುಗಿದ ನಂತರ ಕೂಡ ಸುಗ್ರೀವನು ಸೀತಾನ್ವೇಷಣ ಕಾರ್ಯದಲ್ಲಿ ಯಾವ ಚಟುವಟಿಕೆಯನ್ನೂ ತೋರಿಸದಲೆ ಹೋದನು. ಇದನ್ನು ಕಂಡು ಹನುಮಂತನು ಸುಗ್ರೀವನಿಗೆ ಶ್ರೀರಾಮನ ಕಾರ್ಯವನ್ನು ಮಾಡುವಂತೆ ಹೇಳಿದನು. ಅದನ್ನು ನೀನು ಮಾಡದಿದ್ದರೆ ಬಲಾತ್ಕಾರದಿಂದ ಮಾಡಿಸಲಾಗುವದಾಗಿಯೂ ಎಚ್ಚರಿಸಿದನು. ಇಷ್ಟರಲ್ಲಿ ಶ್ರೀರಾಮನು, ತಮ್ಮನಾದ ಲಕ್ಷ್ಮಣನ ಮುಖಾಂತರ ಸುಗ್ರೀವನಿಗೆ ಸಂದೇಶ ಮುಟ್ಟಿಸಲು ಹನುಮಂತನ ಕಡೆಗೆ ಅವನನ್ನು ಕಳಿಸಿದನು.

ಯದಿ ಪ್ರಮತ್ತೋಽಸಿ ಮದೀಯಕಾರ್ಯೇ
ನಯಾಮ್ಯಹಂ ತ್ವಿಂದ್ರಸುತಸ್ಯ ಮಾರ್ಗಂ ॥
ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇ ಹಿ
ಮದೋದ್ಧತಾ ನ ಪ್ರತಿಕರ್ತುಮಾಶತೇ ॥

ನನ್ನ ಕಾರ್ಯದಲ್ಲಿ ಅಂದರೆ ಸೀತಾನ್ವೇಷಣಕಾರ್ಯದಲ್ಲಿ ತಾತ್ಸಾರ ಮಾಡಿದರೆ ಇಂದ್ರಸುತನಂತೆ (ವಾಲಿಯಂತೆ) ನಿನ್ನನ್ನೂ ಸಂಹರಿಸುವೆನು. ಸ್ವ-ಕಾರ್ಯವನ್ನು ಸಾಧಿಸಿಕೊಂಡ ನಂತರ ಮದೋದ್ಧತರಾದವರು ಪ್ರತ್ಯುಪಕಾರ ಮಾಡಲು ಮನಸ್ಸು ಮಾಡುವದಿಲ್ಲ. ಈ ಸಂದೇಶವು ಸುಗ್ರೀವನಿಗೆ ತಲ್ಪಿದ ನಂತರ ಅವನು ಶ್ರೀರಾಮನ ಕಡೆಗೆ ಬಂದು ಕ್ಷಮಾಪಣೆ ಕೇಳಿಕೊಂಡು ಕಪಿಸೈನ್ಯವನ್ನೂ ಅದರ ನಾಯಕನಾದ ಹನುಮಂತನನ್ನೂ ಕರೆಸಿ ದಶದಿಕ್ಕುಗಳಿಗೂ ಸೀತಾನ್ವೇಷಣ ಮಾಡುವದಕ್ಕಾಗಿ ಕಪಿಸೇನಾತಂಡಗಳನ್ನು ಕಳಿಸಿಕೊಟ್ಟನು. ಮತ್ತು ಒಂದು ತಿಂಗಳೊಳಗಾಗಿ ಸೀತೆಯ ಸಮಾಚಾರವನ್ನು ತರದಿದ್ದರೆ ಆ ಸೇನೆಯನ್ನು ಸಂಹರಿಸುವೆನೆಂದು ಘೋರವಾದ ಅಜ್ಞೆಯನ್ನು ಹೊರಡಿಸಿದನು. ದಕ್ಷಿಣ ದಿಕ್ಕಿನ ಕಡೆಗೆ ಹೋದ ಕಪಿಸೇನಾನಾಯಕನು ಹನುಮಂತನಿದ್ದನು. ಮತ್ತು ಅದರಲ್ಲಿ ಅಂಗದ, ನೀಲ, ತಾರ ಮೊದಲಾದವರು ಇದ್ದರು. ಒಂದು ತಿಂಗಳೊಳಗಾಗಿ ಎಷ್ಟು ಯತ್ನ ಮಾಡಿದರೂ ಈ ಕಪಿಗಳಿಗೆ ಸೀತೆಯ ಸಮಾಚಾರವು ತಿಳಿಯಲಿಲ್ಲ. ಎಲ್ಲ ಕಪಿಗಳು ಗಾಬರಿಗೊಂಡವು. ಅಷ್ಟರಲ್ಲಿ ಮಯನಾಮಕ ದೈತ್ಯನಿಂದ ನಿರ್ಮಿಸಲ್ಪಟ್ಟ ಅತ್ಯಂತ ವಿಚಿತ್ರವಾದ ಗುಹೆಯನ್ನು ಅವು ತಲುಪಿದವು. ಆ ಗುಹೆಯಲ್ಲಿ ಎಲ್ಲ ಕಪಿಗಳು ಕೂಡಿ ಮಂತ್ರಾಲೋಚನೆ ನಡೆಸಿದವು. ಅದೊಂದು ಕಪಿಗಳ ಪರಿಷತ್ತು ಎಂದು ಹೇಳಬಹುದು. ಪ್ರತಿಯೊಂದು ಕಪಿಯು ತನಗೆ ಸರಿದೋರಿದ್ದನ್ನು ಹೇಳಿ ಉಳಿದ ಕಪಿಗಳಿಗೆ ಸಲಹೆ ಕೊಡುತ್ತಿದ್ದಿತು. ತಾರ, ಅಂಗದ ಮೊದಲಾದ ಕಪಿಶ್ರೇಷ್ಠರು ಅವಧಿ ಮುಗಿದ ಮೇಲೆ ಸುಗ್ರೀವನ ಹತ್ತರ ಹೋಗಲು ಸಾಧ್ಯವಿಲ್ಲವೆಂದರು. ಯಾಕಂದರೆ—

ದುರಾಸದೋಽಸಾವತಿಚಂಡಶಾಸನೋ
ಹನಿಷ್ಯತಿ ತ್ವಾಮಪಿ ಕಿಂ ಮದಾದಿಕಾನ್ ॥




ಕಪಿಗಳ ಪರಿಷತ್ತು

ಅಗಮ್ಯಮೇತದ್ಬಿಲಮಾಪ್ಯ ತತ್ಸುಖಂ
ವಸಾಮ ಸರ್ವೇ ಕಿಮಸಾವಿಹಾಚರೇತ್ ॥

ಸುಗ್ರೀವನು ಅತ್ಯಂತ ಕ್ರೂರ ಆಜ್ಞೆಯುಳ್ಳವನು, ನಿಷ್ಠುರನು. ಯುವರಾಜನಾದ ನಿನ್ನನ್ನು ( ಅಂಗದನನ್ನು ) ಕೂಡಾ ಕೊಲ್ಲಬಹುದು. ನಮ್ಮಂಥವರ ಪಾಡೇನು ? ಆದ್ದರಿಂದ ಮರಳಿ ಸುಗ್ರೀವನ ಹತ್ತರ ಹೋಗುವುದು ಬೇಡ. ಈ ಗುಹೆಯಲ್ಲಿ ಸುಖವಾಗಿ ಇದ್ದುಬಿಡುವಾ ಎಂದು ಅಂಗದನ ಸೋದರಮಾವನಾದ ತಾರನು ಸಲಹೆ ಕೊಟ್ಟನು. ಮತ್ತೆ ಕೆಲವು ಕಪಿಗಳು ಸುಗ್ರೀವನ ಕಡೆಗೆ ಹೋಗಿ ಕ್ಷಮಾಪಣೆಯನ್ನು ಕೇಳಿಕೊಳ್ಳೋಣ ನಮ್ಮನ್ನು ಕ್ಷಮಿಸಬಹುದು, ನಿರಂತರ ಇಲ್ಲಿ ಇರುವದು ಬೇಡವೆಂದು ಹೇಳಿದವು. ಈ ಕಪಿಗಳಿಗೆ ಉತ್ತರರೂಪವಾಗಿ ಇನ್ನೂ ಕೆಲವು ಕಪಿಗಳು

ರಾಜ್ಯಾರ್ಥಿನಾ ಯೇನ ಹಿ ಘಾತಿತೋಽಗ್ರಜೋ
ಹೃತಾಶ್ಚ ದಾರಾಃ ಸುನೃಶಂಸಕೇನ ॥
ಸ ನಃ ಕಥಂ ರಕ್ಷತಿ ಶಾಸನಾತಿಗಾನ್
ನಿರಾಶ್ರಯಾನ್ದುರ್ಬಲಕಾನ್ ಬಲೇ ಸ್ಥಿತಃ ॥

ರಾಜ್ಯ ದೊರಕಿಸಲು ಯಾವನು ಅಣ್ಣನನ್ನು ಕೊಂದು ಅವನ ಹೆಂಡರುಮಕ್ಕಳನ್ನು ಅಪಹರಿಸಿದನೊ ಅಂಥವನು ದುರ್ಬಲರೂ ನಿರಾಶ್ರಿತರೂ ಆದ ನಮ್ಮನ್ನು ಹೇಗೆ ( ರಕ್ಷಿಸುತ್ತಾನೆ ) ಎಂದವು.

ಶ್ರೀರಾಮನಿಗೆ ನಾವು ಕೊಟ್ಟ ವಚನದ ಗತಿಯೇನು ? ಅದನ್ನು ಹೇಗೆ ಬಿಡಲು ಸಾಧ್ಯ ಎಂದು ಒಂದು ಕಪಿಯು ಕೇಳಿತು. ಅದಕ್ಕೆ ಇನ್ನೊಂದು ಕಪಿಯು " ನ ಚೈವ ರಾಮೇಣ ಸಲಕ್ಷ್ಮಣೇನ ಪ್ರಯೋಜನಂ ನೋ ವನಚಾರಿಣಾಂ ಸದಾ " ( ಅಡವಿಗಳಲ್ಲಿ ವಾಸಿಸುವ ನಮಗೆ ರಾಮ-ಲಕ್ಷ್ಮಣರಿಂದ ಏನು ಪ್ರಯೋಜನ ? ) ಅನಂತರ ಜಾಂಬುವಂತ ಮೊದಲಾದ ಎಲ್ಲ ಕಪಿಗಳು ಒಪ್ಪಿಕೊಂಡಮೇಲೆ ಹನುಮಂತನು ಗಂಭೀರವಾಗಿ ಎದ್ದುನಿಂತು ಎಲ್ಲ ಕಪಿಗಳಿಗೂ ಈ ರೀತಿ ಎಚ್ಚರಿಕೆ ಕೊಟ್ಟನು. ಶ್ರೀರಾಮನಿಗೆ ವಿರೋಧವಾದಂಥ ಯಾವ ಕಾರ್ಯವೂ ನನ್ನಿಂದ ಸಹಿಸಲಾಗದು "ವಿಜ್ಞಾತಮೇತದ್ಧಿ ಮಯಾಂಽಗದಸ್ಯ ರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಂ" ಅಂಗದನಿಗೆ ರಾಜ್ಯಸಿಗಬೇಕೆಂದು ಸೋದರಮಾವನಾದ ತಾರನು ಮಾತಾಡುವುದು ನನಗೆ ಗೊತ್ತಿದೆ; ಸರಾಗದಿಂದ ನಾನು ಹೇಳಿದಂತೆ ನೀವೆಲ್ಲರೂ ನಡೆದುಕೊಂಡರೆ ನನಗೆ ಸಂತೋಷವಾಗುವದು. ಹಾಗೆ ಮಾಡದಿದ್ದರೆ ನಿಮ್ಮನ್ನು ದಂಡಿಸಿ ಸನ್ಮಾರ್ಗಕ್ಕೆ ಹಚ್ಚುವೆನು.

ವಚೋ ಮಮೈತದ್ಯದಿ ಚಾಽದರೇಣ ।
ಗ್ರಾಹ್ಯಂ ಭವೇದ್ವಸ್ತದತಿಪ್ರಿಯಂ ಮೇ ।
ನ ಚೇದ್ಬಲಾದಪ್ಯನಯೇ ಪ್ರವೃತ್ತಾನ್
ಪ್ರಶಾಸ್ಯ ಸನ್ಮಾರ್ಗಗತಾನ್ಕರೋಮಿ ॥

ಹನುಮಂತನ ಈ ಎಚ್ಚರಿಕೆಯ ಮಾತು ಕೇಳಿ ಕಪಿಗಳು ಸೀತಾದೇವಿಯನ್ನು ಹುಡುಕಲಿಕ್ಕೆ ಪುನಃ ಪ್ರಾರಂಭಮಾಡಿದವು.

ಆಗಿನ ಕಾಲದಲ್ಲಿ ಕೂಡ ರಾಜಕೀಯ ಒಸ್ಪಂದಗಳು ಆಗುತ್ತಿದ್ದವು. ಮತ್ತು ಯಾವ ರೀತಿಯಿಂದ ಚರ್ಚೆಗಳು ನಡೆಯುತ್ತಿದ್ದುವೆಂಬುದು ಇದರ ಮೇಲಿಂದ ಕಂಡುಬರುತ್ತದೆ. ರಾಜನೀತಿಯು ಆಗಿನ ಕಾಲದಲ್ಲಿ ಆಧ್ಯಾತ್ಮಿಕ ಮತ್ತು ನೈತಿಕ ತಳ-ಹದಿಯನ್ನೇ ಆಶ್ರಯಿಸುತ್ತಿದ್ದಿತು. ಈಗಿನಂತೆ ಯಾವದೇ ಮಾರ್ಗವನ್ನು ಅವಲಂಬಿಸಿ ಕಾರ್ಯಸಾಧನ ಮಾಡಿಕೊಳ್ಳಬೇಕೆಂಬ ಭಾವನೆ ಇರಲಿಲ್ಲ. ದುಷ್ಟಶಿಷ್ಟ ಮಾರ್ಗಗಳಲ್ಲಿಯ ಭೇದವನ್ನು ರಾಜ-ಕಾರಣಿಗಳು ಕಂಡುಹಿಡಿದು ಅದರಂತೆ ನಡೆಯುತ್ತಿದ್ದರು. ಅಸುರರು ಮತ್ತು ಸುರರು ಅನುಸರಿಸುತ್ತಿರುವ ರಾಜನೀತಿ ಮಾರ್ಗವು ಭಿನ್ನವಾಗಿದ್ದವು. ಅಸುರರು ಕೂಡ ಆಗಿನ ಕಾಲಕ್ಕೆ ದೇವರನ್ನು ಕುರಿತು ತಪಶ್ಚರ್ಯ ಮಾಡಿ ವರವನ್ನು ಪಡೆದುಕೊಂಡು ತಮ್ಮ ದುಷ್ಟ ಹೇತುವನ್ನು ಸಾಧಿಸಿಕೊಳ್ಳುತ್ತಿದ್ದರು. ಆ ಮಾರ್ಗವು ಹೇಯವಾದದ್ದೆಂದು ಬೇರೆ ಹೇಳಲು ಬೇಡ. ಅಸುರರು ಕಡೆಗೆ ಅಧೋಗತಿಯನ್ನೇ ಹೊಂದುತ್ತಿದ್ದರು. ರಾವಣನು ತಪಶ್ಚರ್ಯ ಮಾಡಿ ಸಾಮ್ರಾಜ್ಯವನ್ನು ನಡೆಸಿದರೂ ಕಟ್ಟಕಡೆಗೆ ಲಯಹೊಂದಬೇಕಾಯಿತು. ಈ ರಾಜನೀತಿ ಪಾಠವು ಎಲ್ಲರ ಕಣ್ಣೆದುರಿಗೆ ಇದೆ. ಆಧುನಿಕ ಕಾಲವಲ್ಲಿಯೂ ಈ ದುಷ್ಟ ಪ್ರವೃತ್ತಿಯು ರಾಜಕಾರಣದಲ್ಲಿ ಕಂಡುಬರುವುದು ಅಸ್ವಾಭಾವಿಕವಲ್ಲ. ದುಷ್ಟ ಹೇತುವನ್ನು ಸಾಧಿಸುವದಕ್ಕಾಗಿ ತಪಶ್ಚರ್ಯ ಮಾಡುವವರು ಆಧುನಿಕ ಸಮಾಜದಲ್ಲಿಯೂ ಕಂಡುಬರುವರು. ಅಂಥವರನ್ನು ಅಸುರಾಂಶರೆಂದೇ ಹೇಳಬೇಕಾಗುವದು. ಸಮಾಜವು ದುಷ್ಟಶಿಷ್ಟ ಶಕ್ತಿಗಳಿಂದ ಸದಾ ಕೂಡಿರುತ್ತದೆ. ರಾಜಕಾರಣವನ್ನು ಸಮಾಜಶಾಸ್ತ್ರದಿಂದ ಬೇರ್ಪಡಿಸಲಾಗದು.

ಮೇಲಿನ ಚರ್ಚೆಯು ಪ್ರಜಾಪ್ರಭುತ್ವದ ಹೋಲಿಕೆಯನ್ನು ಅನುಸರಿಸುತ್ತದೆ. ಆದರೆ ಕಪಿಗಳಲ್ಲಿ ಬಹುಸಂಖ್ಯ ಕಪಿಗಳು ಬೇರೊಂದು ಅಭಿಪ್ರಾಯ ತಳೆದಿದ್ದರೂ ಅದನ್ನು ಬದಿಗಿರಿಸಿ ಸಾತ್ವಿಕ ಸಾಮರ್ಥ್ಯವುಳ್ಳಂಥ ಜ್ಞಾನಿಯಾದ ಹನುಮಂತನು ಬುದ್ಧಿವಾದ ಹೇಳಿ ಆ ಕಪಿಗಳನ್ನೆಲ್ಲ ಸನ್ಮಾರ್ಗಕ್ಕೆ ಹಚ್ಚಿದನು. ದುಷ್ಟಹೇತುವಿನಿಂದ ಪ್ರೇರಿತರಾದವರು ಬಹುಸಂಖ್ಯಾಕರಾದರೆ ಅವರ ಉದ್ದಿಶ್ಯವು ಸಾತ್ವಿಕವಾದದ್ದೆಂದು ಹೇಳಲಾಗದು. ಅದನ್ನು ತಳ್ಳಿಹಾಕುವ ಪ್ರಸಂಗವು ಬರುವದೆಂಬುದು ಮೇಲಿನ ಉದಾಹರಣೆಯಿಂದ ಸಿದ್ಧವಾಗುತ್ತದೆ. ಈ ಸೂಕ್ಷ್ಮತತ್ತ್ವವನ್ನು ಆಧುನಿಕ ಕಾಲದಲ್ಲಿ ಕೂಡ ಅನುಸರಿಸಬೇಕಾಗುವದು. ಬಹುಸಂಖ್ಯಾಕರ ಮತವು ಯಾವಾಗಲೂ ಸರಿಯೆಂದು, ಸಾತ್ವಿಕವೆಂದು ನಂಬುವದು ಕಠಿಣ. ಆದ್ದರಿಂದ ನಾವು ಯಾವಾಗಲೂ ರಾಜಕಾರಣವನ್ನು ಆಧ್ಯಾತ್ಮಿಕ ಮತ್ತು ನೈತಿಕ ದೃಷ್ಟಿಯಿಂದಲೇ ನೋಡಿ ನಡೆಯಿಸತಕ್ಕದ್ದು. ಸದ್ಯದ ಸಮಾಜಕ್ಕೆ ಇಂತಹ ಸಾತ್ವಿಕ ಭಾವನೆಗಳಿಂದ ಕೂಡಿದ ಕೆಲವು ಕಟುಮಾತುಗಳನ್ನು ಹೇಳುವ ಕಾಲವೀಗ ಬಂದಿದೆ.

ಸುಮಾರು ೭೦೦ ವರುಷಗಳ ಹಿಂದೆ ರಾಮಾಯಣ, ಮಹಾಭಾರತಾದಿ ಉದ್ಗ್ರಂಥಗಳಲ್ಲಿ ಅನೇಕರು ಪ್ರಕ್ಷಿಪ್ತಶ್ಲೋಕಗಳನ್ನು ಸೇರಿಸಿ ತಮ್ಮ ತಮ್ಮ ಸಿದ್ಧಾಂತಗಳಿಗೆ ಅನುಕೂಲವಾಗುವಂತೆ ಆ ಗ್ರಂಥಗಳ ಪಾವಿತ್ರ್ಯಕ್ಕೆ ಭಂಗ ತಂದುದು ಕಂಡುಬಂತು. ಆಗ ಶ್ರೀಮನ್ಮಧ್ವಾಚಾರ್ಯರು ಆ ಪುರಾಣಗಳನ್ನು ನಿರ್ಣಯಶಾಸ್ತ್ರದ ಒರೆಗಲ್ಲಿಗೆ ಹಚ್ಚಿ, ಶ್ರೀ ವೇದವ್ಯಾಸರ ಅನುಜ್ಞೆ ಪಡೆದುಕೊಂಡು ಆ ಪುರಾಣಗಳ ತಿರುಳನ್ನು ಕಡೆದು ಸಂಕ್ಷೇಪವಾಗಿ ತಾತ್ಪರ್ಯ ನಿರ್ಣಯವೆಂಬ ಗ್ರಂಥವನ್ನು ರಚಿಸಿದರು. ಆ ಗ್ರಂಥದಲ್ಲಿ ಪುರಾಣಗಳ ಸಾರವು ಮಾರ್ಮಿಕವಾಗಿ ಹೇಳಲ್ಪಟ್ಟದ್ದರಿಂದ ಅದನ್ನು ಆಧಾರವಾಗಿಟ್ಟುಕೊಂಡು ಈ ಮೇಲಿನ ಲೇಖವನ್ನು ಬರೆಯಲಾಗಿದೆ. ಭಾರತೀಯ ಸಂಸ್ಕೃತಿಗೆ ಅನುಗುಣವಾಗಿ ಈಗಿನ ಕಾಲದಲ್ಲಿ ಕೂಡ ರಾಜಕಾರಣ ನಡೆಸಬೇಕೆನ್ನುವ-ವರಿಗೆ ಇದು ಮಾರ್ಗದರ್ಶಕವಾಗಿರುವದು.

---

# ಕವಿ ಲಕ್ಷ್ಮೀಶನ ಶಬ್ದಾಲಂಕಾರ ವೈಭವ

**" ನಾದಲೋಲ ಲಕ್ಷ್ಮೀಶ ' ನು ತನ್ನ ಕಾವ್ಯದಲ್ಲಿ ಸಹಜವಾದ ರೀತಿಯಲ್ಲಿ ಅನೇಕ ಬಗೆಯ ಶಬ್ದಾಲಂಕಾರಗಳನ್ನು ಉಪಯೋಗಿಸಿದ್ದಾನೆ. ಈ ಅಲಂಕಾರಗಳು ಬಹು ಸ್ವಾಭಾವಿಕವಾದ ರೀತಿಯಲ್ಲಿ ಬಂದು ಕಾವ್ಯದ ಸೌಂದರ್ಯವನ್ನು, ಲಾಲಿತ್ಯವನ್ನು ಹೆಚ್ಚಿಸಿರುವವು.**

ಲೇಖಕರು: **ರಾ. ನ. ವಳಗಿ, ಹುಬ್ಬಳ್ಳಿ.**

**ಜೈಮಿನಿ ಭಾರತವೆಂದು ಹೆಸರಾಗಿರುವ ಮಹಾಕಾವ್ಯವನ್ನು ಬರೆದ ಕವಿ ಲಕ್ಷ್ಮೀಶ. ಈ ಕಾವ್ಯವು ನಾದಮಯವಾಗಿರುವಷ್ಟು ಇನ್ನಾವ ಕಾವ್ಯವೂ ಆಗಿರುವದಿಲ್ಲ. ಇಲ್ಲಿಯಷ್ಟು ಪ್ರಾಸಾನುಪ್ರಾಸಗಳ ವೈಭವವು ಇನ್ನೆಲ್ಲಿಯೂ ಕಾಣಬರುವದಿಲ್ಲ. ಇದಕ್ಕೆ ಕಾರಣ ಲಕ್ಷ್ಮೀಶನಿಗೆ ಶಬ್ದಸಂಪತ್ತಿನ ಮೇಲಿರುವ ವಿಲಕ್ಷಣವಾದ ಪ್ರಭುತ್ವ. ಅವನಿಗೆ ಕರಗತವಾದ ಶಬ್ದಗಳು ಮೇಣದಂತೆ ಮೆತ್ತಗಾಗಿ ಅವನಿಗನುಕೂಲವಾಗುತ್ತವೆ. ಅವುಗಳಿಗೆ ಅಪೂರ್ವ ಸೌಂದರ್ಯವೂ ಲಾಲಿತ್ಯವೂ ಧ್ವನಿಯೂ ಉಂಟಾಗುತ್ತವೆ. ಅಂತೆಯೇ ಕವಿವರ್ಯ ಬೇಂದ್ರೆಯವರು ' ನಾದಲೋಲ ಲಕ್ಷ್ಮೀಶ ' ಎಂದು ಅವನನ್ನು ಕರೆದಿರುವರು.**

**ಕವಿ ಲಕ್ಷ್ಮೀಶನಲ್ಲಿ ಕನ್ನಡ, ಸಂಸ್ಕೃತ ಶಬ್ದಗಳು ಕುಣಿದಾಡುತ್ತಿವೆ. ಅವನು ಬಯಸುವದೊಂದೇ ತಡ, ಸಮಯೋಚಿತವಾದ ಸುಂದರವಾದ ಶಬ್ದಗಳು ವಿಸ್ಮಿತ ರೀತಿಯಲ್ಲಿ ಅವನ ಬಳಿಗೆ ನುಗ್ಗಿ ಬಂದು ಶರಣಾಗತವಾಗುತ್ತವೆ. ಸಂಸ್ಕೃತ ಶ್ಲೇಷಾಲಂಕಾರಮಯ ಪದಗಳನ್ನು ಪ್ರಯೋಗಿಸುವಂತೆ ಕನ್ನಡ ಶ್ಲೇಷಾಲಂಕಾರಮಯ ಪದಗಳನ್ನು ಪ್ರಯೋಗಿಸಬಲ್ಲನು. ' ಕ ' ಕಾರದ ಬಳ್ಳಿಯಲ್ಲಿ ಕೃಷ್ಣನನ್ನು ಸ್ತುತಿಸಬೇಕೆಂದರೆ—**

" ಕಮಲದಳನಯನ ಕಾಳಿಯಮಥನ
ಕಿಸಲಯೋ।
ಪಮಚರಣ ಕೀಶಪತಿಸೇವ್ಯ ಕುಜಹರ ಕೂರ್ಮ।
ಸಮಸತ್ಕಪೋಲ ಕೇಯೂರಧರ ಕೈರವಶ್ಯಾಮ
ಕೋಕನದಗೃಹೆಯ ॥
ರಮಣ ಕೌಸ್ತುಭಶೋಭ ಕಂಬುಚಕ್ರಗದಾಬ್ಜ ॥
ವಿಮಲಕರ ಕಸ್ತೂರಿಕಾ ತಿಲಕ ಕಾವುದೆಂ
ದಮಿತ ಪ್ರಭಾಮೂರ್ತಿಯಂ ನುತಿಸಲಾತನಂ
ಹರಿ ನೆಗೆಪಿದಂ ಕೃಪೆಯೊಳು ॥
**( ಸಂಧಿ ೫. ಪದ್ಯ ೮. )**

**ಎಂದು ಬಳ್ಳಿ ಮುಗಿಯುವ ವರೆಗೂ ಸರಾಗವಾಗಿ ಸಾಗಬಲ್ಲನು. ಶಬ್ದಗಳ ಪುನರಾವೃತ್ತಿಯಾಗದೆ ಮಾಧುರ್ಯದಿಂದ ಕೂಡಿದ ಶಬ್ದಗಳಿಂದಲೇ ಒಂದೇ ಬಳ್ಳಿಯಲ್ಲಿ ವರ್ಣಿಸಿಯೂ ಕವಿ ಪ್ರತಿಭೆಯನ್ನು ತೋರಿಸಿದ್ದಾನೆ.**

**ಇದೇ ಬಗೆಯ ಪ್ರತಿಭೆಯನ್ನು ಅವನ್ನು ಒತ್ತಕ್ಕರಗಳ ಅನುಪ್ರಾಸದಲ್ಲಿಯೂ ತೋರಿಸಿರುವನು. ' ತ್ತ ' ಎಂಬ ಒತ್ತಕ್ಕರದ ಅನುಪ್ರಾಸವನ್ನು—**

ಹೊತ್ತುಹೊತ್ತಿಗೆ ಮತ್ತೆ ಮತ್ತೆ ಬಲವತ್ತರದೊ।
ಳೊತ್ತಿಡಿದು ಸುತ್ತಲೆತ್ತತ್ತಲುಂ ಕೆತ್ತವೋ।
ಲ್ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯಂ
ಮುಳ್ಳವೊನೆ ಕೊಳ್ಳದಂತೆ ॥
ಚಿತ್ತಜಂ ಕತ್ತಿಯಂ ಕಿತ್ತುಕೊಂಡೆತ್ತಿ ಹೊ।
ಯ್ಯುತ್ತೆ ಬರಲುತ್ತುಂಗ ವೃತ್ತ ಕುಚೆಯರ್
ತಮಗೆ।
ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗ-
ಳನುರಾಗದಿಂದೆ॥
**( ಸಂಧಿ ೨೬. ಪದ್ಯ ೬ )**

**ಎಂದು ತೋರ್ಪಡಿಸಿರುವನು.**

**ನುಡಿದ ಶಬ್ದಗಳನ್ನು ಪುನರುಚ್ಚರಿಸಬೇಕೆಂದು ಅವನು ಬಯಸಿದರೆ —**

ಸಾಲ ಸಾಲಂಗಳಿಂ ಬಕುಳ ಕುಳದಿಂದೆ ಹಿಂ।
ತಾಲ ತಾಲಂಗಳಿಂ ಮಾದಲ ದಲರ್ಗಳಿಂ ತ।
ಮಾಲ ಮಾಲತಿಗಳಿಂ ಸಂರಂಭರಂಭದಿಂ ಮಂದ
ಮಂದಾರದಿಂದೆ ॥
ಜಾಲ ಜಾಲಂಗಳಿಂ ಸುರಹೊನ್ನೆ ಹೊನ್ನೆ ಬಗೆ।
ಪಾಲ ಪಾಲಾಶತರು ತರುಣಾಮ್ರಚಯಕಿಂಕಿ।
ಲಾಲಿ ಲಾಲಿತ ನವಾಶೋಕದಿಂದುದ್ಯದುದ್ಯಾನ
ಮೇಂ ಚೆಲ್ವೆನಿಪುದೋ )
**( ಸಂಧಿ ೩. ಪದ್ಯ ೩೭ ॥**

**ಎಂದು ಚಿತ್ರಿಸಬಲ್ಲನು. ಪ್ರತಿಯೊಂದರಲ್ಲಿಯೂ ಒಂದು ಬಗೆಯ ಲಾಲಿತ್ಯವನ್ನು ನಾವಿಲ್ಲಿ ಕಾಣುತ್ತೇವೆ.**

**ಅನುಪ್ರಾಸಮಯವಾಗಿ ಕಣ್ಣಿಗೆ ಕಟ್ಟುವಂತೆ ಯಾವದೇ ವರ್ಣನೆಯನ್ನು ಅವನು ಕೊಡಬಲ್ಲನು. ಸುಧನ್ವನ ಸಮರಾಂಗಣದ ಚಿತ್ರಮಯ ವರ್ಣನೆಯನ್ನು ನಾವಿಲ್ಲಿ ಲಕ್ಷಿಸಬಹುದು.**

ಕೆಡೆದೊಡಲ ಸೀಳಿಂದೆ ಕಡಿವಡೆದ ತೋಳಿಂದೆ।
ತೊಡೆಮಡದ ತುಂಡಿಂದೆ ನೆಣವಸೆಯ
ಜೊಂಡಿಂದೆ
ಬಿಡಿಮಿದುಳ ತುಂಡದಿಂ ತಂಡದಿಂ ರುಂಡದಿಂ
ಮುಂಡದಿಂ ಖಂಡದಿಂದೆ ॥
ಅಡಗುಗಳ ತಿರುಳಿಂದೆ ನಿಡುನೆರದ ಕರುಳಿಂದೆ।
ಕಡಲಿಡುವ ನೆತ್ತರಿಂದೆಡವಿಡದೆ ಸತ್ತರಿಂ।
ದಿಡಿದಿರ್ದ ದಾರಣದಲೋರಣದ ಮಾರಣದ
ಕಾರಣದ ಪೂರಣದೊಳು
**( ಸಂಧಿ ೧೨. ಪದ್ಯ ೪೪ )**

**ಎಂದು ಪ್ರಾಸಾದಿಕ ವಾಣಿಯಿಂದ ವರ್ಣಿಸಬಲ್ಲನು. ರನ್ನನ ಗದಾಯುದ್ಧದಲ್ಲಿ ದುರ್ಯೋಧನನು ಭೀಷ್ಮರ ಕಡೆಗೆ ಹೊರಟಾಗ ಬರುವ ರಣರಂಗದ ವರ್ಣನೆಯನ್ನು ಇಲ್ಲಿ ಲಕ್ಷಿಸಿದರೆ ಲಕ್ಷ್ಮೀಶನ ಈ ವರ್ಣನೆಯು ಎಷ್ಟೊಂದು ಯಥಾವತ್ತಾಗಿದೆ; ಕರುಣಾರ್ದ್ರವಾಗಿದೆಯೆಂಬುದು ಕಂಡುಬಾರದಿರದು.**

**ಪ್ರಯತ್ನಪೂರ್ವಕವಾಗಿ ಪ್ರಾಸಾನುಪ್ರಾಸಗಳನ್ನು ತಂದು ತುಂಬುವ ಗೋಜಿಗೆ ಲಕ್ಷ್ಮೀಶನು ಎಂದೂ ಹೋಗಿಲ್ಲ. ಆದ್ದರಿಂದಲೇ ಕೇವಲ ಒಂದಕ್ಷರದಿಂದಲೇ ತುಂಬಿದ ಸಾಲುಗಳನ್ನು ನಾವು ಜೈಮಿನಿಯಲ್ಲಿ ಕಾಣಲಾರೆವು. ಅವನು ಸಹಜ ರೀತಿಯಲ್ಲಿ ರಚಿಸಿರುವ ಪದ್ಯಗಳಲ್ಲಿ ಶಬ್ದಾಲಂಕಾರಗಳು ಇತರ ಅಲಂಕಾರಗಳೊಡನೆ ಹಲವು ಸಲ ಅವನಿಗೇ ತಿಳಿಯದ ರೀತಿಯಲ್ಲಿ ತಾವಾಗಿಯೇ ಹರಿದು ಬಂದಿವೆ. ಶಬ್ದಾಲಂಕಾರಗಳಲ್ಲಿ ಎಷ್ಟು ಬಗೆಯ ವೈವಿಧ್ಯವಿರುವದು ಸಾಧ್ಯವಿದೆಯೋ ಅಷ್ಟನ್ನೆಲ್ಲ ಜೈಮಿನಿಯಲ್ಲಿ ಕಾಣಬಹುದು.**

**ಜೈಮಿನಿಯಲ್ಲಿಯ ಶಬ್ದಾಲಂಕಾರಗಳನ್ನು ಮುಖ್ಯವಾಗಿ ಪಾದಾದಿ ಯಮಕಗಳು, ಪಾದಮಧ್ಯ ಯಮಕಗಳು, ಪಾದಾಂತ್ಯ ಯಮಕಗಳು ಹಾಗೂ ಪ್ರತಿಪಾದದಲ್ಲಿಯ ಗಣಗಳಲ್ಲಿ ಅಡಕವಾದ ನಾನಾಬಗೆಯ ಅನುಪ್ರಾಸಗಳು ಎಂದು ವಿಂಗಡಿಸಬಹುದು.**

**ಪಾದಾದಿ ಯಮಕಗಳು ಜೈಮಿನಿಯಲ್ಲಿ ಬೇಕಾದಷ್ಟಿರುವವು. ಧರ್ಮರಾಜನ ಕೀರ್ತಿಯನ್ನು ವರ್ಣಿಸುವ ಪದ್ಯವನ್ನು ಇಲ್ಲಿ ಉದಾಹರಿಸಬಹುದು.**

ನಾಗೇಂದ್ರನಂ ಬಿಡದೆ ತಲೆವಾಗಿಸಿತ್ತಮರ।
ನಾಗೇಂದ್ರನಂ ಬುದ್ಧಿ ದೊರೆಸಿತ್ತುಪುರಮರ್ದ ॥
ನಾಗೇಂದ್ರನಂ ನಿಂದು ಬೆರಗಾಗಿಸಿತ್ತಮಲ
ಧರ್ಮಜನ ಕೀರ್ತಿ ಬಳಿಕ।
ನಾಗೇಂದ್ರಶಯನಾಲಯದ ಜಡಧಿಯೆನಿಸಿ ನುತ।
ನಾಗೇಂದ್ರವರದಾಯುಧವ ಪೊಳ್ಳುಗೈದು ಮಥ।
ನಾಗೇಂದ್ರಧರನಜಾತೆಯ ನಿಲವುಗೆಡಸಿ ನೆರೆ
ರಾಜಿಸಿತು ಮೂಜಗದೊಳು ॥
**( ಸಂಧಿ ೨, ಪದ್ಯ ೧೨ )**

**ಪಾದಮಧ್ಯ ಯಮಕದ ಬಗೆಗೆ ಈ ಉದಾಹರಣೆಯನ್ನು ಲಕ್ಷಿಸಬಹುದು :**

ಮೊರೆವ ಮರಿದುಂಬಿಗಳ ಮಾಲೆಯಂ ತಾಳ್ದ ನವ।
ಪರಿಮಳದಮಂದಾರ ಮಾಲೆಯಂ ವಿಷಯೆ ಸೌಂ।
ದರ ಶಿರೀಷದ ಮಾಲೆಯಂ ಪೋಲ್ವ ನಳಿತೋಳ
ನೆತ್ತಿ ಕಂಧರದೊಳಿಡಲು।
ಭರಿತ ಲಾವಣ್ಯ ಸಾಕಾರದಿಂ ಮಂಗಳಾ।
ಭರಣಂಗಳೆಸವಲಂಕಾರದಿಂ ಪಾರ್ವರು।
ಚ್ಚರಿಪಗ್ನಿಹೋತ್ರ ಪ್ರಕಾರದಿಂ ವಧುವಂ
ಕುಳಿಂದಜಂ ಕೈವಿಡಿದನು ॥
**( ಸಂಧಿ ೩೧, ಪದ್ಯ ೧೬ )**

**ವಿಷಯೆಯು ಚಂದ್ರಹಾಸನನ್ನು ವರಿಸಿದ ವರ್ಣನೆಯನ್ನು ಈ ಪದ್ಯವು ಒಳಗೊಂಡಿರುವದು. ಇಲ್ಲಿ ಮೊದಲಿನ ಮೂರು ಪಾದಗಳಲ್ಲಿ ಒಂದು ಬಗೆಯಾಗಿ ಕೊನೆಯ ಮೂರು ಪಾದಗಳಲ್ಲಿ**

ಮತ್ತೊಂದು ಬಗೆಯಾಗಿಯೂ ಪಾದಮಧ್ಯ ಯಮಕವು ಬಂದಿರುವದನ್ನು ಕಾಣಬಹುದು.

ಲವನ ಬಾಣಗಳು ನಡೆಸಿದ ಹಾವಳಿಯನ್ನು ಸಿಯು ಬಹುಚಿತ್ರಮಯವಾಗಿ ವರ್ಣಿಸಿರುವನು. ವೈರಿಗಳನ್ನು ಹೇಗೆ ಹೇಗೆ ಅವು ಸವರಿದವು, ಸದೆಬಡಿದವು ಎಂಬುದನ್ನು ಇದರಲ್ಲಿ ಹೇಳಲಾಗಿರುವದು.

ಜಾನಕಿಯ ಸುತನ ಬಾಣಾವಳಿಯ ಹಾವಳಿಯ।
ನೇನೆಂಬನಹಿತರಂ ಕವರಿದುವು ಸವರಿದುವು।
ಬಾನೆಡೆಯೊಳಿಟ್ಟಣಿಸಿ ಹಾರಿದುವು ತರಿದುವು
ಕೊಂದುವರಿದುವು ಪರಿದುವು॥
ಆನೆ ಕುದುರೆಗಳನುರೆ ಸೀಳಿದುವು ತೂಳಿರುವು।
ನಾನಾಪ್ರಕಾರದಿಂ ಕೆಡಹಿದುವು ಕೊಡಹಿದುವು।
ಸೇನೆಗಳೊಡಲ್ಗಳಂ ಪಚ್ಚಿದುವು ಕೊಚ್ಚಿದುವು
ತಲೆಗಳಂ ತತ್‌ಕ್ಷಣದೊಳು॥
( ಸಂಧಿ ೨೦, ಪದ್ಯ ೪೭ )

ಇದು ಪಾದಾಂತ್ಯ ಯಮಕಕ್ಕುದಾಹರಣೆ. ಪಾದದ ಕೊನೆಗೆ ಅನುಪ್ರಾಸ ಬರುವದರಿಂದ ಎಷ್ಟೊಂದು ಮನೋಹರವಾಗಿದೆಯೆಂಬುದನ್ನು ಇಲ್ಲಿ ಕಾಣಬಹುದಾಗಿದೆ. ಇಂತಹ ಪದ್ಯಗಳು ಜೈಮಿನಿಯಲ್ಲಿ ವಿಪುಲವಾಗಿರುವವು.

ಪ್ರತಿಪಾದದಲ್ಲಿಯೂ ಅನುಪ್ರಾಸಗಳು ಕೆಲವೊಂದು ಪದ್ಯಗಳಲ್ಲಿ ಕಾಣಬರುವವು. ಇವುಗಳು ಕಾವ್ಯದಲ್ಲಿ ಹಾಸುಹೊಕ್ಕಾಗಿ ಅಲ್ಲಲ್ಲಿ ಅವಿತುಕೊಂಡಿವೆ.

ಯೌವನಾಶ್ವರೊಡನೆ ವೃಷಕೇತುವು ಹೋರಾಡಿದ ಪದ್ಯದ ಮೊದಲ ಭಾಗವನ್ನು ನಿರೀಕ್ಷಿಸಿದಾಗ ೧ ಹಾಗೂ ೨ನೇ ಗಣಗಳ ಆದಿಯಲ್ಲಿ ಅನುಪ್ರಾಸವಿರುವದು ಕಂಡು ಬರುವದು.

ಮಾರ್ಗದೊಳ್ ಮಾರ್ಗಣಂಗಳನರಿದು
ಕರ್ಣಜಂ
ಕೂರ್ಗಣೆಯ ಕಾರ್ಗಾಲಮಂ ಸೃಜಿಸಲಾ-
ನೃಪನ
ತೇರ್ಗೆರಗಿ ಕೂರ್ಗೊಂಡು ಮುತ್ತಿತು ಶರೌಘ!
ಮದನೇನೆಂಬೆನಾಕ್ಷಣದೊಳು॥

ಯುದ್ಧದಲ್ಲಿ ತೊಡಗಿದ್ದ ಪ್ರದ್ಯುಮ್ನ ಬಭ್ರುವಾಹನರು—

ಕೃತಚಾಪಚಾಪಲರ್ ಶಸ್ತ್ರಾಸ್ತ್ರನಿಪುಣರು।
ನ್ನತ ಸತ್ವ ಸತ್ವರರ್ ದುಸ್ಸಹರಜೇಯರ।
ಪ್ರತಿಮ ಸಮರ ಸಮರಥರ್ ಸಾಹಸಿಗಳಿರ್ವರುಂ
ಗಗನ ಗಮನದ ವೀರರು

ಎಂದು ಮುಂತಾಗಿ ಕಾಣುತ್ತಿದ್ದರೆಂದು ಹೇಳಿರುವನು. ಇಲ್ಲಿ ೧ನೇ ಗಣದ ಕೊನೆಯಲ್ಲಿ ಮತ್ತು ೨ನೇ ಗಣದ ಆದಿಯಲ್ಲಿ ಅನುಪ್ರಾಸ ಬಂದಿರುವದನ್ನು ಲಕ್ಷಿಸಬೇಕು.

ಜಲಕ್ರೀಡೆಗಾಗಿ ನಡೆತಂದ ವಿಷಯೆ ಚಂಪಕಮಾಲಿ ಮೊದಲಾದ ಮೋಹಿನಿಯರು ಹೇಗಿದ್ದರೆಂದು ವರ್ಣಿಸುವಾಗ ೨ನೇ ಹಾಗೂ ೪ನೇ ಗಣಗಳಲ್ಲಿ ಅನುಪ್ರಾಸವು ಬರುವದನ್ನು ನೋಡಬಹುದು.

ಕಲಕೀರ ವಾಣಿಯರ್ ಕಾಳಾಹಿವೇಣಿಯರ್।
ಕಲಭಮದಯಾನೆಯರ್ ಕಾಯಜನಿಧಾನೆಯರ್।
ಕಲಧೌತ ಗಾತ್ರೆಯರ್ ಕಂಜದಳ ನೇತ್ರೆಯರ್
ಕಳೆವೆತ್ತ ಕಾಮಿನಿಯರು॥
ಕಲಶಕುಚಯುಗಳೆಯರ್ ಕನಕಮಣಿ ನಿಗಳೆ
ಯರ್।
ಕಳವಳಿಪ ವಚನೆಯರ್ ಕುಲಿಶಾಭ ರದನೆಯರ್।
ಕಳೆದುಳಿದರನ್ನೆಯರ್ ಕಾಂತಿಸಂಪನ್ನೆಯರ್
ನಂದನಕೆ ನಡೆತಂದರು
( ಸಂಧಿ ೩೦, ಪದ್ಯ ೩ )

ಲಕ್ಷ್ಮೀಶನ ಅನುಪ್ರಾಸಗಳ ವೈಭವದೊಂದಿಗೆ ಇಲ್ಲಿ ಅವನ ವರ್ಣನಾವೈಖರಿಯನ್ನೂ ನಾವು ಕಂಡುಕೊಳ್ಳಬಹುದಾಗಿರುವದು.

ಇನ್ನೊಂದು ಕಡೆಗೆ ಭದ್ರಾವತಿ ನಗರವನ್ನು ಬಹು ಸುಂದರವಾದ ಶೈಲಿಯಲ್ಲಿ ವರ್ಣಿಸಿದ್ದಾನೆ.

ನಳನಳಿಪ ತರುಣತೆಯ ಸೊಂಪುವೆತ್ತರುಣತೆಯ।
ತಳಿರಿಡಿದ ತೋರಣದ ಚೆಲ್ವನಾಂತೋರಣದ।
ತೊಳಪ ಕಳಸನ ಗುಡಿಯ ಸಾಲ್ದಳೆದ
ಕನ್ನಡಿಯ ಸೆಳೆಯ ಸೀಗುರಿ ಚಮರಿಯ॥
ಚಲಿತ ಲೀಲಾಸ್ಯದ ಪತಾಕೆಗಳ ಲಾಸ್ಯದ ಪ।
ವಳದ ಮುತ್ತುಗಳ ಗೊಂಚಲ್ಗಳೊತ್ತುಗಳಗೊಂ।
ದಳದ ಬಗೆ ಕಂಗಳಿಂಬಿಗೆ ಕೌತುಕಂಗಳಿಂ।
ಬೀದಿಗಳೊಳೆಸೆದಿರ್ಪುವು॥
( ಸಂಧಿ ೩, ಪದ್ಯ ೧೭ )

ಇಲ್ಲಿ ಎರಡನೆ ಗಣದ ಆದಿಯಲ್ಲಿಯೂ ನಾಲ್ಕನೆ ಗಣದ ಆದಿಯಲ್ಲಿಯೂ ಅನುಪ್ರಾಸಗಳಿರುವದನ್ನು ಕಾಣಬಹುದು.

ಅನುಪ್ರಾಸಗಳನ್ನು ವೈವಿಧ್ಯಮಯವಾಗಿ ಬಳಸಿದ ಜೈಮಿನಿಯಲ್ಲಿ ಅನೇಕ ಬಗೆಯ ಅನುಪ್ರಾಸಗಳನ್ನು ಕಾಣಬಹುದೆಂಬದನ್ನು ಈ ವರೆಗಿನ ವಿವೇಚನೆಯಿಂದ ತಿಳಿದುಕೊಂಡೆವು. ಆರೂ ಪಾದಗಳಲ್ಲಿಯು ಸಕಲಗಣಗಳ ಆದಿಯಲ್ಲಿ ಕಾಣಬರುವ ಅನುಪ್ರಾಸದ ಉದಾಹರಣೆಯೊಂದನ್ನು ಇಲ್ಲಿ ಲಕ್ಷಿಸಬಹುದು.

ನಡೆ ಪಜ್ಜೆವಿಡಿ! ಪೋಗು ತಡೆ ನಿಲ್ಲು ಜಡಿ ಬೊಬ್ಬೆ।
ಗುಡು ಪೊದರೊಳಡಗು ಕೈಗೆಡದಿರಿಸು ನಿಡು ಸರಳ।
ತುಡು ಕೆಲಕೆ ಪಿಡಿಯದಿರ್ ಪೊಡೆ ಸಾರ್ಚು
ತುಡುಕು ಮೊಗಸಡಗು ಮರಕಡರೊಡರ್ಚು॥
ಅಡಗಿ ಪೊಯ್ ಜಡಿ! ಕೋಲನಿಡು ಮುಂದುಗಡೆ
ನಾಯ।
ಬಿಡು ಕೂಡೆ ಪಡಿ ತಳಿಸು ಸೆಡೆಯದಿರ್
ಕೆಡೆಪೆಂಬ।
ನುಡಿಗಳಡಿಗಡಿಗೆ ಕಿವಿಗಿಡಿದುವೆಲ್ಲೆಡೆಯೊಳಂ
ದಡವಿಯೊಳ್ ಕಡುಪೋಸತೆನೆ॥
( ಸಂಧಿ ೨೮, ಪದ್ಯ ೪೫ )

ಬೇಟೆಗೆ ಬಂದ ಕಿರಾತರ ನುಡಿಗಳನ್ನು ಇಲ್ಲಿ ಕಾಣಬಹುದು. ಈ ನುಡಿಗಳೇ ಅನುಪ್ರಾಸಗಳಾಗಿ ಪದದ ಕಾವ್ಯತೆಯನ್ನೂ ನಾದಮಯತೆಯನ್ನೂ ಹೆಚ್ಚಿಸಿರುವದನ್ನು ತಿಳಿಯಬಹುದು.

ನಾದಮಯವಾಗಿಯೂ ಶಬ್ದಾಲಂಕಾರಮಯವಾಗಿಯೂ ಮೆರೆಯುವ ಕನ್ನಡ ಜೈಮಿನಿಯು ಅದ್ಭುತ ಕಾವ್ಯವಾಗಿರುವದು. ಆದನ್ನೋದಿದಂತೆ ಹೊಸ ವಿಚಾರಗಳ ಅನುಭವವಾಗುವದು. ಕವಿ ಲಕ್ಷ್ಮೀಶನ ಮಾತಿನಲ್ಲಿಯೇ ಹೇಳಬೇಕಾದರೆ ಜೈಮಿನಿಯು "ಅಭಿಲಾಷೆಯಂತಿರೆ ಸದಾ ನವಂ" ಆಗಿರುವದು. ಇದು ಅರ್ಥವನ್ನರಿಯದವರ ಮನಸ್ಸಿನ ಮೇಲೆ ಸಹ ಪರಿಣಾಮವನ್ನುಂಟುಮಾಡುತ್ತದೆ. ಇದರ ಶಬ್ದಮಾಧುರ್ಯವು ಕನ್ನಡ ಬಾರದವರನ್ನು ಸಹ ಆಕರ್ಷಿಸಬಹುದೆಂದು ಭಾಸವಾಗುತ್ತದೆ. ಆಬಾಲವೃದ್ಧರನ್ನೂ ಪಂಡಿತಪಾಮರರನ್ನೂ ಆಕರ್ಷಿಸಿರುವ ಕಾವ್ಯವಿದು. ಅನುಭವದ ಆಳವೂ ಕಾವ್ಯಗಳ ಸಂಪರ್ಕವೂ ಹೆಚ್ಚಿದಂತೆ ಜೈಮಿನಿಯ ನವ್ಯತೆಯೂ ಸ್ವಾರಸ್ಯವೂ ಹೆಚ್ಚಾಗ ಹತ್ತುತ್ತದೆ.

---

# ಹಿಂದೀ ಸಾಹಿತ್ಯದ ಜನಪ್ರಿಯತೆ

**ರಾಷ್ಟ್ರಭಾಷೆಯ ಸ್ಥಾನವನ್ನು ಪಡೆದ ಹಿಂದೀ ಭಾಷೆಯ ಸಾಹಿತ್ಯವು ವೈವಿಧ್ಯಮಯವಾಗಿರುವದು. ಅದು ಬಹು ಪೂರ್ವಕಾಲದಿಂದಲೂ ಜನಪ್ರಿಯತೆ ಗಳಿಸಿದೆಯೆಂಬುದು ಪ್ರಾಚೀನ ಕವಿಗಳ ಕೃತಿಗಳಿಂದ ಕಂಡುಬಂದಿದೆ. ಇಂದಿಗೂ ಈ ಸಾಹಿತ್ಯ ಆ ಜನಪ್ರಿಯತೆಯನ್ನು ಉಳಿಸಿಕೊಂಡುಬಂದಿದೆ.**

ಲೇಖಕರು: ಶ್ರೀ ಜಿ. ವ್ಹಿ. ದಿವೇಕರ, ಮುಂಬಯಿ

ಭಾರತದಲ್ಲಿ ಸುಮಾರು ಆರುನೂರರಷ್ಟು ಜನನುಡಿ (dialects) ಗಳಿದ್ದರೂ ಸಾಹಿತ್ಯವುಳ್ಳ ಭಾಷೆಗಳು ಸ್ಥೂಲಮಾನದಿಂದ ಇಪ್ಪತ್ತರಷ್ಟು ಇರುವವೆಂದು ಹೇಳಬಹುದು. ಭಾರತೀಯ ಭಾಷೆಗಳ ಬೆನ್ನೆಲುವಾದ ಸಂಸ್ಕೃತವನ್ನು ಬಿಟ್ಟರೆ ತಮಿಳು ಎಲ್ಲ ಭಾಷೆಗಳಿಗಿಂತ ಪ್ರಾಚೀನವೆಂದು ಹೇಳುತ್ತಾರೆ. ಅದಕ್ಕೆ ವಿಪರೀತವಾಗಿ ಎಲ್ಲಕ್ಕಿಂತ ಹೊಸತಾದ ಹಾಗೂ ಸಂತತವಾಗಿ ಬೆಳೆಯುತ್ತಿರುವ ಭಾಷೆ ಹಿಂದೀ. ಭಾರತದಲ್ಲಿಯ ತಮಿಳು, ಬಂಗಾಲಿ, ಕನ್ನಡ, ಮರಾಠೀ ಮೊದಲಾದ ಭಾಷೆಗಳು ಉತ್ಕೃಷ್ಟ ಸಾಹಿತ್ಯದ ವಾಹಿನಿಗಳೆಂದು ಹೆಸರಾಗಿವೆ. ಕೋಟ್ಯವಧಿ ಜನರಿಗೆ ಈ ಭಾಷೆಗಳ ಸಾಹಿತ್ಯದಲ್ಲಿ ಅಭಿರುಚಿಯುಂಟು. ಆದರೆ ಒಂದು ಭಾಷೆ ಮತ್ತೊಂದು ಭಾಷೆಯನ್ನಾಡುವವರಿಗೆ ತಿಳಿಯುವದಿಲ್ಲ. ಆದುದರಿಂದ ಯಾವುದೇ ಒಂದು ಭಾಷೆಯ ಸಾಹಿತ್ಯವು ಎಷ್ಟೇ ಲೋಕಪ್ರಿಯವಾಗಿದ್ದರೂ ಆ ಭಾಷೆಯ ಭೌಗೋಲಿಕ ಸೀಮೆಯ ಹೊರಗೆ ಅದರ ವರ್ಚಸ್ಸಿರುವದಿಲ್ಲ. ಇದಕ್ಕೆ ಅಪವಾದ ಹಿಂದೀ ಭಾಷೆಯ ಸಾಹಿತ್ಯ. ಅದರ ಸದ್ಭಾಗ್ಯದಿಂದ ಅದಕ್ಕೆ ಭೌಗೋಲಿಕ ವಿಸ್ತಾರವೂ ಎಲ್ಲಕ್ಕಿಂತ ಹೆಚ್ಚು ದೊರೆತಿದೆ. ದಕ್ಷಿಣೋತ್ತರವಾಗಿ ಮಧ್ಯಪ್ರದೇಶದಿಂದ ಪಂಜಾಬದ ವರೆಗೆ, ಪಶ್ಚಿಮ ಪೂರ್ವಕ್ಕೆ ರಾಜಸ್ಥಾನದಿಂದ ಬಿಹಾರದ ವರೆಗೆ ಜನಸಾಮಾನ್ಯದ ಭಾಷೆ ಹಿಂದೀ ಎಂದು ಹೇಳಬಹುದು. ಭಾಷಾಶಾಸ್ತ್ರದ ದೃಷ್ಟಿಯಿಂದ ನೋಡಿದರೆ ಸಾಮಾನ್ಯ ಜನರು ಮಾತನಾಡುವ "ಹಿಂದೀ" ಭಾಷೆ ಎಲ್ಲ ಕಡೆಗೂ ಒಂದೇ ಮಾದರಿಯದಿರುವುದೆಂದು ಹೇಳಲಿಕ್ಕಾಗದು.

## ಹಿಂದೀ ಎಂದರೆ ಯಾವ ಭಾಷೆ?

ಭಾರತದ ರಾಷ್ಟ್ರಭಾಷೆಯಾಗುತ್ತಲಿರುವ ಹಿಂದೀ ಭಾಷೆಯ ಸ್ವರೂಪದ ವಿಷಯದಲ್ಲಿ ವಿವೇಚನೆಯನ್ನು ಮಾಡುವುದು ಹಾಸ್ಯಾಸ್ಪದವಾಗುತ್ತಿದ್ದರೂ ಹಿಂದೀ ಸಾಹಿತ್ಯದ ಬೆಳವಣಿಗೆ ಹಾಗೂ ಜನಪ್ರಿಯತೆಗೆ ಅಹಿಂದೀ ಭಾಷಿಕರ ನೆರವು ವಿಶೇಷವಾಗಿ ಆಗಿರುವುದರಿಂದ ಹಿಂದೀಯೆಂದರೆ ಒಂದು ಪ್ರದೇಶವಿಶೇಷದ ಭಾಷೆಯೆಂದಿರದೆ ರಾಜಸ್ಥಾನಿ ಬ್ರಜ, ಅವಧೀ ಉರ್ದು, ಹಿಂದುಸ್ಥಾನೀ, ದಕ್ಕನೀ ಮುಂತಾದ ಸಾಹಿತ್ಯ ಶೈಲಿಗಳಿಂದ ಸಮೃದ್ಧವಾದ ವ್ಯಾಪಕ ಸ್ವರೂಪದ ಹಿಂದೀ ಸಾಹಿತ್ಯವೆಂದು ಅರ್ಥಮಾಡಿಕೊಳ್ಳುವುದು ಹೆಚ್ಚು ನ್ಯಾಯವಾಗಿದೆ. ಆದುದರಿಂದ ಹಿಂದೀ ಭಾಷೆಯ ಈ ಉಪಾಂಗಗಳ ವಿಷಯದಲ್ಲಿ ಕೆಲವು ಮುಖ್ಯ ಸಂಗತಿಗಳನ್ನು ತಿಳಿದುಕೊಳ್ಳುವುದು ಅತ್ಯವಶ್ಯಕ.

ಭಾರತೀಯ ಭಾಷೆಗಳ ಇತಿಹಾಸದಲ್ಲಿ ಎರಡೇ ನುಡಿಗಳು ಅಖಿಲ ಭಾರತದಲ್ಲಿಯಲ್ಲದೆ ಭಾರತದ ಹೊರಗೆ ಕೂಡ ಪ್ರಸಾರವನ್ನು ಹೊಂದುವ ಭಾಗ್ಯವನ್ನು ಪಡೆದಿರುವವು. ಮೊದಲನೆಯದಾಗಿ ಋಗ್ವೇದ ಕಾಲದ ಜನರ ನುಡಿಯು ಜಗತ್ತಿನಲ್ಲಿಯ ಅಭಿಜಾತ (Classical) ಭಾಷೆಯಾದುದು. ಎರಡನೆಯದು ದಿಲ್ಲೀ ಹಾಗೂ ಮಿರತ್ ಇವುಗಳ ಮಧ್ಯದಲ್ಲಿಯ ಪ್ರದೇಶದ ಜನರ ನುಡಿಯು ಅಖಿಲ ಭಾರತದ ರಾಷ್ಟ್ರಭಾಷೆಯಾದುದು. ಇದು "ಖಡೀ ಬೋಲೀ" ಎಂಬ ಸಾಮಾನ್ಯ ನುಡಿ (Dialect). ಆದರೆ ಐತಿಹಾಸಿಕ ಕಾರಣಗಳ ಮೂಲಕ ಬೇರೆ ಯಾವ ಭಾಷೆಗೂ ಒದಗದಷ್ಟು ಮಹತ್ವವು ಈ ನುಡಿಗೆ ಬಂದಿದೆ. ಹಿಂದೀ ಭಾಷೆಯು ತಳಹದಿ ಇದೇ ಭಾಷೆ. ಹಿಂದೀ ಎಂಬ ಹೆಸರು ಭಾರತದಲ್ಲಿ ಮುಸಲ್ಮಾನರ ಪ್ರಭುತ್ವದ ಮೂಲಕ ಬಂದಿತು. ಇರಾಣ-ಅಫಗಾನಿಸ್ತಾನ ಅಕ್ರಮಕ ದೃಷ್ಟಿಯಿಂದ ಭಾರತದ ಎಲ್ಲ ಭಾಷೆಗಳೂ "ಹಿಂದೀ" ಭಾಷೆಗಳಾಗಿದ್ದರೂ ಕಾಲಾಂತರದಿಂದ ಉತ್ತರ ಹಿಂದುಸ್ಥಾನದ ಭಾಷೆ ಹಿಂದೀ ಎಂದಾಯಿತು. ೧೩ನೆಯ ಶತಮಾನದಲ್ಲಿ ಅಮೀರ ಖುಸ್ರೋ ಎಂಬ ಫಾರಸಿ ಕವಿಯು "ಹಿಂದೀ" ಭಾಷೆಯಲ್ಲಿ ಸುಂದರವಾದ ಒಡಪುಗಳನ್ನು ರಚಿಸಿರುವನು. ಅದಲ್ಲದೆ ಅಮರಕೋಶದಂತೆ ಪದ್ಯಮಯ ಕೋಶವನ್ನೂ ಮಾಡಿರುವನು. ಖಿಲಜೀ ಸುಲ್ತಾನರ ರಾಜ್ಯ ವಿಸ್ತಾರದೊಡನೆ ಈ ಭಾಷೆಯ ವಿಸ್ತಾರವೂ ಆಯಿತು. ದಕ್ಷಿಣದಲ್ಲಿಯ ಬಹಮನಿ, ಆದಿಲ್-ಶಾಹೀ, ಕುತುಬ್‌ಶಾಹೀ ರಾಜ್ಯಗಳಲ್ಲಿ ಇದೇ ಭಾಷೆ "ದಕ್ಕನೀ" ಎಂಬ ಸಾಹಿತ್ಯದ ಭಾಷೆಯಾಯಿತು. ಈ ಭಾಷೆಯಲ್ಲಿ ರಚಿಸಿದ ಸುಲ್ತಾನ್ ಮುಹಮ್ಮದ ಕುಲ್ಲೀ ಕುತ್ಬಶಾಹನ ರಚನೆಗಳೇ ಹಿಂದೀ-ಉರ್ದೂ-ಭಾಷೆಯ ಅದ್ಯ ಕವಿತಾ ಸಂಗ್ರಹ (ದಿವಾನ್) ವಾಗಿ ಪರಿಣಮಿಸಿದುವು. ದಕ್ಷಿಣದಿಂದ ಉತ್ತರಕ್ಕೆ ಹೋದ ವಲೀ ಎಂಬ ಕವಿಯ ಮೂಲಕವೇ ಉರ್ದೂ ಕಾವ್ಯಸಾಹಿತ್ಯಕ್ಕೆ ಕಳೆ ಬಂದಿತು. ಅಲ್ಲಿಯ ವರೆಗೆ ಉರ್ದೂ ಭಾಷೆಯು ಸಾಹಿತ್ಯದ ಭಾಷೆಯಾಗಿರಲಿಲ್ಲ.

## ಉರ್ದು ಭಿನ್ನವಾದುದು ಯಾವಾಗ?

ಒಂದೆಡೆಗೆ ಮುಸಲ್ಮಾನರ ಸಂಪರ್ಕದಿಂದ ಉದಯಕ್ಕೆ ಬಂದ ಉರ್ದೂ ಭಾಷೆ ಹಾಗೂ ಸಾಹಿತ್ಯ ಶೈಲಿಯೂ ಬೇರೆಡೆಗೆ ದೇಶೀ ಪದ್ಧತಿಯ ಹಿಂದೀ ಸಾಹಿತ್ಯವೂ ಸ್ವತಂತ್ರ ರೂಪದಿಂದ ಬೆಳೆಯುತ್ತ ಬಂದವು. ಮುಂದೆ ಬ್ರಿಟಿಶರ ಕಾಲದಲ್ಲಿ ಈ ಶೈಲಿಗಳು ಭಿನ್ನ ಭಾಷೆಗಳಾಗಿ ಹೋದವು. ಇವುಗಳಲ್ಲಿಯ ಕೃತ್ರಿಮ ವ್ಯತ್ಯಾಸವನ್ನು ಹೋಗಲಾಡಿಸುವದಕ್ಕೆ ಅನೇಕ ಪ್ರಯತ್ನಗಳಾದವು. ಗಾಂಧೀಜಿಯವರು ಈ ಭಾಷೆಗಳ ಯೋಗ್ಯ ಸಮನ್ವಯವನ್ನು ಮಾಡಿ "ಹಿಂದುಸ್ತಾನೀ" ಶೈಲಿಯನ್ನು ಲೋಕಪ್ರಿಯವಾಗಿ ಮಾಡಲಿಕ್ಕೆ ಬಹಳ ಪರಿಶ್ರಮವನ್ನು ಮಾಡಿದರು. ಈ ರೀತಿಯಾಗಿ ಕಾಲಕಾಲಕ್ಕೂ ಸಮನ್ವಯಗೊಳ್ಳುತ್ತ ಬೆಳೆದ ಹಿಂದೀ ಸಾಹಿತ್ಯವೇ ಜನಪ್ರಿಯವಾಗಿರುವುದು. ಚಾಂದಭಾಟ "ಪೃಥ್ವೀರಾಜ ರಾಸೋ" ಎಂಬ ಕಾವ್ಯದಿಂದ ಮೊದಲು ಮಾಡಿ ಸೂರದಾಸ, ಕಬೀರದಾಸ, ಗುರುನಾನಕ, ನಾಮದೇವ, ಖಾನಖಾನಾನ್ (ರಹೀಮ್) ಮೊದಲಾದ ಸಾಹಿತಿಗಳ ಕೃತಿಗಳು ಸಾಹಿತ್ಯಸಂಗಮದ ಪ್ರತೀಕವಾಗಿರುವುದರಿಂದ ಜನಪ್ರಿಯವಾಗಿರುವವು.

## ಪ್ರಾಚೀನ ಕವಿಗಳ ಕೃತಿಗಳು

ಕೆಳಗಿನ ಕೆಲವು ಪ್ರಾಚೀನ ಕವಿತೆಗಳಿಂದ ಈ ಮಾತು ವಿಶದವಾಗುವುದು.

—ತುಲಸೀದಾಸ

ತುಲಸೀ ಆಹ ಗರೀಬಕೀ ಹರಸೇ ಸಹೀ ನ
ಜಾಯ
ಮೋಯ ಚಾಮ ಕೀ ಧೋಂಕಸೇ ಕಠಿನ
ಲೋಹ ಭಸ್ಮ ಹೋ ಜಾಯೆ ।

[ಹರನು ದೀನರ ನಿಃಶ್ವಾಸವನ್ನು ಸಹಿಸನು. (ಅವನ ಪ್ರಭಾವದಿಂದ) ಕಬ್ಬಿಣವೂ ಭಸ್ಮವಾಗಿ ಹೋಗುವುದು]

—ಸೂರದಾಸ

ಮೋಂ ಸೋಂ ಕೌನ ಕಠಿನ ಬಲ ಕಾಮೀ
ಜಿನ ತನ ದಿಯೋ ತಾಹೀ ಬಿಸರಾಯೋ
ಐಸೋ ನಾನಹರಾಮೀ
ಹರಿಜನ ಛೋಡ ಹರಿ ವಿಮುಖನ ಕೀ
ನಿಸದಿನ ಕರತ ಗುಲಾಮೀ
ಪಾಪೀ ಕೌನ ಬಡಾ ಮೋಂಸೆ ಸಬ ಪತಿತನ
ಮೆಂ ನಾಮೀ
ಸೂರ ಪತಿತ ಕೋ ಠೋರ ಕಹಾಂ ಹೈ
ಸುನಿಯೇ ಶ್ರೀಪತಸ್ವಾಮಿ ॥

[ನಾನೆಂಥ ದುರುಳನು, ದೇಹವನ್ನಿತ್ತ ಸ್ವಾಮಿಯನ್ನು ಮರೆತು ಕೃತಘ್ನನೆಂದೆನಿಸಿದೆ. ಹರಿಯ ಭಕ್ತರನ್ನು ಬಿಟ್ಟು ಅವನ ಹಗೆಗಳ ಸೇವೆಯನ್ನು ಹಗಲಿರುಳೂ ಮಾಡಿದೆ. ನನಗಿಂತ ಹೆಚ್ಚು

ದುಷ್ಕೀರ್ತಿಯನ್ನು ಹೊಂದಿದ ಪಾಪಿ ಬೇರೆಯವನಾರು? ಸ್ವಾಮೀ, ಪತಿತನಿಗೆ ಗತಿಯಾವುದೆಂದು ಹೇಳುವಿರಾ? ]

ರಹೀಮನು ಮೋಹಕ ಶೈಲಿಯಲ್ಲಿ ಹೇಳಿದ ವ್ಯವಹಾರನೀತಿವಚನಗಳನ್ನು ಇಲ್ಲಿ ಕಾಣಬಹುದು :—

ರಹಿಮನ ಸೀಧೀ ಚಾಲ ಸೋಂ ಪ್ಯಾದಾ ಹೋತ ವಜೀರ।
ಫರಜೀ ಶಾಹ ನ ಹೋ ಸಕೇ ಟೇಢೀಕೀ ತಾಸೀರ॥

[ ಸರಳ ಮಾರ್ಗದಿಂದ ನಡೆದರೆ (ಚದುರಂಗದಲ್ಲಿಯ) ಪ್ಯಾದೆಯೂ ವಜೀರ (Queen)ನಾಗಬಹುದು. ಒಂಟೆ (Bishop) ಎಂದಾದರೂ ರಾಜ (King) ನಾಗಬಹುದೇ? ಅಡ್ಡತಿಡ್ಡ ನಡೆದರೆ ಇದೇ ಗತಿ ]

—ಕಬೀರದಾಸ

ದು ಇ ಜಗದೀಸ ಕಹಾಂ ತೇ ಆಯಾ,
ಕಹು ಕಏನೇ ಭರ ಮಾಯಾ॥
ಅಲ್ಲಹ—ರಾಮ—ಕರೀಮಾ-ಕೇಸೋ, ಹಜರತ ನಾಮ ಧರಾಯಾ।
ಗಹನಾ ಏಕ ಕವಕತೇ ಗಹನಾ ಇ ನ್ನಿ ಮಂಹ ಭಾವನ ದೂ ಜಾ॥
ಕಹನ ಸುನನ ಕೋ ದುರ ಕರಿ ಪಾಪಿನ ಇಕ ನಮಾಜ ಇಕ ಪೂಜಾ।
ವಹೀ ಮಹಾದೇವ, ವಹೀ ಮುಹಮ್ಮದ, ಬ್ರಹಾ ಆದಮ ಕಹಿಯೇ।
ಕೋ ಹಿಂದೂ, ಕೋ ತುರುಕ, ಕಹಾವೇ, ಏಕ ಜಿಮೀಂ ಪರ ರಹಿಯೇ॥
ವೇದ ಕಿತೇಬ ಪಢೇ ವೇ ಕುತುಬಾ, ವೇ ಮೋಲಾನಾ ವೇ ಪಾಂಡೇ।
ಬೇಗರಿ ಬೇಗರಿ ನಾಮ ಧರಾಯೇ, ಇಕ ಮಟಿ-ಯಾ ಕೇ ಭಾಂಢೇ॥
ಕಂಹಹಿ ಕಬೀರ ವೇ ದೋನೌ ಭೂಲೆ, ರಾಮಹಿ ಕಿನಹುನ ಪಾಯಾ।
ವೇ ಖಸ್ಸೀ, ವೇ ಗಾಯ ಕಟಾವೇಂ, ಬಾದ ಹಿ ಜನ್ಮ ಗಂವಾಯಾ॥

[ ಹಿಂದೂ ಮುಸಲ್ಮಾನ ಧರ್ಮ ತತ್ವಗಳು ಒಂದೇ ಇದ್ದರೂ ಆಚಾರ ಭೇದಗಳ ಮೂಲಕ ಭ್ರಮೆಯುಂಟಾಗಿರುವದು ].

ಗೋವಳಕೊಂಡದ ರಾಜಕವಿಯಾದ ವಜಹೀರ (ಕ್ರಿ. ಶ. ೧೬೦೦) ಇವನ ದಕ್ಷಿಣ ದೇಶದ ಗೌರವ-ಪರ ಕವನವಿದು.

ದಕನ ಸಾ ನಹೀಂ ಠಾರ ಸಂಸಾರ ಮೇಂ।
ಪಂಚ ಫಾಜಿಲಾಂ ಕೀ ಉಸ ಠಾರ ಮೇಂ॥
ದಕನ್ ಮುಲ್ಕ್ ಕೀ ಧನ್ ಅಜಬ್ ಸಾಜ ಹೈ।
ಕಿ ಸಬ್ ಮುಲ್ಕ್ ಸಿರ ಹೌರ ದಕನ್ ತಾಜ ಹೈ,
ದಕನ್ ಮುಲ್ಕ್ ಭೌತೀಚ ಖಾಸಾ ಅಹೇ
ತಿಲಂಗಾನಾ ಉಸ ಕಾ ಖುಲಾಸಾ ಅಹೇ॥

[ ದಕ್ಷಿಣ ದೇಶದಂಥ ನಾಡು ಜಗತ್ತಿನಲ್ಲಿ ಬೇರೊಂದಿಲ್ಲ. ಅಲ್ಲಿ ವಿದ್ವಾಂಸರಿಗೆ ಯೋಗ್ಯ ಸ್ಥಾನವಿದೆ. ದಕ್ಷಿಣ ದೇಶವು ಅಲಂಕೃತ ಸುಂದರಿಯಂತೆ ಇದೆ. ಇಡಿಯ ದೇಶವು ಶರೀರ, ದಕ್ಷಿಣವು ಕಿರೀಟ, ಈ ದೇಶವು ಬಹು ಆಶ್ಚರ್ಯಕರವಾಗಿದ್ದು ತೆಲಂಗಣಾ (ಆಂಧ್ರವು) ಅದರ ಸಾರಭೂತವಾಗಿದೆ. ]

## ನವಹಿಂದೀ

ಈ ರೀತಿಯಾಗಿ ಎಲ್ಲರಿಗೂ ಮೆಚ್ಚುಗೆಯಾಗುವಂತೆ ಹಾಗೂ ಸಹಜವಾಗಿ ಸೂಕ್ಷ್ಮವಾದ ಮಾತುಗಳನ್ನು ಪರಿಣಾಮಕಾರಕವಾಗಿ ಹೇಳುವುದಕ್ಕೆ ಹಿಂದೀ ಭಾಷೆಯೇ ಯೋಗ್ಯವಾದ ಮಾಧ್ಯಮವೆಂದು ಕಳೆದ ಎಷ್ಟೋ ಶತಮಾನಗಳಲ್ಲಿಯ ಜನರ ನಂಬುಗೆ ಇದ್ದಿತು. ಭಾಷೆಯ ದೃಷ್ಟಿಯಿಂದಲೂ ಹಿಂದೀ ಭಾಷೆಯು ಸಹಜಸಾಧ್ಯವೂ ಸರ್ವಗ್ರಾಹಕವೂ ಆಗಿದೆ ಎಂಬುದು ಮೇಲಿನ ಕಾವ್ಯಗಳಿಂದ ತಿಳಿದು ಬರುವದು. ಹೀದೀ ಶಬ್ದಗಳು ಅಚ್ಚುಕಟ್ಟಾಗಿಯೂ ಸಮರ್ಪಕವಾಗಿಯೂ ಇರುವುದರಿಂದ ಭಾರತದ ಎಲ್ಲ ಭಾಷೆಗಳಲ್ಲಿಯೂ ಮನೆಮಾಡಿಕೊಂಡಿರುವವು. ಪಾನ್, ರಸ್ತಾ, ಜಾಸ್ತೀ, ಕಮ್, ಹುಷಾರ್, ಮಸ್ತೀ, ತಮಾಶಾ, ನೌಕರೀ, ಪೈಸಾ, ಮುಂತಾದ ನಿತ್ಯ ವ್ಯವಹಾರದ ಶಬ್ದಗಳನ್ನು ತಿಳಿಯದವರಾರು? ವ್ಯಾಕರಣದ ದೃಷ್ಟಿಯಿಂದಲೂ ಲಿಂಗಪ್ರಬಂಧ ಹಾಗೂ "ನೇ" ಪ್ರತ್ಯಯವನ್ನು ಹಚ್ಚುವ ಪ್ರಯೋಗವನ್ನು ಬಿಟ್ಟರೆ ದಕ್ಷಿಣದವರಿಗೂ ಹಿಂದೀ ಕಲಿಯುವುದರಲ್ಲಿ ಏನೂ ತೊಂದರೆಯಿಲ್ಲ. ಆದುದರಿಂದಲೇ ಕಳೆದ ಅರ್ಧ ಶತಮಾನದಲ್ಲಿ ಲಕ್ಷಾವಧಿ ಅಹಿಂದೀ ಭಾಷಿಕರು ಹಿಂದೀ ಭಾಷೆಯಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿರುವರು.

ಕಳೆದ ಒಂದು ಒಂದೂವರೆ ನೂರುವರ್ಷಗಳಲ್ಲಿ ಹಿಂದೀ (ಉರ್ದೂ ಸಹಿತ) ಭಾಷೆಗಳಲ್ಲಿ ಅನೇಕ ಕ್ರಾಂತಿಗಳಾಗಿರುವವು. ನವಹಿಂದೀ ಭಾಷೆಯ ಪ್ರವರ್ತಕರಾದ ಬಾಬೂ ಹರಿಶ್ಚಂದ್ರ ಹಾಗೂ ಉರ್ದೂ ಭಾಷೆಗೆ ಆಧುನಿಕ ರೂಪವನ್ನು ಒದಗಿಸಿಕೊಟ್ಟ ಶಿಬ್ಲೀ ಇವರ ಪ್ರಯತ್ನಗಳ ಮೂಲಕ ಹಿಂದೀ ಭಾಷೆಯ ಪ್ರಮಾಣೀಕರಣವಾಗಿದ್ದು ಒಂದೇ ಮಾದರಿಯ ಭಾಷೆಯನ್ನು ಸಾಹಿತ್ಯದ ಭಾಷೆಯೆಂದು ತಿಳಿಯಲಾಗುತ್ತದೆ. ಲಿಪಿ ಹಾಗೂ ಶಬ್ದಾವಲಿಯನ್ನು ಬಿಟ್ಟರೆ ಪ್ರಮಾಣಿತ ಹಿಂದೀ ಅಥವಾ ಉರ್ದೂ ಭಾಷೆಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಎಂತಲೇ ಚಕ್‌ಬಸ್ತ್, ಹಾಲೀ, ನಜೀರ್ ಗಾಲಿಬ್, ಅಕಬರ ಇಲಹಾಬಾದಿ ಇಕ್ಬಾಲ, ಉಪೇಂದ್ರನಾಥ ಅಶ್ಕ, ಪ್ರೇಮಚಂದ್ರ, ಕೃಷ್ಣಚಂದ್ರ ಮುಂತಾದವರ ಕೃತಿಗಳು ಲೋಕಪ್ರಿಯವಾದ ಹಿಂದೀ ಸಾಹಿತ್ಯವೆಂದೆನಿಸುವವು. ಗಝಲ್ ಹಾಗೂ ಗೀತಗಳ ಪ್ರಭಾವವು ಭಾರತದ ಇನ್ನುಳಿದ ಭಾಷೆಗಳ ಸಾಹಿತ್ಯದ ಮೇಲೆಯೂ ಬಿದ್ದುದು ಕಂಡುಬರುವುದು. ಸುಕರವಾದ ಭಾಷೆಯಲ್ಲಿ ಚಮತ್ಕೃತಿಯನ್ನುಂಟುಮಾಡುವ ಹಿಡಿತವು ಹಿಂದೀ ಸಾಹಿತ್ಯದ ವೈಶಿಷ್ಟ್ಯ. ಗಾಲಿಬನ ಈ ಪ್ರಸಿದ್ಧ ಗಝಲನ್ನು ಗಮನಿಸಿರಿ.

ಇಶ್ಕ್ ಪರ ಜೋರ ನಹೀಂ ಹೈ ಏ ವೋ ಅತಿಶ ಗಾಲಿಬ್
ಕಿ ಲಗಾಯೇ ನ ಲಗೇ ಔರ ಬುಝಾಏ ನ ಬುಝೇ।

[ ಪ್ರೇಮದ ಮೇಲೆ ಯಾವ ಶಕ್ತಿಯೂ ನಾಟುವುದಿಲ್ಲ. ಹಚ್ಚಿದರೆ ಹತ್ತದ ಹಾಗೂ ಆರಿಸಲು ಹವಣಿಸಿದರೆ ಆರದಂಥ ಬೆಂಕಿಯದು! ]

ಅಕಬರ ಇಲಾಹಾಬಾದಿಯ 'ನಿರ್ಣಯ' ಈ ರೀತಿಯಾಗಿದೆ.

ಇಶ್ಕ್ ನಾಜುಕ್ ಮಿಝಾಜ ಹೈ ಬೇಹದ್
ಅಕ್ಲ್ ಕಾ ಬೋಝು ಉಠಾ ನಹೀಂ ಸಕತಾ॥

[ ಪ್ರೇಮವು ಬಹಳ ಕೋಮಲ ಪ್ರಕೃತಿಯದಾಗಿರುವುದರಿಂದ ಬುದ್ಧಿಯ ಭಾರವು ಅದಕ್ಕೆ ನೀಗುವದಿಲ್ಲ. ]

ಇದಲ್ಲದೆ ಸದ್ಯದ ಯುಗದಲ್ಲಿಯ ಹೊಸ ವಿಚಾರಸರಣಿಯು ಹಿಂದೀ ಸಾಹಿತ್ಯದಲ್ಲಿ ಉತ್ಕಟವಾಗಿಯೂ ಮಾರ್ಮಿಕವಾಗಿಯೂ ಪ್ರತಿಬಿಂಬಿತವಾದುದರಿಂದ ಹಿಂದೀ ಸಾಹಿತ್ಯಕ್ಕೆ ಹೆಚ್ಚಿನ ಲೋಕಪ್ರಿಯತೆ ಒದಗಿದೆ. ಸಾಹಿತ್ಯ, ರಾಜಕಾರಣ ಹಾಗೂ ಸಮಾಜಕಾರಣದ ಹೊಸ ಮತ ಸಂಕೇತಗಳನ್ನನುಸರಿಸಿ ಅನೇಕ ನವ ಸಾಹಿತಿಗಳು ಉದಯಕ್ಕೆ ಬಂದಿದ್ದಾರೆ. ತಾಜಮಹಾಲನ್ನು ಸೌಂದರ್ಯದ ಸ್ವಪ್ನವೆಂದು ಸಾರಿ ಅದರ ಪವಾಡಗಳನ್ನು ಹಾಡುವ ಕವಿತೆಗಳಿಗೆ ಎಣಿಕೆಯಿಲ್ಲ. ಆದರೆ ಸಾಹಿರ್ ಲುಧಿಯಾನವಿಯು "ತಾಜಮಹಲ"ನ್ನು ಈ ರೀತಿಯಾಗಿ ಮಾರ್ಮಿಕವಾಗಿ ಹೇಳಿದ್ದಾನೆ:-

"ಪ್ರಿಯೆ! ಈ ಜಗತ್ತಿನಲ್ಲಿ ಅನೇಕರು ಪ್ರೇಮವನ್ನು ಮಾಡಿರುವರು. ಅವರ ಭಾವನೆಯು ಯಥಾರ್ಥವಲ್ಲವೆಂದು ಯಾರು ಹೇಳುವರು? ಆದರೆ ಅವರಿಗೆ ತಮ್ಮ ಪ್ರೇಮವನ್ನು ತೋರಲಿಕ್ಕೆ ಶಾಹಜಹಾನನ ಸಂಪತ್ತು ಇರಲಿಲ್ಲ. ಅವರು ನಮ್ಮಂತೆ ಬಡವರಿದ್ದರು.

ಈ ತಾಜಮಹಲಿಗೆ ಸುಂದರ ಆಕೃತಿಯನ್ನು ಒದಗಿಸಿದ ಕಲಾಕಾರರೂ ಪ್ರೇಮಪಾಶದಲ್ಲಿ ಬೀಳದಿದ್ದಿರಬಹುದೇ? ಆದರೆ ಅವರ ಪ್ರೇಮದ ಸಮಾಧಿಗಳು ಗುರುತಿಸದೇ ಹೋಗಿರುವವು, ಅವನ್ನಾರು ಲೆಕ್ಕಿಸುವರು?"

### ಭಾಷಾಮಾಧುರ್ಯ

ಹಿಂದೀ ಸಾಹಿತ್ಯದ ಜನಪ್ರಿಯತೆಗೆ ಮತ್ತೊಂದು ಪ್ರಮುಖ ಕಾರಣ ಆ ಭಾಷೆಯ ಮಾಧುರಿ, ಹಿಂದೀ ಪದ್ಯಗಳ ಗೇಯತ್ವ ಹಾಗೂ ಸಂಗೀತಕ್ಕೆ ಅನುಕೂಲವಾದ ಶಬ್ದಸಂಪತ್ತು. ಸಂಸ್ಕೃತದಲ್ಲಿ ಜಯದೇವನು ಹೆಸರಾದಂತೆ ಹಿಂದಿಯಲ್ಲಿ ವಿದ್ಯಾಪತಿಯು ಸಂಗೀತಾನುಕೂಲವಾದ ಶೃಂಗಾರ ಪ್ರಚುರವಾದ ಭಕ್ತಿ ಸಾಹಿತ್ಯವನ್ನು ನಿರ್ಮಿಸಿದ್ದಾನೆ. ತಾನಸೇನನ ಕಾಲದಿಂದ ಹಿಂದುಸ್ಥಾನೀ ಸಂಗೀತದ ಪುನರುಜ್ಜೀವನವಾಗುತ್ತಲಿದ್ದು ಆದರ ಆಧಾರಕ್ಕೆಂದು ಬ್ರಜ ಭಾಷೆಯ ಕೃಷ್ಣಪ್ರೇಮದ ಗೀತಗಳನ್ನೇ ಆಯ್ದುಕೊಳ್ಳುವ ಪರಿಪಾಠವು ಇನ್ನೂ ಪ್ರಚಾರದಲ್ಲಿರುವುದು. ಹಿಂದುಸ್ಥಾನೀ ಪದ್ಧತಿಯ ಸಂಗೀತದಲ್ಲಿ ಹಿಂದೂ ಮುಸಲ್ಮಾನ ಗಾಯನಶಾಸ್ತ್ರಿಗಳು ಬ್ರಜಭಾಷೆಯ ಪದ್ಯಗಳನ್ನು ರಚಿಸಿ ಹೊಸ ರಾಗ ರಾಗಿಣಿಗಳಲ್ಲಿ ಉಪಯೋಗಿಸುವರು. ಇದರಿಂದ ಹಿಂದೀ ಸಾಹಿತ್ಯದ ಯೋಗ್ಯತೆಗೆ ಪುಟ ದೊರೆತಿದೆ.

ಕಳೆದ ಕಾಲು ಶತಮಾನದಲ್ಲಿ ವಾಕ್-ಚಿತ್ರಪಟಗಳು ಸಾಮಾಜಿಕ ಜೀವನದಲ್ಲಿ ಬಹಳ ಮಹತ್ವದ ಸ್ಥಾನವನ್ನು ಪಡೆದಿವೆ. ಭಾರತದ ಎಲ್ಲ ಭಾಷೆಗಳಿಗಿಂತ ಹಿಂದೀ ಭಾಷೆಯ ವಿಸ್ತಾರವೂ ಮಹತ್ವವೂ ಹೆಚ್ಚಾಗಿ ಇರುವುದರಿಂದ ಈ ವ್ಯವಸಾಯದಲ್ಲಿ ಹಿಂದೀ ಭಾಷೆಯ ಪಟುಗಳೇ ಅಗ್ರಸ್ಥಾನದಲ್ಲಿ ಇರುವರು. ಸಹಜವಾಗಿಯೇ ಹಿಂದೀ ಸಾಹಿತ್ಯಕ್ಕೆ ಹೆಚ್ಚಿನ ಜನಪ್ರಿಯತೆಯನ್ನೂ ಪ್ರಸಾರವನ್ನೂ ಒದಗಿಸಿಕೊಡುವ ಕಾರ್ಯವನ್ನು ಈ ವ್ಯವಸಾಯವು ಮಾಡುತ್ತಲಿರುವುದು. ಈ ರೀತಿಯಾಗಿ ತನ್ನ ನೈಗುಣಗಳ ಮೂಲಕವಷ್ಟೇ ಅಲ್ಲದೆ ಹಿಂದೀ ಸಾಹಿತ್ಯವು ಐತಿಹಾಸಿಕ, ಧಾರ್ಮಿಕ, ರಾಜಕೀಯ ಹಾಗೂ ಆರ್ಥಿಕ ಕಾರಣಗಳಿಂದಲೂ ಜನಪ್ರಿಯತೆಯ ಪರಮಾವಧಿಯನ್ನು ಮುಟ್ಟಿರುವುದು

---

# ಅಳಿಯ ದೇವರು



**ಅಳಿಯ ದೇವರ ಕೋಪವನ್ನು ಶಾಂತಗೊಳಿಸುವ ದಿವ್ಯಾಸ್ತ್ರ ತನ್ನ ಬಳಿ ಇದೆಯೆಂಬ ನಂಬಿಗೆಯಿಂದಲೇ ಗಣಪತ ರಾಯರು "ಡೋಂಟ್‌ಕಮ್ ದಿವಾಳಿ" ಎಂಬ ತಾರನ್ನು ಬಿಟ್ಟರು.**

ಲೇಖಕರು : **ಜಿ. ಜಿ. ಹೆಗಡೆ, ಹುಬ್ಬಳ್ಳಿ**

[ ಗಣಪತರಾಯರು ಒಂದು ಪತ್ರ ಬರೆಯುತ್ತ ಕುಳಿತಿದ್ದಾರೆ. ಯಾರೊ ಬಂದದ್ದು ಬೂಟಿನ ಸಪ್ಪಳದಿಂದ ಗೊತ್ತಾಗುತ್ತದೆ. ]

**ಗಣಪತ:**– ಯಾರು? ಓಹೋಹೋ! ಛೆ! ಛೆ! ಬರ್ರಿ-ಬರ್ರಿ. ಅಳಿಯ ದೇವರು! ಬರ್ರಿ, ಬರ್ರಿ. ಟೆಲಿಗ್ರಾಂ ಮಾಡಿದ್ದೆ. ಮುಟ್ಟಿತೊ ಇಲ್ಲೊ? ಈಗ ನಿಮಗೆ ಎಲ್ಲಾ ವಿಷಯ ಸರಿಯಾಗಿ ತಿಳೀಲಿ ಅಂತ ಪತ್ರಾ ಬರೀತಾ ಕೂತಿದ್ದೆ. ನೀವೇ ಬಂದಬಿಟ್ರಿ. ಭಾಳ ಛಲೋ ಆತು. ಕೂಡ್ರಪಾ ಶಂಕರರಾಯಾ.

**ಶಂಕರ:** – ಕೂಡ್ತೇನಿ, ಆದರ ಈಗಲೇ ಅಲ್ಲ. ನಿಮ್ಮ ಎಲ್ಲಾ ವಿಷಯ ಸರಿಯಾಗಿ ತಿಳಕೊಂಡ ಮ್ಯಾಲೇ ಕೂಡ್ತೇನಿ.

**ಗಣಪತ:** – ಛೆ! ಛೆ! ಬಂದೀದಿ, ಆರಾಮಾಗಿ ಕೂಡ್ರು. ಒಂದಿಷ್ಟು ಪಾನಕಾ ಮಾಡಿ ಕೊಡ್ತೇನಿ. ಆನ್ಮ್ಯಾಲೆ ಎಲ್ಲಾನೂ ಹೇಳ್ತೇನಿ. ಹ್ಯಾಂಗೂ ಇವತ್ತು, ನಾಳೆ ಎರಡ ದಿನಾ ರಜಾ ತಗೊಂಡೇನಿ. ನಾಡದಂತೂ ದೀಪಾವಳಿ ಸೂಟೀ ಅದ. ನಿನಗೂ ದೀಪಾವಳಿ ಸೂಟೀ ಇರಬಹುದು. ಅಂದಮ್ಯಾಲೆ ಅವಸರ ಯಾಕ? ಹೌದೊ ಅಲ್ಲೊ.

**ಶಂಕರ:** – ಏನೂ ಬ್ಯಾಡ. ನೀವು ಏಳಬ್ಯಾಡ್ರಿ. ನನಗ ಪಾನಕಾ ಗೀನಕಾ ಏನೂ ಬ್ಯಾಡ. ಎಲ್ಲಾ ಬಸ್ ಸ್ಟ್ಯಾಂಡಿನಾಗೇ ಮುಗಿಸಿಕೊಂಡು ಬಂದೀನಿ. ನನಗೆ ಬೇಕಾದದ್ದು ನಿಮ್ಮ ಎಕ್ಸಪ್ಲೇನೇಶನ್.

**ಗಣಪತ:** – ಅಂ!

**ಶಂಕರ:** – ಹೌದು. ಅಂದರ ನಿಮ್ಮ ವಿವರಣೆ–ಅಂದರ ನಿಮ್ಮ ಟೆಲಿಗ್ರಾಮಿನ ವಿವರಣೆ. ಲೋಕದಾಗ ದೀಪಾವಳಿ ಹಬ್ಬ ಬಂತು ಅಂದ್ರ ಎಲ್ಲಾ ಮಾವಂದ್ರೂ ಅಳಿಯಂದ್ರೀಗೆ "ಹಬ್ಬಕ್ಕ ಬರ್ರಿ" ಅಂತ ಪತ್ರ ಬರೀತಾರ. ಪತ್ರದ ಬದ್ಲು ನಿಮ್ಮ ತಾರು ಬಂದದ್ದ ಕಂಡು "ಈಗ್ಲೇ ಹೊರಡಬೇಕಾಗ್ತದೇನೊ" ಅಂತ ಮಾಡಿದ್ದೆ. "ಬೇಷಪಾ, ತಾರಿನ ಮ್ಯಾಲೆ ಆಮಂತ್ರಣ ಬಂದದ. ಇದ್ದರ ಹೀಂಗಿರಬೇಕು ಮಾವನ ಮ್ಯಾಲೆ ಅಳ್ಯಾನ ಜಬರು" ಅಂತ ಖೋಲ್ಯಾಗಿದ್ದವರು ಚ್ಯಾಷ್ಟೀನೂ ಮಾಡಿದ್ರು.

**ಗಣಪತ:**– ಎಲಾ! ಹಂ.

**ಶಂಕರ:**– ಆದ್ರ ತಾರ ಒಡದ ನೋಡ್ತೇನಿ. ನಾ ಘಟ್ಟಿ ಅಂತ ಹಾರ್ಟಫೇಲ್ ಆಗ್ಲಿಲ್ಲ. "ಡೋಂಟ ಕಮ್ ದಿವಾಳಿ. ಲೆಟರ್ ಫಾಲೋಜ" ಅಳಿಯನಿಗೆ ಮಾವನಿಂದ ಇಂಥಾ ತಾರು! ಸಿಟ್ಟಿನಿಂದ ತಲಿ ಗಿರ್ ಅಂತು. ಅಪಮಾನದಿಂದ ಮೈ ಜುಮ್ ಅಂತು. ಆದ್ರ ಮರ್ಯಾದಿ ಕಾಪಾಡಿಕೊಳ್ಳಬೇಕೂ ಅಂತ ತಾರ ಸರಕ್ಕನೆ ಹರ್ದು "ಅಳ್ಯಾ ಅಂದರ ಇವರ ಮನೀ ಆಳು ಅಂತ ತಿಳದಾರೇನೊ? ಸ್ಟಾರ್ಟ ಇಮೀಜಿಯಟ್ಲಿ ಅಂತ. ಕೂಡ್ಲಿ ಹಾದೀಕಾಯ್ಕೋತ. ನಾ ಅಂತೂ ನಾಡದೇ ಹೊರಡಾಂವಾ" ಅಂತ ಅಂದು ಪಾರಾದೆ. ಈಗ ಹೇಳ್ರಿ, ಇದಕ್ಕೆ ನಿಮ್ಮ ಎಕ್ಸಪ್ಲೇನೇಶನ್ ಏನೂ ಅಂತ ನನ್ನಂದ್ರ ಏನಂತ ತಿಳಕೊಂಡೀರಿ? ಏನೋ ಎಲ್ಲಾರ್ಹಾಂಗ ನಾನೂ ಆಗ್ಬಾರ್ದು, ಆದರ್ಶ ಆಗ್ಬೇಕು ಅಂತ ವರದಕ್ಷಿಣೀ ಬ್ಯಾಡ ಅಂತಂದು ಲಗ್ನಾ ಮಾಡಿಕೊಂಡೆ ಅಂತ, ನಾ ಅಂದ್ರ ಕೈಲಾಗದಾವ ಅಂತ ತಿಳದಿರೇನು?

**ಗಣಪತ:**– ತಡಿ, ತಡೀ.

**ಶಂಕರ:**– ನಂದೆಲ್ಲಾ ಹೇಳಿದ ಮ್ಯಾಲೆ ನಿಮ್ಮದೇನು ಅಂತ ಹೇಳ್ರಿ. "ಡೋಂಟ ಕಮ್ ದಿವಾಳಿ" ಅಂತ ತಾರ ಮಾಡ್ಲಿಕ್ಕೆ ಅಂಥಾ ಕಾರಣ ಏನಾತು? ನನ್ನ ಮನಸಿಗೆ ಸಮಾಧಾನ ಆಗೂಹಾಂಗ ಕಾರಣ ಹೇಳ್ಬೇಕು. ಇಂಥಾ ತಪ್ಪು ಮಾಡಿದ್ದಕ್ಕೆ ಸರಿಯಾದ ದಂಡ ಕೊಡ್ಬೇಕು, ಅಂದ್ರೇನೇ ಆಗ ಮುಂದಿನ ಮಾತು; ಇಲ್ಲಾಂದ್ರ ಈಗ ಹ್ಯಾಂಗ ಬಂದೇನಿ ಹಾಂಗೇ ಹೋಗ್ತೇನಿ. ನಿಮ್ಮದು ನೀವು ನೋಡಕೊಳ್ರಿ.

**ಗಣಪತ:**– ಕೂಡ್ರಪಾ ಶಂಕರರಾಯಾ. ಇಷ್ಟ ಯಾಕ ಸಿಟ್ಟಿಗೆದ್ದೀದಿ.? ಅಲ್ಲೊ, ನನಗೂ ಕೂವಲ ಹಣ್ಣಾದ್ರೂ ತಿಳೀಲಿಲ್ಲ ಬಿಡು. ಎಲ್ಲಾ ವಿಷಯ ಬರದು ಪತ್ರಾನೇ ಹಾಕ್ಬಿಡಬೇಕಾಗಿತ್ತು. ಆದರ ಇದ್ದಾಳಲ್ಲ, ಕಮಲಾಕ್ಷಿ, "ಅವರು ಸರಕ್ಕನೆ ಬಂದಗಿಂದಾರಪಾ, ಆನ್ಮ್ಯಾಲೆ ಫಜೀತಿಯಾದೀತು, ಮದಲ ತಾರ ಬಿಟ್ಟೀ ಆನ್ಮ್ಯಾಲೆ ಪತ್ರ ಹಾಕು ಅಂದ್ಲು." ತಾಯಿ ಇಲ್ಲದ ಹುಡುಗಿ ಅಂತ ನಾ ಆಕಿನ್ನ ಅಚ್ಛಾದಿಂದ ಬೆಳಸೇನಿ. ಆಕಿ ಹೇಳಿದ ಮಾತ ಹಿಂದೆ ಮುಂದೆ ವಿಚಾರ ಮಾಡ್ದೆ ನಡಿಸಿಕೋತ ಬಂದೇನಿ. ಈ ಸಲಾನೂ ಹಾಂಗೇ ಆಗಿ ಹೋತಪಾ.

**ಶಂಕರ:**– ಆಗಿರಬಹುದು. ಆದರ ಈಗ ಆಗಿ ಹೋಗೇದ. ಹಾಂಗ್ಯಾಕಾತು ಅಂತ ನಾ ಕೇಳ್ಲಿಲ್ಲ. ಹಾಂಗ ಮಾಡಲಿಕ್ಕೆ ಕಾರಣ ಏನಾತು? ಹಬ್ಬಕ್ಕ ಬರಬ್ಯಾಡ ಅನ್ನಿಕ್ಕೆ ನಾ ಏನ ನಿಮಗ ನೀಗಲಾರದ ಶರ್ತ ಹಾಕಿದ್ದೇನೆ? ಅಥವಾ ಏನಾರ ನಿಮಗೆ ಸೂತಕ-ಗೀತಕ . . . . .

**ಗಣಪತ :–** ಛೆ-ಛೆ-ಛೆ. ಕೆಟ್ಟ ಮಾತ ಆಡಬ್ಯಾಡಪಾ. ಕೂಡು. ಕೂಡ್ರಪಾ. ನೋಡು, ಈಗ ಹೀಂಗ ಫಜೀತಿಯಾಗೇದ. ನಿನಗ ಒಂದಿಷ್ಟು ಚಾನಾರ ಮಾಡಿಕೊಡೋಣಂದ್ರ ನಾನೇ ಒಳಗ ಹೋಗಿ ಮಾಡಿಕೊಡಬೇಕಾಗೇದ.

**ಕಮಲಾ :–** ( ಒಳಗಿಂದ ) ಕೂಡತಾರಪಾ. ತಮ್ಮವರು ಅಂದಮ್ಯಾಲೆ ಅಷ್ಟೂ ಅನಿಸೂದಿಲ್ಲೇನು ಅವರಿಗೆ ನೀ ಒಂದಿಷ್ಟು . . . . .

**ಶಂಕರ :–** ಏನೂ ಬ್ಯಾಡ. ಹೇಳೂದನ್ನೆಲ್ಲ ಹೇಳಿ ಬಿಡಲಿ. ನೀ ಒಳಗಿಂದ ಮತ್ತೆ ಬಣ್ಣದ ಮಾತು ಆಡೂದs ಬ್ಯಾಡ. ಅಲ್ಲಾ, ನಾಚಿಕಿ ಆದsನೊ ಇಲ್ಲೊ. ನಿನ್ನ ಕೈ ಮುರದಗಿರದು ಹೋಗೇದೇನು? ಅಪ್ಪಗೇ ಚಾ ಮಾಡಿಕೊಡು ಅಂತ—

**ಗಣಪತ :–** ಛೆ! ಛೆ! ಆಕೀನ್ನ ಯಾಕೆ ಸುಮ್ನೆ ಬಯ್ತಿ? ನಿನ್ನೆ ಆಕಿ ತಿಂಗಳದ ರಜಾ ಹೇಳ್ದೆ ಕೇಳ್ದೆ ತಗೊಂಡುಬಿಟ್ಳು. ನಾಡದೇ ಹಬ್ಬ. ಮತ್ತೆ ನನ್ನ ತಂಗಿ ಸಾವಿತ್ರಿ ಮೊನ್ನೇನೇ ನಮ್ಮಣ್ಣನ ಮನೀಗೆ ಹೋಗಿಬಿಟ್ಳು. ಅತ್ತಿಗೆಗೆ ದಿವಸ ತುಂಬಿ ಯಾವ ಹೊತ್ತಿಗೆ ಹೆರಿಗೆ ಆದೀತು ಅನ್ನಿಲ್ಕಕ್ಕೆ ಬರೂದಿಲ್ಲ. ಅರ್ಜಂಟ ಕಳ್ಸು ಅಂತ ಅಣ್ಣನ ಎಕ್ಸಪ್ರೆಸ್ ಪತ್ರ ಬಂತು. ಹಬ್ಬಕ್ಕ ಬಂದ ಅಳ್ಯಾಗ ಹ್ಯಾಂಗ ಮಾಡ್ಬೇಕು ಅಂತ ದಿಗಲು ಬಿತ್ತ ನನಗೆ. ಹೀಂಗ ಆಗೇದ. ಹಬ್ಬದಾಗಂತೂ ನಾವು ಏನೂ ಮಾಡೂಹಾಂಗಿಲ್ಲ. ಹಬ್ಬದ ಮರ ದಿನಾರs ಬಾ. ನೀ ಬಂದಾಗs ಹಬ್ಬ ಅಂತ ತಿಳಕೊಂಡು ಎಲ್ಲಾ ಮಾಡೋಣು ಅಂತ ಪತ್ರ ಬರೀತೇನೆ ಅಂದೆ.

**ಶಂಕರ :–** ಹುಂ.

**ಗಣಪತ :–** ಹೌದು. ಕೂಡ್ರಪಾ, ನೀ ನಿಂತಕೊಂಡೇ ಇದ್ರ ನಾ ಸಮಾಧಾನದಿಂದ ಹ್ಯಾಂಗ ಹೇಳ್ಲಿ.

**ಶಂಕರ :–** ಹುಂ. ಆತು ಆತು. ಕೂಡ್ತೇನಿ. ಭಾಳ ವ್ಯಾಳಾ ಮಾಡ್ಬ್ಯಾಡ್ರಿ. ಎಲ್ಲಾ ಹೇಳಿಬಿಡ್ರಿ.

**ಗಣಪತ :–** ಪತ್ರಾ ಬರೀತೇನವಾs ಅಂತ ಕಮಲಾಕ್ಷೀಗೆ ಅಂದೆ. ತಾರ ಮಾಡಪಾ, ಹಬ್ಬಕ್ಕಿನ್ನೂ ಎರಡ ದಿನಾs ಇರುವಾಗ್ಲೇ ಬರ್ತೇನೀ ಅಂತ ಬರದಾರ. ಅವರದು ಭಾಳ ನೇಮ ಅವ. ಎದ್ದ ಕೂಡ್ಲೆ ಬೆಡ್-ಟೀ ಆಗ್ಬೇಕು. ಮಲಗೂ ಮುಂದ ಓವಲ್‌ಟೆನ್ ಬೇಕು. ಸ್ನಾನಾ-ಊಟದ ವ್ಯವಸ್ಥಾ ಎಲ್ಲಾ ಖಾನಾವಳ್ಯಾಗ ಆಗೂ ಹಾಂಗ ಪದ್ಧತ-ಶೀರ ಆಗ್ಬೇಕು ಇಲ್ಲಿ ಮಾಡಾವ್ರು ಯಾರು? ಮೊದಲ ತಾರು ಮಾಡು. ಆಮ್ಯಾಲೆ ಎಲಾ ವಿಷಯಕ್ಕ ಪತ್ರ ಹಾಕು. ಬಂದಮ್ಯಾಲೆ ನಾ ಎಲ್ಲಾ ಹೇಳಿ ಕ್ಷಮಾ ಕೇಳ್ಕೊಂಡು ಸರೀ ಮಾಡ್ತೇನೆ ಅಂದ್ಳು. ನಾನೂ ತಾರ ಮಾಡಿಬಿಟ್ಟೆ. ನೋಡೀಗ. ಫಜೀತಿಯಾಗಿ ಹೋತು. ನೀ ಸಿಟ್ಟಗೆದ್ದ ಬಂದ್ಬಿಟ್ಟೆ. ಎಲ್ಲಾ ತಿಳಿಸಿ ಹೇಳಿ ಸರಿ ಮಾಡುವಕಿ ಹೊರಗೇ ಬರವಲ್ಲಳು.

**ಶಂಕರ :–** ಬರದಿದ್ದರ ಇಲ್ಲ. ಬಂದರೂ ಏನೂ ಪ್ರಯೋಜನ ಇಲ್ಲ ಅನ್ರಿ. ನಿಮ್ಮ ಹೇಳಿಕೆ ಇಷ್ಟೇ ಹೌದೋ ಅಲ್ಲೊ? ನನಗ ಏನ

ತಿಳಕೋಬೇಕಾಗಿತ್ತು ಅದು ತಿಳಿದ ಹೋತು. ಇನ್ನ ನಾ—

**ಗಣಪತ :**– ಛೆ! ಛೆ! ಎಲ್ಲಾ ಹೇಳಿಕೊಂಡ ಮ್ಯಾಲೂ . . . .

**ಶಂಕರ :**– ಅಲ್ಲಾ, ಅನಿವಾರ್ಯ ಪ್ರಸಂಗ ಇದು ಅಂತೇ ಅನ್ನೋಣ ಬೇಕಾದ್ರ. ಆದ್ರ ನಾ ಇಲ್ಲಿ ಬಂದ ಮ್ಯಾಲೆ ಹೇಳಿದ್ರ ನಡೀತಿದ್ದಿಲ್ಲೇನು? ಅಳಿಯನ ಮರ್ಯಾದಿ ಹೋದೀತು ಅಂತ ಏನಾರ ವಿಚಾರ ಮಾಡಿದ್ರೇನು? ಈಗ ನಾಕ ತಿಂಗಳಿಂದ ಒಂದೇ ಸವನೆ ತಂದೀ ಮಗಳು ಕೂಡಿ ಹಬ್ಬಕ್ಕ ಬರ್ಬೇಕು ಅಂತ ಬರದೇ ಬರದಿರಿ. ಈಗ ಒಮ್ಮಿಂದೊಮ್ಮೆ "ಡೋಂಟ ಕಮ್ ದಿವಾಳಿ"! ಏನ ಹಾಂಗಂದ್ರ? ಹಬ್ಬಕ್ಕ ಬರ್ರಿ ಅಂತ ವಿನಂತಿ, ಬರಬ್ಯಾಡ್ರಿ ಅಂತ ಆರ್ಡರು. ಕೇಳಿದವರು ನಗಲಿಕ್ಕಿಲ್ಲೇನು? ನೋಡಿದವ್ರು ಹೀಯಾಳಿಸಲಿಕ್ಕಿಲ್ಲೇನು?

**ಗಣಪತ :**– ಖರೇನಪಾ.

**ಶಂಕರ :**– ಖರೇ ಹೌದೊ ಅಲ್ಲೊ. ಅಂದಮ್ಯಾಲೆ ಹಾಂಗ ಯಾಕ ತಾರ ಮಾಡಿದ್ರಿ? ನಿಮ್ಮ ಮಗಳು ನನ್ನ ಸಂಗಾತ ಸಂಸಾರ ಮಾಡ್ಬೇಕು ಅಂತೀರೋ ಅಥವಾ . . . .

**ಕಮಲಾ :**– (ಒಳಗಿಂದ) ಅಪ್ಪಾ, ಬರೇ ಮಾತಾಡಕೋತ ಕೂತರ ಹ್ಯಾಂಗಪಾ? ಇಂದ ನೀ ಕೈ ಸುಟ್ಟಕೊಳ್ಳೂದು ಬ್ಯಾಡ. ಖಾನಾವಳಿಗೆ ಹೋಗಿ ಡಬ್ಬೀ ಕಳಿಸಲಿಕ್ಕೆ ಹೇಳಿ ಬಂದ್ಬಿಡು. ಮತ್ತ ಹೋಗ್ತಾ ಒಂದಿಷ್ಟು ಸ್ಪೆಶಲ್ ಚಹಾ ಕಳಿಸಿಕೊಟ್ಟೀ ಹೋಗು.

**ಶಂಕರ :**– ಬ್ಯಾಡ, ಬ್ಯಾಡ್ರಿ. ನಾ ಏನ ಊಟಕ್ಕ ಇರಾಂವ ಅಲ್ಲ. ನನಗೆ ಚಾನೂ ಬ್ಯಾಡ.

**ಗಣಪತ :**– ಛೆ--ಛೆ--ಹಾಂಗಂತ . .

**ಕಮಲಾ :**– ನೀ ಹೋಗಪಾ. ನಿನ್ನ ಕರ್ತವ್ಯ ನೀ ಮಾಡು.

**ಗಣಪತ :**– ಅಂ! ಹುಂ. ಹೌದು. ಕಮಲೂ, ನಾ ಬರೂದರೊಳಗ ಎಲ್ಲಾ ನಿನ್ನ ಯಜಮಾನರಿಗೆ ತಿಳಿಸಿ ಹೇಳಿಡು. ಏನು? ಬರ್ತೇನಪಾ. ಸಿಟ್ಟನ್ಯಾಗ ಹೋಗಿಬಿಡಬ್ಯಾಡ. (ಹೋದ ಸಪ್ಪಳ)

**ಶಂಕರ :**– ಇಲ್ಲಿ ಬಾ ಇಲ್ಲೆ ಹೊರಗ.

**ಕಮಲಾ :**– (ಹೊರಗೆ ಬಂದು) ಅಷ್ಟ ಯಾಕ ಬಿಕ್ಕೊಂಡು ಕೂತೀರಿ. ಮೋಟರಿನ್ಯಾಗ ಬಂದೀರಿ. ತ್ರಾಸಾಗಿದ್ದೀತು. ಆರಾಮ ಖುರ್ಚಿ ಅದ ಸ್ವಲ್ಪ ಹಾಯಾಗಿ....

**ಶಂಕರ :**– ಹಾಯಾಗಿ ಕೂಡ್ರೂದು ತಿರುಗಿ ನನ್ನ ಖೋಲೀ ಸೇರಿದ ಮ್ಯಾಲೇನೇ. ತಿಳೀತೇನು? ಏನು ಹುಡುಗಾಟ ನಡಸೀರಲ್ಲಾ ತಂದೆ-ಮಗಳ್ಳು ಕೂಡಿ.

**ಕಮಲಾ :**– ಏನೋ ತಿಳೀದೇ ತಪ್ಪಾಗೇದ. ಬಯ್ಯೂವಷ್ಟು ಬಯ್ರಿ. ನಾ ಏನ ಬ್ಯಾಡ ಅನ್ನೂದಿಲ್ಲ. ಆದರ ಹೋಗೂದೇ ಆದ್ರೂ ಉಂಡ ಹೋಗ್ರಿ. ಇಲ್ಲಾಂದ್ರ—ನೀವು ಹಿಂಗ ಬಂದ ಉಪಾಸ ಹೋದ್ರಿ ಅಂದ್ರ ನನ್ನ ಹೊಟ್ಯಾಗ ಕೂಳಾದರೂ ಹ್ಯಾಂಗ ಹೋದೀತು.

**ಶಂಕರ :**– ಹುಂ! ಅಂತೂ—ಗೊತ್ತಾತ ಬಿಡು. ನಿನ್ನ ಹೊಟ್ಟೀ ಚಿಂತೀ ತಪ್ಪಸಬೇಕು ಅಂತ ನಾ ಉಂಡ ಹೋಗಬೇಕs? ನಾ ಇಲ್ಲಿ ಉಣ್ದೇ ಹೋದ್ರೂನೂ ಏನ ಉಪಾಸ ಇರೂದಿಲ್ಲ. ನೀನೂ ಹೊಟ್ಟಿ ತುಂಬ ಉಣ್ಣು. ನನಗ ಈಗ ಆಗಿರೂ ಅವಮಾನ, ಆಗಿರೂ ದುಃಖ, ಸಂಕಟ—ಎಲ್ಲಾ ಥಣ್ಣಗಾಗಿ ಮನಸು ಮತ್ತ ಮೊದಲಿನ್ಹಾಂಗ ಆದಾಗ ಮತ್ತ ನನ್ನ ನಿನ್ನ ಭೆಟ್ಟಿ. ಹಾಂಗ ದಿವಸೆರಡ ದಿವಸದಾಗ, ತಿಂಗಳೊಪ್ಪತ್ತಿನ್ಯಾಗ ತಣ್ಣಗಾಗೂ ವಿಷಯ ಅಲ್ಲ ಇವು. ಏನಿಲ್ಲಂದ್ರೂ ಹತ್ತಿಪ್ಪತ್ತ ವರ್ಷಾನೇ ಬೇಕಾದೀತು. ಅಲ್ಲೀತನಕಾ ನಾ ಉಪಾಸ ಇರೂದ ಹ್ಯಾಂಗ? ನೀ ಉಪಾಸ ಇರೂದು ಹ್ಯಾಂಗ? ಅದಕ್ಕ . . . .

**ಕಮಲಾ :**– ಛಿ! ಛಿ! ಹೀಂಗೆಲ್ಲಾ ಅಭದ್ರ ನುಡೀಬಾರ್ದು. ಅಪಮಾನ ಅಂದ್ರಿ? ಯಾರಿಂದ, ಏನ ಅಪಮಾನ ಆಗೇದ ನಿಮಗ? ದುಃಖ ಅಂದ್ರಿ ಅಂಥಾ ದುಃಖದ ಪ್ರಸಂಗ ಯಾವದು ಬಂದsದ? ಸಂಕಟ ಅಂದ್ರಿ—ಯಾವದದು? ಹೇಳ್ರಿ ನೋಡೂಣು.

**ಶಂಕರ :**– ಹೇಳ್ಬೇಕs? ಯಾಕ ಹೇಳ್ಬೇಕು? ಅಪಮಾನ ಆದದ್ದು, ದುಃಖ ಬಂದದ್ದು, ಸಂಕಟ ಪ್ರಾಪ್ತಆದದ್ದು ನಿನ್ನಿಂದ, ನಿನ್ನ ಅಪ್ಪನಿಂದ, ಮತ್ತ ನಾ ಯಾಕ ಹೇಳ್ಬೇಕು? ನಾ ಇನ್ನು– ಯಾಕೆ, ಸರಿs. ನಾ ಏನ ನೈಲ್ಗೀ ಸೈಲಗಿ ನೋಡಾಂವ ಅಲ್ಲಾ. ಸರೀದಿದ್ದರೆ ಸರಿಸಿಕೊಂಡು ಹೋಗತೇನಿ.

**ಕಮಲಾ :**–ಆಗ್ಲಿ, ಹಾಂಗೇ ಆಗ್ಲಿ. ನೀವೀಗ ಹೋದ್ರೀ ಅಂದ್ರ ನಾ ಇಲ್ಲೇ ತಲಬಾಗಲ ಮೆಟ್ಟಲಿಗೆ ತಲೀ ಜಜ್ಜಕೊಂಡ ಸಾಯುತೇನಿ. (ಚಾ ತಂದೇನಿ ಎನ್ನುವ ಹುಡುಗನ ದನಿ.) ಕೊಡಲ್ಲಿ ರಾಯ್ರಿಗೆ. ಕುಡೀರಿ. ತಮ್ಮಾ, ನೀ ಅಲ್ಲಿ ತುಸಾ ಹೊರಗೆ ಕೂಡಪಾ. ಕುಡೀದಾದ್ಮೂಡ್ಲೆ ಕರೀತೇನಿ. ತಗೋರಿ. ಸಿಟ್ಟ ನನ್ನಮ್ಯಾಲೆ, ನನ್ನ ಅಪ್ಪನಮ್ಯಾಲೆ. ಅಂಗಡೀ ಚಾ ತಗೊಳ್ಳಿಕ್ಕೆ ಏನ ಬಂತು?

**ಶಂಕರ :** ಅಂ! ನೀ ಭಾಳ....

**ಕಮಲಾ :** ಶ್ಯು... ಶ್ಯು...ಹೊರಗ ಹುಡುಗ ಕೂತಾನs 'ಮನೆಯ ಕದನವನು ಪರರೊಳು ಪೇಳದವ ಜಾಣ' ಅಂತಾರ

**ಶಂಕರ :** ಅಂ! ನೀ....

---

**ಕಮಲಾ :** ಹೌದು. ಲಗೂ ಕುಡದು ಆ ಹುಡಗನ್ನ ಕಳಸ್ರಿ ಆನ್ಮ್ಯಾಲೆ....

**ಶಂಕರ :** ಹುಂ.

**ಕಮಲಾ :** ಮತ್ತೊಂದು ಕಪ್ಪಿನಾಗಿಂದೂ ಕುಡ್ದ ಬಿಡ್ರಿ.

**ಶಂಕರ :**– ಬ್ಯಾಡ.

**ಕಮಲಾ :**– ಹಾಂಗಾದ್ರs ತಡೀರಿ. (ಒಳಗೆ ಹೋಗಿ ಬಂದ ಸಪ್ಪಳ) ಈ ವಾಟಕಾದಾಗ ಹಾಕ್ರಿ. ನಾನಾದರೂ ಕುಡೀತೇನಿ. ರೊಕ್ಕಾ ಕೊಟ್ಟದ್ದನ್ನ ಯಾಕ ಹಾಳ ಮಾಡ್ಬೇಕು? ತಮ್ಮಾ, ತಗೊಂಡ ಹೋಗಪಾ ಕಪ್ಪನ್ನs. (ಹೂನ್ರಿ. ಅನ್ನುತ್ತ ಹುಡುಗ ಬಂದು ಕಪ್ಪನ್ನೊಯ್ಯುವನು).

**ಶಂಕರ:**– ಅಲ್ಲೆ, ನೀ ಒಳ್ಳೇ ತರಬೇತ ಆಗೀದೀ ಅನ್ನು ಇತ್ತಿತ್ಲಾಗ. ಅಲ್ಲಾ, ಮತ್ತ ನೀವಿಲ್ದೆ ಇಲ್ಲಿ ನನಗೆ ಊಟನೇ ರುಚಿಹತ್ತವಲ್ದು ಅಂತ ಬರೀತಿದ್ದಿ, ನಾ ಇಲ್ಲೆ ಹೀಂಗ ತಳಮಳಪಡತಿರುವಾಗ ನಿನಗ ಚಾ ಗಂಟಲದಾಗ ಹ್ಯಾಂಗ ಇಳೀತೂ ಅಂತೀನಿ? ನನ್ನ ಸಿಟ್ಟು. ದುಃಖ, ಅಪಮಾನ ಎಲ್ಲಾದಕಿಂತಾ ನಿನಗ ಒಂದು ಕಪ್ಪ ಚಾದ ಎರಡಾಣೆ ರೊಕ್ಕಾ ಹೆಚ್ಚಿಂದಾತಲ್ಲs? ಖರೇ ಅದs. ಅಗದೀ ಖರೇ ಅದs. "ಯಾರಿಗೆ ಯಾರಿಲ್ಲ ಎರವಿನ ಸಂಸಾರ" ಅನ್ನೂ ಮಾತು. ಇಷ್ಟಿದ್ದೂ ನಾನೂ ಎಂಥಾ ಮೂರ್ಖಾ ಅಂತೇನಿ. ನಿನ್ನ ರೂಪ ನೋಡಿ, ಮಾರಿ ಮ್ಯಾಲೆ ಕಂಡ ಬಂದ ವಿನಯ, ಗಾಂಭೀರ್ಯ ಕಂಡು, ನನಗ ಸರಿಯಾದ ಹೆಣ್ತಿ ಅಂತ ವರದಕ್ಷಣೀನೂ ಕೇಳ್ದೆ ಲಗ್ನ ಆಗಿ ಬಿಟ್ಟೆ. ನಿನ್ನ ಮಾತು ಕೇಳಿ ಸಂತೋಷಪಟಕೊಂಡೆ. ನಿನ್ನ ಪತ್ರದಾಗಿನ ಗುಳಗೀ ಮಾತು ನಂಬಿ ಸ್ವರ್ಗ ಅಂದರ ಇದೇ ಅಂತ ಉಬ್ಬಿ ಹೋದೆ. ಛೆ! ಛೆ! ಛೆ! ಎಂಥ ಹುಚ್ಚ ನಾನು! 'ಡೋಂಟ ಕಮ್ ದಿವಾಳಿ' ಅಂತ ತಾರ ಬಂದಾಗ ಬೇಕಂತ್ಲೇ ಹುಡುಗಾಟಕೀನs ಮಾಡಿರಬೇಕು ಅಂತೆ ವಿಚಾರ ಬಂತು. ಹೋದಕೂಡ್ಲೆ ಹುಡುಗಾಟಕೀ ಮಾಡಿದ್ದೆ, ಸಿಟ್ಟಾಗಬ್ಯಾಡ್ರಿ ಅಂತ ನೀ ಬೇಡಿಕೊಂಡಾಗ ಆಗೂ ಆನಂದಾನs ಕಲ್ಪಿಸಿಕೊಂಡು ಅನುಭವಿಸಿಕೋತ ಬಂದೆ. ಆದರ ಹಾಳಾಗಿ ಹೋತು ನನ್ನ ಕನಸು. ನನ್ನ ಸಂಸಾರದ ಮೊದಲನೆ ತುತ್ತಿಗೇನೇ ಹರಳು ಬಂತು. ಆತು. ಆಗ್ಲಿ. 'ಆದದ್ದೆಲ್ಲಾ ಒಳಿತೇ ಆತು' ಅನ್ನೂ ದಾಸರ ಪದದ್ಹಾಂಗ ಇನ್ನೂ ಹತ್ತಾರು ವರ್ಷದ ಮ್ಯಾಲೆ ಈ ಅನುಭವ ಬಂದಿದ್ರs ಸಂಸಾರ ಮಾಡಕೊಂಡು ಅತ್ಲಾಗ ಬಿಡಲಿಕ್ಕೂ ಬಾರದು, ಹಿಡೀಲಿಕ್ಕೂ ಆಗ್ದ ಹಾಂಗ ಆದಾಗ ಈ ಅನಭವ ಬಂದಿದ್ರ ಇನ್ನೂ ಎಷ್ಟ ಸಂಕಟ ಆಗ್ತಿತ್ತೋ! ಈಗ ಈ ಅನುಭವ ಬಂದದ್ದೇ ಛಲೋ ಆತು. ಲಗ್ನ ಆದ್ರೂ ನಾ ಇನ್ನೂ ಸನ್ಯಾಸೀ ಹಾಂಗೇ ಇದ್ದೇನಿ. ಮುಂದನೂ ಸನ್ಯಾಸಿ ಹಾಂಗೇ ಇದ್ದ ಬಿಡ್ತೇನಿ. (ಕಮಲಾಕ್ಷಿ ಕಿಸಕ್ಕನೆ ನಗುವಳು) ಯಾಕೆ ನಕ್ಕಿ? ಗಾಯದ ಮ್ಯಾಲೆ ಬರೆ ಕೊಟ್ಟು....

**ಕಮಲಾ :**– ಅಲ್ಲಾ, ಕಾಲೇಜದಾಗ ನನ್ನ ಲೆಕ್ಚರ ಭಾಳ ಛಲೋ ಆತು ಅಂತ ಪತ್ರದಾಗ ಬರೀತಿದ್ರಿ; ಅದನ್ನಕೇಳೂ ಭಾಗ್ಯ ನನಗಿಂದು ಅನಾಯಾಸ ಸಿಕ್ತು, ಸಂತೋಷಾತು, ನಕ್ಕೆ. ನಿಮ್ಮ ಲೆಕ್ಚರ ಖರೇ ಅಂದ್ರೂ ಬೇಷಾಗ್ತಿರಬೇಕು. ಮತ್ತ ಈಗ ಹೇಳಿದ ನಾಕ ಮಾತಿನ್ಯಾಗ ನಾಕ ಗಾದೀಮಾತು ಅಂದಬಿಟ್ರಿ. Well begun is half done ಅನ್ನುವ ಗಾದೀ ಮಾತನ್ನ ಮಾತ್ರ ಮರತರಿ. ಸುಖಾ ಉಂಡನಂತ್ರ ಕಷ್ಟಬಂದ್ರ ಭಾಳ ತ್ರಾಸ ಆಗ್ತದ. ಕಷ್ಟ ಬಂದ ಮ್ಯಾಲ ಸುಖಾ ಬಂದ್ರs ಅದರ ಸಂತೋಷ ಹೆಚ್ಚತದ. ಸುಖಾ ಬಂದಕೂಡ್ಲೆ ಹಿಗ್ಗಿ ಹೀರೇಕಾಯಿ ಆಗೂದೂ- - ದುಃಖ ಬಂದಕೂಡ್ಲೆ ಕುಗ್ಗಿ ಕಡ್ಡಿಯಾಗೂದು - -

**ಶಂಕರ :**– ಹಿಯರ್ ಹಿಯರ್, ಭೇಷ! ವ್ಹಾ! ನನಗ ತಕ್ಕ ಹೆಂಡ್ತಿ ನೋಡು ನೀ. ನನ್ನ ಆಯ್ಕೆಯೇನೂ ತಪ್ಪಾಗಲಿಲ್ಲ. ಕಾಲೇಜ ಮುಗಿಸಿದ ಮ್ಯಾಲೆ ಹಾಳು ಖರಡಾ ಗೀಚೂ ಕಾರಕೂನ ಆಗೂದ ಕಿಂತಾ ಲೇಖಕ ಆಗಬೇಕು, ಸಂಪಾದಕ ಆಗ್ಬೇಕು ಅಂತ ನಿರ್ಧಾರ ಮಾಡಿದ್ದೆ. "ಧುರೀಣ ವಾಣಿ" ಪತ್ರಿಕೆಯ ಮಾಲಕರು ಬೇಕಾದಾಗ ಬರ್ರಿ, ಸಂಪಾದಕ ಖುರ್ಚಿ ಖಾಲಿ ಅದ ಅಂತ ವಚನಾನೂ ಕೊಟ್ಟಾರ. ಮತ್ತ, ಅವರಿಗೆ ಒಬ್ಬ ಲೇಖಕೀ ಗರಜನೂ ಭಾಳ ಅದsಂತ. ನೋಡ್ರಿ ಯಾರಾದ್ರೂ ಸಿಕ್ಕರ ಅಂತ ಹಗಲೆಲ್ಲ ಅಂತಿರ್ತಾರ. ಈಗ ನಿನ್ನ ಮಾತ ಕೇಳಿದ್ರ–ನಿನಗೆ ಛಲೋ ಬರಿಲಿಕ್ಕೂ ಬರ್ತದ ಅನ್ನೂದಕ್ಕ ನೀ ನನಗ ಬರದ ಪತ್ರಗಳೇ ಸಾಕ್ಷಿ. ನೀ ಸಂಪಾದಕಿ ಆಗ್ಬಹುದು ಅನಸ್ತದ. ಬೇಷಾಗಿ ಹೋತು. ನಾನು ಸಂಪಾದಕ, ನೀ ಸಂಪಾದಕಿ ಮುಂದೆ ತುಸು ಅನುಭವ ಬಂದ ಮ್ಯಾಲೆ ಬೇಕಾದ್ರ ಸ್ವತಂತ್ರ ಪತ್ರಿಕೇನೂ ಹೊರಡಿಸಬಹುದು.

**ಕಮಲಾ :**– ಅಲ್ಲಾ, ಇನ್ನೂ ಇದೇ ಈಗ ಈ ಜಲ್ಮದಾಗ ನಿನ್ನ ಮುಖಾ ಸುದ್ದಾ ಮತ್ತ ನೋಡೂದಿಲ್ಲ ಅನ್ನವರ್ಹಾಂಗ ಮಾತಾಡಿದಿ. ಈಗ ಇಬ್ಬರೂ ಕೂಡಿ ಕೆಲಸ ಮಾಡೋಣ ಅಂತೀರಿ.

**ಶಂಕರ :**– ಅಂ! ಹೌದು. ಏನೊ ನಿನ್ನ ಮಾತಿನ ಚಾತುರ್ಯ ಕಂಡು ಮುಖ್ಯ ಮಾತೇ ಮರ್ತು ಏನೇನೊ ಹೇಳ್ಬಿಟ್ಟೆ. ಈಗ್ಲೇ, ನನ್ನ ಮ್ಯಾಲ್ರಿ ನಿಂದೆಲ್ಲಾ ಭಾರ ಅದs ಅನ್ನೂ ಪರಿಸ್ಥಿತಿ ಇರುವಾಗ್ಲೇ ಹೀಂಗ ಮಾಡಿದ ನೀನು ಮುಂದ ನೌಕರೀಮಾಡಿ ದುಡಿಯೊ ಹೊತ್ತಿನ್ಯಾಗ ಏನ ಮಾಡೀ ಏನ ಬಿಟ್ಟೀ? ಯಾರು ಹೇಳ್ಬೇಕು? ಆತು ಮರ್ತ ಬಿಡು ನಾ ಅಂದ ಮಾತು. ನಾ ಈಗ ಹೋಗ್ತೇನಿ ಮುಂದೆ ಎಂದಾದ್ರೂ. . . .

**ಕಮಲಾ :**– ತಡೀರಿ, ನನ್ನ ಒಂದು ಪ್ರಶ್ನೆಕ್ಕ ಉತ್ತರಾ ಕೊಟ್ಟ ಹೋಗ್ರಿ.

**ಶಂಕರ :**– ಅಂ!

**ಕಮಲಾ :**– ಅಲ್ಲಾ, ನಾ ಹೀಂಗ ಹೊರಗ ಕೂತದ್ದು ನನ್ನ ತಪ್ಪೇನು? ಅದೇನು ನನ್ನ ಕೈಯೊಳಗಿನ ಮಾತ? ಅನಿವಾರ್ಯ ಪ್ರಸಂಗ ಬಂತು.

**ಶಂಕರ :**– ನಿನ್ನ ತಪ್ಪಿಲ್ಲಾ ಅಂತ ಒಪ್ತೇನಿ. ಆದರ ಹಾಗಂತ "ಡೋಂಟ ಕಮ್ ದಿವಾಳಿ" ಅಂದ್ರೇನು ಅರ್ಥ? ನಾ ಇಲ್ಲಿ ಬಂದ ಮ್ಯಾಲೆ ನನಗ ಎಲ್ಲಾ ಗೊತ್ತಾಗ್ತಿತ್ತು. ಹಬ್ಬದ ಅಡಗೀ ನೀ ಮಾಡಿ ನನಗ ಬಡಸೊ ಬದ್ಲು ನಾನೇ ಮಾಡಿ ನಿನಗ ಬಡಸತಿದ್ದೆ. ಅದರಾಗೂ ಒಂದು ಮಜಾ ಇರ್ತಿತ್ತು.

**ಕಮಲಾ :**– ಈಗೇನಾತು? ಹಾಂಗೇ ಮಾಡೋಣಂತ.

**ಶಂಕರ :**– ಸಾಧ್ಯ ಇಲ್ಲಾ. ಸಾಧ್ಯ ಇಲ್ಲಾs ಅಂದೆ. ಎಲ್ಲಾ ಹದಗೆಡಿಸಿ ಬಿಟ್ಟೇದಿ ನೀನು. ನಿನ್ನ ಮನಿ ಅಡಗೀ ಭಟ್ಟ ಆಗ್ಲೇನು ನಾ? ವ್ಹಾ! ಹ್ಲುಂ!

**ಕಮಲಾ :**– ಅಪ್ಪ ಆಗ್ಲೀ ತಪ್ಪಾsತು ಅಂತ. ನಾನೂ ಈಗ "ಕ್ಷಮಸ್ವ ಸರ್ವಾಪರಾಧಂ" ಅಂತೇನಿ. ಕ್ಷಮೆ ಸ್ವರ್ಗದ ಧರ್ಮ ಅಂತ ಯಾವದೋ ಪುಸ್ತಕದಾಗ ಹೇಳ್ಯಾರ. ಕ್ಷಮಾ ಮಾಡ್ರಿ. ಬೇಕಂತೇನೂ ತಪ್ಪ ಮಾಡಿಲ್ಲ. ನೀವು ಇಂದ ಬರೂದು ಇನ್ನೆರಡ ದಿನಾ ತಡವು ಬಂದಿದ್ರ ನನ್ನ ಪತ್ರ ನಿಮ್ಮ ಕೈಗೆಸಿಕ್ಕ ಆನ್ಮ್ಯಾಲೆ ಬಂದಿದ್ರೆ--ಆಗ ನಿಮಗೆ ತಿಳೀತಿತ್ತು. ನೀವು ಬಂದ ಕೂಡ್ಲೆ ನಿಮ್ಮ ಪಾದಾನs ನನ್ನ ಕಣ್ಣೀರನ್ಯಾಗ ತೊಳ್ದು ಕ್ಷಮಾ ಕೇಳಿಕೊಳ್ಬೇಕು ಅಂತ ಮಾಡಿದ್ದೆ. ಹೇಣತೀಗೆ

ಗಂಡ ಅಂದ್ರ ದೇವ್ರು. ಮತ್ತ ರೊಕ್ಕ ರೊಕ್ಕ ಅಂತ ಬಡ ಕೊಂಬುವಾಗ ವರದಕ್ಷಿಣೆ ಬ್ಯಾಡ ಅಂತ ಅಂದ ನಿಮ್ಮ ಗುಣಾ ಕಂಡಮ್ಯಾಲೆ ನಾ ಅಂತೂ ನಿಮ್ಮನ್ನ ದೇವಾಧಿದೇವ ಅಂತ ನಂಬಿದೆ. ಹನಮಂತ ತನ್ನ ಎದೀ ಸೀಳಿದಾಗ ರಾಮಗ ಅಲ್ಲೆ ತಂದೇ ಮೂರ್ತಿ ಕಂಡಿತಂತ. ಹಾಂಗ ಮಾಡೂದು ಸಾಧ್ಯ ಇದ್ದಿದ್ದಾದರೆ ನಿಮಗೂ ಕಾಣಸ್ತಿತ್ತು ನಿಮ್ಮ ಮೂರ್ತಿ ನನ್ನ ಹೃದಯದಾಗ.

**ಶಂಕರ** :– ಖರೇನೇ. ನನಗ ಈ ಮಾತು ಗೊತ್ತಿಲ್ಲ ಅಂತ ಮಾಡೀದೀ ಯೇನು ? ನನ್ನ ಮ್ಯಾಲೆ ನಿನ್ನ ಪ್ರೀತಿ, ಶ್ರದ್ಧೆ, ಭಕ್ತಿ, ಗೌರವ ಎಲ್ಲಾ ಅದs ಅಂತ ಖಾತ್ರಿ ಇಲ್ಲದಿದ್ರ ನಾ ಇಲ್ಲೀ ವರೆಗೆ ಯಾಕಾದ್ರೂ ಬರ್‍ತಿದ್ದೆ ? ತಾರ ಹರ್‍ದ ಹಾಕಿ ಅಲ್ಲೇ ಥಣ್ಣಗ ಕೂತ ಬಿಡ್ತಿದ್ದೆ. ಖರೇ ಅಂದ್ರ ನಿನ್ನ ಮ್ಯಾಲೆ ನನಗೆ ಸಿಟ್ಟಿಲ್ಲ. ಆದ್ರ ನೀ ಇನ್ನೂ ಅನುಭವ ಇಲ್ಲದ ಹುಡಗೀ ಅಂತ ನಿನ್ನ ಅಪ್ಪಗೂ ಬುದ್ಧಿ ಇಲ್ಲೇನು? ನೆನಸಿದರ ಇನ್ನೂ ಮೈ ಉರೀತsದ.

**ಕಮಲಾ** :– ಮನಸ್ಯಾ ಅಂದಮ್ಯಾಲೆ ತಪ್ಪು ಆಗೂದೇ ? ಅದನ್ನೇ ಪಟ್ಟ ಹಿಡಕೊಂಡು ಕೂತರ ಹ್ಯಾಂಗ ? ಈಗ ನೀವು ಬರೂದು ಬಂದೀರಿ. ಸ್ವಲ್ಪ ಸಮಾಧಾನದಾಗ ಕೇಳಕೊಂಡು ತಪ್ಪ ನಮ್ದು ಅಂತ ಸಿದ್ಧ ಆದಮ್ಯಾಲೆ ಹರಿಹಾಯಬಹುದಿತ್ತಲ್ಲ ? ಅದನ ಬಿಟ್ಟು....

**ಶಂಕರ** :– ಹೌದು. ಆಗ್ಲಿ, ನಂದೇ ಮೂರ್ಖತನಾ ಆತು. ಆದದ್ದು ಆಗಿ ಹೋತು. ಎಲಾ ೧೧|| ಆತು! ೧೨ಕ್ಕ ತಿರುಗಿ ಹೋಗೂ ಬಸ್ ಅದ. ನಾ ಇನ್ನ....

**ಕಮಲಾ** :– ಯಾಕೆ ನನ್ನ ಅಳಿಸೇ ಹೋಗ್ಬೇಕೂ ಅಂತೀರೇನು ? ದೀಪಾವಳಿ ಸೂಟೀ ಮುಗಿಯೂ ತನಕಾ ಇದ್ರ . . ಮತ್ತ ಅಪ್ಪ ನಿಮ್ಮ ಹಟಾನೇ ಇದ್ದರೆ ಆಗಲೆ ನೀವಂದ್ಹಾಂಗ ಅಪ್ಪನ ಕಡಿಂದ ತಪ್ಪದಂಡಾ ಬೇಕಾದ್ರೂ ಕೊಡಸ್ತೀನಿ. ಎಷ್ಟು ದಂಡಾ ಕಟ್ತೇರಿ ಏನ ದಂಡಾಕಟ್ತೇರಿ ಹೇಳ್ರಿ. ಮಾವನ ಮ್ಯಾಲೆ ಸಿಟ್ಟ ಇದ್ರೂ ಹೆಂಡ್ತೀಮ್ಯಾಲಾದ್ರೂ ತುಸಾ ಕನಿಕರ ತೋರಸಿರಿ....

**ಶಂಕರ** :– ಅದs ಖರೇನ. ಆದ್ರ ನಿನಗ ನಿನ್ನ ಗಂಡನ ಅಭಿಮಾನ-ಭಂಗ ಆದ್ರs ಛಲೋ ಅನಿಸೀತೇನು ? ಬರವಾಗ ಒಳ್ಳೇ ಏರಿನ್ಯಾಗ ಬಂದು ಈಗ ಸರಕ್ಕನ ಥಣ್ಣಗ ಆದ್ರs ಮಾವ ನನ್ನ ಏನಂತ ತಿಳ್ಕೊಂಡಾನು ? ಮತ್ತೆ ನಾ ಇಲ್ಲಿದ್ದಾದ್ರೂ ಏನ ಪ್ರಯೋಜನ ? ಖಾನಾವಳಿ ಕೂಳ ತಿನ್ನೂದಾದ್ರ ಇಲ್ಲಿ ಯಾಕ ಇರ್‍ಬೇಕು ? ನಾಕ ದಿನಾ ತಡದೇ....

**ಕಮಲಾ** :– ಆದದ್ದೆಲ್ಲ ಒಳಿತೇ ಆತು ಅಂದ್ರಲ್ಲಾ ಆಗ. ಹಾಂಗ ಇದೂ ಒಳ್ಳೇದೇ ಆತ ಅನ್ರಲಾ. ಅಪ್ಪ ಏನೂ ತಿಳಕೊಂಬೂದಿಲ್ಲ, ಏನೂ ಅನ್ನೂದಿಲ್ಲ. ನಿಮ್ಮ ಅಭಿಮಾನಭಂಗ ಆಗೂದಿಲ್ಲ. ಅಂತ ನಾ ಬೇಕಾರs ಗ್ಯಾರಂಟೀ ಕೊಡ್ತೇನಿ. ಹ್ಯಾಂಗೂ ನನಗೂ ಅಡಗಿ-ಮುಸರಿ ಅಂತ ಕೆಲಸಾನೂ ಇಲ್ಲ. ಒಂದೆರಡ ದಿನಾ ಸಂಪಾದಕಿ ಆಗೂ ಶಿಕ್ಷಣ ಕೊಡ್ರಲಾ. ಛಂದ ಮಾತಾಡತೀರಿ. ಒಂದು ನಾಕ ವಿಷಯದ ಮ್ಯಾಲೆ ಲೆಕ್ಚರ್ ಕೊಡ್ರಿ. ಕೇಳಿ ಸಂತೋಷಪಡತೇನಿ. ಮತ್ತ ಇಂಥಾ ಚಾನ್ಸ ಸಿಗ್ತದೊ ಇಲ್ಲೊ ? ಸಂಸಾರ ಒಮ್ಮೆ ಸುರೂ ಆತೂ ಅಂತ ಅಂದ್ರ ಇಬ್ರಿಗೂ ಹೀಂಗೆ ಒಮ್ಮೆಲೆ ಪುರುಸತ್ತ ಸಿಗ್ತsದ ಅಂತ ಖಾತ್ರಿ ಎಲ್ಲಿ ?

**ಶಂಕರ** :– ಹುಂ. ಅಂತೂ—ತಿಳೀತು ಬಿಡು ನಿನ್ನ ಗತ್ತು. ಹೊತ್ತ ಸಿಕ್ಕsದs ಸಾಧಿಸಿಕೊಂಡು ಬಿಡೋಣ ಅಂತಿ ಹೌದಲ್ಲೊ. ಗಂಡನ ಕಡೀಂದ ಕೆಲಸ ಮಾಡಿಸಿಕೊಳ್ಳಲಿಕ್ಕೆ....

**ಕಮಲಾ** :– ಏನೂ ಮಾಡಬ್ಯಾಡ್ರಿ. ಅಲ್ಯಾದೇವರು ನೀವು. ದೇವ ರ್‍ಹಾಂಗ ಕೂಡ್ರಿ. ನೇವೇದ್ಯ ಖಾನಾವಳಿಯಿಂದ ಬರ್‍ತsದ. ಉಳ ದದ್ದು ಕೆಲಸ ಅಪ್ಪ ಮಾಡ್ತಾನ. ಏನಾರs ಅಕಸ್ಮಾತ್ ಮಾಡೂ ಪ್ರಸಂಗಾನೇ ಬಂದ್ರs ನಾ ಟಿಪ್ಪಣೀ ಮಾಡಿಟ್ಟುಕೊಂಡು ಒಳಗ ಬಂದ ಮ್ಯಾಲ ನಿಮ್ಮ ಸೇವಾ ಒಂದಕ್ಕ ಹತ್ತ ಪಟ್ಟ ಮಾಡಿ ಅದರ ಪ್ರತಿಫಲ ಮುಟ್ಟಸ್ತೇನಿ. ಆತೊ ಇಲ್ಲೊ. ತಗೀರಿನ್ನ ಕೋಟು ಪ್ಯಾಂಟ. ಕೈಕಾಲು ತೊಳಕೊಂಡು ಬರ್‍ರಿ.

**ಶಂಕರ** :– ಆಗ್ಲಿ. ಮಹಾರಾಣಿಯವರ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವೆನು. ( ಇಬ್ಬರೂ ನಗುವರು ).

**ಗಣಪತ** :– ( ಪ್ರವೇಶಿಸಿ ) ವ್ಹಾ ! ವ್ಹಾ ! ಛೆ ! ಛೆ ! ಛೆ ! ಅಳಿಯ ದೇವ್ರು ಪ್ರಸನ್ನ ಆದ್ರು ಹೌದಲ್ಲೊ?

**ಕಮಲಾ** :– ಅಪ್ಪಾ ! —

**ಗಣಪತ** :– ಅಕ್ಕಸಾಲಿಗ ಕಿವಿ ಚುಚ್ಚಿದರs ನೋಯೂದಿಲ್ಲಂತ ನನಗೂ ಧೈರ್ಯ ಇತ್ತೂ ಅನ್ನು. ನನ್ನ ಮಗಳು ಶಾಣ್ಯಾಕಿ ಗಂಡನ ಸಿಟ್ಟ ಇಳಸ್ತಾಳ ಅನ್ನೂ ಧೈರ್ಯ ಇದ್ದs ಇತ್ತು.

---

**ಕಮಲಾ :**— ಅಪ್ಪಾ, ಸುಮ್ಮನಿರಪಾ. ಅವರ ಸಿಟ್ಟ ಇಳಿಸಬೇಕಾದ್ರ ನನ್ನ ಪುಣ್ಯಾ ಎಲ್ಲಾ ಖರ್ಚಮಾಡಿ ಕೂತೇನಿ. ನೀ, ಬರೂ ಪುರಸತ್ತ ಇಲ್ದೆ ಮತ್ತೆ ಚ್ಯಾಷ್ಟಿ ಮಾಡ್ಲಿಕ್ಕೆ ಹತ್ತೀದಿ. ಇನ್ನೊನ್ಮೆ ಅವ್ರಿಗೆ ಸಿಟ್ಟ ಬಂತೂ ಅಂದ್ರ, ನನ್ನಂಥ ಹತ್ತಮಂದೀ ಕಡಿಂದೂ ಅದನ್ನ ಇಳಸೂದು ಸಾಧ್ಯ ಅಗ್ಲಿಕ್ಕಿಲ್ಲ. ಮತ್ತ ನಾ ಇಳಸೂ ಪ್ರಯತ್ನಾನೂ ಮಾಡ್ಲಿಕ್ಕಿಲ್ಲ. ಸಿಟ್ಟನಾಗ ಅವರು ಹೊರಟರೂ ಅಂದ್ರೆ ನಾನೂ ಅವರ ಹಿಂದ ಹೊರಟ ಬಿಡವಾಕಿ ತಿಳೀತೇನು? ಮತ್ತ ನಮ್ಮಿಂದ ತಪ್ಪ ಆಗ್ಯೇದ. ಅಕ್ಷಮ್ಯ ತಪ್ಪ ಆಗ್ಯೇದ. ತಪ್ಪದಂಡಾ ಮುಟ್ಟಸಿಬಿಡಪಾ.

**ಗಣಪತ** — ಮುಟ್ಟಸತೇನಿ. ಮುಟ್ಟಸತೇನಿ. ಶಂಕರರಾಯಾ, ಮತ್ತ ಸಿಟ್ಟ ಮಾಡಿಕೊಬ್ಯಾಡಪಾ. ನನ್ನ ಸ್ವಭಾವಾನೇ ಹೀಂಗ. ಈಕೀ ತಾಯಿ ಇದ್ದಾಗ ಹೀಂಗೆ ಏನಾರ ಮಾತಂದಬಿಡ್ತಿದ್ದೆ. ಜಗಳಾಗ್ತಿತ್ತು. ಆಗ ತಪ್ಪದಂಡಾ ಕೊಟ್ಟs ಆಕೀನ್ನ ಸಮಾಧಾನ ಮಾಡ್ಬೇಕಾಗ್ತಿತ್ತು. ಒಂದ ಸಾವಿರ ಸಲಾ ತಪ್ದಂಡಾ ಕೊಟ್ರೂ ತಪ್ಪ ಮಾಡೂದನ್ನ ನನ್ನಿಂದ ಬಿಡೂದ ಆಗವಲ್ದು. ಆಗ್ಲಿ. ತಪ್ಪದಂಡ ಕೊಡೂ ರೂಢಿ ನನಗದ. ಕೊಡ್ತೇನಿ. ಹೇಳವಾ, ಏನ ಕೊಡ್ಲಿ?

**ಕಮಲಾ :**— ಅಂದ್ರೆ...ಅವ್ರೇನೋ ಪೇಪರ ಹೊರಡಸ್ತಾರಂತ. ನನ್ನ ಹೆಸರಲೆ ನೀ ಇಟ್ಟ ಹಣಾನs ಅವ್ರಿಗೆ ಕೊಡ್ಲಿಕ್ಕೆ ನನಗೆ ಅಧಿಕಾರ ಕೊಟ್ಬಿಡು ಪ್ರೆಸ್ ತಗೊಳ್ಲಿಕ್ಕೆ.

**ಗಣಪತ :**— ಅಂ! ಅಲ್ಲಾ, ನಾ ಹೊರಗ ಹೋದ ಸಂಧೀ ಸಾಧಿಸಿ ಒಳ್ಳೇ ಯೋಜನಾ ಹಾಕೀರಲ್ಲಾ! ಶಂಕರರಾಯಾ, ಈಕಿ ಬಲು ಬೆರ್ಕಿ ಹುಡುಗಿ. ನೋಡಿದ್ಯಾ, ಹ್ಯಾಂಗ ನಿನ್ನ ಕೆಲಸಾ ಮಾಡಿದ್ಲು. ಮತ್ತ ನೀ ಸರಕ್ಕನೆ ಸಿಟ್ಟ ಮಾಡಿಕೊಂಡು ಹೊರಡತೇನಿ ಅಂದಿ.

**ಶಂಕರ :** — ನಾ ಏನ ರೊಕ್ಕದ ಆಶಾಕ್ಕ ನಿಂತಿಲ್ಲ. ನನಗೆ....

**ಗಣಪತ :** — ಗೊತ್ತದs. ಹೆಂಡತೀ ಮ್ಯಾಲಿನ ಪ್ರೀತಿಯಿಂದ ನಿಂತೀದಿ ಅನ್ನೂದು ನನಗೆ ಗೊತ್ತದs. ಆದ್ರೂ ಕಾಮಿನಿ ಸಂಗಡ ಕಾಂಚನ ಬರುವಾಗ ಬ್ಯಾಡ ಅನ್ನಬಾರ್ದಪಾ. ಆಕಿ ಕೇಳ್ಯಾಳ. ನಾ ಕೊಡಲಿಕ್ಕೆ ತಯಾರ ಇದ್ದೇನಿ. ತಗೊ, ಪೇಪರ ಹೊರಡಸು. ನಾ ಆಫೀಸಿನ್ಯಾಗ ಮ್ಯಾನೇಜರ ಆಗಿ ಮೊಮ್ಮಕ್ಕಳ್ನ ಆಡಿಸಿಕೋತ ಆರಾಮಾಗಿ ಇರ್ತೇನಿ.

**ಕಮಲಾ :**— ಇರಲಿ ಬಿಡಪಾ ನಿನ್ನ ಚ್ಯಾಷ್ಟಿ. ಊಟ ತರ್ಲಿಕ್ಕೆ ಹೇಳಿ ಬಂದಿಯೊ ಇಲ್ಲೊ? ಸ್ನಾನಾ ಮಾಡಿಕೊಳ್ರಿ ಮೊದ್ಲು. ಊಟಾ ಮಾಡಿ ಮಲಕೊಂಡು ಎದ್ದ ಮ್ಯಾಲೆ ಮೂರೂ ಮಂದಿ ಕೂಡಿ ವಿಚಾರ ಮಾಡೋಣಂತ.

**ಗಣಪತ :**— ಆಗ್ಲಿ, ಆಗ್ಲಿ. ಏಳಪಾ ಸ್ನಾನಾ ಮಾಡೋಣಂತ. ಎಲಾ, ನೋಡದ್ಯಾ ಊಟದ ಡಬ್ಬೀ ಹೇಳಿ ಬರೂ ಮುಂದ ಹಾದ್ಯಾಗ ಶಿವರಾಯ್ರು ಭೆಟ್ಟಿಯಾದ್ರು. ಏನೇನೊ ಮಾತಾಡಕೋತ ಅವರ ಕೈಯಾಗ ಕೊಟ್ಟ ನಾಶೀ ಡಬ್ಬಿ ತಿರಗಿ ತಗೊಳ್ಲಿಕ್ಕೆ ಮರತೇಹೋತು. ಪುಣ್ಯಾಕ್ಕೆ ಅವರ ಮನೀ ದೂರ ಇಲ್ಲ. ಒಂದೈದು ಮಿನಿಟನ್ಯಾಗ ತಂದ ಬಿಡ್ತೇನಿ.

**ಕಮಲಾ :** — ಮತ್ತೆ ಅಲ್ಲೇ ಮಾತಾಡಕೋತ ಕೂತು ಹೊತ್ತ ಮಾಡ ಬ್ಯಾಡ.

**ಗಣಪತ :** — ಛೆ! ಛೆ! ಈಗ ಬಂದೆ. (ಹೋಗುವನು)

**ಕಮಲಾ :** — ತಪ್ಪದಂಡ ಒಪ್ಪಿಗೆ ಆತೋ ಇಲ್ಲೊ?

**ಶಂಕರ :**— ಆತು. ಅಲ್ಲಿ, ಪ್ರೆಸ್ ತಗೊಳ್ಲಿಕ್ಕೆ ಬೇಕಾಗುವಷ್ಟು....

**ಕಮಲಾ :**— ಅದ ನನ್ನ ಹೆಸರಿನಾಗ. ಆದ್ರ ಪೇಪರ ಹೊರಡಿಸಿದ್ರಿ ಅಂದ್ರs ನಾನೂ ಸಂಪಾದಕಿ ಅಂತ ಹೆಸರು ಹಾಕಿಸಿ ಕೊಳ್ಳವಾಕಿ.

**ಶಂಕರ :** – ನೀ ಬ್ಯಾಡ ಅಂದ್ರೂ ನಾ ಹಾಕೇ ಹಾಕ್ತೇನಿ. ಕಾಳಜಿ ಬಿಡು. ಗಂಡಾ ಹೆಂಡ್ತಿ ಕೂಡೇ ಸಂಪಾದಕರೂ ಅಂತ ಅಂದಾಗ ಪೇಪರಿಗೆ ಒಂದು ಮಹತ್ವ ಬರ್ತಽದ. ಸ್ತ್ರೀಯರ ವಿಷಯ ನೀನು, ಪುರುಷರ ವಿಷಯ ನಾನು.–

**ಕಮಲಾ :** – ಈಗ ಬ್ಯಾಡ. ಸಂಜೀಕಡೆ ಆರಾಮ ಕೂತಾಗ ಲೆಕ್ಚರ ಹೇಳೀರಂತ. ಹೊತ್ತಾಗೇದ. ಲಗೂನೆ ಎದ್ದು ಸ್ನಾನ ಮಾಡ್ರಿ. ಮತ್ತ ನನ್ನ ತಂಬಿಗ್ಗಿಷ್ಟು ನೀರ ಹಾಕ್ರಿ.

**ಶಂಕರ :** – ಸಽರಿ.

**ಕಮಲಾ :** – ಸಽರಿ ಅಂದು ಮತ್ತ ಕೂತಿರಲ್ಲ! ಏನ ಸ್ನಾನ ಬ್ಯಾಡೇನು? ಬ್ಯಾಡಂದ್ರ ಇಲ್ಲ. ಕೈಕಾಲಷ್ಟು ತೊಳಕೊಂಡ ಬಿಡ್ರಿ.

**ಶಂಕರ :** – ಸ್ನಾನ ಬೇಕು ಖರೇ. ಆದ್ರ ನೀರೂ ನಾನೇ ಕಾಸಿಕೊಳ್ಳ ಬೇಕಾಗ್ತಽದೇನೊ ಅಂತ.

**ಕಮಲಾ :** – ಇಲ್ಲ. ಕಾದ ನೀರದಽ ಏಳ್ರಿ.

**ಶಂಕರ :** – ಯಾಕ ಅವಸರಾ ಮಾಡ್ತೀ. ನಿನ್ನಪ್ಪ ಬಂದಾ ಅಂದ್ರ ಸಿಟ್ಟಿಗೆದ್ದ ಅಳಿಯ ಶಾಂತ ಇರ್ಲಿ ಅಂತ ಇಡೀ ದಿನ ಮನ್ಯಾಗಿದ್ದು ಉಪಚಾರ ಮಾಡ್ತಾನ. ನಾನೂ ನೀನೂ ಮಾತಾಡೂದು ಯಾವಾಗ? ಈಗ ನಿನ್ನಪ್ಪ ರೊಕ್ಕ ಕೊಡೂದಂತೂ ಖಂಡಿತ ಆದ್ಹಾಂಗಾತು. ಪೇಪರ ಹೊರಡಿಸಬೇಕು ಅಂತ ನಾ ನಿರ್ಧಾರ ಮಾಡೇನಿ. ನೀನೂ ಸಂಪಾದಕಿ ಆಗವಾಕಿ. ಇಬ್ರೂ ಅದರ ಬಗ್ಗೆ ಒಂದಿಷ್ಟು ಚರ್ಚಾ ಮಾಡೋಣಲಾ!

**ಕಮಲಾ :**– ಅಪ್ಪ ಈಗ ಬರ್ತಾನೆ. ಅಷ್ಟರೊಳಗ ಏನ ಚರ್ಚಾ ಮಾಡ್ತಿರಿ? ಮಾಡೋಣಂತ ಸಂಜೀ ಮುಂದೆ. ಏಳ್ರಿನ್ನು. ಏಳ್ತೀರೊ ಏನು ಕೈಹಿಡಿದು ಎಬ್ಬಿಸಬೇಕೊ?

**ಶಂಕರ :** – ಏ, ಏ, ನನ್ನ ಮುಟ್ಟ ಬಿಟ್ತಿಯಲ್ಲಿ!

**ಕಮಲಾ :** – ಹೌದಽ! ಎಷ್ಟು ಸುಧಾರಿಸೀನೆ ಅಂದ್ರೂ ಇಷ್ಟೇ ಹಸೀ ಬರಹ. ಆಗ ಸಿಟ್ಟನಾಗಿದ್ದಾಗ ಸರೀದಿದ್ರ ಸರಿಸಿಕೊಂಡು ಹೋಗ್ತೇನಿ ನನಗೇನ ಮಡಿ ಮೈಲಿಗಿ ಇಲ್ಲ ಅಂತಂದವ್ರು ಈಗ ನಾ ಮುಟ್ಟದ ಕೂಡ್ಲೆ ಮೈಮ್ಯಾಲೆ ಹಾವು ಹರಿದವರ ಹಾಂಗ ಮಾಡಿಬಿಟ್ರಿ.

**ಶಂಕರ :** – ಆಶ್ಚರ್ಯ–ಆಘಾತ ಆದದ್ದು ಖರೇನೇ. ಆದ್ರ ನನಗೆ ಮೈಲಿಗೆಯಾತು ಅಂತ ಮೈ ಕಂಪಿಸಲಿಲ್ಲ. ನೀ ಎಷ್ಟ ಧೈರ್ಯದಿಂದ ನನ್ನ ಮುಟ್ಟಬಿಟ್ಟೆ ಅಂತ—

**ಕಮಲಾ :** – (ನಗುವಳು)

**ಶಂಕರ :**– ಯಾಕೆ ನಗ್ತಿ? ನಾ ಸುಳ್ಳಂದೆ ಅಂತ ತಿಳಿದೀಯೇನು! ಕಾಲೇಜ ಕಟ್ಟೆ ಹತ್ತಿದ ಮ್ಯಾಲೆ—

**ಕಮಲಾ :**– ಗೊತ್ತದಽ ಬಿಡ್ರಿ. ಆದ್ರ ನನಗೆ ನಗು ಬಂದದ್ದು ಅದಕ್ಕಲ್ಲ.

**ಶಂಕರ :**– ಮತ್ತೆ?

**ಕಮಲಾ :**– ಅಂದ್ರೆ— (ನಗುವಳು) ಹೋಗ್ಲಿ ಬಿಡ್ರಿ. ಈಗ ಅಪ್ಪ ಬಂದಮ್ಯಾಲೆ ಎಲ್ಲಾ ತಾನೇ ಗೊತ್ತಾಗ್ತಽದ.

**ಶಂಕರ :**– ಅಂದ್ರ— ಏನಿದು? ಏನ ನಡಿಸೀರಿ ನೀವಿಬ್ರೂ? ನಿಮ್ಮ "ಡೋಂಟ ಕಮ್" ತಾರು, ಇಲ್ಲಿ ಬಂದಮ್ಯಾಲೆ ಕೊಟ್ಟ ಎಕ್ಸಪ್ಲೆನೇಶನ್ನೂ, ಒಮ್ಮಿಂದೊಮ್ಮೆ ಪ್ರೆಸ್ ಕೊಳ್ಳಿಕ್ಕೆ ಹಣ ಕೊಡ್ತೇನೆ ಅಂದದ್ದೂ– ಎಲಾ! ನನಗೆ, ಛೆ! ಛೆ! ಎಂಥ ಮಡ್ಡ ನಾನು? ಏನೊ ಇದರಾಗ ಗೂಢ ಅದಽ ಅಂತ ಹೊಳೀಲೇ ಇಲ್ಲಲ್ಲ ನನಗೆ. ಮನಸೀಗೆ ಬಂದ ಹುಡಗೀನ ಲಗ್ನ ಆದ್ರೆ ಹೀಂಗೇ ಆಗ್ತದಂತೆ ಕಾಣಸ್ತದ.

ಹೆಂಡ್ತಿ ಮುಖಾ ನೋಡಿದ ಕೂಡ್ಲೆ ಸಿಟ್ಟಿನ ಜೊತೀಗೆ ಬುದ್ಧೀನೂ ಇಲ್ಲದ್ಹಾಂಗ ಆಗ್ತsದ. ಹೇಳು, ಏನ ನಡಸೀರಿ ಇದನ್ನ?

**ಕಮಲಾ** :– ಏನಿಲ್ರಿ.

**ಶಂಕರ**:– (ಅಣಕದ ದನಿಯಲ್ಲಿ) ಯೇ – ನಿ – ಲ್ರಿ! ಮಾಡೂದು ಮಾಡಿ ಮತ್ತ ಈಗ ಸೋಗು ಮಾಡ್ತೀಯೇನು? ಹೇಳು, ಏನ ನಡಿಸೀರಿ?

**ಕಮಲಾ** :– ಅಲ್ರೀ....

**ಶಂಕರ** :– ಒಳ್ಳೇ ಮಾತೀಲೆ ಹೇಳ್ತೀಯೊ ಅಥವಾ....

**ಕಮಲಾ** :– ಒಂದ ಮಾತ ಒಪ್ಕೊಂಡ್ರೆ....

**ಶಂಕರ** :– ಹೇಳ್ತಿ ಅಲ್ಲ! ನಾ ನಿನ್ನ ಮಾತು ಒಪ್ಪೂದೂ ಇಲ್ಲ. ನೀ ಹೇಳೂದೂ ಬ್ಯಾಡ. ನನಗೆಲ್ಲಾ ತಿಳೀತು. ನಾ ಇನ್ನ....

**ಕಮಲಾ** :– ನಿಮಗಂತೂ ಮೂಗಿನ ತುದೀಗೆ ಸಿಟ್ಟಿದ್ದ ಹಾಂಗ ಕಾಣಸ್ತsದ. ಇನ್ನ ನಿಮ್ಮ ಗೂಡ ಸಂಸಾರ ಮಾಡುವಾಗ....

**ಶಂಕರ** :– ಬ್ಯಾಡ ಬಿಡು. ಮಾಡು ಅಂತ ನಾ ಏನು ಒತ್ತಾಯಾ ಮಾಡೂದಿಲ್ಲ.

**ಕಮಲಾ** :– ಮಾತೆತ್ತಿದರs ಇಂಥಾ ಮಾತಾಡಬ್ಯಾಡ್ರಿ. ಎಲ್ಲಾದಕ್ಕ ಅವಸರಾ ಮಾಡಿದ್ರ ಹ್ಯಾಂಗಾದೀತು? ನಾ ಏನ ನಿಮಗ ನೀಗಲಾರದ ಮಾತು ಕೇಳೂದಿಲ್ಲ? ನೀವ ಕೇಳಿದ್ದಕ್ಕ ನಾ ಉತ್ತರಾ ಕೊಟ್ಟಮ್ಯಾಲ ಸಿಟ್ಟಿಗೇಳೂದಿಲ್ಲ ಅಂತಾ ನೀವು ವಚನಾ ಕೊಟ್ರ—

**ಶಂಕರ**:– ಇಷ್ಟೇ ಹೌದಲ್ಲೊ? ತಾ ಇಲ್ಲಿ ಕೈ. ತಗೋ ವಚನಾ. ಸಿಟ್ಟಿಗೇಳೂದಿಲ್ಲ. ನೀ ಏನ ಹೇಳಿದ್ರೂ ಸಿಟ್ಟಿಗೇಳೂದಿಲ್ಲ. ಆತೊ ಇಲ್ಲೊ? ಆದ್ರ ಮತ್ತ ನೀ ಹುಡಗಾಟಿಕಿ ಮಾಡಿದ್ರs ಮಾತ್ರ....

**ಕಮಲಾ** :– ಇಲ್ರೀ : ನನಗೂ ಅಷ್ಟು ತಿಳೀತsದ. ಹಗ್ಗ ಹರಿಯೂತನಕಾ ಜಗ್ಗಬಾರದು ಅಂತ. ಅಲ್ರೀ, ಎಂಥಾ ಪ್ರಸಂಗ ಬಂದ್ರೂ ಡೋಂಟ್ ಕಮ್ ಅನ್ನೂತಾರು ಬಿಡೂ ಧೈರ್ಯ ಮಾವ ಅನ್ನವಗ ಆದೀತsಽ?

**ಶಂಕರ** :– ಎಲಾ! ಯಸ್; ಅಂಸ್ರೆ ಹುಡಗಾಟಕೀಗೆ ತಾರ ಬಿಟ್ಟ ದ್ರೇನು? ಮತ್ತೆ ನಿಂದೂ....

**ಕಮಲಾ** :– ಅದೂ ನಾಟಕಾನೇ. ನಿಮ್ಮ ಪ್ರೀತಿ ನನ್ನ ಮ್ಯಾಲೆ ಎಷ್ಟದs ಅನ್ನೂದನ್ನ ಪರೀಕ್ಷಾ ಮಾಡೋಣ ಅಂತ—

**ಶಂಕರ** :– ಅಂ! ಹುಂ! ಡೋಂಟ್ ಕಮ್ ಅನ್ನೂ ತಾರ ಕಂಡು ಸಿಟ್ಟ ತಲೆಗೇರಿ ನಾ ಬರದಿದ್ರ ನಿನ್ನ ನಾಟಕ ದುಃಖಾಂತ ಆಗ್ತಿತ್ತು, ಕಲ್ಪನಾ ಬರಲಿಲ್ಲೇನು? ಏನೋ ನಾ ಅಂಥಾ ಮೂರ್ಖ ಅಲ್ಲಾ ಅಂತ. -

**ಕಮಲಾ** :– ಬರದಿದ್ರ ನಾ ಸ್ವತಃ ಬಂದು ಕರಕೊಂಡ ಬರ್ತಿದ್ದೆ.

**ಶಂಕರ** :– ದೇವರ ಕೃಪಾ ನನ್ನ ಮ್ಯಾಲೆ ಇನ್ನೂ ಅದs. ಸಿಟ್ಟಗೆದ್ರೂ ನಾ ಇಲ್ಲಿಗೆ ಬಂದದ್ದು ಛಲೋನೇ ಆತು. ಇಲ್ಲಾಂತಂತಂದ್ರ, ನಾ ಬರದೆ ಇರೂದು, ನೀ ನಮ್ಮ ಖೋಲಿಗೆ ಬರೂದು, ನಮ್ಮ ವಾಗ್ಯುದ್ಧ ನಡೆಯೂದು, ಛೆ! ಛೆ! ಛೆ! ನನ್ನ ಮರ್ಯಾದಿ ಮಾರಾಟ ಆಗಿ ಹೋಗ್ತಿತ್ತು.

**ಕಮಲಾ** :– ಆದ್ರ ನನ್ನ ಅಂದಾಜ ತಪ್ಪಲಿಲ್ಲ. ಸಿಟ್ಟಗೆದ್ರೂ ನೀವ ಬರ್ತೀರಿ ಅಂತ ನನಗೆ ಖಾತ್ರೀ ಇತ್ತು. ನಂದೇವರ ಗುಣ ನನಗ ಗೊತ್ತಿಲ್ಲೇನು?

**ಶಂಕರ** :– ಆತು ಆತು. ಶ್ಯಾಣ್ಯಾಕಿ ಇದ್ದೀ ಬಿಡು. ಆದದ್ದೆಲ್ಲಾ...

**ಕಮಲಾ** :– ಛಲೋದೇ ಆತು ದೇವರ ದಯದಿಂದ. ಆದ್ರ ನೀವು ಒಂದು ವಿಷಯದಾಗ ನನ್ನ ಕ್ಷಮಾ ಮಾಡಬೇಕು.

**ಶಂಕರ** :– ಅಂದ್ರ-ಅಂದ್ರ, ನಿನ್ನಪ್ಪ ರೊಕ್ಕಾ ಕೊಡ್ತೇನಿ ಅಂದದ್ದೂ ನಾಟಕಾನೇ ಹೌದಲ್ಲೊ? ಆಗ್ಲಿ. ಕ್ಷಮಾ ಮಾಡ್ತೇನಿ ಹೋಗು. ನಾ ಏನೂ ಕೈಲಾಗದಂವ ಅಲ್ಲ. ಹೊಟ್ಟಿ-ಬಟ್ಟೆಗೆ ಸಾಲುವಷ್ಟು ದುಡಿಯೋ ಶಕ್ತಿ ನನ್ನಲ್ಲದs. ದೇವರ ದಯೆ ಇದ್ರ ಪೇಪರೂ ಹೊರಡಿಸೇನು!

**ಕಮಲಾ** :– ಛೆ! ಛೆ! ಉಳಿದದ್ದೆಲ್ಲ ನಾಟಕ ಆದ್ರೂ ಅಪ್ಪ ರೊಕ್ಕ ಕೊಡೂದು ಖರೇರೀ. ನಾ ಕ್ಷಮಾ ಕೇಳಿದ್ದು ಅದಕ್ಕಲ್ಲ. ಈಗ ನೀವು ಮಾವನ ಮನೀಗೆ ಬಂದು ಖಾನಾವಳಿ ಊಟ ಉಣ್ಣಬೇಕಾಗಿ ಬಂದsದ, ಅದಕ ಕ್ಷಮಾ ಮಾಡ್ರಿ ಅಂದೆ. ರಾತ್ರಿ ಅಡಗೀ ನಾನೇ ಮಾಡಿ - -

**ಗಣಪತ** :– ಸ್ನಾನ ಆತೊ ಇಲ್ಲೊ ಅಳಿಯದೇವರದು? ಖಾನಾವಳಿ ಹುಡುಗ ನೇವೇದ್ಯ ಇದೇ ಈಗ ತರ್ತಾನ. ಎಲಾ! ಇನ್ನೂ ಅಂಗೀನೇ ಕಳದಿಲ್ಲಲ್ಲ!

**ಶಂಕರ** :– ಅಂದ್ರ - ಅಂದ್ರ - ಎದ್ದೆ. ಸ್ನಾನಕ್ಕ ಹೊಂಟೆ, ಒಂದ ಮಿನಿಟನೊಳಗ ಮುಗಿಸಿ ಬಿಡ್ತೇನೆ. ಏನೇ! ಟಾವೆಲ್........

**ಕಮಲಾ** :– (ನಗುವಳು)

**ಗಣಪತ** :– ಅಂದ್ರೆ ಈ ಹುಡುಗಿ ಎಲ್ಲಾ ಗುಟ್ಟು ರಟ್ಟು ಮಾಡಿಬಿಟ್ಲು ಹೌದಲ್ಲೊ? ನೋಡಪಾ, ಶಂಕರರಾಯಾ, ಗಂಡಾ ಅನ್ನೂ ಅ.. ಮಾನಾ, ಪ್ರೀತಿ ನಮ್ಮ ಹುಡಗೀಗೆ ಎಷ್ಟದs ಅಂತ. ನನಗೆ ಹೇಳಿದ್ಲು, ಅಪ್ಪಾ, ಒಂದ ನಾಟಕ ಮಾಡೋಣ. ಹಬ್ಬ ಮುಗದ ಮ್ಯಾಲೇ ಖರೇ ಹಕೀಕತ್ ಹೇಳೋಣ. ಅವರ ಪರೀಕ್ಷೆ ಮಾಡೋಣ. ನೀ ಮಾತ್ರ ಅವ್ರು ಸಿಟ್ಟಿಗೆ ಬಂದ್ರು ಅಂತ ಸರಕ್ಕನೆ ಗುಟ್ಟು ಬಿಟ್ಟಕೊಡ ಬ್ಯಾಡ ಅಂತ. ಈಗ ನೋಡಿದ್ರ ಒಂದರ್ಧತಾಸು ಸುಮ್ಮನಿರ್ಲಿಕ್ಕೆ ಬರ್ಲಿಲ್ಲ ಇವಳಿಗೆ. ಆತು ಆತು. ಡೋಂಟ ಕಮ್ ಅಂದ್ರೂ ಹೆಂಡ್ತಿ ಮ್ಯಾಲಿನ ಪ್ರೀತಿಯಿಂದ ನೀ ಬಂದಿ. ನಿನ್ನ ಪರೀಕ್ಷೆ ಮಾಡ್ಬೇಕು ಅನ್ನವಾಕಿ ತಾನೇ ನಿನ್ನ ಮ್ಯಾಲಿನ ಪ್ರೀತಿಯಿಂದ ಸೋತ ಬಿಟ್ಲು. ಗಂಡ-ಹೆಂಡರ ಪ್ರೀತಿ ಇದ್ರs ಹೀಂಗಿರಬೇಕು. ಏಳಿನ್ನು ಸ್ನಾನ ಮಾಡು. ಬಾಪಾ ತಮ್ಮಾ, ತಾ ಇಲ್ಲಿಡಬ್ಬೀ. ಇನ್ನೊಂದು ತಾಸ ಬಿಟ್ಟು ಬಂದು ಅದನ್ನೊಯ್ಯಿ. ನಾಟಕದ ಗದ್ದಲದಾಗ ನಾಕ ದಿನಾ ಖಾನಾವಳಿ ಊಟಾನೇ ಗತಿ ಆತಲ್ಲಪಾ, ಅದೂ ಹಬ್ಬದೊಳಗ ಅಂತ? ನನಗೂ ತುಸ ಬ್ಯಾಸರ ಆಗಿತ್ತು ಅದೂ ತಪ್ಪಿದ ಹಾಂಗ ಆತು. ಛಲೋ ಆತು. ಮತ್ತ.

**ಶಂಕರ** :– ಏನೇ, ಟಾವೆಲ್ ...

---

**ಸ್ತ್ರೀಪಾತ್ರ ವಹಿಸುವ ನಟ**— ನಾನೊಮ್ಮೆ ವೇಷ ಹಾಕಿಕೊಂಡು ರಂಗಸ್ಥಳವನ್ನು ಪ್ರವೇಶಿಸಿದೆನೆಂದರೆ ಪಾತ್ರದಲ್ಲಿ ತಲ್ಲೀನನಾಗಿ ಬಿಡುತ್ತೇನೆ. ಆಗ ಎದುರು ಕುಳಿತಿರುವ ಪ್ರೇಕ್ಷಕರು ಕೂಡ ನನ್ನ ದೃಷ್ಟಿಯಿಂದ ಮರೆಯಾಗಿ ಬಿಡುತ್ತಾರೆ.

**ಗೆಳೆಯ**— ಅದಕ್ಕಾಗಿ ಪ್ರೇಕ್ಷಕರನ್ನು ದೂರುವದರಲ್ಲಿ ಏನೂ ಅರ್ಥವಿಲ್ಲ.

# ಕನ್ನಡದಲ್ಲಿ ಗದ್ಯದ ಬೆಳವಣಿಗೆ

ಲೇಖಕರು: ಪ್ರೊ. ವಿ. ಜಿ. ಕುಲಕರ್ಣಿ ಬೆಳಗಾವಿ

**ಕನ್ನಡ ಗದ್ಯಸಾಹಿತ್ಯಕ್ಕೆ ಪ್ರಾಚೀನವಾದ ಪರಂಪರೆಯಿದೆ; ಶಾಸನಗಳಲ್ಲಿಯ ಗದ್ಯದಿಂದಲೇ ಶೈಲಿಯನ್ನು ತಿಳಿಯಬೇಕಾಗಿದೆ. ಆದರೆ ಕನ್ನಡದಲ್ಲಿ ಗದ್ಯದ ಬರೆವಣಿಗೆಯಲ್ಲಿ ವಿಶೇಷ ಬದಲಾವಣೆಯಾಗಿಲ್ಲ. ೧೨ ನೇ ಶತಮಾನದ ಶೈಲಿ ಹಾಗೂ ಇಂದಿನ ಶೈಲಿಯಲ್ಲಿ ವಿಶೇಷ ವ್ಯತ್ಯಾಸವಿಲ್ಲ. ಆದರೆ ವ್ಯಾವಹಾರಿಕ ಶೈಲಿಯಲ್ಲಿ ಕೆಲ ಭೇದಗಳನ್ನು ಕಾಣಬಹುದಾಗಿದೆ. ಕನ್ನಡದ ಗದ್ಯ-ಶೈಲಿ ಸತ್ವಯುತವಾಗಲು ಪಾರಿಭಾಷಿಕ ಶಬ್ದಗಳ ಉಪಯೋಗ ಕನ್ನಡದೊಂದಿಗೆ ಸಂಪರ್ಕ ಬಂದ ಇನ್ನಿತರ ಭಾಷೆಗಳ ಶಬ್ದಗಳ ಹಿತಮಿತ ಬಳಿಕೆ ಅಗತ್ಯವಿದೆ.**

## ಪ್ರಾಚೀನ ಪರಂಪರೆ

ಕನ್ನಡದಲ್ಲಿ ಗದ್ಯಕ್ಕೆ, ಎಂದರೆ ಬರೆಹದ ಗದ್ಯಕ್ಕೆ ಒಂದು ಪ್ರಾಚೀನ ಪರಂಪರೆಯಿದೆ. ಬಳಕೆಯ ಮಾತಿನ ಗದ್ಯವೇನೋ ಭಾಷೆ ಹುಟ್ಟಿದಾಗಿನಿಂದಲೂ ಇದ್ದೇ ಇರುತ್ತದೆ. ಇಲ್ಲಿ ವಿವೇಚಿಸಬೇಕಾದುದು ಬರೆಹದ ಗದ್ಯವನ್ನು ಕುರಿತು. ನಮ್ಮ ಕನ್ನಡ ಭಾಷೆ ಎಂದಿನಿಂದ ಪ್ರಚಾರದಲ್ಲಿ ಬಂದಿತು ಎಂಬುದರ ಸೂಕ್ಷ್ಮ ಸಮಾಲೋಚನೆ ಇಲ್ಲಿ ಅಗತ್ಯವಿಲ್ಲ. ಕ್ರಿಸ್ತಶಕದ ಆರಂಭದಿಂದಲೇ ನಮ್ಮ ಭಾಷೆ ಬಳಕೆಯಲ್ಲಿ ಇದ್ದಿತೆಂದು ನಾವು ಸ್ಥೂಲಮಾನವಾಗಿ ಇಟ್ಟುಕೊಳ್ಳಬಹುದು. ಇಜಿಪ್ತ ದೇಶದಲ್ಲಿ ದೊರೆತ ಒಂದು ಗ್ರೀಕ ಭಾಷೆಯ ಪ್ರಹಸನದಲ್ಲಿಯ ಒಂದೆರಡು ವಾಕ್ಯಗಳು ಕನ್ನಡ ಭಾಷೆಯವೆಂದು ಕೆಲವು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿದೆ. ಈ ವಾಕ್ಯಗಳು ಕನ್ನಡವೆಂದು ನಾವು ಇಟ್ಟುಕೊಳ್ಳುವದಾದರೆ ನಮಗೆ ದೊರೆತ ಅತ್ಯಂತ ಪ್ರಾಚೀನವಾದ, ಎಂದರೆ ಕ್ರಿ. ಶ. ೨ನೆಯ ಶತಮಾನದ, ಗದ್ಯದ ಮಾದರಿ ಇದೇ ಆಗುತ್ತದೆ. ಆದರೆ ಈ ಸಂದಿಗ್ಧವಿದ್ದ ವಿಚಾರವನ್ನು ಬಿಟ್ಟು ಸುನಿಶ್ಚಿತವಾದ ಕನ್ನಡದ ಪ್ರಾಚೀನತಮ ಗದ್ಯದ ಮಾದರಿಯನ್ನು ಸಮಾಲೋಚಿಸೋಣ. ಬೇಲೂರಿನ ಹತ್ತರವಿರುವ ಹಲ್ಮಿಡಿ ಎಂಬ ಹಳ್ಳಿಯಲ್ಲಿ ದೊರೆತ ಒಂದು ಶಾಸನದಲ್ಲಿ ನಮ್ಮ ಭಾಷೆಯ ತೀರ ಹಳೆಯ ಗದ್ಯಶೈಲಿಯನ್ನು ಕಾಣುತ್ತೇವೆ. ಇದು ೫ನೆಯ ಶತಮಾನದಲ್ಲಿ ರಚಿತವಾದ ಶಾಸನ. ಈ ಶಾಸನವು ಮೊದಲಿನ ಸಂಸ್ಕೃತ ಪದ್ಯವೊಂದನ್ನು ಬಿಟ್ಟರೆ, ಪೂರ್ತಿಯಾಗಿ ಕನ್ನಡ ಗದ್ಯದಲ್ಲಿದೆ. ಇದರಿಂದ ಬರೆವಣಿಗೆಯ ಗದ್ಯವು ಆ ಕಾಲಕ್ಕಾಗಲೇ ಬೆಳೆದುಬಂದು ಒಂದು ಪ್ರೌಢವಾದ ಮಟ್ಟಕ್ಕೆ ಮುಟ್ಟಿತ್ತೆಂದು ಊಹಿಸಬಹುದು. ಸಂಸ್ಕೃತ ಭಾಷೆಯ ಪ್ರಭಾವವು ಆಗಲೇ ವಿಶೇಷ ರೀತಿಯಲ್ಲಿ ಕನ್ನಡದ ಮೇಲೆ ಬಿದ್ದಿತ್ತೆಂದು ಸ್ಪಷ್ಟವಾಗುತ್ತದೆ. ಕನ್ನಡವು ಗ್ರಂಥಸ ಭಾಷೆಯಾಗುವಲ್ಲಿ ಸಂಸ್ಕೃತದಿಂದ ಬಹಳ ಪ್ರಯೋಜನವನ್ನು ಪಡೆಯಿತೆಂದು ಕಾಣುತ್ತದೆ. ಈ ಶಾಸನದಲ್ಲಿ ಅನೇಕ ಸಂಸ್ಕೃತ ಶಬ್ದಗಳೂ ಸಮಸ್ತ ಪದಗಳೂ ಕನ್ನಡಕ್ಕೆ ಅಷ್ಟು ಸಹಜವಲ್ಲದ ಕರ್ಮಣೀಪ್ರಯೋಗವೂ ಉಪಯೋಗಿಸಲ್ಪಟ್ಟಿವೆ. ಇವೆಲ್ಲವೂ ಸಂಸ್ಕೃತ-ಕನ್ನಡಗಳ ಚಿಕ್ಕ ಬಾಂಧವ್ಯದ ಕುರುಹುಗಳಾಗಿವೆ.

ಮುಂದೆ ಮೂರು ನಾಲ್ಕು ಶತಮಾನಗಳವರೆಗೆ ಶಿಲಾಶಾಸನಗಳಲ್ಲಿಯೂ ತಾಮ್ರ ಶಾಸನಗಳಲ್ಲಿಯೂ ಕನ್ನಡ ಗದ್ಯವು ಹೆಚ್ಚಾಗಿ ಉಪಯೋಗವಾಗಿದ್ದನ್ನು ಕಾಣುತ್ತೇವೆ. ಕನ್ನಡವನ್ನು ಹೆಚ್ಚುಹೆಚ್ಚಿನ ಪ್ರಮಾಣದಲ್ಲಿ ಮಹತ್ವದ ವ್ಯವಹಾರಗಳಿಗೆ ಬಳಸಹತ್ತಿದರೆಂದು ನಾವು ತರ್ಕಿಸಬಹುದು. ಮೊದಮೊದಲು ಸಂಸ್ಕೃತವನ್ನೊ ಪ್ರಾಕೃತವನ್ನೊ ಬಳಸುತ್ತಿದ್ದ ರಾಜರು, ಅಧಿಕಾರಿಗಳು, ಪಂಡಿತರು ವರ್ತಕರು ಮೊದಲಾದವರು ಮಹತ್ವದ ವ್ಯವಹಾರಗಳಲ್ಲಿ ತಮ್ಮ ಮಾತೃಭಾಷೆಯಾದ ಕನ್ನಡವನ್ನು ಉಪಯೋಗಿಸಲಿಕ್ಕೆ ಹತ್ತಿದರು. ಈ ವೇಳೆಗಾಗಲೇ ಕನ್ನಡದಲ್ಲಿ ಸಾಹಿತ್ಯವೂ ಬೆಳೆಯ ಹತ್ತಿತ್ತೆಂದು ಊಹಿಸಲಿಕ್ಕೆ ಆಧಾರಗಳಿವೆ. ಗದ್ಯ ಸಾಹಿತ್ಯವೂ ಪದ್ಯಸಾಹಿತ್ಯವೂ ಕೂಡಿಯೇ ಬೆಳೆಯಹತ್ತಿರಬೇಕು. ಶಾಸನಗಳಲ್ಲಿ ಪ್ರಬುದ್ಧವಾದ ಗದ್ಯಪದ್ಯ ರಚನೆಗಳು ಕಾಣುತ್ತವೆ. ಆದರೆ ದುರ್ದೈವದಿಂದ ೯ನೆಯ ಶತಮಾನಕ್ಕೆ ಮುಂಚಿನ ಕನ್ನಡ ಗ್ರಂಥಗಳಾವವೂ ದೊರೆತಿಲ್ಲ. ನಿಃಸಂಶಯವಾಗಿ ಗ್ರಂಥಗಳಿದ್ದುವು; ಆದರೆ ಅವು ಲುಪ್ತವಾಗಿವೆ. ಪೂರ್ವದ ಕವಿಗಳ ಉಲ್ಲೇಖವು ಅನೇಕ ಕಡೆಗಳಲ್ಲಿ ಆಗಿದೆ.

## ಕವಿರಾಜಮಾರ್ಗ

ಕನ್ನಡದಲ್ಲಿ ಉಪಲಬ್ಧವಿದ್ದ ಗ್ರಂಥಗಳಲ್ಲಿ ನೃಪತುಂಗನ ಕವಿರಾಜಮಾರ್ಗವೇ ಅತ್ಯಂತ ಪ್ರಾಚೀನವಾದುದು. ಇದು ೯ನೆಯ ಶತಮಾನದಲ್ಲಿ ಹುಟ್ಟಿದ ಗ್ರಂಥ. ಇದೊಂದು ಮುಖ್ಯವಾಗಿ ಅಲಂಕಾರ ವಿಷಯಕವಾದ ಗ್ರಂಥವಾಗಿದ್ದರೂ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ವಿಶೇಷ ಮಹತ್ವದ ಗ್ರಂಥ. ನೃಪತುಂಗನು ತನಗಿಂತ ಹಿಂದೆ ಆಗಿಹೋದ ಗದ್ಯ ಪದ್ಯ ಕವಿಗಳ ಹೆಸರುಗಳನ್ನು ಹೇಳಿದ್ದಾನೆ. ಪ್ರಸಿದ್ಧರಾದ, ಗದ್ಯಕಾರರನ್ನು ಈ ಪದ್ಯದಲ್ಲಿ ಹೆಸರಿಸಿದ್ದಾನೆ.

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನಾತಿದಿಗಳೀ ।
ಕ್ರಮದೊಳ್ ನೆಗಳ್ದು ಗದ್ಯಾ—
ಶ್ರಮಗುರುತಾ ಪ್ರತೀತಿಯಂ ಕೈಕೊಂಡರ್ ॥

ಆದರೆ ಈ ನಮ್ಮ ವಿಮಳ, ಉದಯ, ಜಯಬಂಧು, ದುರ್ವಿನೀತ, ನಾಗಾರ್ಜುನ ಇವರಲ್ಲಿ ಯಾರೊಬ್ಬರ ಗ್ರಂಥವೂ ಸಿಕ್ಕಿಲ್ಲ. ಅವರ ವಿಷಯವಾಗಿ ಹೆಚ್ಚಿನ ಸಂಗತಿಗಳೂ ತಿಳಿದುಬಂದಿಲ್ಲ. ಪ್ರಖ್ಯಾತರಾದ ಗದ್ಯಲೇಖಕರು ಇದ್ದರೆಂದು ಮಾತ್ರ ಸ್ಪಷ್ಟವಾಗುತ್ತದೆ. ಅಲ್ಲದೆ ಕನ್ನಡದಲ್ಲಿ ಗದ್ಯ ಪದ್ಯ ಮಿಶ್ರಿತವಾದ ಶೈಲಿಯಲ್ಲಿ ಕಥೆಗಳನ್ನು ರಚಿಸುವ ಪದ್ಧತಿಯಿತ್ತೆಂದು ನೃಪತುಂಗನು ಹೇಳುತ್ತಾನೆ.

ಮಿಗೆ ಕನ್ನಡ ಕಬ್ಬಂಗಳೊ
ಳಗಣಿತಗುಣಗದ್ಯಪದ್ಯಸಂಮಿಶ್ರಿತಮಂ ।
ನಿಗದಿಸುವರ್ ಗದ್ಯಕಥಾ
ಪ್ರತೀತಿಯಿಂ ತಚ್ಚಿರಾಂತನಾದಾರ್ಯರ್ಕಳ್ ॥

ಇಲ್ಲಿ ಹೇಳಿದ ಗ್ರಂಥಗಳು ಮುಂದೆ ಕನ್ನಡದಲ್ಲಿ ಬಹಳವಾಗಿ ಪ್ರಾಚುರ್ಯವನ್ನು ಪಡೆದ ಚಂಪೂ ಪ್ರಬಂಧಗಳಾಗಿರದೆ ಗದ್ಯದಲ್ಲಿಯೇ ಕಥೆಗಳನ್ನು ಬರೆದು ಅಲ್ಲಲ್ಲಿ ಪದ್ಯಗಳನ್ನು ಉಪಯೋಗಿಸುವ ಒಂದು ವಿಶಿಷ್ಟ ಪ್ರಕಾರದ ಸಾಹಿತ್ಯರೂಪವಾಗಿರಬೇಕೆಂದು ಊಹಿಸಲಿಕ್ಕೆ ಕಾರಣಗಳಿವೆ. ‘ವಡ್ಡಾರಾಧನೆ’ ಎಂಬ ಕಥಾಗ್ರಂಥವು ಈ ಮಾದರಿಯದ್ದಾಗಿರಬಹುದೆಂದು ಪಂಡಿತರು ತರ್ಕಿಸುತ್ತಾರೆ.

## ವಡ್ಡಾರಾಧನೆಯ ಸರಳ ಶೈಲಿ

ವಡ್ಡಾರಾಧನೆ ಕನ್ನಡ ಗದ್ಯದ ಇತಿಹಾಸದಲ್ಲಿ ಒಂದು ಬಹಳ ಮಹತ್ವದ ಗ್ರಂಥ. ಇದು ಜೈನ ಮತಕ್ಕೆ ಸಂಬಂಧಪಟ್ಟ ಅನೇಕಾನೇಕ ಕಥೆಗಳನ್ನು ಒಳಗೊಂಡಿದೆ. ಗದ್ಯದಲ್ಲಿ ರಚಿತವಾದ ಕಥೆಗಳಾಗಿದ್ದರೂ ಅಲ್ಲಲ್ಲಿ ಸಂಸ್ಕೃತ, ಪ್ರಾಕೃತ ಕನ್ನಡ ಪದ್ಯಗಳು ಉದ್ಧೃತವಾಗಿವೆ. ಇಲ್ಲಿಯ ಗದ್ಯಶೈಲಿ ಸುಲಭವೂ ಸರಳವೂ ಆಕರ್ಷಕವೂ ಆಗಿದೆ; ಭಾಷೆ ಇಂದಿನ ನಮ್ಮ ಬರೆಹದ ಭಾಷೆಯನ್ನು ಹೋಲುತ್ತದೆ; ಹಲಕೆಲವು ಪ್ರಯೋಗಗಳು, ಶಬ್ದಗಳು ವ್ಯಾಕರಣ ವಿಶೇಷಗಳು, ಈ ರಚನೆ ಬಹಳ ಹಿಂದಿನದೆಂದು, ಎಂದರೆ ಪೂರ್ವದ ಹಳೆಗನ್ನಡದ್ದೆಂದು ತೋರಿಸುವಂತಿದೆ. ಆದರೆ ಈ ಮಹತ್ವದ ಗ್ರಂಥದ ಕಾಲನಿರ್ಣಯವು ಇನ್ನೂ ಸಂಶಯಾತೀತವಾಗಿ ಆಗಿಲ್ಲ. ಇದು ಕ್ರಿ. ಶ. ೬ನೆಯ ಶತಮಾನದ್ದೆಂದು ಒಬ್ಬ ಪ್ರಸಿದ್ಧ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಇನ್ನೊಬ್ಬ ಸಂಶೋಧಕರು ೧೧ನೆಯ ಶತಮಾನದ್ದೆಂದು ಸಾರು

ತ್ತಾರೆ. ೬ನೆಯ ಶತಮಾನದ್ದೆಂಬ ವಾದ ಸರಿಯಾಗಿದ್ದರೆ, ಉಪಲಬ್ಧವಿದ್ದ ಕನ್ನಡ ಗ್ರಂಥಗಳಲ್ಲಿ ಇದೇ ಮೊದಲನೆಯದಾಗುತ್ತದೆ. ಆದರೆ ಈ ಸಂಬಂಧದಲ್ಲಿ ಇನ್ನೂ ಹೆಚ್ಚು ಸಂಶೋಧನೆಯಾಗಿ ಸ್ಪಷ್ಟ ಪ್ರಕಾಶವು ಬೀಳುವ ವರೆಗೆ ಇಷ್ಟು ಹಿಂದಿನ ಕಾಲವನ್ನು ಇದಕ್ಕೆ ಅಂಟಿಸುವದು ಸರಿಯಾಗಲಿಕ್ಕಿಲ್ಲ; ಏಕೆಂದರೆ ಹೀಗೆ ಗ್ರಹಿಸುವಲ್ಲಿ ಅನೇಕ ತೊಡಕುಗಳು ಉದ್ಭೂತವಾಗುತ್ತವೆ. ಈಗಿನ ಮಟ್ಟಿಗೆ ಇದೊಂದು ೧೦ನೆಯ ಶತಮಾನದ ಆದಿ ಭಾಗದಲ್ಲಿ, ಎಂದರೆ ಪಂಪನಿಗಿಂತ ಕೆಲವು ವರ್ಷ ಮೊದಲು ರಚಿತವಾದದ್ದೆಂದು ಗ್ರಹಿಸಿ ವಿವೇಚನೆಯನ್ನು ಮುಂದುವರಿಸುವುದು ಒಳಿತು. ಇಲ್ಲಿಯ ಗದ್ಯವು ಸತ್ವಪೂರ್ಣವಾಗಿದೆ; ಅಚ್ಚಗನ್ನಡದ ಕೆಚ್ಚನ್ನು ಇಲ್ಲಿ ಕಾಣಬಹುದು. ಸಂಸ್ಕೃತವನ್ನು ಪೂರ್ತಿಯಾಗಿ ಬಿಡದೆ ಹಿತಮಿತವಾಗಿ ಉಪಯೋಗಿಸಿ, ಸುಲಭವಾದ ಕನ್ನಡದ ದೇಸಿಗೆ ಪ್ರಧಾನ ಪಟ್ಟವನ್ನು ಕೊಟ್ಟು ನಿರರ್ಗಳವಾಗಿ ಓಡುವ ಒಂದು ಸತ್ವಶಾಲಿಯಾದ ಗದ್ಯಶೈಲಿಯನ್ನು ಲೇಖಕನು ಸಿದ್ಧಪಡಿಸಿಕೊಂಡಿದ್ದಾನೆ. ಇಲ್ಲಿಯ ಗದ್ಯದ ಸುಲಭತೆಗೆ ಒಂದು ಉದಾಹರಣೆಯನ್ನು ನೋಡಬಹುದು.

“ಇತ್ತ ಮಗಧೆಯೆಂಬುದು ನಾಡು. ಅಲ್ಲಿ ಪಾಟಳೀಪುರನೆಂಬುದು ಪೊಳಲ್. ಅದನಾಳ್ವೊಂ ನಂದನೆಂಬರಸಂ. ಪಲಕಾಲಂ ಅರಸುಗೆಯ್ಯುತ್ತಿರೆ ಮತ್ತೊಂದು ದಿವಸಂ ಚಾಣಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟೆ ಕವಿಯಿಸಿದೊಡೆ ಆತನುಂ ಮುಳಿದು ನಂದನಂ ಕಿಡಿಸಿ ನಂದನ ರಾಜ್ಯಸ್ಥಾನದೊಳ್ ಪೆರಿನೋರ್ವ ಚಂದ್ರಗುಪ್ತನೆಂಬನೊಂ ನಿರಿಸಿದೊಡೆ......”

ಇಲ್ಲಿಯ ಪುಟ್ಟ ಪುಟ್ಟ ವಾಕ್ಯಗಳನ್ನೂ ಬಿಡಿಯಾದ ಸುಲಭ ಕನ್ನಡ ಶಬ್ದಗಳನ್ನೂ ನಾವು ಗಮನಿಸಬೇಕು. ಇಂಥ ಗದ್ಯವನ್ನು ಅವಲೋಕಿಸಿದರೆ ಸಾವಿರ ವರ್ಷಕ್ಕೂ ಹಿಂದಿನ ನಮ್ಮ ಗದ್ಯದ ರೀತಿ ಇಂದಿನ ವರೆಗೂ ಬಹ್ವಂಶಗಳಲ್ಲಿ ಹಾಗೇ ಉಳಿದುಕೊಂಡು ಬಂದಿದೆಯೆಂದು ಆಶ್ಚರ್ಯವಾಗದಿರದು. ಬೇರೆ ಕೆಲವು ಭಾಷೆಗಳಲ್ಲಿ—ಉದಾಹರಣೆಗಾಗಿ ಇಂಗ್ಲೀಷಿನಲ್ಲಿ—ಪೂರ್ವದ ಭಾಷೆಗೂ ಇಂದಿನ ಭಾಷೆಗೂ ಬಹಳಷ್ಟು ವ್ಯತ್ಯಾಸವು ಕಂಡುಬರುತ್ತದೆ. ೬೦೦ ವರ್ಷಗಳ ಹಿಂದಿನ ಚಾಸರನ (Chaucer) ಕಾಲದ ಭಾಷೆಯನ್ನು ಇಂದಿನ ಇಂಗ್ಲಿಷ ಜನರು ಅರ್ಥಮಾಡಿಕೊಳ್ಳಲಾರರು. ಆದೇ ನಮ್ಮ ೧೦೦೦ ವರ್ಷಗಳ ಹಿಂದಿನ ಕನ್ನಡ ಭಾಷೆಯನ್ನು ಇಂದಿನ ಕನ್ನಡಿಗನು ಅಲ್ಪ ಶ್ರಮದಿಂದ ಅರ್ಥಮಾಡಿಕೊಳ್ಳಬಹುದು. ನಮ್ಮ ಭಾಷೆ ತನ್ನ ಪರಂಪರೆಯನ್ನು ಅವಿಚ್ಛಿನ್ನವಾಗಿ ಕಾಯ್ದುಕೊಂಡು ಬಂದಿದೆ.

### ಚಂಪೂ ಕಾವ್ಯಗಳಲ್ಲಿ....

ನಮ್ಮ ಆದಿಕವಿಯೂ ಅಗ್ರಕವಿಯೂ ಆದ ಪಂಪನಿಂದ ಪ್ರಾರಂಭವಾದ ಚಂಪೂ ಪ್ರಬಂಧಗಳಲ್ಲಿ ಪದ್ಯಗಳಿಗೆ ಹೆಚ್ಚು ಸ್ಥಾನವು ಮೀಸಲಾಗಿದ್ದರೂ ಗದ್ಯವೂ ಬಂದೆಬರುತ್ತದೆ. ಚಂಪೂ ಕವಿಗಳು ಪಂಡಿತ ಕವಿಗಳಾಗಿದ್ದರಿಂದಲೂ ಪ್ರೌಢವಾದ ಮಹಾಕಾವ್ಯಗಳನ್ನು ಪಂಡಿತರ ರಂಜನೆಗಾಗಿ ಬರೆಯಬೇಕೆಂಬ ಉದ್ದೇಶವನ್ನು ಅವರು ಮುಖ್ಯವಾಗಿ ಇಟ್ಟುಕೊಂಡಿದ್ದರಿಂದಲೂ ಸ್ವಾಭಾವಿಕವಾಗಿ ಅಲ್ಲಿಯ ಗದ್ಯವು ಪ್ರೌಢವೂ ಪಾಂಡಿತ್ಯಪೂರ್ಣವೂ ಆಗಿದೆ. ವಡ್ಡಾರಾಧನೆಯಂತೆ ಇಲ್ಲವೆ ಮುಂದೆ ಬರುವ ವಚನಗಳಂತೆ ಅವು ಜನಸಾಮಾನ್ಯವನ್ನು ಉದ್ದೇಶಿಸಿ ಬರೆದವುಗಳಲ್ಲ. “ವಿದಗ್ಧ ಜನದ ಮನವನಲೆಯಲೇಬೇಡಾ” ಎಂದು ಪಂಪನು ಹೇಳಿದಂತೆ, ಅವುಗಳನ್ನು ವಿದಗ್ಧರು ಓದಿ ಪರೀಕ್ಷಿಸಬೇಕಾಗಿತ್ತು. ಆ ಕಾಲದಲ್ಲಿ ವಿದಗ್ಧರು ಪಾಂಡಿತ್ಯಪ್ರಚುರವಾದ ಲಕ್ಷಣಬದ್ಧವಾದ ಕಾವ್ಯಗಳನ್ನೂ ಪ್ರೌಢವೂ ವ್ಯಾಕರಣಶುದ್ಧವೂ ಸಂಸ್ಕೃತಭೂಯಿಷ್ಠವೂ ಆದ ಭಾಷೆಯನ್ನು ಮೆಚ್ಚುತ್ತಿದ್ದರು. ಅಂತೆಯೇ ಚಂಪೂಕಾವ್ಯಗಳಲ್ಲಿಯ ಗದ್ಯವೂ ಬಹುತರವಾಗಿ ಅಂಥದೇ ಆಗಿರುತ್ತಿತ್ತು. ನೇಮಿಚಂದ್ರನ ಲೀಲಾವತಿ ಪ್ರಬಂಧದ ಒಂದು ಚಿಕ್ಕ ಗದ್ಯದ ಭಾಗವನ್ನು ಮಾಸಲೆಗೆಂದು ನೋಡಬಹುದು.

“ಅಲ್ಲಿಂ ಬಟಿಯಿಂ ದ್ವಿಗುಣಿತ ವಿರಹದುಃಖನುಂ ತಾಂಬೂಲದಾನಮಾತ್ರ ವಿಸರ್ಜಿತ ರಾಜಲೋಕನುಂ, ವಿನಯವಚನ ಮಿಳಿತಭ್ರೂಲತಾವಿಸರ್ಜಿತ ಸಚಿವಸಾಮಂತ ಸೀಮಂತಿನೀ ಸಮಾಜನುಯಾಗಿ ಸೆಜ್ಜೆಮಜ್ಜಗಂಗೆಯ್ದು ಪೋಪುದುಂ ......”

ಎಲ್ಲ ಚಂಪೂಕವಿಗಳೂ ಎಲ್ಲ ಕಡೆಗಳಲ್ಲಿಯೂ ಇಂಥ ಗದ್ಯವನ್ನೇ ಉಪಯೋಗಿಸುತ್ತಾರೆಂದಲ್ಲ. ಕೆಲವು ಚಂಪೂಕಾವ್ಯಗಳಲ್ಲಿ ಸುಲಭವಾದಗದ್ಯವೂ ಇದೆ. ಧರ್ಮಾಮೃತವನ್ನು ರಚಿಸಿದ ನಯಸೇನನ ಗದ್ಯವು ಸರಳವಾಗಿದೆ. ಕನ್ನಡ ಪದಗಳ ಬಳಕೆಯೂ ಹೆಚ್ಚಾಗಿದೆ. ಉದಾಹರಣೆಗಾಗಿ,

“ನಿಮ್ಮಂತಪ್ಪ ಮಹಾಪುರುಷರ್ ಇಂತಪ್ಪ ನಿರ್ಬುದ್ಧಿತನಮಂ ಮಾಡಲಾಗದು. ಈ ಶ್ರೀಗೆಜಗಿ ಧರ್ಮಮಂ ಬಿಡುವುದಾವಬುದ್ಧಿ? ಕಂಚಂ ಬಿಟ್ಟು ಓಡಂ ಪಿಡಿವ, ತಾಯುಂಬಿಟ್ಟು ರಕ್ಕಸಿಯಂ ಪೊರ್ದುವ, ಭೂಪರಂ ಬಿಟ್ಟು ಪೊಲೆಯರಂ ಕೆಳೆಗೊಳ್ವ, ಕುದುರೆಯನೊಲ್ಲದೆ ನಾಯನೇರುವ, ಪಟ್ಟದಾನೆಯಂಕೊಟ್ಟು ಕೋಡಗಮಂಕೊಳ್ವ, ನೆಲೆವಾವಿಂ ಬಿಟ್ಟು ತಿರಿದುಂಬ ಮರುಳಂ ಪೋಲ್ಕುಂ”

### ಚಾವುಂಡರಾಯ ಪುರಾಣ

ಚಾವುಂಡರಾಯ ಪುರಾಣ ಇಲ್ಲವೆ ತ್ರಿಷಷ್ಠಿ ಲಕ್ಷಣ ಮಹಾಪುರಾಣವೆಂಬ ಗದ್ಯ ಗ್ರಂಥವನ್ನು ರಚಿಸಿದ ಚಾವುಂಡರಾಯನು ೧೦ನೆಯ ಶತಮಾನದ ಒಬ್ಬ ಪ್ರಖ್ಯಾತವ್ಯಕ್ತಿ. ಶೂರಸೇನಾಪತಿ, ಚತುರಮಂತ್ರಿ, ಗೊಮ್ಮಟೇಶ್ವರ ಪ್ರತಿಮೆಯ ನಿರ್ಮಾಣಕಾರಣನಾದ ಕಲೋಪಾಸಕ, ಕವಿಪೋಷಕ, ಗದ್ಯಕಾರ-ಹೀಗೆ ಮುಂತಾಗಿ ಆತನು ಪ್ರಸಿದ್ಧಿ ಪಡೆದಿದ್ದಾನೆ. ಜೈನ ಮತಕ್ಕೆ ಸಂಬಂಧಪಟ್ಟ ಆತನ ಗ್ರಂಥವು ಶಾಸ್ತ್ರವಿವೇಚನೆಗೆ ತಕ್ಕಂತೆ ಗಂಭೀರ ಶೈಲಿಯಲ್ಲಿದೆ. ಇತ್ತೀಚಿನ ವರೆಗೆ ಇದೇ ಕನ್ನಡದಲ್ಲಿ ಉಪಲಬ್ಧವಿದ್ದ ಮೊದಲನೆಯ ಗದ್ಯಗ್ರಂಥವೆಂದು ಪರಿಗಣಿಸಲಾಗಿತ್ತು. ಆದರೆ ವಡ್ಡಾರಾಧನೆಯ ಕಾಲ ಇದಕ್ಕಿಂತಲೂ ಸುಮಾರು ೧೦೦ ವರ್ಷ ಹಿಂದಿನದೆಂಬ ಊಹೆಗೆ ಪ್ರಬಲ ಕಾರಣಗಳಿದ್ದುದರಿಂದ ಇದನ್ನು ಎರಡನೆಯ ಗದ್ಯಗ್ರಂಥವೆಂದು ಕರೆಯಬಹುದು.

## ವಚನ ಸಾಹಿತ್ಯ

ಕನ್ನಡ ಗದ್ಯದ ಬೆಳವಣಿಗೆಯಲ್ಲಿ ವಚನ ಸಾಹಿತ್ಯಕ್ಕೆ ಒಂದು ಅತ್ಯಂತ ಉನ್ನತ ಸ್ಥಾನವಿದೆ. ವಚನಕಾರರು ಚಂಪೂ ಕಾವ್ಯಗಳು, ಚಾವುಂಡರಾಯ ಪುರಾಣ ಇವುಗಳಲ್ಲಿ ಕಾಣುವ, ಹಳಗನ್ನಡ ವ್ಯಾಕರಣ ನಿಯಮಗಳಿಗೆ ಹೊಂದಿಕೆಯಾಗುವ ಪ್ರೌಢ ಗದ್ಯವನ್ನು ಬಿಟ್ಟು ಬಳಕೆಮಾತಿನ ಸುಲಭವಾದ ನಡುಗನ್ನಡದಲ್ಲಿ ವಚನಗಳನ್ನು ರಚಿಸಿದರು. ಈ ಗದ್ಯ ನಮ್ಮ ಇಂದಿನ ಮಾತಿನ ಭಾಷೆಗೆ ಬಹಳ ಹತ್ತಿರವಿದೆ. ಅಲ್ಲಮಪ್ರಭು, ಬಸವಣ್ಣ, ಮಹಾದೇವಿಯಕ್ಕ ಮೊದಲಾದ ಹಲವರ ವಚನಗಳಲ್ಲಿ ಕಾವ್ಯಗುಣ, ಅನುಭಾವ, ಭಾಷೆಯ ಬೆಡಗು, ಧರ್ಮನೀತಿಬೋಧೆ- ಇವುಗಳ ಸುಂದರ ಸಮ್ಮಿಳನವನ್ನು ಕಾಣುತ್ತೇವೆ. ಇಲ್ಲಿಯ ಹಲಕೆಲವು ವಿಚಾರಗಳೂ ಭಾವಗಳೂ ಗಹನವಿದ್ದುದರಿಂದ ಅವುಗಳನ್ನು ಗ್ರಹಿಸುವುದು ಒಮ್ಮೊಮ್ಮೆ ಕಷ್ಟವೆನಿಸಬಹುದಾದರೂ ಭಾಷೆಯನ್ನು ಅರ್ಥಮಾಡಿಕೊಳ್ಳುವದು ಇಂದಿನ ನಮಗೆ ಏನೂ ಕಷ್ಟವಿಲ್ಲ. ಉದಾಹರಣೆಗೆಂದು ಒಂದು ವಚನವನ್ನು ನೋಡೋಣ—

"ಉಂಬಬಟ್ಟಲು ಬೇರೆ ಕಂಚಲ್ಲ. ನೋಡುವ ದರ್ಪಣ ಬೇರೆ ಕಂಚಲ್ಲ. ಭಾಂಡವೊಂದೇ ಭಾಜನವೊಂದೇ. ಬೆಳಗೆ ಕನ್ನಡಿಯೆನಿಸಿತ್ತಯ್ಯಾ. ಅರಿದೊಡೆ ಶರಣ ಮರೆದೊಡೆ ಮಾನವ."

ಇದು ಸತ್ವಶಾಲಿಯೂ ಲಲಿತ ಮಧುರವೂ ಆದ ಗದ್ಯಶೈಲಿ. ಹಲವಾರು ವಚನಗಳು ಅತ್ಯುತ್ಕೃಷ್ಟ ಕನ್ನಡ ಗದ್ಯಶೈಲಿಯ ಮಾದರಿಗಳಾಗಿವೆ.

೧೨ನೆಯ ಶತಮಾನದಿಂದ ಈಚೆಗೆ, ವಿಶೇಷವಾಗಿ ವಿಜಯನಗರದ ಪ್ರೌಢದೇವರಾಯನ ಕಾಲದಿಂದ ಎಷ್ಟೋ ವೀರಶೈವ ಲೇಖಕರು ಮತಸಂಬಂಧವಾದ ಗ್ರಂಥಗಳನ್ನೂ ವಚನಗಳಿಗೆ ಟೀಕೆಗಳನ್ನೂ ಗದ್ಯದಲ್ಲಿ ರಚಿಸಿದ್ದಾರೆ. ಮಗ್ಗೆಯ ಮಾಯಿದೇವ, ಗುಬ್ಬಿಯ ಮಲ್ಲಣ್ಣ, ಕಲ್ಲಮಠದ ಪ್ರಭುದೇವರು, ನಿಜಗುಣ ಶಿವಯೋಗಿ, ಶಾಂತಲಿಂಗದೇಶಿಕ—ಇವರು ಗದ್ಯದಲ್ಲಿ ಗ್ರಂಥ ರಚನೆ ಮಾಡಿದ್ದಾರೆ. ಇವು ಸುಗಮವಾದ ನಡುಗನ್ನಡದಲ್ಲಿ ರಚಿತವಾಗಿವೆ. ಆದರೆ ಪ್ರೌಢವಾದ ಹಳಗನ್ನಡ ಗದ್ಯದ ಉಪಯೋಗವು ಈ ಕಾಲದಲ್ಲಿಯೂ ಮುಂದಿನ ಕಾಲದಲ್ಲಿಯೂ ಪೂರ್ತಿಯಾಗಿ ನಿಲ್ಲಲಿಲ್ಲ. ಚಂಪೂಗದ್ಯವಲ್ಲದೆ, ಸಂಪೂರ್ಣ ಗದ್ಯಗ್ರಂಥಗಳು ಹಳಗನ್ನಡ ಶೈಲಿಯಲ್ಲಿ ರಚನೆಯಾಗುತ್ತಿದ್ದವು. ಪೂರ್ವ ಪುರಾಣ, ಚಿಕದೇವ ರಾಜವಂಶಾವಳಿ ಮುಂತಾದ ಕೆಲವು ಗದ್ಯಗ್ರಂಥಗಳು ಪ್ರೌಢವಾದ ಹಳಗನ್ನಡದಲ್ಲಿವೆ. ಆಧುನಿಕನಾದರೂ ನಂದಳಿಕೆ ಲಕ್ಷ್ಮೀನಾರಾಯಣಪ್ಪನು ಹಳಗನ್ನಡದಲ್ಲಿ ಅದ್ಭುತ ಪ್ರಾವೀಣ್ಯವನ್ನು ಪಡೆದುಕೊಂಡು ಉತ್ಕೃಷ್ಟವಾದ ಗದ್ಯಕಾವ್ಯವನ್ನು ಬರೆದಿದ್ದಾನೆ.

## ಸಂಧಿಕಾಲ

೧೯ನೆಯ ಶತಮಾನವು ನಮ್ಮ ಸಾಹಿತ್ಯದ ಹಾಗೂ ಭಾಷೆಯ ಸಂಧಿಕಾಲವೆಂದು ಹೇಳಬಹುದು. ಇಂಗ್ಲಿಷ ಭಾಷಾಸಾಹಿತ್ಯಗಳ ಸಂಪರ್ಕ ಪ್ರಭಾವಗಳಿಂದ ನಮ್ಮ ಭಾಷೆ ಸಾಹಿತ್ಯಗಳಲ್ಲೂ ಮಾರ್ಪಾಟುಗಳಾದವು. ಈ ಸಂಧಿಕಾಲದ ಗದ್ಯ ಲೇಖಕರಲ್ಲಿ, ದೇವಚಂದ್ರ ಕೆಂಪುನಾರಾಯಣ, ಮುಮ್ಮಡಿ ಕೃಷ್ಣರಾಜ ಒಡೆಯರು ಇಂಗ್ಲೀಷಿನ ವಿಶೇಷ ಪ್ರಭಾವಕ್ಕೆ ಒಳಗಾಗದೆ ಗ್ರಂಥರಚನೆ ಮಾಡಿದರು. ಬಸವಪ್ಪಶಾಸ್ತ್ರಿ, ಗಂಗಾಧರ ಮಡಿವಾಳೇಶ್ವರ ತೂರಮರಿ, ಚುರಮರಿ ಶೇಷಗಿರಿರಾಯರು—ಇವರೇ ಮುಂತಾದ ಕೆಲವರು ಗದ್ಯದಲ್ಲಿ ಗ್ರಂಥರಚನೆ ಮಾಡಿ, ಅವನತಿಯ ಕಾಲದಲ್ಲಿಯೂ ಕನ್ನಡದ ಪರಂಪರೆಯನ್ನು ಉಳಿಸಿಕೊಂಡು ಬಂದರು. ತೂರಮರಿ ಅವರು ಅನುವಾದಿಸಿದ ಕನ್ನಡ ಕಾದಂಬರೀ ಕಥೆಯ ಗದ್ಯ ಶೈಲಿಯನ್ನು ಮೆಚ್ಚದವರು ವಿರಳ. ಈ ಗದ್ಯ ಶೈಲಿ ಸಹಜವೂ ಸರಲವೂ ಮನೋಹರವೂ ಆಗಿದೆ. ಈ ಶೈಲಿಯ ಅವಲೋಕನವೂ ಅನುಸರಣವೂ ಇಂದಿನವರಿಗೂ ಬಹಳ ಪ್ರಯೋಜನಕಾರಿಯಾಗಿದೆ.

ಇಲ್ಲಿಯತನಕ ನಮ್ಮ ಗದ್ಯದ ಬೆಳವಣಿಗೆಯನ್ನು ೧೯ ನೆಯ ಶತಮಾನದ ಮಧ್ಯ ಭಾಗದವರೆಗೆ ಐತಿಹಾಸಿಕವಾಗಿ ವಿಹಂಗಮದೃಷ್ಟಿಯಿಂದ ನೋಡಿದ್ದಾಯಿತು. ಇಲ್ಲಿ ಸ್ವಾಭಾವಿಕವಾಗಿ, ಗ್ರಂಥಗಳಲ್ಲಿ ಬಳಸುತ್ತಿದ್ದ ಗದ್ಯವನ್ನು ಕುರಿತು ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ಸಾಮಾನ್ಯ ಜನರು ತಮ್ಮ ದೈನಂದಿನ ವ್ಯವಹಾರದಲ್ಲಿ ಯಾವ ರೀತಿಯ ಗದ್ಯವನ್ನು ಬರೆಯುತ್ತಿದ್ದರೆಂಬುದನ್ನು ನಾವು ತರ್ಕಿಸಬಹುದಲ್ಲದೆ ಖಚಿತವಾಗಿ ನಿಷ್ಕರ್ಷೆಮಾಡಲಾಗುವದಿಲ್ಲ. ಏಕೆಂದರೆ ಉಳಿದ ದ್ರಾವಿಡ ಭಾಷೆಗಳಲ್ಲಿಯಂತೆ, ಕನ್ನಡದಲ್ಲಿ ಮಾತಿನ ಗದ್ಯ, ಸಾಮಾನ್ಯ ವ್ಯವಹಾರದಲ್ಲಿ ಬರೆಯುವ ಗದ್ಯ, ಗ್ರಂಥಗಳಲ್ಲಿ ಬರೆಯುವ ಗದ್ಯ ಹೀಗೆ ಮೂರು ರೀತಿಯಾಗಿ ನಾವು ಬೇರೆ ಬೇರೆ ಗದ್ಯಶೈಲಿಯನ್ನು ಉಪಯೋಗಿಸುತ್ತೇವೆ. ಇದೂ ಅಲ್ಲದೆ, ಪ್ರಾದೇಶಿಕ ಭೇದಗಳಂತೂ ಇದ್ದೇ ಇವೆ.

## ವ್ಯಾವಹಾರಿಕ ಗದ್ಯ

ನೂರು ವರ್ಷಗಳ ಹಿಂದೆ ಉತ್ತರ ಕರ್ನಾಟಕದಲ್ಲಿ ಸಾಮಾನ್ಯ ವ್ಯವಹಾರದಲ್ಲಿ ಎಂಥ ಗದ್ಯವನ್ನು ಬರೆಯುತ್ತಿದ್ದಿರಬಹುದು ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಒಂದು ಸಾಧನವಿದೆ. ಬೆಳಗಾವಿಯಲ್ಲಿ 'ಸುಬುದ್ಧಿ ಪ್ರಕಾಶ' ಎಂಬ ಕನ್ನಡ ಪತ್ರಿಕೆ ೧೮೫೦ ರಿಂದ ಪ್ರಾರಂಭವಾಗಿ ಕೆಲವು ವರ್ಷ ನಡೆಯಿತು. ಇದು ಕನ್ನಡ ಪತ್ರಿಕೆಗಳಲ್ಲೆಲ್ಲಾ ಬಹಳ ಹಿಂದಿನದು. ಈ ಪತ್ರಿಕೆಯ ೨೪-೫-೧೮೫೫ ರ ಸಂಚಿಕೆಯಲ್ಲಿಯ ಒಂದೆರಡು ವಾಕ್ಯಗಳನ್ನು ನೋಡಬಹುದು.

"ಬಂಗಾಲದೊಳಗೆ ನಡೆದ ಸಾಂಥಲ ಜನರ ಬಂಡು ಯಿನ್ನು ಪರಿಯಂತ್ರಕ್ಕೆ ಹಾಂಗೆ ನಡದದೆ. ಮತ್ತು ಯೀ ಬಂಡು ವುತ್ಪನ್ನವಾದ ಯಾವ ಕಾರಣವನ್ನು ಮೊದಲು ಛಾಪಿಸೋಣದರಲ್ಲಿ ಬಂದಿತ್ತೋ ಅದು ಮೃಷಾ ಆದೆ. ಕಾರಣವೇನೆಂದ್ರೆ ಸದರೀ ಬಂಡಿನ ವಿಷಯಕ್ಕೆ ಹೀಂಗಂತಿತಿರಲ್ಲಾ ಸದರಿ ಬಂಡಿನ ಮುಖ್ಯ ಸರದಾರ ಸಿದ್ದೂ ಮಾಣಜಿ ಯಿವನಿಗೆ ವಂದು ಸ್ವಪ್ನ ಬಿದ್ದಿತ್ತು...... ಆ ಮ್ಯಾಲೆ ಜಾಗ್ರತವಾದ್ದರಿಂದ ಅವನು ವಳ್ಳೇ ವೀರಾವೇಶದಿಂದ ಯುದ್ದು ಯೀ ಅನರ್ಥಕಾರಕ ಬಂಡು ನಡಶಿದಾ ..." ಇದನ್ನು ಓದಿ ಇಲ್ಲಿಯ ಭಾಷೆಯನ್ನೂ ಶೈಲಿಯನ್ನೂ ನೋಡಿ ನಮಗೆ ಮೋಜೆನಿಸಬಹುದು. ಆದರೆ ಈ ತೆರನಾದ ಗದ್ಯವನ್ನು ಬರೆಯುವದು ಸಾಮಾನ್ಯ ವ್ಯವಹಾರದಲ್ಲಿ ಇತ್ತೀಚಿನ ತನಕ—ಇಂದಿನ ತನಕ ಕೂಡ—ರೂಢಿಯಲ್ಲಿ ನಡೆದುಬಂದಿದೆಯೆಂದು ನಾವು ಮರೆಯಲಾಗದು. ನಮ್ಮ ಕೋರ್ಟು ಕಚೇರಿಗಳಲ್ಲಿ ಉಪಯೋಗಿಸುವ ಕನ್ನಡ ಗದ್ಯವೂ ಇದೇ ತೆರನಾಗಿದೆ. "ವಾದೀ ದಾವಾ ಖರೇ ಪ್ರಕಾರದ್ದು ಯಿರುವದಿಲ್ಲಾ. ಖೊಟ್ಟೆ ವ ಮತಲಬೀದು ವ ಸಾಧಣೂಕೀದು ಅದೆ. ಬ್ರಪ್ಪನ ಚಿತಾವಣೆಯಿಂದ ......" ಕನ್ನಡ ಗದ್ಯದ ಬೆಳವಣಿಗೆಯ ವಿವೇಚನೆಯಲ್ಲಿ ಸಾಮಾನ್ಯ ವ್ಯವಹಾರಕ್ಕೆ ಬಳಸುವ ಬರೆಹದ ಗದ್ಯವನ್ನೂ ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ.

## ಆಧುನಿಕ ಗದ್ಯ

ಆಧುನಿಕ ಕಾಲದ ನಮ್ಮ ಗದ್ಯವು ಯಾವ ಒಂದು ಮಟ್ಟಕ್ಕೆ ಮುಟ್ಟದೆ? ಅದು ನಮ್ಮ

ಇಂದಿನ ಅವಶ್ಯಕತೆಗಳನ್ನು ಪೂರೈಸಲಿಕ್ಕೆ ಸಮರ್ಥವಾಗಿದೆಯೆ? ಬರೆಹದ ಗದ್ಯದಲ್ಲಿ ಅಗತ್ಯವೆನಿಸುವ ಸುಧಾರಣೆಗಳು ಯಾವವು? ಈ ಪ್ರಶ್ನೆಗಳನ್ನು ಕುರಿತು ಸ್ವಲ್ಪದರಲ್ಲಿ ವಿವೇಚಿಸಬೇಕೆಂದಿದ್ದೇನೆ. ಆಧುನಿಕ ಕಾಲದಲ್ಲಿ ಮುಂದುವರೆದ ಕೆಲವು ಭಾಷೆಗಳ ಗದ್ಯದ ರೀತಿಗಳನ್ನು ನೋಡಿದರೆ ನಮ್ಮ ಗದ್ಯವು ಇನ್ನೂ ಸಾಕಷ್ಟು ಪ್ರಮಾಣದಲ್ಲಿ ಬೆಳೆದಿಲ್ಲ. ಎಲ್ಲ ಬಗೆಯ ವಿಚಾರಗಳನ್ನು ವ್ಯಕ್ತಪಡಿಸಲಿಕ್ಕೆ ಬೇಕಾದ ಶಬ್ದಸಂಪತ್ತಿ, ರೀತಿವಿನ್ಯಾಸ ವೈವಿಧ್ಯ ವ್ಯಂಜಕತ್ವ—ಇವು ಇನ್ನೂ ಸಾಲವು ಎಂದು ಎನಿಸುತ್ತದೆ. ಅದರಲ್ಲಿ ವಿಶೇಷವಾಗಿ, ವಿಜ್ಞಾನ, ರಾಜಕಾರಣ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಕಾಯದೆ, ರಾಜ್ಯದ ಆಡಳಿತೆಯ ವ್ಯವಹಾರ, ವಾಣಿಜ್ಯ ಇವೇ ಮೊದಲಾದ ಆಧುನಿಕ ಜೀವನದ ಮುಖ್ಯ ಮುಖ್ಯ ವಿಷಯಗಳನ್ನು ಕುರಿತು ಬರೆಯುವಾಗ ನಮ್ಮ ಗದ್ಯದ ಕೊರತೆಗಳು ಹೆಚ್ಚಾಗಿ ವಿದಿತವಾಗುತ್ತವೆ. ಹೀಗಾಗುವದಕ್ಕೆ ನಮ್ಮ ಸಾಹಿತ್ಯದ ಪರಂಪರೆಯೂ ಒಂದು ಪ್ರಮುಖ ಕಾರಣವೆಂದು ಕಾಣುತ್ತದೆ. ನಮ್ಮ ಸಾಹಿತ್ಯದ ಚರಿತ್ರೆಯನ್ನು ಗಮನಿಸಿದರೆ, ಈಗ ಹೇಳಿದ ವಿಷಯಗಳ ಪ್ರಸ್ತಾಪವೇ ನಮ್ಮ ಸಾಹಿತ್ಯದಲ್ಲಿ-ಗದ್ಯದಲ್ಲಿಯೇ ಆಗಲಿ ಪದ್ಯದಲ್ಲಿಯೇ ಆಗಲಿ ವಿಶೇಷವಾಗಿ ಬಂದಿಲ್ಲವೆಂದು ಗೊತ್ತಾಗುತ್ತದೆ. ಇಲ್ಲಿಯ ವರೆಗೆ ಮಾಡಿದ ನಮ್ಮ ಗದ್ಯದ ಇತಿಹಾಸದ ಅವಲೋಕನದಲ್ಲಿ, ಕಥೆಗಳು, ಮತವಿಚಾರ, ಅನುಭಾವ, ಪುರಾಣ-ಇವೇ ನಮ್ಮ ಲೇಖಕರ ಮೆಚ್ಚಿನ ವಿಷಯಗಳೆಂದು ಕಂಡು ಬರುತ್ತದೆ. ಕಳೆದ ೫೦, ೬೦ ವರ್ಷಗಳಲ್ಲಿ ಆಧುನಿಕ ವಿಷಯಗಳ ವಿಚಾರಗಳನ್ನು ಗದ್ಯದಲ್ಲಿ ವ್ಯಕ್ತಪಡಿಸುವ ಪ್ರಯತ್ನ ನಡೆದಿದೆ. ಆದರೆ ನಮ್ಮ ಗದ್ಯವು ಇನ್ನೂ ಪರಿಣತಾವಸ್ಥೆಗೆ ಬಂದಿಲ್ಲವೆಂದು ನಾವು ಒಪ್ಪಬೇಕು.

## ಇಂಗ್ಲೀಷಿನ ಪ್ರಭಾವ

ಭಾರತದ ಬೇರೆ ಭಾಷೆಗಳಲ್ಲಿಯ ಆಧುನಿಕ ಗದ್ಯದಂತೆ ಕನ್ನಡ ಗದ್ಯವೂ ಇಂಗ್ಲೀಷ ಭಾಷೆಯಲ್ಲಿಯ ಗದ್ಯರೀತಿಯ ಪ್ರಭಾವವನ್ನು ಬಹಳ ಮಟ್ಟಿಗೆ ಹೊಂದಿದೆ. ಹೀಗಾಗುವದು ಸ್ವಾಭಾವಿಕವೇ ಸರಿ. ಅಲ್ಪವಿರಾಮ, ಪೂರ್ಣವಿರಾಮ ಮೊದಲಾದ ಚಿಹ್ನೆಗಳನ್ನು ಉಪಯೋಗಿಸುವಲ್ಲಿಯೂ ಇವುಗಳ ಉಪಯೋಗದಿಂದ ಮಾರ್ಪಟ್ಟ ವಾಕ್ಯರಚನಾಕ್ರಮದಲ್ಲಿಯೂ ಈ ಪ್ರಭಾವವನ್ನು ಹೆಚ್ಚಾಗಿ ಕಾಣಬಹುದು. ಆಧುನಿಕ ಇಂಗ್ಲೀಷ ಗದ್ಯವು ಒಂದು ಉನ್ನತ ಮಟ್ಟಕ್ಕೆ ಮುಟ್ಟಿದೆ; ನಾನಾಬಗೆಯ ವಿಚಾರಗಳನ್ನೂ ಭಾವಗಳನ್ನೂ ವ್ಯಕ್ತಪಡಿಸಲಿಕ್ಕೆ ಒಂದು ಸಮರ್ಥವಾದ ಮಹಾಸಾಧನವಾಗಿದೆ. ಈ ಗದ್ಯದ ಅಭ್ಯಾಸದಿಂದಲೂ ಅನುಕರಣದಿಂದಲೂ ಕನ್ನಡವು ಇನ್ನೂ ಹೆಚ್ಚು ಪ್ರಮಾಣದಲ್ಲಿ ಪ್ರಯೋಜನವನ್ನು ಪಡೆಯಬಹುದು. ಅದರಲ್ಲಿ ವಿಶೇಷವಾಗಿ, ಇಂಗ್ಲೀಷರು ಅವಶ್ಯವೆನಿಸುವ, ಇಲ್ಲವೆ ಯಾವದೇ ಕಾರಣದಿಂದ ಬಳಕೆಯಲ್ಲಿ ಬಂದ ಪರಭಾಷೆಯ ಶಬ್ದಗಳನ್ನು ತಮ್ಮ ಶಬ್ದಕೋಶಗಳಿಗೆ ಹೇಗೆ ಸೇರಿಸಿಕೊಂಡು ತಮ್ಮವನ್ನಾಗಿ ಮಾಡಿಕೊಳ್ಳುತ್ತ ತಮ್ಮ ಭಾಷೆಯ ಸಮೃದ್ಧಿಯನ್ನು ಹೇಗೆ ಹೆಚ್ಚಿಸುತ್ತ ಹೋಗುತ್ತಾರೆಂಬುದನ್ನು ನಾವು ಗಮನಿಸಿ ಅವರಿಂದ ಪಾಠ ಕಲಿಯುವುದು ಅವಶ್ಯವಿದೆ. ನಮ್ಮಲ್ಲಿ ಪರಭಾಷೆಯ ಶಬ್ದಗಳ ವಿಷಯವಾಗಿ ಇನ್ನೂ ಮಡಿವಂತಿಕೆ ಹೆಚ್ಚಾಗಿಯೇ ಇದೆ. ಇಂಗ್ಲಿಷ ಮೊದಲಾದ ಅನ್ಯದೇಶೀಯ ಶಬ್ದಗಳಷ್ಟೇ ಅಲ್ಲ; ನಮ್ಮದೇ ಆದ ಸಂಸ್ಕೃತ ಶಬ್ದಗಳನ್ನೂ ಅದಷ್ಟು ಮಟ್ಟಿಗೆ ಉಪಯೋಗಿಸಬಾರದೆಂಬ ಅಭಿಪ್ರಾಯದ ಪಂಡಿತರು ಹಲವರಿದ್ದಾರೆ. ಸಂಸ್ಕೃತವನ್ನು ಬಿಟ್ಟು ಕನ್ನಡ ಬದುಕಲಾರದು. ಕನ್ನಡಕ್ಕೆ ಒಂದು ಪ್ರೌಢಿಮೆ ಬಂದದ್ದೇ ಸಂಸ್ಕೃತದಿಂದ. ಆದರೆ ಅನಾವಶ್ಯಕವಾಗಿ ಪಾಂಡಿತ್ಯಪ್ರದರ್ಶನಕ್ಕೆ ಸಂಸ್ಕೃತ ಪದಗಳನ್ನು ಬಳಸುವದು ಸರಿಯಲ್ಲ. ಹಾಗೆಯೇ ಕೇವಲ ತಮ್ಮ ಶಬ್ದಭಾಂಡಾರದ ವಿಸ್ತಾರವನ್ನು ಮೆರೆಯುವದಕ್ಕೆ ಅಪರಿಚಿತ ಹಳಗನ್ನಡ ಶಬ್ದಗಳನ್ನು ಉರುಳಿಸುವುದೂ ಸರಿಯಲ್ಲ. 'ದೀಪ ಹಚ್ಚು' ಎನ್ನುವದಕ್ಕೆ ಬದಲಾಗಿ 'ಸೊಡರನ್ನು ಹಚ್ಚು' ಎಂದರೆ ಹಾಸ್ಯಾಸ್ಪದವಾಗುವದು.

## ಪಾರಿಭಾಷಿಕ ಶಬ್ದಗಳು

ನಮಗೆ ವಿಜ್ಞಾನ ಮೊದಲಾದ ಆಧುನಿಕ ಜೀವನಕ್ಕೆ ಬೇಕಾದ ವಿಷಯಗಳಲ್ಲಿ ಅವಶ್ಯವಿರುವ ಪಾರಿಭಾಷಿಕ ಶಬ್ದಗಳನ್ನೂ ಇತರ ಶಬ್ದಗಳನ್ನೂ ನಿರ್ಮಿಸಿಕೊಳ್ಳಬೇಕಾಗಿದೆ. ಈ ಸಂಬಂಧದಲ್ಲಿ ಕನ್ನಡವನ್ನೊಳಗೊಂಡು ಎಲ್ಲ ಭಾರತೀಯ ಭಾಷೆಗಳೂ ಪ್ರಾಮುಖ್ಯವಾಗಿ ಸಂಸ್ಕೃತಕ್ಕೇ ಮರೆಹೋಗಬೇಕು. ಎಂದಿನಿಂದಲೂ ನಮ್ಮ ಭಾಷೆಗಳೆಲ್ಲವೂ ಸಂಸ್ಕೃತದ ವಿಶಾಲವಾದ ಶಬ್ದಭಾಂಡಾರದಿಂದಲೇ ಸಮೃದ್ಧಿ ಹೊಂದುತ್ತ ಬಂದಿವೆ. ಆಧುನಿಕ ಪರಿಸ್ಥಿತಿಯಲ್ಲಿಯೂ ಸಂಸ್ಕೃತ ಭಾಷೆಯ ನೆರವು ನಮ್ಮ ಭಾಷೆಗಳಿಗೆಲ್ಲ ಶಬ್ದಸಂಪತ್ತಿಯನ್ನು ಹೆಚ್ಚಿಸಲಿಕ್ಕಷ್ಟೆ ಅಲ್ಲದೆ ನಮ್ಮ ದೇಶದ ಐಕ್ಯವನ್ನು ಉಳಿಸಿಕೊಳ್ಳುವದಕ್ಕೂ ಅವಶ್ಯವಾಗಿದೆ. ಭಾರತೀಯ ಭಾಷೆಗಳೆಲ್ಲವೂ ಒಂದೇ ಬಗೆಯಾದ ಪಾರಿಭಾಷಿಕ ಶಬ್ದಗಳನ್ನು ಬಳಸಹತ್ತಿದರೆ ನಮ್ಮ ದೇಶದ ಏಕತೆಯ ದೃಷ್ಟಿಯಿಂದಲೂ ಬಹಳ ಇಷ್ಟವಾದ ಸಂಗತಿಯಾದೀತು. ಇನ್ನು ಸಂಸ್ಕೃತವಲ್ಲದೆ ಇಂಗ್ಲಿಷ, ಪಾರ್ಸಿ, ಅರಬಿ ಮೊದಲಾದ ಅನ್ಯದೇಶೀಯ ಭಾಷೆಗಳಿಂದಲೂ ಅವಶ್ಯವೆನಿಸುವ ಪದಗಳನ್ನು ಉಪಯೋಗಿಸಲಿಕ್ಕೆ ನಾವು ಹಿಂಜರಿಯಬಾರದು. ಈಗಾಗಲೇ ಮಾತಿನ ಭಾಷೆಯಲ್ಲಿ ಪ್ರಚಲಿತವಿದ್ದ ಅನ್ಯದೇಶೀಯ ಶಬ್ದಗಳನ್ನು ಔಚಿತ್ಯವನ್ನು ಲಕ್ಷಿಸಿ ಬರೆಹದ ಭಾಷೆಯಲ್ಲಿಯೂ ಉಪಯೋಗಿಸುವ ಧೈರ್ಯವನ್ನು ನಾವು ಮಾಡಬೇಕು. ಕನ್ನಡದ ಗಡಿ ಪ್ರಾಂತಗಳ ಭಾಷೆಗಳಾದ ಮರಾಠಿ, ತೆಲಗು, ತಮಿಳು, ಮಲಯಾಳೀ ಭಾಷೆಯಲ್ಲಿಯ ಶಬ್ದಗಳು ಕೆಲವೊಂದು ಪ್ರದೇಶಗಳಲ್ಲಿ ಕನ್ನಡಮಾತಿನಲ್ಲಿ ನುಸುಳಿಕೊಂಡಿವೆ. ಇವುಗಳನ್ನೂ ಸಮುಚಿತವೆನಿಸುವ ರೀತಿಯಲ್ಲಿ ಬರೆಹದ ಭಾಷೆಯಲ್ಲಿ ಪ್ರಯೋಗಿಸುತ್ತ ಹೋಗಬೇಕು. ಹೀಗೆ ಮಾಡುವುದಕ್ಕೆ ನಮ್ಮ ಮಹಾ ಕವಿಗಳಲ್ಲಿ ಕೆಲವರ ಭಾಷಾಪ್ರಯೋಗವೂ ಪುಷ್ಟಿಕೊಡುತ್ತದೆ. ಕುಮಾರವ್ಯಾಸನು ಘಡಾವಣೆ, ವೀರಪಣಖರೆಯ, ರಹಣಿ, ಖೇಳಮೇಳ ಇವೇ ಮೊದಲಾದ ಮರಾಠೀ ಪದಗಳನ್ನೂ ಒಮ್ಮೊಮ್ಮೆ ಪಾರ್ಸಿ ಅರಬೀ ಶಬ್ದಗಳನ್ನೂ ಉಪಯೋಗಿಸಲಿಕ್ಕೆ ಹಿಂದೆ ಮುಂದೆ ನೋಡಿಲ್ಲ. ಹೀಗೆ ಬೇರೆ ಭಾಷೆಯ ಶಬ್ದಗಳನ್ನು ಬರೆಹದಲ್ಲಿ ಬಳಸುತ್ತ ಹೋದಂತೆ ನಮ್ಮ ಶಬ್ದಭಾಂಡಾರವು ವಿಸ್ತಾರಗೊಳ್ಳುತ್ತ ನಮ್ಮ ಗದ್ಯವು ವಿವಿಧ ವಿಚಾರಗಳನ್ನೂ ಭಾವಗಳನ್ನೂ ವ್ಯಕ್ತಪಡಿಸಲಿಕ್ಕೆ ಹೆಚ್ಚು ಸಮರ್ಥವಾಗುತ್ತ ಹೋಗುತ್ತದೆ. ಆದರೆ ಯಾವುದೇ ಶಬ್ದಗಳನ್ನು, ಕನ್ನಡ ಶಬ್ದಗಳನ್ನು ಕೂಡ, ಬಳಸುವಲ್ಲಿ ಔಚಿತ್ಯ ದೃಷ್ಟಿಯಿರಬೇಕಾದಂತೆ ಅನ್ಯ ಭಾಷೆಯ ಶಬ್ದಗಳನ್ನು ಉಪಯೋಗಿಸುವಾಗಲೂ ಔಚಿತ್ಯದ ದೃಷ್ಟಿಯನ್ನು ಅವಶ್ಯವಾಗಿ ಇಟ್ಟುಕೊಳ್ಳಲೇಬೇಕು.

ಕಳೆದ ೩೦, ೪೦ ವರ್ಷಗಳಲ್ಲಿ ಕನ್ನಡದ ಗದ್ಯವು ಹೆಚ್ಚು ಹೆಚ್ಚು ಸಮರ್ಥವೂ ಸುಗಮವೂ ಆಗುತ್ತ ಬಂದಿದೆ. ಆದರೆ ಅದು ಇನ್ನೂ ಪೂರ್ತಿಯಾಗಿ ಹದಕ್ಕೆ ಬಂದಿಲ್ಲ. ಸ್ವತಂತ್ರ ಭಾರತ, ಏಕೀಕೃತ ಕರ್ನಾಟಕ, ಕಲ್ಯಾಣ ರಾಜ್ಯ, ಪ್ರಜಾಪ್ರಭುತ್ವ, ಸಾಕ್ಷರತಾ ಪ್ರಸಾರ—ಇವೆಲ್ಲವೂ ಸಿದ್ಧಿಯಲ್ಲಿಯೋ ಸಿದ್ಧಿಯ ದಾರಿಯಲ್ಲಿಯೇ ಇರುವ ಈ ದಿನಗಳಲ್ಲಿ ಕನ್ನಡ ಗದ್ಯವು ಸುಲಭವೂ ಶಕ್ತಿಯುತವೂ ಆಗಬೇಕಾದುದು ಎಂದಿಗಿಂತಲೂ ಅತ್ಯಂತ ಅವಶ್ಯವಿದೆ.

# ಮಾನಸಶಾಸ್ತ್ರ ಮತ್ತು ಚಿಕಿತ್ಸೆ

**ಮನೋರೋಗಗಳನ್ನು ನಿವಾರಿಸುವ ಚಿಕಿತ್ಸಾ ಕ್ರಮವನ್ನು ಇದೀಗ ಕಂಡು ಹಿಡಿಯಲಾಗಿದೆ. ಈ ಚಿಕಿತ್ಸಾ ಶಾಸ್ತ್ರವು ಇನ್ನೂ ಒಂದು ಶಾಸ್ತ್ರವೆಂದು ಗಣನೆ ಹೊಂದಿರದಿದ್ದರೂ ರೋಗಿಗಳ ರೋಗ ನಿವಾರಣೆಯನ್ನು ಮಾಡಬಲ್ಲದಾಗಿದೆ. ಫ್ರಾಯಿಡನ ಮನೋವಿಶ್ಲೇಷಣ ಶಾಸ್ತ್ರವು ಈ ಚಿಕಿತ್ಸೆಗೆ ವಿಶೇಷ ಸಹಾಯಕಾರಿಯಾಗಿರುವದು. ಇಲ್ಲಿ ಚಿಕಿತ್ಸಾಕ್ರಮದ ಒಂದು ವಿಹಂಗಮ ನೋಟವನ್ನು ಲೇಖಕರು ಒದಗಿಸಿರುವರು.**

ಲೇಖಕರು: ಶ್ರೀ ಎನ್. ಆರ್. ಕುಲಕರ್ಣಿ, ಪ್ರಿನ್ಸಿಪಾಲ ಜನತಾ ಲಾ ಕಾಲೇಜ, ಧಾರವಾಡ.

ಮನೋವ್ಯಾಧಿಯು ಮಾನವನಷ್ಟೇ ಪ್ರಾಚೀನವಾಗಿದೆ. ಅದುದರಿಂದ ಮನಸ್ಸನ್ನು ಚಿಕಿತ್ಸೆಗೆ ಒಳಪಡಿಸುವ ಪ್ರಯತ್ನವೂ ಬಹಳ ಹಳೆಯ ಕಾಲದಿಂದ ನಡೆಯುತ್ತ ಬಂದಿದೆ. ಕ್ರಿ. ಪೂ. ಐದನೆಯ ಆರನೆಯ ಶತಮಾನಗಳಲ್ಲಿ ಗ್ರೀಕ ಜನರೊಳಗೆ ಒಂದು ಇಂತಹ ಚಿಕಿತ್ಸೆಯು ರೂಢಿಯೊಳಗಿದ್ದುದು ಉಲ್ಲೇಖಿಸಲ್ಪಟ್ಟಿದೆ. ನರರೋಗ ಮತ್ತು ಉನ್ಮಾದ ( Hysteria ) ಗಳಿಂದ ಬಳಲುತ್ತಿರುವ ರೋಗಿಗಳನ್ನು ಕಾಡುಕೊಳಲು ವಾದನದಿಂದ ಗುಣಪಡಿಸುತ್ತಿದ್ದರಂತೆ. ಅಂತಹ ಹಾಡುಗಾರಿಕೆಯನ್ನು ವ್ಯಾಧಿಗ್ರಸ್ತರು ತೀರ ದಣಿವಾಗುವವರೆಗೂ ಕೇಳಬೇಕಾಗುತ್ತಿತ್ತು. ಕೊನೆಗೆ ಅವರು ಅದರಿಂದ ತೀರ ನಿರ್ವಿಣ್ಣರಾಗಿ ನಿದ್ರೆ ಹೋಗುತ್ತಿದ್ದರು. ಎಷ್ಟೋ ಹೊತ್ತು ಗಡದು ನಿದ್ದೆ ಮಾಡಿ ಎದ್ದ ಮೇಲೆ ಅವರು ರೋಗದಿಂದ ಮುಕ್ತರಾಗುತ್ತಿದ್ದರು.

ಆದರೆ ಮನೋರೋಗಗಳ ಸಕ್ರಮವಾದ, ಸುವ್ಯವಸ್ಥಿತವಾದ, ಶಾಸ್ತ್ರೀಯ ಪದ್ಧತಿಗನುಗುಣವಾದ ಅಭ್ಯಾಸವು ಮಾತ್ರ ತೀರ ಇತ್ತೀಚಿನದು. ಈ ವಿಷಯಕವಾದ ನಮ್ಮ ಎಲ್ಲ ತಿಳಿವಳಿಕೆಯು ಬಹಳವಾದರೆ ಕಳೆದ ೭೫ ವರುಷಗಳೊಳಗೆ ಉಂಟಾಗಿರುವದೆಂದು ನಿರ್ಭಯವಾಗಿ ಹೇಳಬಹುದು. ಇ. ಸ. ೧೮೮೦ಕ್ಕಿಂತ ಮೊದಲು, ಇಂದು ಮಾನಸಶಾಸ್ತ್ರ ಚಿಕಿತ್ಸೆ ಎಂದು ಕರಿಸಿಕೊಳ್ಳಲ್ಪಡುತ್ತಿರುವ ಶಾಸ್ತ್ರವೇ ಇರಲಿಲ್ಲವೆಂದರೂ ತಪ್ಪಾಗದು. ಅದಕ್ಕಿಂತ ಮೊದಲು ಮನೋರೋಗಿಗಳ ಬಗೆಗೆ ಜನರಲ್ಲಿ ತಪ್ಪು ಗ್ರಹಿಕೆಗಳೇ ಹೆಚ್ಚಾಗಿ ಪ್ರಚಲಿತವಾಗಿದ್ದವು. ಮನೋರೋಗಗಳಿಂದ ಬಳಲುತ್ತಿರುವವರು ಭೂತಗ್ರಸ್ತರೆಂದೂ, ಪಾಪಿಷ್ಠರಾಗಿ ದೇವರ ಅವಕೃಪೆಗೆ ಒಳಗಾದವರೆಂದೂ ನೀತಿಬಾಹಿರರೆಂದೂ ತಿಳಿಯಲ್ಪಡುತ್ತಿದ್ದರು. ಮಡಿವಂತ ಜನರು ಅಂತಹ ಜನರ ಸಮೀಪಕ್ಕೆ ಕೂಡ ಸುಳಿಯುತ್ತಿದ್ದಿಲ್ಲ. ಅವರ ಸ್ಥಿತಿಯು ಬಹಳ ಅನುಕಂಪನೀಯವಾಗಿತ್ತು. ಕಿಂಬಹುನಾ, "ಇಪ್ಪತ್ತನೆಯ ಶತಮಾನದ ಮಾನಸೋಪಚಾರಶಾಸ್ತ್ರ" ಎಂಬ ಪುಸ್ತಕದಲ್ಲಿ ( ಪುಟ ೧೫ ) ವಿಲಿಯಮ್ ವ್ಹಾಯಿಟ್ ಎಂಬವರು ಬರೆದಿರುವಂತೆ ಆಗ "ಮನೋವ್ಯಾಧಿಗ್ರಸ್ತರನ್ನು ಬರಿ ಪಶುಗಳಂತೆ ನಡಿಸಿಕೊಳ್ಳಲಾಗುತ್ತಿತ್ತು."

## ಮಾನಸಚಿಕಿತ್ಸಾಶಾಸ್ತ್ರದ ಪ್ರಾರಂಭ

ಕಳೆದ ೩೦೦-೪೦೦ ವರುಷಗಳಲ್ಲಿ ಉಳಿದೆಲ್ಲ ಶಾಸ್ತ್ರಗಳಲ್ಲಿ ತೀವ್ರವಾದ ಮತ್ತು ಅದ್ಭುತವಾದ ಪ್ರಗತಿಯಾಗಿರುವಾಗ, ಮಾನಸಚಿಕಿತ್ಸಾಶಾಸ್ತ್ರದಲ್ಲಿ ಇಷ್ಟು ತಡವೇಕಾಯಿತು, ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವಿಷ್ಟೆ: ಪಾಶ್ಚಾತ್ಯ ವೈದ್ಯಶಾಸ್ತ್ರಜ್ಞರು ಜಡವಾದವನ್ನು ಅಂಗೀಕರಿಸಿ, ಮನಸ್ಸೆಂಬ ವಸ್ತುವೊಂದು ಇರುವದೆಂಬ ಸಂಗತಿಯನ್ನು ಅಲ್ಲಗಳೆಯುತ್ತ ಬಂದರು. ಮನುಷ್ಯನನ್ನು ಬಳಲಿಸುವ ವ್ಯಾಧಿಗಳಿಗೆ ಶರೀರ, ನರಗಳು ಮತ್ತು ಮಿದುಳುಗಳಲ್ಲಾಗುವ ದೋಷಗಳೇ ಕಾರಣವೆಂದು ಅವರ ಅಭಿಪ್ರಾಯವಾಗಿತ್ತು. ದೇಹದಿಂದ ಬೇರೆಯಾಗಿರುವ ಮನಸ್ಸೆಂಬ ತತ್ತ್ವವೊಂದು ಇದೆಯೆಂದು ಒಪ್ಪುವದು ವಿಜ್ಞಾನಕ್ಕೂ, ಅದರ ಆಧಾರದ ಮೇಲೆ ನಿಂತಿರುವ ಪಾಶ್ಚಾತ್ಯ ಚಿಕಿತ್ಸಾಪದ್ಧತಿಗೂ ವಿರುದ್ಧವಾಗುತ್ತದೆಂದು ಅವರ ತಿಳಿವಳಿಕೆಯಾಗಿತ್ತು. ಹೀಗೆ ಮನಸ್ಸೆಂಬುದೇ ಇಲ್ಲವೆಂದ ಮೇಲೆ ಮಾನಸಚಿಕಿತ್ಸಾ ಕ್ರಮಕ್ಕೂ ಸ್ಥಾನವಿಲ್ಲೆಂಬದು ಸಹಜವಾಗಿಯೇ ಸಿದ್ಧವಾಗುತ್ತದೆ.

ಆದರೆ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ನಡೆದ ಮೊದಲನೆಯ ಜಾಗತಿಕ ಯುದ್ಧವು ಪಾಶ್ಚಾತ್ಯರ ಈ ನಂಬಿಕೆಗೆ ಬಲವಾದ ಆಘಾತವು ಉಂಟಾಗುವಂತೆ ಮಾಡಿತು. ಆ ಯುದ್ಧದಲ್ಲಿ ನಿರ್ವಿವಾದವಾಗಿ ವೀರರೆಂದೂ ಪ್ರಾಮಾಣಿಕ ವ್ಯಕ್ತಿಗಳೆಂದೂ ಹೆಸರಾದ ಅನೇಕ ಸಾಮಾನ್ಯ ಸೈನಿಕರೂ, ಶ್ರೇಷ್ಠ ತರಗತಿಯ ಸೇನಾಧಿಕಾರಿಗಳೂ ಮನೋರೋಗಗಳಿಗೆ ತುತ್ತಾದುದು ಕಂಡುಬಂತು. ಪಾಶ್ಚಾತ್ಯ ಪದ್ಧತಿಯ ಡಾಕ್ಟರರು ಅವರನ್ನು ಎಷ್ಟೇ ಸೂಕ್ಷ್ಮವಾಗಿ ಪರೀಕ್ಷಿಸಿದರೂ, ಅವರಲ್ಲಿ ರೋಗಕ್ಕೆ ಕಾರಣವೆಂದು ಹೇಳಬಹುದಾದ ಯಾವ ದೋಷವೂ ಕಂಡುಬರಲಿಲ್ಲ. ರೋಗಿಗಳ ಶರೀರ, ನರಗಳು ಮತ್ತು ಮಿದುಳು ಸಂಪೂರ್ಣವಾಗಿ ದೋಷರಹಿತವಾಗಿದ್ದವು. ಪಾಶ್ಚಾತ್ಯ ಪದ್ಧತಿಯ ಉಪಚಾರಗಳಾದ ಔಷಧಿ, ಇಂಜೆಕ್ಶನ್, ಶಸ್ತ್ರಚಿಕಿತ್ಸೆ ಅಥವಾ ವಿಶಿಷ್ಟ ಆಹಾರದ ಉಪಚಾರ ಮೊದಲಾದವುಗಳಿಂದ ಅವರಲ್ಲಿ ಏನೂ ಸುಧಾರಣೆಯಾಗಲಿಲ್ಲ. ಕೊನೆಗೆ ಅವರನ್ನು ಮಾನಸಚಿಕಿತ್ಸೆಗೆ ಒಳಪಡಿಸಲಾಯಿತು. ಆದರಿಂದ ಅವರು ಮೊದಲಿನಂತೆ ನಿರೋಗಿಗಳಾದರು. ಇದರಿಂದ ಪಾಶ್ಚಾತ್ಯವೈದ್ಯರ ಕಣ್ಣು ತೆರೆದವು. ಅಂದಿನಿಂದ ಈ ಚಿಕಿತ್ಸಾಕ್ರಮವು ಬೆಳೆಯುತ್ತ ಬಂದಿದೆ. ಇಂದು ಸುಧಾರಿಸಿದ ಪ್ರತಿಯೊಂದು ರಾಷ್ಟ್ರದಲ್ಲಿ ಮಾನಸಚಿಕಿತ್ಸಾ ಶಾಸ್ತ್ರಜ್ಞರು ಇರುವದು ಕಂಡು ಬರುತ್ತದೆ.

## ಮನೋವಿಶ್ಲೇಷಣಶಾಸ್ತ್ರ

ಹೀಗೆ ಯುದ್ಧರೋಗಿಗಳ ಪರೀಕ್ಷೆ ಮತ್ತು ಉಪಚಾರದಿಂದ ಸಾಂಪ್ರದಾಯಿಕ ಚಿಕಿತ್ಸಾ ಕ್ರಮಕ್ಕೆ ಒಳಗಾಗದಿರುವ ಸ್ವತಂತ್ರ ಮನೋರೋಗಗಳ ಅಸ್ತಿತ್ವವು ಸಿದ್ಧವಾದರೂ, ಮನಸ್ಸೆಂದರೇನು, ಅದರ ರಚನೆ ಹೇಗಿದೆ, ಬೆಳವಣಿಗೆಯು ಹೇಗಾಗುತ್ತದೆ, ಅದು ಹೇಗೆ ಕೆಲಸ ಮಾಡುತ್ತದೆ, ಏಕೆ ರೋಗಗಳಿಗೆ ತುತ್ತಾಗುತ್ತದೆ, ಎಂಬಿವೇ ಮೊದಲಾದ ಪ್ರಶ್ನೆಗಳಿಗೆ ಉತ್ತರವು ಸಿಕ್ಕಿರಲಿಲ್ಲ. ಎಲ್ಲ ಪ್ರಶ್ನೆಗಳ ಶಾಸ್ತ್ರೀಯವಾದ, ವ್ಯವಸ್ಥಿತವಾದ ಉಪಪತ್ತಿಯ ವಿವರಣೆಯು ಮತ್ತೊಂದು ಕಡೆಯಿಂದ ಬಂತು. ಅದೆಂದರೆ ಮನೋವಿಶ್ಲೇಷಣ ಶಾಸ್ತ್ರಜ್ಞರು ಮಾಡಿದ ಕಾರ್ಯ.

ಮನೋವಿಶ್ಲೇಷಣಶಾಸ್ತ್ರದ ಉಗಮವು ಇ. ಸ. ೧೮೮೦-೮೨ರ ಸುಮಾರಕ್ಕೆ ವಿಯೆನ್ನಾ ಪಟ್ಟಣದಲ್ಲಿ ಆಯಿತು. ಬ್ರಾಯರ ಮತ್ತು ಫ್ರಾಯಿಡ್ ಎಂಬ ಇಬ್ಬರು ಡಾಕ್ಟರರು ಕೂಡಿ ಕೆಲಸ ಮಾಡುತ್ತಿದ್ದರು. ಆಗ ಅವರ ದೃಷ್ಟಿಗೆ ಒಬ್ಬ ರೋಗಿಯು ಬಿದ್ದಳು. ಅವಳ ಉಪಚಾರದಲ್ಲಿ ಸೂಚಿತವಾದ ಅಂಶಗಳನ್ನು ಸಂಗ್ರಹಿಸಿ ಅವರಿಬ್ಬರೂ ಇ. ಸ. ೧೮೯೫ರಲ್ಲಿ ಒಂದು ಸಂಯುಕ್ತ ಪ್ರಕಟನೆಯನ್ನು ತೆಗೆದರು. ಮುಂದೆ ಬ್ರಾಯರನು ಆ ವಿಷಯಕ್ಕೆ ಆಸ್ಥೆ ತೋರಲಿಲ್ಲ. ಫ್ರಾಯಿಡನೊಬ್ಬನೇ ಅದರ ಬಗ್ಗೆ ಅಭ್ಯಾಸವನ್ನು ಮುಂದುವರಿಸಿದನು. ಇ. ಸ. ೧೮೯೬ರಲ್ಲಿ ಮನೋವಿಶ್ಲೇಷಣವೆಂಬ ಹೊಸ ಶಬ್ದವನ್ನೂ ಅವನು ಉಪಯೋಗಿಸಿ ಪ್ರಚಾರಕ್ಕೆ ತಂದನು. ಅವನು ಬರೆದ ಪುಸ್ತಕಗಳಿಂದಲೂ, ಕೊಟ್ಟ ವ್ಯಾಖ್ಯಾನಗಳಿಂದಲೂ ಮನೋವಿಶ್ಲೇಷಣ ಶಾಸ್ತ್ರವು ಎಲ್ಲ ಸುಸಂಸ್ಕೃತ ಜನರ ಮನಸ್ಸನ್ನಾಕರ್ಷಿಸಿತು. ಈ ಕಾರಣದಿಂದ ಈ ಶಾಸ್ತ್ರದ ಜನಕನೆಂದು ಸಿಗ್ಮಂಡ ಫ್ರಾಯಿಡನೊಬ್ಬನ ಹೆಸರೇ ಇಂದು ಪ್ರಖ್ಯಾತವೂ ಆಗಿದೆ. ಅದು ಯೋಗ್ಯವೂ ಆಗಿದೆ.

ಮುಂದೆ ಬರಬರುತ್ತ ಮನೋವಿಶ್ಲೇಷಣವು ಅನೇಕ ರೂಪಗಳನ್ನು ತಳೆಯಿತು. ಮೊದಲು ಫ್ರಾಯಿಡನ ಶಿಷ್ಯರಾಗಿದ್ದು, ನಂತರ ಸ್ವತಂತ್ರ ವಿಚಾರಗಳನ್ನು ಪ್ರಕಟಿಸಿದ ಆ್ಯಡ್ಲರ ( ಇ. ಸ. ೧೮೭೦-೧೯೩೭ ) ಮತ್ತು ಯೂಂಗ ( ಜನ್ಮ ಇ. ಸ. ೧೮೭೫ ) ಇವರು ಮನೋವಿಶ್ಲೇಷಣ ಶಾಸ್ತ್ರದ ಬೆಳವಣಿಗೆಗೆ ಸಹಾಯಕರಾದರು. ಯೂಂಗನ ಅಭಿಪ್ರಾಯದಂತೆ "ಮಾನವನ ದೇಹಚಿಕಿತ್ಸಾ

ಕ್ರಮದಲ್ಲಿ ಶಸ್ತ್ರಚಿಕಿತ್ಸೆಗೆ ಯಾವ ಸ್ಥಾನವಿರುವದೋ ಅದೇ ಸ್ಥಾನವು ಮಾನವನ ಮಾನಸೋಪಚಾರ ಕ್ರಮದಲ್ಲಿ ಮನೋವಿಶ್ಲೇಷಣಕ್ಕಿರುವದು.''

ಮನೋವಿಶ್ಲೇಷಣ ಶಾಸ್ತ್ರವು ಇಂದು ಒಳ್ಳೇ ಪ್ರಭಾವಶಾಲಿಯಾಗಿದೆಯೆಂಬದರಲ್ಲಿ ಸಂದೇಹವಿಲ್ಲ. ಆದರೆ ಆ ಶಾಸ್ತ್ರಕ್ಕನುಗುಣವಾದ ಮಾನಸ ಚಿಕಿತ್ಸಾ ಕ್ರಮವಷ್ಟೇ ಮಾತ್ರ ಈಗ ರೂಢಿಯಲ್ಲಿದೆಯೆಂದು ಹೇಳಲಿಕ್ಕಾಗದು. ಆ ಶಾಸ್ತ್ರದ ಸಿದ್ಧಾಂತಗಳನ್ನು ಒಪ್ಪದವರೂ ಕೂಡ ಮಾನಸೋಪಚಾರದ ಮಹತ್ವವನ್ನರಿತು, ತಮ್ಮದೇ ಆದ ಮಾನಸ ಚಿಕಿತ್ಸಾ ಪದ್ಧತಿಯನ್ನು ಪುರಸ್ಕರಿಸುತ್ತಾರೆ. ಸಾರಾಂಶವೇನೆಂದರೆ— ಇಂದು ಮಾನಸಚಿಕಿತ್ಸೆಯು ಪೂರ್ಣಾವಸ್ಥೆಯನ್ನೇನೂ ಮುಟ್ಟಿಲ್ಲ. ಆದರೂ ಅದೂ ಅನೇಕ ಬಗೆಯ ಮನೋರೋಗಿಗಳನ್ನು ನೆಟ್ಟಗೆ ಮಾಡಬಲ್ಲ ಶಕ್ತಿಯುಳ್ಳದ್ದಾಗಿದೆ. ಅದಕ್ಕೀಗ ಶಿಷ್ಟಸಮ್ಮತವಾದ ಸ್ಥಾನವು ಸಿಕ್ಕಿದೆಯೆಂಬದರಲ್ಲಿ ಎಳ್ಳಷ್ಟು ಸಂಶಯವಿಲ್ಲ.




### ಮಾನಸಿಕ ಆರೋಗ್ಯ ಚಳವಳಿ

ಮಾನಸ ಚಿಕಿತ್ಸೆಯು ಈ ಮಹತ್ವವನ್ನು ಪಡೆಯಲಿಕ್ಕೆ ಮನೋವಿಶ್ಲೇಷಣ ಶಾಸ್ತ್ರದ ಹೊರತಾಗಿ ಇನ್ನೂ ಒಂದು ಕಾರಣವಿದೆ. ಮೇಲೆ ಈಗಾಗಲೇ ಹೆಸರಿಸಿದ ಪುಸ್ತಕದ ೨೮ನೆಯ ಪುಟದಲ್ಲಿ ಅದೇ ಲೇಖಕರು ಈ ಮಾತನ್ನು ಸ್ಪಷ್ಟಪಡಿಸಿದ್ದಾರೆ. ಇಪ್ಪತ್ತನೆಯ ಶತಮಾನದ ಅರಂಭಕಾಲದಲ್ಲಿ ಸುರುವಾದ "ಮಾನಸಿಕ ಆರೋಗ್ಯಶಾಸ್ತ್ರ" ಚಳವಳಿಯು ( Mental Hygiene movement ) ಮಾನಸ ಚಿಕಿತ್ಸೆಗೆ ಬಹಳ ಪುಷ್ಟಿಯನ್ನು ಕೊಟ್ಟಿತು. ಇಂದಿನ ಮಾನಸ ಚಿಕಿತ್ಸೆಯ ಸ್ತಿಮಿತವನ್ನು ತಿಳಿಯಬೇಕೆನ್ನುವವರು ಮನೋವಿಶ್ಲೇಷಣ ಮತ್ತು ಮಾನಸಿಕ ಆರೋಗ್ಯ ಚಳವಳಿ ಎರಡಕ್ಕೂ ಗಮನ ಕೊಡಬೇಕಾದುದು ಅಗತ್ಯವೆಂದು ಲೇಖಕರ ಅಭಿಮತವಾಗಿದೆ. ಅವೆರಡರಲ್ಲಿ ಒಂದನ್ನು ಬಿಟ್ಟು ಮತ್ತೊಂದರಿಂದಲೇ ಮಾತ್ರ ಆ ವಿಷಯದ ವಿವೇಚನೆಯು ಪೂರ್ಣವಾಗಲಾರದು. ಇವೆರಡೂ ಚಳವಳಿಗಳ ನಡುವೆ ಯಾವ ಸಂಬಂಧವೂ ಇರುವದಿಲ್ಲ. ಆದರೂ ಅವು ಒಂದಕ್ಕೊಂದು ಪೂರಕವಾಗಿವೆ. ಒಂದೇ ಮಾತನ್ನೇ ಎರಡೂ ಬೇರೆಬೇರೆಯಾದ ಸ್ವತಂತ್ರರೀತಿಗಳಿಂದ ಪುಷ್ಟೀಕರಿಸುತ್ತಿವೆ.

" ಮಾನಸಿಕ ಅರೋಗ್ಯ ಚಳವಳಿ '' ಎಂದರೇನು ಎಂದು ಕನ್ನಡ ವಾಚಕರು ಕುತೂಹಲದಿಂದ ಕೇಳಬಹುದು. ಈ ಚಳವಳಿಯ ಹೆಸರು ನಮ್ಮ ದೇಶದಲ್ಲಿ ಅಷ್ಟು ಕೇಳಬರಲಿಕ್ಕಿಲ್ಲವಾದರೂ ಸುಧಾರಿಸಿದ ಉಳಿದೆಲ್ಲ ದೇಶಗಳಲ್ಲಿ ಅದು ಈಗ ಗಣ್ಯಸ್ಥಾನವನ್ನು ಪಡೆದಿದೆ. ಕ್ಲಿಫರ್ಡ ಬಿಯರ್ಸ ಎಂಬವರು ಇ.ಸ. ೧೯೦೮ರಲ್ಲಿ ಅದನ್ನು ಸ್ಥಾಪಿಸಿದರು. ಇ. ಸ. ೧೯೩೦ರಲ್ಲಿ ಅದು ಅಂತಾರಾಷ್ಟ್ರೀಯ ಸ್ವರೂಪವನ್ನು ಪಡೆಯಿತು. ಅದೇ ವರುಷ ಅಂತಾರಾಷ್ಟ್ರೀಯ ಮಾನಸಿಕ ಆರೋಗ್ಯದ ಪ್ರಥಮ ಮಹಾಸಭೆಯು ವಾಶಿಂಗ್ಟನ್ ಪಟ್ಟಣದಲ್ಲಿ ಕೂಡಿತು. ಅದರ ಸಂಘಟಕರು ಈಗ ಎಲ್ಲ ದೇಶಗಳಲ್ಲಿ ಅದರ ಶಾಖೆಗಳನ್ನು ತೆಗೆದು ಉತ್ತಮರೀತಿಯಿಂದ ಅದರ ಪ್ರಸಾರವನ್ನು ಮಾಡುತ್ತಿದ್ದಾರೆ.

ಮಾನಸಿಕ ಆರೋಗ್ಯ ಚಳವಳಿಯು ಮೊದಲು ಸುರುವಾದುದು ಒಂದು ವಿಶಿಷ್ಟ ಹೇತುವಿನಿಂದ. ನಾವು ಯಾರನ್ನು " ಹುಚ್ಚ ''ರೆಂದು ಕರೆಯುವೆವೋ ಅವರ ಸಂರಕ್ಷಣೆ ಮಾಡುವದೇ ಕ್ಲಿಫರ್ಡ ಬಿಯರ್ಸನ ಮೂಲ ಉದ್ದೇಶವಾಗಿತ್ತು. ಆದರೆ ಈಗ ಚಳವಳಿಕಾರರ ಉದ್ದೇಶವು: ಯಾರಿಗೂ ಮನೋರೋಗವೇ ಆಗದಂತೆ ಮಾಡಬೇಕೆಂಬುದಾಗಿದೆ. ಇಂದಿನ ಅದರ ರೂಪದಲ್ಲಿ ಅದು ಮುಖ್ಯವಾಗಿ ಸಾರ್ವಜನಿಕ ಆರೋಗ್ಯದ ಚಳವಳಿಯಾಗಿದೆ. ಮನೋರೋಗದಿಂದಾಗುವ ಅಪಾರ ಸಾಮಾಜಿಕ ಹಾನಿಯನ್ನೂ ದೌರ್ಬಲ್ಯವನ್ನೂ ಪ್ರತಿಬಂಧಿಸಬೇಕೆಂಬದು ಅದರ ಸಂಘಟಕರ ಹೇತುವಾಗಿದೆ. ಎಲ್ಲ ನಾಗರಿಕರಿಗೂ " ಸರಿಯಾಗಿ ಕಳೆಯಲ್ಪಡುವ ಒಳ್ಳೆಯ ಜೀವನವು '' ಸಿಕ್ಕುವಂತಾಗಬೇಕೆಂದು ಅವರ ಅಪೇಕ್ಷೆಯಿದೆ. ಸಾರ್ವಜನಿಕ ಆರೋಗ್ಯವನ್ನು ಹೆಚ್ಚಿಸುವ ಎಲ್ಲ ಸಾಧನಗಳನ್ನೂ ಉಪಯೋಗಿಸಿಕೊಂಡು, ಸಾಮಾನ್ಯರಿಗೂ ಅವು ಸಿಕ್ಕುವಂತೆ ಮಾಡಿ, ಎಲ್ಲರಿಗೂ ಸುಖಕರವಾದ, ಹಿತಕರವಾದ, ಸುಸಂಸ್ಕೃತವಾದ ಜೀವನದ ರುಚಿಯು ದೊರೆಯುವಂತೆ ಮಾಡುವದು ಈ ಚಳವಳಿಯ ಪುರಸ್ಕರ್ತರ ಮಹತ್ವಾಕಾಂಕ್ಷೆಯಾಗಿದೆ.

### ಮನಸ್ಸು–ಮನಸ್ಸಿನ ಅಸ್ತಿತ್ವ

ದೇಹದೊಡನೆ ಕೂಡಿ ಕೆಲಸ ಮಾಡುತ್ತಿದ್ದರೂ ದೇಹದಿಂದ ಸ್ವತಂತ್ರವಾಗಿ, ಪ್ರಸಂಗವಶಾತ್ ದೇಹವನ್ನೂ ಕೂಡ ಬಿಟ್ಟಿರಬಲ್ಲ ಮನಸ್ಸೆಂಬ ವಸ್ತುವೊಂದು ಇರುವುದೇ, ಎಂಬ ಬಗ್ಗೆ ಇನ್ನೂ ನಿಶ್ಚಿತವಾಗಿ ಏನೂ ಗೊತ್ತಾಗಿಲ್ಲ. ಮುಂದಾದರೂ ಈ ಮಾತು ನಿರ್ಣಯವಾದೀತೆಂದು ತೋರುವದಿಲ್ಲ. ಯಾಕೆಂದರೆ ಭೌತಿಕ ಅಳತೆ ಮಾಪುಗಳಿಗೆ ಒಳಗಾಗಬಲ್ಲ ವಸ್ತುಗಳಷ್ಟೇ ಸತ್ಯವೆಂಬುದು ಇಂದಿನ ವಿಜ್ಞಾನ ಪದ್ಧತಿಯ ಮೂಲಭೂತ ಸಿದ್ಧಾಂತವಾಗಿದೆ. ಮನಸ್ಸಾದರೋ ಇಂತಹ ವಸ್ತುವಲ್ಲ. ಆದರೆ ಆ ಕಾರಣದಿಂದ ಮನಸ್ಸೆಂಬುದೇ ಇಲ್ಲವೆಂದು ಹೇಳುವದೂ ಎಲ್ಲರ ಅನುಭವಕ್ಕೆ ವಿರುದ್ಧವಾದ ಸಂಗತಿಯಾಗಿದೆ. ನಮ್ಮ ಅನುಭವದ ಆಧಾರವನ್ನು ಹಿಡಿದು ಮಾತಾಡಬೇಕಾದರೆ, ಮನಸ್ಸು ಮತ್ತು ದೇಹಗಳೆರಡೂ ಸತ್ಯ

ವೆಂದೂ, ಪರಸ್ಪರಾವಲಂಬಿಗಳೆಂದೂ, ಒಂದರ ಮೇಲೊಂದು ಪ್ರಭಾವ ಬೀರುವ ಶಕ್ತಿಯುಳ್ಳವುಗಳಾಗಿವೆಯೆಂದೂ ಒಪ್ಪಬೇಕಾಗುತ್ತದೆ. ದೈಹಿಕ ಕಾರಣಗಳಿಂದ ಮನೋರೋಗಗಳುಂಟಾಗಬಹುದಾದರೂ, ದೈಹಿಕ ಕಾರಣಗಳಿಲ್ಲದ ಮನೋರೋಗಗಳೂ ಆಗುವವೆಂಬದನ್ನು ಸ್ವೀಕರಿಸಬೇಕಾಗುತ್ತದೆ.

ಮನಸ್ಸಿನ ಅಸ್ತಿತ್ವವನ್ನೊಪ್ಪಿದರೂ ಅದರ ಬಗ್ಗೆ ನಮ್ಮ ತಿಳಿವಳಿಕೆಯು ಮಾತ್ರ ಸಾಕಷ್ಟಿರುವದಿಲ್ಲೆಂದು ದುಃಖದಿಂದ ಹೇಳಬೇಕಾಗುತ್ತದೆ. ಮನಸ್ಸಿನ ಮಂಗಚೇಷ್ಟೆಯಂತೂ ಸುಪ್ರಸಿದ್ಧವಾಗಿದೆ. ಮಾನವನು ಎಂದಿನಿಂದ ಇಂದಿನವರೆಗೆ ಅದರ ನಿಶ್ಚಿತ ಸ್ವರೂಪವನ್ನು ಕಂಡುಹಿಡಿಯಲಿಕ್ಕೆ ಯತ್ನ ಮಾಡುತ್ತಲೇ ಬಂದಿದ್ದಾನೆ. ಆದರೆ ಅದರಲ್ಲಿ ಅವನಿಗೆ ಇನ್ನೂ ಯಶಸ್ಸು ಸಿಕ್ಕಿರುವದಿಲ್ಲ. ಕಳೆದ ೫೦-೬೦ ವರುಷಗಳಲ್ಲಿ ಮಾನಸಶಾಸ್ತ್ರದ ಬಗ್ಗೆ ಬಹಳ ಸಾಹಿತ್ಯವೇನೋ ಹುಟ್ಟಿದೆ. ಆದರೆ ಅದನ್ನು ಓದುವವರಿಗೆ ದಿಗ್‌ಭ್ರಮೆಯಾಗುವಂತಹ ಪರಿಸ್ಥಿತಿ ಇದೆ. ಈ ಕ್ಷೇತ್ರದಲ್ಲಿ ಪರಸ್ಪರ ವಿರುದ್ಧವಾದ ಅನೇಕ ಬಗೆಯ ಅಭಿಪ್ರಾಯಗಳು ಕಾಣಿಸಿಕೊಂಡಿವೆ. ಶಾಸ್ತ್ರೀಯ ಜ್ಞಾನವು ನಿರೀಕ್ಷಣೆ ಮತ್ತು ಪ್ರಯೋಗಗಳಿಂದ ಸಿದ್ಧವಾದ ಸುವ್ಯವಸ್ಥಿತವಾದ ಜ್ಞಾನವು. ಅಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲ. ಆದರೆ ಈ ದೃಷ್ಟಿಯಿಂದ ವಿಚಾರ ಮಾಡಿದರೆ ಮಾನಸಶಾಸ್ತ್ರಕ್ಕೆ ಮಾನಸಶಾಸ್ತ್ರವೆಂಬ ಹೆಸರು ದಕ್ಕುವಂತಿಲ್ಲ. ಎಂತೆಯೇ ಒಬ್ಬ ಪಂಡಿತನು ಹೇಳುವದೇನಂದರೆ : "ಮಾನಸಶಾಸ್ತ್ರವು ಪರಸ್ಪರ ವಿರುದ್ಧವಾದ ಶಾಖೋಪ-ಶಾಖೆಗಳ ಗೊಂದಲದಿಂದ ಪಾರಾಗುವತನಕ ಶಾಸ್ತ್ರವೆಂಬ ಹೆಸರಿಗೇ ಯೋಗ್ಯವಾಗಲಾರದು."

ಮೇಲಿನ ವಿವರಣೆಯಿಂದ ಮಾನಸಶಾಸ್ತ್ರ ಮತ್ತು ಅದರ ಚಿಕಿತ್ಸೆಯ ಬಗೆಗೆ ಬರೆಯುವದು ಎಷ್ಟು ಕಠಿಣವಾಗಿರುವದೆಂಬದು ತಿಳಿಯಬಹುದಾಗಿದೆ. ಆದುದರಿಂದ ಈ ವಿಷಯದ ಸಂಪೂರ್ಣ ವಿವೇಚನೆಯ ಆಸೆಯನ್ನು ಬಿಟ್ಟು, ಮನೋವಿಶ್ಲೇಷಣ ಶಾಸ್ತ್ರಜ್ಞರು ಹೇಳುವ ರೀತಿಯನ್ನನುಸರಿಸಿ, ಮಾನಸಶಾಸ್ತ್ರ ಮತ್ತು ಚಿಕಿತ್ಸೆಯನ್ನು ಕುರಿತು ಕೆಲ ಮುಖ್ಯ ಮಾತುಗಳನ್ನು ಇಲ್ಲಿ ತಿಳಿಯಪಡಿಸಲಾಗುವದು.

### ಮನಸ್ಸಿನ ಭಾಗಗಳು

ಮನಸ್ಸೆಂದರೆ ಅನೇಕ ಬಗೆಯ ವಾಸನೆ, ಇಚ್ಛೆ ಅಥವಾ ಬಯಕೆಗಳ ಆಶ್ರಯಸ್ಥಾನವು. ಅವುಗಳಲ್ಲಿ ಏಕ ರೂಪತೆಯಾಗಲಿ ಹೊಂದಿಕೆಯಾಗಲಿ ಇರುವದಿಲ್ಲ. ಅವು ಒಂದಕ್ಕೊಂದು ತೀರ ವಿರುದ್ಧವಾಗಿಯೂ ಇರಬಹುದು. ಅವುಗಳಲ್ಲಿ ಪ್ರತಿಯೊಂದು ವಾಸನೆಯೂ, ಉಳಿದ ವಾಸನೆಗಳ ಪರಿವೆಯಿಲ್ಲದೆ, ಸ್ವತಂತ್ರವಾಗಿ ತನಗೆ ಬೇಕಾದ ವಿಷಯವನ್ನು ಅಪೇಕ್ಷಿಸುತ್ತದೆ; ತೃಪ್ತಿ ಹೊಂದಬೇಕೆನ್ನುತ್ತಿದೆ. ಆದರೆ ಬಾಹ್ಯ ಪರಿಸ್ಥಿತಿಯು ಎಲ್ಲ ಬಯಕೆಗಳ ತೃಪ್ತಿಗೆ ಅನುಕೂಲವಾಗಿರುವದಿಲ್ಲ. ಬೇಕಾದ ವಸ್ತುವು ಸಿಕ್ಕದಂತಾಗಲು ಮನಸ್ಸಿಗೆ ಕಳವಳ ಅಥವಾ ದುಃಖವುಂಟಾಗುವದು ಸಹಜವಾಗಿದೆ. ಆದುದರಿಂದ ಬಾಹ್ಯ ಪರಿಸ್ಥಿತಿ ಮತ್ತು ಮನೋವಾಸನೆಗಳ ನಡುವೆ ಸಂಬಂಧವನ್ನುಂಟು ಮಾಡಲಿಕ್ಕೆಂದು, ಮನಸ್ಸಿನ ಒಂದು ಭಾಗವು "ನಾನೆಂಬ" ರೂಪವನ್ನು ತಳೆದು, ಹೊರಗಿನ ಜಗತ್ತಿನೊಡನೆ ಸಂಬಂಧ ಬೆಳಿಸುತ್ತದೆ. ಮನಸ್ಸಿನ ಮೂಲ ಅಸಂಸ್ಕೃತ ಮತ್ತು ಪಾಶವೀ ಬಯಕೆಗಳು ಬಾಹ್ಯ ಸಮಾಜದ ರೀತಿ-ನೀತಿ, ನಿರ್ಬಂಧ-ನಿಯಮಗಳನ್ನು ಲಕ್ಷ್ಯಕ್ಕೆ ತಾರದೆ ಮುಂದೆ ದುಡುಕಿ ಸಮಾಧಾನ ಪಡೆಯಲೆತ್ನಿಸುತ್ತವೆ. ಆದರೆ 'ನಾನು' ಎಂಬದು ಮಾನವವ್ಯಕ್ತಿಗೂ ಸಮಾಜಕ್ಕೂ ಹೊಂದಿಕೆಯಾಗುವಂತೆ ಕೆಲಸ ಮಾಡಬಯಸುತ್ತದೆ. ಈ ಪ್ರಯತ್ನದಲ್ಲಿ ಅದು ಅನೇಕಸಲ ಮೂಲ ವಾಸನೆಗಳ ತೃಪ್ತಿಗೆ ಅವಕಾಶ ಕೊಡದೆ, ಅವುಗಳನ್ನು ಅಸಾಮಾಜಿಕವೆಂದೂ, ಅನೀತಿಕರವೆಂದೂ ಪೂರ್ಣ ದಮನಮಾಡಿಬಿಡುತ್ತದೆ. ಆದರೆ ಹೀಗೆ ದಬ್ಬಲ್ಪಟ್ಟ ವಾಸನೆಗಳು ನಿಃಶೇಷವಾಗಿ ನಾಶವಾಗುವದಿಲ್ಲ. ಅವು ಮನಸ್ಸಿನ ಕೆಳಭಾಗಕ್ಕೆ ಹೊಗಿ, ಅಲ್ಲಿ ಮಲೆತು ನಿಲ್ಲುತ್ತವೆ. ಮತ್ತು ಅದಷ್ಟು ತೀವ್ರ ಮೇಲ್ಭಾಗಕ್ಕೆ ಬಂದು ತೃಪ್ತಿ ಪಡೆಯುವ ಅವಕಾಶವನ್ನು ಕಾಯುತ್ತ ಕೂಡುತ್ತವೆ. ಇಂತಹ ಅತೃಪ್ತ ವಾಸನೆಗಳೇ ಎಲ್ಲ ಮನೋವೈಲಕ್ಷಣ್ಯಗಳ ಮೂಲ ಕಾರಣವೆಂದು ಹೇಳಬಹುದು. ನಾವು ನಿತ್ಯದಲ್ಲಿ ಮಾಡುವ ಅನೇಕ ತಪ್ಪುಗಳು, ಕಾಣುವ ಕನಸುಗಳು, ಅನುಭವಿಸುವ ಮನೋವ್ಯಾಧಿಗಳು-ಇವೆಲ್ಲ ಅತೃಪ್ತವಾಸನೆಗಳ ವಿಕೃತ ರೂಪಗಳೇ ಸರಿ.

### ಮನೋರೋಗಗಳ ನಿದಾನ

ಮೇಲಿನ ವಿವರಣೆಯಿಂದ ಮನಸ್ಸು ಎರಡು ವಿಭಾಗಗಳಲ್ಲಿ ವಿಂಗಡವಾಗುವದೆಂಬದು ಗೊತ್ತಾಗುವಂತಿದೆ. ಅಸಾಮಾಜಿಕ, ಅನರ್ಥಕಾರಕ, ಅನೀತಿಕಾರಕ ವಾಸನೆಗಳು ಬಲಾತ್ಕಾರದಿಂದ ಹತ್ತಿಕ್ಕಲ್ಪಟ್ಟು ಮನಸ್ಸಿನ ಕೆಳಭಾಗದಲ್ಲಿ ಕುಳಿತುಕೊಳ್ಳುತ್ತವೆ. "ನಾನು" ಎಂಬದಕ್ಕೆ ಅವುಗಳ ಅಸ್ತಿತ್ವವೇ ಸಹನವಾಗುವದಿಲ್ಲ. "ನಾನು" ಅವುಗಳನ್ನು ಸಮೀಪಕ್ಕೆ ಕೂಡ ಬರಗೊಡುವದಿಲ್ಲ. ಅವು ಮೇಲೆ ಬರುವದಕ್ಕೆ 'ನಾನು' ಎಂಬದು ಎಷ್ಟೂ ಅವಕಾಶ ಕೊಡಲಿಕ್ಕೆ ಸಿದ್ಧವಿರುವದಿಲ್ಲ. ಅವು ತನ್ನವೆನ್ನಲಿಕ್ಕೆ ಸಹ 'ನಾನು' ಎಂಬದು ನಾಚಿಕೆಪಟ್ಟುಕೊಳ್ಳುತ್ತದೆ. ಹೀಗಾಗಿ ಆ ವಾಸನೆಗಳು ಮನಸ್ಸಿನ ಅಜ್ಞಾತ ಭಾಗವಾಗಿ ಪರಿಣಮಿಸುತ್ತವೆ. ಮನಸ್ಸಿನ ಜ್ಞಾತಭಾಗವೆಂದರೆ, ವ್ಯಾವಹಾರಿಕವಾದ 'ನಾನು' ಎಂಬದಕ್ಕೆ ಗೋಚರವಾಗುವ ಭಾಗ. ನಾನು ಇಂಥಿಂಥವನು, ನನಗೆ ಅದು ಬೇಕು, ಇದು ಬೇಕು ಎಂದು ನಮ್ಮ ತಿಳುವಳಿಕೆಗೆ ವಿಷಯವಾಗುವ ಭಾಗವೆಲ್ಲ ಮನಸ್ಸಿನ ಜ್ಞಾತ ಅಥವಾ ಜಾಗೃತ ಭಾಗವು. ನಿಜವಾಗಿ ನೋಡಿದರೆ ಮನಸ್ಸಿನ ಅಜ್ಞಾತ ಭಾಗವು ದೊಡ್ಡದಾಗಿದೆ. ಅದು ಜ್ಞಾತ ಭಾಗದ ೯ ಪಟ್ಟು ದೊಡ್ಡದಾಗಿದೆಯೆಂದು ಲೆಕ್ಕ ಮಾಡಲಾಗಿದೆ. ಆದುದರಿಂದ ಪ್ರಚಂಡವಾದ ಮತ್ತು ಅಸಮಾಧಾನದಿಂದ ಕುದಿಯುತ್ತಿರುವ ಅಜಾಗೃತ ಮನಸ್ಸು ಜಾಗೃತ ಮನಸ್ಸಿನ ಮೇಲೆ ತನ್ನ ಹಿರಿದಾದ ಪ್ರಭಾವವನ್ನು ಸದಾ ಬೀರುತ್ತಲೇ ಇರುತ್ತದೆ. ಈ ಕ್ರಿಯೆಯು ಪ್ರತಿಯೊಬ್ಬ ಮಾನವ ವ್ಯಕ್ತಿಯಲ್ಲಿ ನಡೆದೇ ಇರುತ್ತದೆ. ಆದರೆ ಯಾವ ಮಾನವನಲ್ಲಿ 'ನಾನೆಂ'ಬದು ಸಾಕಷ್ಟು ಪ್ರಬಲವಾಗಿ, ಸುವ್ಯವಸ್ಥಿತವಾಗಿ ಬೆಳೆದಿರುವದೋ, ಮತ್ತು ಅಜಾಗೃತ ಮನಸ್ಸಿನ ಪ್ರಭಾವವನ್ನು ತಡಕೊಳ್ಳಲು ಸಮರ್ಥವಾಗಿರುವದೋ, ಅವನು ನಿರೋಗಿಯೆಂದೆನಿಸಿಕೊಳ್ಳುತ್ತಾನೆ. ಆದರೆ ಎಲ್ಲಿ 'ನಾನು' ಸಮರ್ಥವೂ ಕಾರ್ಯಕ್ಷಮವೂ ಆಗಿರುವದಿಲ್ಲವೋ, ಮತ್ತು ಅಜಾಗೃತ ಮನಸ್ಸಿನ ಪ್ರಭಾವವು ಎಲ್ಲಿ ಎಲ್ಲೆ ಮೀರಿ ಬೆಳೆದು, ಜಾಗೃತ ವ್ಯವಹಾರದ ಸ್ತಿಮಿತ ತಪ್ಪಿಸಿ, ಜಾಗೃತ ವ್ಯವಹಾರವನ್ನು ಅಸ್ತವ್ಯಸ್ತ ಮಾಡಿ ಬಿಡುವದೋ, ಅಲ್ಲಿ ಮನೋರೋಗವುಂಟಾಯಿತೆಂದು ನಾವು ಹೇಳುತ್ತೇವೆ.

ಇಷ್ಟೊತ್ತಿನ ವರೆಗೆ ಮನೋರೋಗಗಳ ಸಾಮಾನ್ಯ ನಿದಾನವನ್ನು ವಿವರಿಸಿದ್ದಾಯಿತು. ಆದರೆ ಇಷ್ಟರಿಂದ ಕೆಲಸವಾಗಲಾರದು. ವಿಶಿಷ್ಟ ಮನೋರೋಗಿಯಲ್ಲಿ ಯಾವ ಪ್ರಬಲವಾದ ಬಯಕೆಯು ಯಾವ ಪರಿಸ್ಥಿತಿಯಲ್ಲಿ ಹತ್ತಿಕ್ಕಲ್ಪಟ್ಟು, ಆ ಮನೋರೋಗವನ್ನು ಹುಟ್ಟಿಸಿದೆ, ಎಂಬದನ್ನು ನಿರ್ಣಯಿಸುವದು ಮುಂದಿನ ಹೆಜ್ಜೆ. ಯಾಕೆಂದರೆ ಮನೋರೋಗಿಗೆ ತನ್ನ ರೋಗದ ಉಗಮವು ಗೊತ್ತಿರುವದಿಲ್ಲ. ಅದನ್ನು ರೋಗಿಯ ಇಂದಿನ ತಿಳಿವಳಿಕೆಗೆ ಗೊತ್ತಾಗುವಂತೆ ಮಾಡಿದರೆ, ಆ ರೋಗವೇ ನಾಶವಾಗುವದೆಂದುಅನುಭವದಿಂದ ಸಿದ್ಧವಾಗಿದೆ. ಅಜ್ಞಾತ ಮನಸ್ಸಿನೊಳಗೆ ಮಲೆತು ನಿಂತಿರುವ ಮನೋರೋಗಕಾರಕವಾದ ಅನುಭವಗಳನ್ನು ಎಚ್ಚರಿಕೆಯ ಕ್ಷೇತ್ರಕ್ಕೆ ತರುವದೆಂದರೇ ಆ ರೋಗದ ಚಿಕಿತ್ಸೆ ಮಾಡಿದಂತೆ.

### ವಶ್ಯನಿದ್ರೆಯ ಪ್ರಯೋಗ

ಇದಕ್ಕಾಗಿ ಬೇರೆ ಬೇರೆ ಹಂಚಿಕೆಗಳನ್ನು ಉಪಯೋಗಿಸಬಹುದಾಗಿದೆ. ಮೊದಲನೆಯದು Hypnotism ಅಥವಾ ವಶ್ಯನಿದ್ರೆಯ ಪ್ರಯೋಗ. ವಶ್ಯನಿದ್ರೆಗೆ ಒಳಗಾದ ವ್ಯಕ್ತಿಗಳ ಜ್ಞಾಪಕಶಕ್ತಿಯು ಬಹಳ ವಿಶಾಲವಾಗಿರುತ್ತದೆ. ಚಿಕಿತ್ಸೆ ಮಾಡುತ್ತಿರುವ ವೈದ್ಯರು ಸೂಚನೆ ಕೊಟ್ಟೊಡನೆ ರೋಗಿಗಳಿಗೆ ಹಿಂದಿನ ಎಲ್ಲ ಅನುಭವಗಳ ನೆನಪಾಗಹತ್ತುತ್ತದೆ. ಹೀಗೆ ವೈದ್ಯನು ರೋಗದ ಕಾರಣವನ್ನು ಮೊದಲು ತಾನು ತಿಳಿದುಕೊಂಡು, ಆಮೇಲೆ ಅದನ್ನು ರೋಗಿಗೆ ತಿಳಿಸಿ, ಅವನ ರೋಗವನ್ನು ಗುಣಪಡಿಸಬಹುದು.

ಆದರೆ ಎಲ್ಲರೋಗಿಗಳು ವಶ್ಯನಿದ್ರೆಗೆ ಒಳಗಾಗುವಂಥವರು ಇರುವದಿಲ್ಲ. ಅಂಥವರಿಗಾಗಿ Free Association ಅಥವಾ “ ಸಹಜ ವಿಚಾರಸರಣಿ”ಯ ಪದ್ಧತಿಯನ್ನು ಅನುಸರಿಸಬೇಕಾಗುತ್ತದೆ. ರೋಗಿಯು ಸುಖಾಸೀನನಾಗಿ ಕುಳಿತುಕೊಂಡು, ತನ್ನ ಮನಸ್ಸಿನಲ್ಲಿ ಯಾವ ಯಾವ ವಿಚಾರಗಳು ಬರುತ್ತ ಹೋಗುವವೋ ಅವುಗಳನ್ನೆಲ್ಲ ಇದ್ದಕ್ಕಿದ್ದಂತೆ ವೈದ್ಯನಿಗೆ ವಿವರಿಸುತ್ತ ಹೋಗಬೇಕಾಗುವುದು. ಈ ಚಿಕಿತ್ಸೆಯು ಒಂದೆರಡು ದಿನಗಳಲ್ಲಿ ಯಶಸ್ವಿಯಾಗಲಾರದು. ದಿನಾಲು ೨-೩ ತಾಸುಗಳಂತೆ ವೈದ್ಯನು ರೋಗಿಯ ಕೂಡ ಮಾತಾಡುತ್ತ ಕೂಡ್ರಬೇಕಾಗುತ್ತದೆ. ಈ ಕ್ರಮವು ಕನಿಷ್ಠಪಕ್ಷ ನಾಲ್ಕೆಂಟು ತಿಂಗಳವರೆಗಾದರೂ ನಡೆಯಬೇಕಾಗುತ್ತದೆ. ಈ ಚಿಕಿತ್ಸೆ ನಡೆದಾಗ ರೋಗಿಗಳಿಗೆ ಬೀಳುವ ಕನಸುಗಳನ್ನು ಸಹ ಚಿಕಿತ್ಸಕನು ಕೇಳಿ ಅರ್ಥಮಾಡಿಕೊಳ್ಳಬೇಕಾಗುವದು. ಹೀಗೆ ಮಾಡುತ್ತ ಹೋಗುವದರಿಂದ ಕೊನೆಗೆ ರೋಗದ ಮೂಲ ಕಾರಣವು ಗೊತ್ತಾಗಿ, ರೋಗಿಯು ರೋಗಮುಕ್ತನಾಗುತ್ತಾನೆ.

ಮನೋರೋಗಗಳ ಚಿಕಿತ್ಸೆಗೆ ಇನ್ನೂ ಒಂದು ಕ್ರಮವನ್ನು ಅನುಸರಿಸಲಾಗುತ್ತದೆ. ಆರಿಸಿ ತೆಗೆದ ಸುಮಾರು ನೂರು ಶಬ್ದಗಳ ಪಟ್ಟಿಯೊಂದನ್ನು ಸಿದ್ಧಪಡಿಸಿ, ಅವುಗಳನ್ನು ರೋಗಿಯ ಮುಂದೆ ಓದುತ್ತ ಹೋಗಬೇಕು. ಒಂದೊಂದು ಶಬ್ದವನ್ನು ಕೇಳಿದೊಡನೆ, ರೋಗಿಯ ಮನಸ್ಸಿನಲ್ಲಿ ಯಾವ ವಿಚಾರ ಅಥವಾ ಕಲ್ಪನೆ ಬರುತ್ತದೆಂಬುದನ್ನು ಕೇಳಿ ಬರೆದಿಡಬೇಕು. ಈ ವಿಚಾರಗಳನ್ನು ರೋಗಿಯು ಎಷ್ಟೂ ವಿಲಂಬಮಾಡದೆ ತಾತ್ಕಾಲ ಹೇಳಬೇಕು. ಈ ರೀತಿಯಿಂದಲೂ ರೋಗದ ಕಾರಣವನ್ನು ಗೊತ್ತುಪಡಿಸಿ, ರೋಗಿಯನ್ನು ನೆಟ್ಟಗೆ ಮಾಡಬಹುದಾಗಿದೆ.

ಈ ರೀತಿ ನಾವು ರೋಗ ಕಾರಣವಾದ ಮನಃಪ್ರವೃತ್ತಿಯು ಎಲ್ಲಿ ಸ್ವಾಭಾವಿಕವಾದ ನಿರ್ಗಮನ ಮಾರ್ಗವನ್ನು ಕಾಣದೆ ಅಡ್ಡ ದಾರೀ ಹಿಡಿದು ರೋಗವನ್ನು ಹುಟ್ಟಿಸಿತೋ ಅಲ್ಲಿಗೆ ಹೋಗಿ ಮುಟ್ಟುತ್ತೇವೆ. ಎಂದರೆ ಯಾವ ಪ್ರಬಲ ಇಚ್ಛೆಯು ನಿರೋಧಿಸಲ್ಪಟ್ಟು ಅನರ್ಥವನ್ನುಂಟು ಮಾಡಿತೋ ಅದನ್ನು ಕಂಡುಹಿಡಿಯುತ್ತೇವೆ. ಅದು ನಮ್ಮ ಚಿಕಿತ್ಸೆಯಿಂದ ಮತ್ತೆ ಜಾಗೃತವಾಗುತ್ತದೆ. ಅದಕ್ಕೆ ನಾವು ಮತ್ತೊಂದು ನಿರ್ಗಮನ ದಾರಿಯನ್ನು ಮಾಡಿಕೊಡಬೇಕಾಗುತ್ತದೆ. ಹೀಗೆ ಮಾಡುವದರಿಂದ ರೋಗಿಯನ್ನು ಸುಲಭವಾಗಿ ಗುಣಪಡಿಸಬಹುದಾಗಿದೆ.

ಪುನಃ ತಲೆಯೆತ್ತುತ್ತಿರುವ

# ನಮ್ಮ ಆಹಾರ ಸಮಸ್ಯೆ

**ದಿನದಿನವೂ ಬೆಲೆಗಳು ಏರುವದನ್ನು ಕಂಡು ಸಾಮಾನ್ಯರು ಗಾಬರಿಗೊಳ್ಳುವದು ಸ್ವಾಭಾವಿಕ. ಈ ಬೆಲೆಯೇರಿಕೆಗೆ ಕಾರಣವೇನು? ನಮ್ಮಲ್ಲಿ ನಾವು ಹೇಳುತ್ತಿರುವಷ್ಟು ಆಹಾರಧಾನ್ಯ ಉತ್ಪಾದನೆಯಾಗಿದೆಯೆ? ಎಲ್ಲಿ ಈ ದೋಷವಿದೆ? ಸರಕಾರದ ತಲೆತಿನ್ನುತ್ತಿರುವ ಈ ಸಮಸ್ಯೆಗೆ ಪರಿಹಾರ ಸಾಧ್ಯವೆ? ಎಂಬುದನ್ನು ಲೇಖಕರು ಇಲ್ಲಿ ವಿಶ್ಲೇಷಿಸಿದ್ದಾರೆ.**

ಲೇಖಕರು: **ಡಾ. ಎನ್. ಎ. ಮುಜುಮುದಾರ,** ಎಂ. ಎ. ಪಿಎಚ್. ಡಿ., ಮುಂಬಯಿ.

ಭಾರತವು ತನ್ನ ಜನಸಂಖ್ಯೆಗನುಗುಣವಾಗಿ, ಅಂದರೆ ತನ್ನ ಜನರಿಗೆಲ್ಲ ಸಾಲುವಷ್ಟು ಆಹಾರವನ್ನು ಉತ್ಪಾದಿಸುತ್ತಿದೆಯೇ?— ಈ ಪ್ರಶ್ನೆ ಇಂದಿಗೂ ಜಟಿಲವಾಗಿಯೇ ಉಳಿದಿದೆ. ಮೊದಲ ಪಂಚವಾರ್ಷಿಕ ಯೋಜನೆಯು ಆಹಾರ ಧಾನ್ಯಗಳ ಉತ್ಪಾದನೆಯ ವಿಷಯದಲ್ಲಂತೂ ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಯಶಸ್ವಿಯಾಯಿತು. ಗುರಿಯಾಗಿಟ್ಟುಕೊಂಡಿದ್ದ ಅಂಕಿಗಳನ್ನೂ ಮೀರಿ ಉತ್ಪಾದನೆ ಬೆಳೆಯಿತು. ಅಂತೆಯೇ ಎರಡನೆಯ ಪಂಚವಾರ್ಷಿಕ ಯೋಜನೆಯನ್ನು ನಿರೂಪಿಸುವಾಗ ಯೋಜಕರಲ್ಲಿ ಆಹಾರ ವಿಷಯದಲ್ಲಿ ತುಂಬಾ ಆತ್ಮವಿಶ್ವಾಸವುಂಟಾಗಿ, ಒಕ್ಕಲತನದ ಕಾರ್ಯಕ್ರಮಗಳಿಗೆ ಮೊದಲ ಯೋಜನೆಯಲ್ಲಿ ಇತ್ತಷ್ಟು ಮಹತ್ವವನ್ನೀಯಲಿಲ್ಲ. ಆದರೆ ೧೯೫೫ರ ಜುಲೈ ತಿಂಗಳಿಂದ ಆಹಾರ ಧಾನ್ಯಗಳ—ವಿಶೇಷವಾಗಿ ಗೋದಿ ಹಾಗೂ ಅಕ್ಕಿ—ಬೆಲೆಗಳು ಅನಿರೀಕ್ಷಿತವಾಗಿ ಏರತೊಡಗಿದವು. ತತ್ಪರಿಣಾಮವಾಗಿಯೇ ಮುಂದೆ ದೇಶದ ಅನೇಕ ಭಾಗಗಳಲ್ಲಿ ಕೊರತೆಯ ಲಕ್ಷಣಗಳು ಕಾಣಿಸಿಕೊಂಡು, ಸರಕಾರವು ಪುನರಪಿ ಆಹಾರ ಸಮಸ್ಯೆಯನ್ನೆದುರಿಸಲು ಕಣಕ್ಕಿಳಿಯಬೇಕಾಯಿತು. ದೇಶದ ಅರ್ಥವ್ಯವಸ್ಥೆಯ ಅಭಿವೃದ್ಧಿಕಾರ್ಯಕ್ರಮವು ಪೂರ್ವಯೋಜಿತ ರೀತಿಯಲ್ಲಿ ಸಾಗಿರುವಾಗ, ಈ ರೀತಿಯ ಅನಿರೀಕ್ಷಿತ ಸಮಸ್ಯೆಗಳೇಕೆ ಉದ್ಭವಿಸಬೇಕು? ಯೋಜಕರು ಈ ಸಮಸ್ಯೆಯ ಮುನ್ಸೂಚನೆಗಳನ್ನು ಕಂಡು ಹಿಡಿಯಲಿಲ್ಲವೇಕೆ?

ಆದುದರಿಂದಲೇ ಭಾರತ ಸರಕಾರವು ಆಹಾರ ಸಮಸ್ಯೆಯ ವಿವಿಧ ಮುಖಗಳನ್ನು ಕೂಲಂಕಷವಾಗಿ ಅಭ್ಯಸಿಸಿ ವರದಿ ಮಾಡಲು ಒಂದು ಸಮಿತಿಯನ್ನು ನಿಯಮಿಸಿದ್ದು, ಆ ಸಮಿತಿಯು ಇದೇ ಅಕ್ಟೋಬರದಲ್ಲಿ ತನ್ನ ವರದಿಯನ್ನು ಸಾದರಪಡಿಸುವದೆಂದು ನಿರೀಕ್ಷಿಸಲಾಗಿದೆ. ಈ ಪ್ರಸಂಗದಲ್ಲಿ ಸಮಸ್ಯೆಯ ಕೆಲ ಮಹತ್ವದ ಭಾಗಗಳನ್ನು ಎತ್ತಿತೋರಿಸುವದು ಅವಶ್ಯವಿದೆ.

## ನಿಯಂತ್ರಣಗಳ ನೆನಹು

ಆಹಾರ ಸಮಸ್ಯೆಯ ಅಭ್ಯಾಸಕ್ಕೆ ಆರಂಭಿಸಿದೊಡನೆ ನಿಯಂತ್ರಣಗಳ ನೆನಹು ಬರುವದು ಸ್ವಾಭಾವಿಕವೇ ಸರಿ. ೧೯೫೦ರ ನೈಸರ್ಗಿಕ ದುರಂತಗಳ ಹಾಗೂ ಅನಂತರ ಬಂದ ಕೋರಿಯಾ ಯುದ್ಧ ಇವೆರಡೂ ಕಾರಣಗಳಿಂದ ದೇಶದ ಆಹಾರ ಪರಿಸ್ಥಿತಿಯು ಗಂಭೀರ ಸ್ವರೂಪವನ್ನು ತಾಳಿತು. ಮುಂದೆ ೧೯೫೩ನೆಯ ವರ್ಷವು ಆಹಾರ ಸಮಸ್ಯೆಯ ಇತಿಹಾಸದಲ್ಲಿ ಒಂದು ಮಹತ್ವದ ಮೈಲುಗಲ್ಲು ಎಂದು ಹೇಳಬಹುದು. ಯೋಜನೆಯ ವಿವಿಧ ಕಾರ್ಯಕ್ರಮಗಳು ಯಶಸ್ವಿಯಾದುದು ಆಹಾರಧಾನ್ಯಗಳ ಆಯಾತವು ಕ್ರಮೇಣ ಕಡಿಮೆಯಾದುದರಿಂದ ಬರತೊಡಗಿತು.

### ಆಹಾರಧಾನ್ಯಗಳ ಆಯಾತ

(ಟನ್ನುಗಳಲ್ಲಿ)

| ವರ್ಷ | ಒಟ್ಟು ಆಯಾತ |
|---|---|
| ೧೯೫೦ | ೨೧,೨೪,೮೯೨ |
| ೧೯೫೧ | ೪೭,೨೩,೭೨೯ |
| ೧೯೫೨ | ೩೮,೬೪,೦೬೬ |
| ೧೯೫೩ | ೨೦,೧೭,೮೫೦ |
| ೧೯೫೪ | ೭,೯೯,೦೪೧ |
| ೧೯೫೫ | ೭,೦೦,೦೯೪ |
| ೧೯೫೬ | ೧೩,೯೩,೪೬೦ |

ಈ ಮೇಲಿನ ಅಂಕಿಸಂಖ್ಯೆಗಳಿಂದ ಆಹಾರಧಾನಗಳ ಆಯಾತವು ಹೇಗೆ ಕ್ರಮೇಣ ಕಡಿಮೆಯಾಗುತ್ತ ನಡೆಯಿತೆಂಬದು ಸ್ಪಷ್ಟವಾಗುವದು. ೧೯೫೧ ರಲ್ಲಿ ೪೭ ಲಕ್ಷ ಟನ್ನುಗಳಷ್ಟು ಆಯಾತಮಾಡಿದ್ದರೆ ಮುಂದೆ ೧೯೫೫ ರಲ್ಲಿ ಬರಿ ೭ ಲಕ್ಷ ಟನ್ನುಗಳನ್ನಷ್ಟೇ ಆಯಾತಮಾಡುವದರಲ್ಲಿ ಬಂತು. ನಮ್ಮ ಆಯಾತದ ಪ್ರಮಾಣ ಪರಮಾವಧಿಯನ್ನು ಮುಟ್ಟಿದಾಗ ನಾವು ಒಂದೇವರ್ಷ ಆಹಾರಧಾನ್ಯಗಳಿಗಾಗಿ ೨೧೬ ಕೋಟಿ ರೂಪಾಯಿಗಳಷ್ಟು ಹಣವನ್ನು ತೆತ್ತಬೇಕಾಯಿತು. ಆದರೆ ಅದೇ ಮುಂದೆ ೧೯೫೫ರಲ್ಲಿ ಬರಿ ೩೩ ಕೋಟಿ ರೂಪಾಯಿಗಳು ಸಾಕಾದವು. ಈ ರೀತಿ ಆಹಾರಪರಿಸ್ಥಿತಿ ಸುಧಾರಿಸಿದ ಮೂಲಕವೇ ೧೯೫೪ರ ಮಧ್ಯದಲ್ಲಿ ಎಲ್ಲ ತರಹದ ನಿಯಂತ್ರಣಗಳನ್ನು ತೆಗೆದುಹಾಕುವದು ಸಾಧ್ಯವಾಯಿತು.

## ಮೊದಲ ಯೋಜನೆಯ ಯಶಸ್ಸು

ಒಕ್ಕಲತನದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಅತ್ಯುಚ್ಚ ಸ್ಥಾನವನ್ನೀಯಲಾಗಿದ್ದಿತು. ಅಲ್ಲದೆ ಸಮಾಜ ವಿಕಾಸ ಹಾಗೂ ರಾಷ್ಟ್ರೀಯ ವಿಸ್ತರಣ ಯೋಜನೆಗಳಲ್ಲೂ ಒಕ್ಕಲತನದ ಹುಟ್ಟುವಳಿಯನ್ನು ಹೆಚ್ಚಿಸುವದರೆಡೆಗೇನೇ ವಿಶೇಷ ಮಹತ್ವವೀಯಲಾಗಿತ್ತು. ಯೋಜನೆಯಲ್ಲಿ ಒಕ್ಕಲುತನ ಹಾಗೂ ಸಮಾಜ ವಿಕಾಸ ಕಾರ್ಯಕ್ರಮಗಳಿಗೆ ಒಟ್ಟು ೩೫೪ ಕೋಟಿ ರೂಪಾಯಿಗಳನ್ನು ಒದಗಿಸಲಾಯಿತು. ಅಂದರೆ ಒಟ್ಟು ಯೋಜನೆಯಹಣದ ನೂರಕ್ಕೆ ೧೫ರಷ್ಟು ಭಾಗವನ್ನು ಈ ಕಾರ್ಯಕ್ರಮಗಳ ಮೇಲೆ ವೆಚ್ಚಮಾಡಿದಂತಾಯಿತು. ಜನಸಾಮಾನ್ಯರ, ವಿಶೇಷತಃ ಗ್ರಾಮೀಣ ಜನರ ಜೀವನಮಟ್ಟವನ್ನು ಏರಿಸಲು ಯತ್ನಿಸುತ್ತಿರುವ ಯೋಜನೆಯಲ್ಲಿ ಒಕ್ಕಲುತನಕ್ಕೆ ಈ ರೀತಿ ಪ್ರಾಧಾನ್ಯವಿತ್ತುದು ಸ್ವಾಭಾವಿಕವೇ ಆಗಿದೆ. ಅಲ್ಲದೆ, ಯೋಜನೆಯನ್ನು ನಿರೂಪಿಸುವಾಗ ದೇಶದಲ್ಲಿ ಆಹಾರ ಧಾನ್ಯ ಕೊರತೆಯು ಕಂಡುಬಂದಿತ್ತು. ಮೇಲಾಗಿ ಅತಿಪ್ರಸರಣದ ಭೀತಿಯೂ ದೇಶವನ್ನಾವರಿಸಿತ್ತು. ೧೯೫೨-೫೩ರ ನಂತರ ಒಕ್ಕಲತನದ ಉತ್ಪಾದನೆಯ ಹೆಚ್ಚಳವು ಅತಿಪ್ರಸರಣವನ್ನು ಹಿಡಿತದಲ್ಲಿ ತಂದು, ಅರ್ಥವ್ಯವಸ್ಥೆಯನ್ನು ಸ್ತಿಮಿತಕ್ಕೆ ತಂದಿತಲ್ಲದೆ, ಮುಂದೆ ಎರಡನೆಯ ಯೋಜನೆಯಲ್ಲಿಯ ತೀವ್ರಗತಿಯ ಅಭಿವೃದ್ಧಿಗೂ ಹಾದಿ ಮಾಡಿಕೊಟ್ಟಿತು.

ಹೊಸ ಭೂಮಿಯನ್ನುಸಾಗುಮಾಡುವದು, ಚಿಕ್ಕ ಹಾಗೂ ದೊಡ್ಡ ಪ್ರಮಾಣದ ನೀರಾವರಿ ಯೋಜನೆಗಳು, ಕೃತ್ರಿಮ ಗೊಬ್ಬರದ ಉಪಯೋಗ, ಸುಧಾರಿಸಿದ ಬೀಜ ಹಾಗೂ ಕೃಷಿ ಪದ್ಧತಿಗಳು—ಮುಂತಾದ ವಿವಿಧ ಕಾರ್ಯಕ್ರಮಗಳಿಂದ ಆಹಾರ ಧಾನ್ಯಗಳ ಉತ್ಪಾದನೆಯನ್ನು ೧೯೪೯-೫೦ ರಲ್ಲಿದ್ದ ೫೪೦ ಲಕ್ಷ ಟನ್ನುಗಳಿಂದ, ಯೋಜನೆಯ ಕೊನೆಯ ವರ್ಷದಲ್ಲಿ ೬೧೬ ಲಕ್ಷ ಟನ್ನುಗಳಿಗೆ ಹೆಚ್ಚಿಸಬೇಕೆಂಬ ಗುರಿಯನ್ನಿಟ್ಟುಕೊಳ್ಳಲಾಗಿತ್ತು. ಯೋಜನೆಯ ಫಲಿತಾಂಶವು ನಿರೀಕ್ಷಣೆಯನ್ನೂ ಮೀರಿಸಿತು. ಆಹಾರಧಾನ್ಯಗಳ ಉತ್ಪಾದನೆಯು ೧೯೫೩—೫೪ ರಲ್ಲಿಯೇ ೬೮೭ ಲಕ್ಷ ಟನ್ನುಗಳಷ್ಟಾಗಿ, ಯೋಜನೆಯು ಗುರಿಯನ್ನು ಅವಧಿಯ ಪೂರ್ವದಲ್ಲೇ ದಾಟಿತು.

ಈ ರೀತಿಯ ಪರಮಾವಧಿ ಉತ್ಪಾದನೆಯು ಸರಕಾರದ ಮುಂದೆ ಬೇರೆ ವಿಧದ ಸಮಸ್ಯೆಯನ್ನೇ ತಂದೊಡ್ಡಿತು. ಒಕ್ಕಲತನ ಹುಟ್ಟುವಳಿಗಳ ಬೆಲೆಗಳು ತೀವ್ರಗತಿಯಿಂದ ಹಾಗೂ ಒಮ್ಮೆಲೆ ಇಳಿಯತೊಡಗಿದುದರಿಂದ, ಕೆಲಕಾಲ, ಸರಕಾರವು ಬೆಲೆಗಳ—ಆಧಾರ—ಧೋರಣೆಯನ್ನು ಅನುಸರಿಸಬೇಕಾಯಿತು!

### ಎರಡನೆಯ ಯೋಜನೆ–ಉದ್ದಿಮೆಯ ಯೋಜನೆ

ಈ ರೀತಿ ಒಕ್ಕಲತನದ ಕ್ಷೇತ್ರದಲ್ಲಿ ದೊರಕಿದ ಅನಿರೀಕ್ಷಿತ ಯಶಸ್ಸಿನಿಂದಲೇ ಯೋಜಕರು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒಕ್ಕಲತನಕ್ಕೆ ಅಷ್ಟೊಂದು ಮಹತ್ವವೀಯಲಿಲ್ಲ. ಎರಡನೆಯ ಯೋಜನೆಯು ವಿಶೇಷವಾಗಿ ಮೂಲ ಉದ್ದಿಮೆಗಳ ಅಭಿವೃದ್ಧಿಯೆಡೆಗೆ ಲಕ್ಷವಿತ್ತಿದೆ. ೧೯೬೦—೬೧ ರ ಸುಮಾರಿಗೆ ಒಟ್ಟು ಆಹಾರಧಾನ್ಯಗಳ ಅವಶ್ಯಕತೆ ೭೦೫ ಲಕ್ಷ ಟನ್ನುಗಳಷ್ಟು ಆಗಬಹುದೆಂದು ಅಂದಾಜುಮಾಡಿ, ಎರಡನೆಯ ಯೋಜನೆಯ ಅವಧಿಯಲ್ಲಿ ೧ ಕೋಟಿ ಟನ್ನುಗಳಷ್ಟು ಉತ್ಪಾದನೆಯನ್ನು ಹೆಚ್ಚಿಸಬೇಕೆಂಬ ಗುರಿಯನ್ನಿಟ್ಟುಕೊಳ್ಳಲಾಗಿದೆ.

ಆದರೆ ೧೯೫೫ ರ ಕೊನೆಯ ಭಾಗದಲ್ಲಿ ಆಹಾರಧಾನ್ಯಗಳ ಬೆಲೆಗಳು ಮಿತಿಮೀರಿ ಏರತೊಡಗಿ ಕೊರತೆಯ ಲಕ್ಷಣಗಳು ಕಾಣಿಸಿಕೊಂಡವು. ನಂತರ ದೇಶದ ಕೆಲಭಾಗಗಳಲ್ಲಿ ಮಹಾಪೂರದ ಅನಾಹುತದಿಂದ ಬೆಳೆಗಳು ನಾಶವಾದವು. ಈ ಸಂಧಿಯ ದುರುಪಯೋಗವನ್ನು ತೆಗೆದುಕೊಂಡು ವ್ಯಾಪಾರಸ್ಥರು ಧಾನ್ಯಸಂಗ್ರಹಕ್ಕೆ ತೊಡಗಿದರು. ಇವೆಲ್ಲ ಕಾರಣಗಳ ಮೂಲಕ ದೇಶದ ಆಹಾರ ಪರಿಸ್ಥಿತಿ ಗಂಭೀರ ಸ್ವರೂಪ ತಾಳಿ ಇದು ಪುನಃ ನಿಯಂತ್ರಣಗಳಿಗೆ ಆಮಂತ್ರಣವೋ ?—ಎಂಬ ಪ್ರಶ್ನೆಯು ಉದ್ಭವಿಸಿತು. ಸರಕಾರವು ೧೫೦೦೦ ಯೋಗ್ಯದರದ ಧಾನ್ಯದಂಗಡಿಗಳನ್ನು ದೇಶದಾದ್ಯಂತ ತೆರೆದು ಆಯಾತಧಾನ್ಯಗಳನ್ನು ವಿತರಣ ಮಾಡಹತ್ತಿದೆ.

ಈ ರೀತಿ ಸಂಪೂರ್ಣ ಬದಲಾದ ಪರಿಸ್ಥಿತಿಯನ್ನು ಕಂಡು ಯೋಜನೆಯಲ್ಲೂ ಮಾರ್ಪಾಟುಗಳನ್ನು ಮಾಡಲಾಯಿತು. ಮೊದಲು ಹಾಕಿಕೊಳ್ಳಲಾದ ಗುರಿಯನ್ನು ನೂರಕ್ಕೆ ೨೫ ರಷ್ಟು ಹೆಚ್ಚಿಸಬೇಕೆಂದು ನಿರ್ಧರಿಸಿ ಆ ಪ್ರಮಾಣದಿಂದ ಆಹಾರಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸಲು ಯತ್ನಗಳು ಆರಂಭವಾದವು. ಅಲ್ಲದೆ ಬರ್ಮಾದಿಂದ ಅಕ್ಕಿಯನ್ನೂ ಅಮೇರಿಕೆಯಿಂದ ಗೋದಿಯನ್ನೂ ದೊಡ್ಡ ಪ್ರಮಾಣದ ಮೇಲೆ ಆಯಾತಮಾಡುವ ವ್ಯವಸ್ಥೆಯನ್ನು ಮಾಡಲಾಯಿತು.

### ಕೆಲ ವಿಶ್ಲೇಷಣಾತ್ಮಕ ಸಂಗತಿಗಳು

ಸುಯೋಜಿತ ಆರ್ಥಿಕ ವ್ಯವಸ್ಥೆಯಲ್ಲಿ ಈ ರೀತಿ ಅನಿರೀಕ್ಷಿತ ಬದಲಾವಣೆಗಳಾಗುವದು ಸ್ವಲ್ಪ ಆಶ್ಚರ್ಯದ ಸಂಗತಿಯೆಂದೇ ಹೇಳಬೇಕು. ಆದರೆ ಇದಕ್ಕೆ ಉತ್ತರವೂ ಇಲ್ಲದಿಲ್ಲ. ಒಕ್ಕಲತನದ ಉತ್ಪಾದನೆಯು ಉದ್ದಿಮೆಗಳ ಉತ್ಪಾದನೆಯಂತೆ ಒಂದು ನಿರ್ದಿಷ್ಟಗತಿಯಿಂದ ಸಾಗುವದಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಅದು ಕೆಲ ನಿರೀಕ್ಷಿಸಲಸಾಧ್ಯವಾದ ಸಂಗತಿಗಳನ್ನು ಅವಲಂಬಿಸಿದೆ. 'ಭಾರತದ ಒಕ್ಕಲತನವು ಮನ್ಸೂನ ಮಳೆಯಲ್ಲಿಯ ಜೂಜಾಟವೆಂದು ಹೇಳುತ್ತ ಬಂದಿರುವ ಮಾತು ಇಂದಿಗೂ ಬಹಳಷ್ಟು ಅರ್ಥವತ್ತಾಗಿದೆ. ಅದರಂತೆಯೇ ಮಹಾಪೂರ ಮುಂತಾದ ನೈಸರ್ಗಿಕ ಸಂಗತಿಗಳನ್ನೂ ಯಾವ ಯೋಜಕನೂ ಮೊದಲೇ ಊಹಿಸಲಾರ. ಆದುದರಿಂದ ಒಕ್ಕಲತನದ ಪ್ರಯುಕ್ತ ಯೋಜನೆಗಳೆಲ್ಲ ಒಂದು ರೀತಿಯಿಂದ ಬರಿ ಅಂದಾಜುಗಳಾಗಿಯೇ ಉಳಿಯುತ್ತವೆಂದು ಕೆಲವರ ವಾದ.

ಇದಕ್ಕೂ ಮಹತ್ವದ ಇನ್ನೊಂದು ವಿಷಯವನ್ನು ತೀರ ಇತ್ತೀಚಿಗೆ ಎತ್ತಿ ತೋರಿಸಲಾಗಿದೆ. ಮೊದಲ ಪಂಚವಾರ್ಷಿಕ ಯೋಜನೆಯ ಐದೂ ವರ್ಷಗಳ ಪ್ರಗತಿಯನ್ನು ಸಮೀಕ್ಷಿಸಿ ಒಂದು ವರದಿಯಲ್ಲಿ ಪ್ರಸಿದ್ಧಿಸಲಾಗಿದೆ. ಅದರಲ್ಲಿ ಭಾರತದ ಎಲ್ಲ ರಾಜ್ಯಗಳಲ್ಲಿ ಆಹಾರಧಾನ್ಯಗಳ ಉತ್ಪಾದನೆ ಯಾವ ಪ್ರಮಾಣದಲ್ಲಿ ಹೆಚ್ಚಿತು ಎಂಬದನ್ನು ಅಂಕೆ ಸಂಖ್ಯೆಗಳಿಂದ ವಿವರಿಸಲಾಗಿದೆ. ಈ ಸಂಖ್ಯೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಒಂದು ಮಹತ್ವದ ಸಂಗತಿಯು ಗೋಚರವಾಗುವದು. ಮೊದಲ ೧೦ ಪ್ರದೇಶಗಳಲ್ಲಿ (ಮೊದಲಿನ ವರ್ಗದ ರಾಜ್ಯಗಳು) ೧೯೫೫-೫೬ ರ ಸಂಖ್ಯೆಗಳನ್ನು ಅವಲೋಕಿಸಿದರೆ ಯೋಜನೆಯ ಗುರಿಗಳಿಗಿಂತ ಅವು ಕಡಿಮೆಯಿವೆ. ಆದರೆ ತದ್ವಿರುದ್ಧವಾಗಿ ಮೊದಲಿನ ಸಂಸ್ಥಾನ ಪ್ರದೇಶಗಳಲ್ಲಿ ಯೋಜನೆಯು ಗುರಿಗಳನ್ನೂ ಮೀರಿ ಒಕ್ಕಲತನದ ಉತ್ಪಾದನೆ ಬೆಳೆದಿದೆ. ಈ ಪ್ರದೇಶದಲ್ಲಿ ೧೯೫೫-೫೬ರಲ್ಲಿ ಮೊದಲು ನಿರ್ದಿಷ್ಟಪಡಿಸಿದ ಪರಿಮಾಣಕ್ಕಿಂತ ೩.೨೦ ದಶಲಕ್ಷ

ಟನ್ನಗಳಷ್ಟು ಹೆಚ್ಚು ಒಟ್ಟು ಉತ್ಪಾದನೆಯಾಗಿದೆ. ಮೊದಲಿನ ಕೆಲ ಸಂಸ್ಥಾನಗಳಲ್ಲಂತೂ ಉತ್ಪಾದನೆ ಕಲ್ಪನಾತೀತವಾಗಿ ಹೆಚ್ಚಾಗಿದೆ. ಒಂದೆರಡು ಉದಾಹರಣೆಗಳನ್ನು ಕೊಡುವದಾದರೆ, ರಾಜಸ್ಥಾನದಲ್ಲಿ ಉತ್ಪಾದನೆ ೧೯೫೧-೫೨ರಲ್ಲಿ ೧೦ ಲಕ್ಷ ಟನ್ನುಗಳಿಂದ ೧೯೫೨-೫೩ರಲ್ಲಿ ೨೫ ಲಕ್ಷ ಟನ್ನುಗಳಿಗೆ ಹಾಗೂ ಮುಂದೆ ೧೯೫೩-೫೪ರಲ್ಲಿ ೩೧ ಲಕ್ಷ ಟನ್ನುಗಳಿಗೆ ಏರಿದೆ! ಇದೇ ರೀತಿಯ ಹೆಚ್ಚಳವನ್ನು ಸೌರಾಷ್ಟ್ರ ಹಾಗೂ ಭೋಪಾಳಗಳಲ್ಲಿ ನಾವು ಕಾಣುತ್ತೇವೆ. ಮುಖ್ಯವಾಗಿ ಹೇಳಬೇಕಾದ ಮಾತೆಂದರೆ ಈ ಮೊದಲಿನ ಸಂಸ್ಥಾನಗಳಲ್ಲಿ ತೋರಿಸಲಾದ ಅಧಿಕ ಉತ್ಪಾದನೆಯು ಬರಿ ಸಾಂಖ್ಯಿಕ ಹೆಚ್ಚಳವಾಗಿರಬಹುದು. ಅಂದರೆ ಉತ್ಪಾದನೆಯ ಅಂದಾಜನ್ನು ಮಾಡುವ ವಿಧಾನವು ಈ ಪ್ರದೇಶಗಳಲ್ಲಿ ಇತ್ತೀಚೆಗೆ ಪರಿಪೂರ್ಣರೀತಿಯಿಂದ ಸಾಗಿದ್ದುದರ ಮೂಲಕ ಇಲ್ಲಿಯ ಉತ್ಪಾದನೆಯು ಈ ರೀತಿ ಬಹಳಷ್ಟು ಹೆಚ್ಚಳವನ್ನು ತೋರಿಸುತ್ತಿದೆ. ತತ್ಪರಿಣಾಮವಾಗಿ ಪ್ರಥಮ ಪಂಚವಾರ್ಷಿಕ ಯೋಜನೆಯ ಆಹಾರಧಾನ್ಯ ಉತ್ಪಾದನೆಯಲ್ಲಿಯ ಯಶಸ್ಸಿನ ತಪ್ಪು ಕಲ್ಪನೆಯ ಚಿತ್ರವನ್ನು ಈ ಅಂಕಿಗಳು ಕೊಡುತ್ತವೆ. ಈ ರೀತಿ ಶಾಸ್ತ್ರೀಯವಾಗಿ ಪರಿಶೀಲಿಸಿದರೆ ಆಹಾರಧಾನ್ಯಗಳ ಅಧಿಕ ಉತ್ಪಾದನೆಯು ನಿಜವಾಗಿಯೂ ನೂರಕ್ಕೆ ೧೮ರಿಂದ ೨೦ರಷ್ಟು ಆಗಿರದೆ, ಬರಿ ೭ ಅಥವಾ ೮ರಷ್ಟು ಆಗಿರಬಹುದೆಂದು ಕೆಲ ತಜ್ಞರು ಅಭಿಪ್ರಾಯಪಡುತ್ತಾರೆ. ನಮ್ಮ ಮುಂದಿನ ಪ್ರಗತಿಯನ್ನು ಅಳೆಯುವ ಕಾಲಕ್ಕೆ ಈ ಸಂಗತಿಯನ್ನು ಲಕ್ಷದಲ್ಲಿಡುವದು ಅತ್ಯವಶ್ಯಕವಾಗಿದೆ.

ಮೂರನೆಯ ಮಹತ್ವದ ಮಾತೆಂದರೆ ಆದಾಯದಲ್ಲಿಯ ಹೆಚ್ಚಳ. ಮೊದಲ ಯೋಜನೆಯ ಬಹಳಷ್ಟು ಕಾರ್ಯಕ್ರಮಗಳು ಹಳ್ಳಿಗಳಲ್ಲೇ ಕೇಂದ್ರೀಕೃತವಾಗಿದ್ದುದರಿಂದ, ತತ್ಪರಿಣಾಮವಾಗಿ ಗ್ರಾಮೀಣ ಆದಾಯಗಳು ಹೆಚ್ಚಿರುವದು ಸ್ವಾಭಾವಿಕವಾಗಿದೆ. ಜನಸಾಮಾನ್ಯದ ಜೀವನಮಟ್ಟವು ತೀರ ಕೆಳತರಗತಿಯದಾಗಿರುವ ನಮ್ಮ ಗ್ರಾಮೀಣ ಭಾರತದಲ್ಲಿ ಈ ತರಹದ ಆದಾಯ ಹೆಚ್ಚಳವು ಅಧಿಕ ಆಹಾರ ಬೇಡಿಕೆಯಲ್ಲಿ ಪರಿಣಮಿಸುವದು. ಅರೆಹೊಟ್ಟೆಯಿಂದ ಉಪಜೀವಿಸುತ್ತ ಬಂದ ಜನರು ತಮ್ಮ ಆದಾಯವು ಸ್ವಲ್ಪ ಹೆಚ್ಚಾದಾಗ, ಅಧಿಕ ಆಹಾರವನ್ನು ಸೇವಿಸುವದು ಸ್ವಾಭಾವಿಕ. ಆದ್ದರಿಂದ ನಮ್ಮ ಆಹಾರ ಉತ್ಪಾದನಾಕಾರ್ಯಕ್ರಮಗಳನ್ನು ನಿರೂಪಿಸುವಾಗ ಈ ವಿಷಯದೆಡೆಗೆ ವಿಶೇಷ ಲಕ್ಷನೀಯಬೇಕಾಗುವದು.

ಆದ್ದರಿಂದ ನಮ್ಮ ಆಹಾರಸಮಸ್ಯೆಯನ್ನು ವಿವೇಚಿಸುವಾಗ ನಾವು ಅನುಲಕ್ಷಿಸಬೇಕಾದ ಸಂಗತಿಗಳೆಂದರೆ, (೧) ಒಟ್ಟು ಜನಸಂಖ್ಯೆಯಲ್ಲಿಯ ಹೆಚ್ಚಳ, (೨) ನಗರಗಳಲ್ಲಿಯ ಜನಸಂಖ್ಯೆಯ ಹೆಚ್ಚಳ, (೩) ತಲಾ ಆಹಾರಧಾನ್ಯಗಳ ಉಪಭೋಗವನ್ನು ಹೆಚ್ಚಿಸುವ ಅವಶ್ಯಕತೆ, ಹಾಗೂ (೪) ರಾಷ್ಟ್ರೀಯ ಆದಾಯದ ಹೆಚ್ಚಳ ಹಾಗೂ ಅದರ ವಿತರಣದಿಂದ ಉಪಭೋಗದ ಮೇಲೆ ಆಗುವ ಪರಿಣಾಮ. ಇವೆಲ್ಲ ಸಂಗತಿಗಳನ್ನು ಕೂಲಂಕಷವಾಗಿ ಅಭ್ಯಸಿಸಿದಾಗಲೇನೇ ನಿರ್ದಿಷ್ಟವಾಗಿ ನಮ್ಮ ಅಹಾರಧೋರಣೆಯುನ್ನು ನಿರೂಪಿಸಲು ಸಾಧ್ಯವಿದೆ.

## ನಾವು ಸಾಕಷ್ಟು ಉತ್ಪಾದಿಸಬಲ್ಲೆವೇ?

ಇದು ಸಮಸ್ಯೆಯ ವಿಶ್ಲೇಷಣೆಯ ಮಾತಾಯಿತು. ಆದರೆ ಇದಕ್ಕೂ ಮುಖ್ಯ ಮಾತೆಂದರೆ ಭಾರತವು ತನ್ನ ಜನಸಂಖ್ಯೆಗೆ ಸಾಲುವಷ್ಟು ಆಹಾರವನ್ನು ಉತ್ಪಾದಿಸಬಲ್ಲದೇ? ಎಂಬದು.

ಈ ಸಮಸ್ಯೆಯ ಬೇರೆ ಮುಖಗಳ ಬಗ್ಗೆ ಭಿನ್ನಾಭಿಪ್ರಾಯಗಳೇನೇ ಇರಲಿ, ಭಾರತವು ಆಹಾರ ವಿಷಯದಲ್ಲಿ ಸ್ವಾವಲಂಬನವಾಗುವದು ಸಾಧ್ಯವಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು. ಇತ್ತೀಚಿಗೆ ಚೀನದಲ್ಲಿ ಒಕ್ಕಲತನದ ಪ್ರಗತಿಯನ್ನು ಅವಲೋಕಿಸಿ ಬಂದ ಭಾರತದ ಶಿಷ್ಟಮಂಡಳವು ಈ ಮಾತಿಗೆ ಪುಷ್ಟಿಯನ್ನಿತ್ತಿದೆ. ಭಾರತದಲ್ಲಿಯ ಒಳ್ಳೆಯ ಒಕ್ಕಲಿಗರ ಉತ್ಪಾದನೆ ಚೀನದಲ್ಲಿಯ ಉತ್ಪಾದನೆಗಿಂತ ಕಡಿಮೆಯಿಲ್ಲ. ಉದಾಹರಣೆಗೆ, ಮೈಸೂರು ರಾಜ್ಯದಲ್ಲಿ ಬತ್ತದ ಸರಾಸರಿ ಉತ್ಪಾದನೆ ಎಕರೆಗೆ ೨೦೦೦ ಪೌಂಡುಗಳಷ್ಟಿದೆ. ಆದರೆ ಅದೇ ಮಲಹಳ್ಳಿ ವಿಸ್ತರಣ ಯೋಜನೆಯ ವಿಭಾಗದಲ್ಲಿ ಸುಧಾರಿಸಿದ ಬೀಜಗಳ ಮೂಲಕ ೧೯೫೨-೫೩ರಲ್ಲಿ ೨೫೦೦ ಪೌಂಡುಗಳಷ್ಟಾಯಿತು; ಮುಂದೆ ೧೯೫೩—೫೪ರಲ್ಲಿ ೪೫೦೦ ಪೌಂಡೂ ೧೯೫೪—೫೫ರಲ್ಲಿ ೫೫೦೦ ಪೌಂಡೂ ಆಯಿತು. ಮಂಡಳದ ವರದಿಯಲ್ಲಿ ಇದೇ ರೀತಿಯ ಇನ್ನಿತರ ಅಂಕಿಸಂಖ್ಯೆಗಳನ್ನು ಉಲ್ಲೇಖಿಸಲಾಗಿದೆ.

ಇದರಿಂದ ನಮಗೆ ಕಂಡುಬರುವ ಮುಖ್ಯ ಮಾತೆಂದರೆ ಭಾರತದಲ್ಲಿ ಬಡ ಒಕ್ಕಲಿಗರು ಬಹುಸಂಖ್ಯೆಯಲ್ಲಿದ್ದಾರೆ. ಈ ಬಹುಸಂಖ್ಯಾಕ ರೈತರನ್ನು ಅನೇಕರೀತಿಯಿಂದ ಸುಧಾರಿಸುವದು ಸಾಧ್ಯವಿದೆ. ಒಮ್ಮೆ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ, ಅವರಿಗೆ ಪ್ರಗತಿಪರ ಕೃಷಿವಿಧಾನಗಳ ಪರಿಚಯ ಮಾಡಿಕೊಟ್ಟರೆ, ಅವಶ್ಯವಾಗಿ ಅವರೂ ಪ್ರಗತಿಯ ದಾರಿಯಲ್ಲಿ ಸಾಗಲು ಹಿಂಜರಿಯುವದಿಲ್ಲ. ಎರಡನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ರಾಷ್ಟ್ರೀಯ ವಿಸ್ತರಣ ಸೇವೆಯು ಭಾರತದ ಪ್ರತಿಹಳ್ಳಿಯನ್ನೂ ತಲುಪಲಿದೆ. ಅಂದಮೇಲೆ ಸುಧಾರಿಸಿದ ಕೃಷಿವಿಧಾನಗಳು ಎಲ್ಲ ಒಕ್ಕಲಿಗರ- ಚಿಕ್ಕ, ದೊಡ್ಡ, ಸುಶಿಕ್ಷಿತ, ಅಶಿಕ್ಷಿತ, ಬಡ, ಶ್ರೀಮಂತ— ಬಾಗಿಲಕ್ಕೇನೆ ಹೋಗಿ ನಿಲ್ಲುವದೆಂದಂತಾಯಿತು. ಮೇಲಾಗಿ ಒಕ್ಕಲಿಗರಿಗಾಗಿ ಸಹಕಾರೀ ಆಂದೋಲನದ ಮೂಲಕ ಯೋಗ್ಯ ಸಾಲದ ವ್ಯವಸ್ಥೆ, ಹುಟ್ಟುವಳಿಯ ಮಾರಾಟದ ವ್ಯವಸ್ಥೆ ಮುಂತಾದವುಗಳನ್ನೂ ಕೈಕೊಳ್ಳಲಾಗಿದೆ. ಇವೆಲ್ಲ ಯೋಜನೆಗಳಿಂದ ಭಾರತದ ಎಲ್ಲ ರೈತರೂ ಪ್ರಗತಿಪರ ಪಥದ ಮೇಲೆ ಬಂದುದಾದರೆ, ಭಾರತದ ಆಹಾರ ಸಮಸ್ಯೆ ಪುನಃ ತಲೆಯೆತ್ತಲಿಕ್ಕಿಲ್ಲವೆಂದು ವಿಶ್ವಾಸದಿಂದ ಹೇಳಬಹುದು.

# ನಾಡನಾಳಿದ ನಾರಿಯರು

**ತೊಟ್ಟಿಲು ತೂಗುವ ಕೈಯು ದೇಶವನ್ನು ಆಳುವದೆಂಬ ನಾಣ್ಣುಡಿ ನಮ್ಮಲ್ಲುಂಟು. ಇದು ಅನೇಕ ಮಹಿಳೆಯರ ಜೀವನದಿಂದ ಕಂಡುಕೊಂಡ ಅನುಭವದ ನುಡಿಯೂ ಆಗಿರುವದು. ರಾಜಕಾರಣ, ಸಮಾಜಕಲ್ಯಾಣ ಇತ್ಯಾದಿ ಅನೇಕ ರೀತಿಯಲ್ಲಿ ಪುರುಷರೊಂದಿಗೆ ಸರಿಸಮಾನರಾಗಿ ಭಾರತೀಯ ಮಹಿಳೆಯರು ಕಾರ್ಯ ಮಾಡಿದ್ದಾರೆ. ಅಂತಹ ಕೆಲ ಮಹಿಳೆಯರ ಜೀವನ ಚರಿತ್ರೆಯನ್ನು ಇಲ್ಲಿ ಕೆಲಮಟ್ಟಿಗೆ ವಿವೇಚಿಸಲಾಗಿರುವದು.**

ಲೇಖಕರು: ಶ್ರೀ ಶ್ರೀನಿವಾಸ ರಿತ್ತಿ, ಎಂ. ಎ., ನೀಲಗಿರಿ.

ಸ್ತ್ರೀಯೆಂದರೆ ಅಬಲೆ, ಆದ್ದರಿಂದ ಯಾವಾಗಲೂ ಪರಾವಲಂಬಿ, ಸ್ವಾತಂತ್ರ್ಯಕ್ಕೆ ಅನರ್ಹಳು ಎಂದು ಮುಂತಾದ ಅಪಸ್ವರಗಳು ಆಗಾಗ ಕೇಳ ಬಂದರೂ ಭಾರತೀಯ ಪರಂಪರೆಯಲ್ಲಿ ಅವಳು ಮೊದಲಿನಿಂದಲೂ ಗೌರವಸ್ಥಾನವನ್ನು ಪಡೆದಿದ್ದಾಳೆ. ದೇವರ ಪುರುಷರೂಪಕ್ಕೆ ಎಷ್ಟು ಮಹತ್ವವಿರುವದೋ ಸ್ತ್ರೀರೂಪಕ್ಕೂ ಅಷ್ಟೇ ಮಹತ್ವವಿದೆ. ಎಂತಲೇ ಅವನು ಅರ್ಧನಾರೀಶ್ವರ. 'ಸ್ತ್ರೀಯರು ಗೌರವಿಸಲ್ಪಡುವ ಎಡೆಗಳಲ್ಲಿ ದೇವತೆಗಳು ನಲಿದಾಡುತ್ತಾರೆ; ಅವರು ಉಪೇಕ್ಷಿಸಲ್ಪಡುವ ಎಡೆಗಳಲ್ಲಿಯ ಕ್ರಿಯೆಗಳೆಲ್ಲವೂ ನಿರರ್ಥಕ,'[1] 'ಕನ್ಯೆಯಿದ್ದಲ್ಲಿ ಲಕ್ಷ್ಮಿ ನೆಲಸುತ್ತಾಳೆ'[2] ಎಂಬ ನುಡಿಗಳು ಸ್ತ್ರೀಯರ ಬಗ್ಗೆ ಭಾರತೀಯರಲ್ಲಿದ್ದ ಗೌರವದ ಪ್ರತೀಕ. ಹಾಗೆ ನೋಡಿದರೆ ಸ್ತ್ರೀ ಕೈಲಾಗದವಳು, ಯಾವಜ್ಜೀವವೂ ಬೇರೊಬ್ಬರ ಆಶ್ರಯದಲ್ಲಿಯೇ ಬೆಳೆಯುವವಳು[3] ಎಂಬ ಭಾವನೆ ದೇಶದಲ್ಲಿಯ ಸಾಮಾಜಿಕ ಹಾಗೂ ರಾಜಕೀಯ ಬದಲಾವಣೆಗಳ ಪರಿಣಾಮದಿಂದುಂಟಾದುದೇ ಹೊರತು ಮೊದಲಿನಿಂದಲೇ ಬಂದುದಲ್ಲ ಎಂದು ಸಾಧಾರವಾಗಿ ಹೇಳಬಹುದು. ನಮ್ಮ ನಾಡಿನ ಪ್ರಾಚೀನ ಕಾಲದ ಚರಿತ್ರೆಯನ್ನವಲೋಕಿಸಿದಾಗ ಇದರ ಸತ್ಯತೆ ಕಂಡುಬರುವದು.

ವೇದಕಾಲದಲ್ಲಿ ಸ್ತ್ರೀಗೆ ಯಾವ ಕ್ಷೇತ್ರದಲ್ಲಿಯೂ ಗೌಣಸ್ಥಾನವಿರಲಿಲ್ಲ. ಸಾಮಾಜಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ಮುಂತಾದ ವಿಷಯಗಳಲ್ಲಿ ಅವಳಿಗೆ ಪುರುಷನಷ್ಟೇ ಅಧಿಕಾರ, ಸ್ವಾತಂತ್ರ್ಯಗಳಿದ್ದವು. ಅಂದಿನ ಯುವಕನಿಗೆ ಅತಿ ಮಹತ್ವವೆನಿಸಿದ್ದ ಉಪನಯನ ಸಂಸ್ಕಾರವನ್ನು ಯುವತಿಯೂ ಹೊಂದಬಹುದಾಗಿದ್ದಿತು. ಆದರಿಂದ ಆಕೆಗೆ ವೇದಾಧ್ಯಯನವನ್ನು ಮಾಡುವ ಮತ್ತು ಗಹನವಾದ ತಾತ್ವಿಕ ವಿಷಯಗಳನ್ನೂ ತಿಳಿದುಕೊಳ್ಳುವ ಅವಕಾಶವಿದ್ದಿತು. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು, ವೇದಮಂತ್ರಗಳ ದ್ರಷ್ಟಾರರಾಗಿ ಬ್ರಹ್ಮವಾದಿನಿಯರೆಂದು ಹೆಸರಾದ ಘೋಷಾ, ಅಪಾಲಾ, ಶಾಶ್ವತೀ ಮೊದಲಾದ ನಾರಿಯರ ಜೀವನ ಚರಿತ್ರೆಗಳು, ವೈದಿಕ ಸಮಾಜದಲ್ಲಿ ಸ್ತ್ರೀಗಿದ್ದ ಸ್ಥಾನ, ಗೌರವಗಳನ್ನೂ ಸೂಚಿಸುತ್ತವೆ. ಯಜ್ಞಮೊದಲಾದ ಧಾರ್ಮಿಕ ಕಾರ್ಯಗಳಲ್ಲಿ ಅವಳು ಪುರುಷನ ಸಮಭಾಗಿಯಾಗಿ ಭಾಗವಹಿಸುತ್ತಿದ್ದಳು. ಕೆಲವು ಯಜ್ಞಗಳಂತೂ ಮಹಿಳೆಯರೇ ಮಾಡತಕ್ಕವುಗಳಾಗಿದ್ದವು.[4]

ಕ್ಷಾತ್ರವಿದ್ಯೆಯಲ್ಲಿಯೂ ಸ್ತ್ರೀ ಹಿಂದುಳಿದಿರಲಿಲ್ಲ. ವಧ್ರಿಮತಿ, ವಿಶ್ಪಲೆಯರಂತಹ ಧೀರನಾರಿಯರು ಅಂದಿನ ಕಾಲದ ಮಹಿಳೆಯರ ಧೈರ್ಯ, ವೀರವೃತ್ತಿಗಳ ದ್ಯೋತಕವಾಗಿದ್ದಾರೆ. ವಧ್ರಿಮತಿ ಯುದ್ಧದಲ್ಲಿ ಭಾಗವಹಿಸಿ ತನ್ನ ಕೈಗಳನ್ನು ಕಳೆದುಕೊಂಡಳು. ದೈವಭಿಷಜರಾದ ಅಶ್ವಿನೀದೇವತೆಗಳು ಕರುಣೆಗೊಂಡು ಅವಳಿಗೆ ಚಿನ್ನದ ಕೈಗಳನ್ನು ನೀಡಿದರು.[5] ವಿಶ್ಪಲೆಯೂ ಒಬ್ಬ ಯೋಧೆ. ಆಕೆ ಯುದ್ಧವೊಂದರಲ್ಲಿ ಕಾಲನ್ನು ಕಳೆದುಕೊಂಡಾಗ ಅಶ್ವಿನೀಕುಮಾರರು ಅವಳಿಗೆ ಕಾಲನ್ನೂ ನಡೆಯುವ ಶಕ್ತಿಯನ್ನೂ ಕರುಣಿಸಿದರು.[6] ವೇದಗಳಲ್ಲದೆ ಮುಂದಿನ ಸಾಹಿತ್ಯದಲ್ಲಿಯೂ ಇಂಥ ಧೀರೆಯರ ಉದಾಹರಣೆಗಳು ಸಿಗುತ್ತವೆ. ವಾತ್ಸ್ಯಾಯನನ ಹೇಳಿಕೆಯಂತೆ ಸ್ತ್ರೀಯು ಪ್ರಾವೀಣ್ಯವನ್ನು ಪಡೆಯಬೇಕೆಂದಿದ್ದ ಅರುವತ್ತುನಾಲ್ಕು ಕಲೆಗಳಲ್ಲಿ ಶಾರೀರಕ ಶಿಕ್ಷಣವೂ ಸೈನಿಕ ತರಬೇತಿಯೂ ಸೇರಿದ್ದವೆಂಬುದನ್ನೂ ಇಲ್ಲಿ ಗಮನಿಸಬಹುದಾಗಿದೆ.[7]

ರಾಜ್ಯಪಾಲನೆಯ ವಿಷಯದಲ್ಲಿಯೂ ಸ್ತ್ರೀಯು ಮಹತ್ವದ ಪಾತ್ರ ವಹಿಸುತ್ತಿದ್ದಳು. ಅವಳು ಸ್ವತಂತ್ರವಾಗಿ ರಾಜ್ಯಸೂತ್ರಗಳನ್ನು ನಿರ್ವಹಿಸಬಲ್ಲವಳಾಗಿದ್ದಳೆಂದು ರಾಮಾಯಣ, ಮಹಾಭಾರತ ಮುಂತಾದ ಕೃತಿಗಳಲ್ಲಿಯ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ. ರಾಮಚಂದ್ರ ವನವಾಸಕ್ಕೆ ಹೊರಡಲು, ಸೀತಾದೇವಿ ರಾಜ್ಯಪಾಲನೆಯ ಕರ್ತವ್ಯಗಳನ್ನು ವಹಿಸಿಕೊಳ್ಳಬೇಕೆಂದು ವಸಿಷ್ಠ ಋಷಿಗಳು ಹೇಳುತ್ತಾರೆ.[8] ಹಾಗೆಯೇ, ಭಾರತಯುದ್ಧದಲ್ಲಿ ಅನೇಕ ಅರಸರು ಮಡಿದಾಗ, ಅವರಿಗೆ ಗಂಡು ಸಂತತಿಯಿಲ್ಲದಿದ್ದರೆ ಹೆಣ್ಣುಮಕ್ಕಳಿಗೇ ಪಟ್ಟಗಟ್ಟೆಂದು ಪಿತಾಮಹ ಭೀಷ್ಮರು ಯುಧಿಷ್ಠಿರನಿಗೆ ಉಪದೇಶ ಮಾಡುತ್ತಾರೆ.[9]

ಆದರೆ ಕಾಲ ಬದಲಾದಂತೆ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನಗಳಲ್ಲಿಯೂ ಬದಲಾವಣೆಗಳಾದವು. ಈ ಬದಲಾವಣೆಗಳಿಂದ ಅವಳು ಪಡೆದಿದ್ದ ಉಚ್ಚ ಸ್ಥಾನಕ್ಕೆ ಚ್ಯುತಿಯುಂಟಾಗಿ ಅವಳ ಸಾಮಾಜಿಕ ಜೀವನಕ್ಕೆ ವ್ಯತ್ಯಯವುಂಟಾಗತೊಡಗಿತು. ವಿದ್ಯಾಭ್ಯಾಸಕ್ಕೆ ಅರ್ಹತೆಯನ್ನು ಕೊಡುತ್ತಿದ್ದ ಉಪನಯನಸಂಸ್ಕಾರ ಕನ್ಯೆಯ ವಿಷಯದಲ್ಲಿ ಕೇವಲ ಔಪಚಾರಿಕವಾಗಿ ಮುಂದೆ ಬರಬರುತ್ತ ನಿಂತೇಹೋಯಿತು. ಇದರ ಪರಿಣಾಮವಾಗಿ ಅವಳಿಗೆ ವಿದ್ಯಾಭ್ಯಾಸ ಮಾಡಲು ಸೌಲಭ್ಯವಿಲ್ಲದಾಯಿತು. ವಿದ್ಯೆಯಿಲ್ಲದುದರಿಂದ ಬಾಲ-ವಿವಾಹ, ತತ್ಪರಿಣಾಮವಾದ ಇನ್ನಿತರ ಅನಿಷ್ಟ ಪ್ರತಿಕ್ರಿಯೆಗಳು ತಲೆದೋರಿದವು. ಇದೇ ರೀತಿಯಾಗಿ ಸಂಸಾರವೆಂದರೆ ದುಃಖಮಯ, ಅದರ ತ್ಯಾಗವೇ ಪರಮ ಶ್ರೇಯಸ್ಕರ ಎಂದು ಮುಂತಾದ ಭಾವನೆಗಳಿಗೆ ಸ್ತ್ರೀ ವಿನಾಕಾರಣ ಬಲಿಯಾದಳು. ಸ್ತ್ರೀಯೆಂದರೆ ಪಾಪಕೂಪ, ಅವಳಿಂದ ದೂರವಿರುವದೇ ಲೇಸು ಎಂಬ ಬೆಳೆಯುತ್ತಿರುವ ಕಲ್ಪನೆಯ ಪರಿಣಾಮವಾಗಿ ಆಕೆ ತಾನು ಪಡೆದಿದ್ದ ಗೌರವಸ್ಥಾನದಿಂದ ಕೆಳಗಿಳಿಯಬೇಕಾಯಿತು. ಭಾರತದಲ್ಲಿ ಮುಸಲ್ಮಾನರ ಆಳಿಕೆಯ ಪ್ರಾರಂಭದಿಂದ ಸ್ತ್ರೀಯ ಪ್ರಪಂಚ ಇನ್ನಷ್ಟು ಸಂಕುಚಿತವಾಯಿತು. ಮೊದಲು ರಾಜಮನೆತನಗಳಲ್ಲಿ ಮಾತ್ರ ರೂಢಿಯಲ್ಲಿದ್ದ ಬುರುಕಿಯ (ಮೋರೆಯ ಮೇಲೆ ಮುಸುಕು ಹಾಕಿಕೊಳ್ಳುವ) ಪದ್ಧತಿ ಈ ಕಾಲದಲ್ಲಿ ಸಾಮಾನ್ಯ ಜನರಲ್ಲಿಯೂ ಹಬ್ಬಿತು.

---

1 ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ । ಯತ್ರೈತಾಸ್ತು ನ ಪೂಜ್ಯತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ಮನುಸ್ಮೃತಿ , ೩, ೫೬.

2 'ನಿತ್ಯಂ ನಿವಸತೇ ಲಕ್ಷ್ಮೀಃ ಕನ್ಯಕಾಸು ಪ್ರತಿಷ್ಠಿತಾ' ಮಹಾಭಾರತ, ೧೩, ೧೧, ೧೪.

3 ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ, ರಕ್ಷಂತಿ ಸ್ಥವಿರೇ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ ಮನು. ೯. ೩.

4 ಅಳತೇಕರ: 'ಹಿಂದೂ ನಾಗರಿಕತೆಯಲ್ಲಿ ಸ್ತ್ರೀಯರ ಸ್ಥಾನ;' ಪುಟ ೧೯೮.

5 ಋಗ್ವೇದ: ೧೦, ೩೯, ೭—ಇದರ ಮೇಲಿನ ಸಾಯಣಾಚಾರ್ಯರ ಭಾಷ್ಯ.

6 ಋಗ್ವೇದ: ೧, ೧೧೬, ೧೫—ಇದರಮೇಲಿನ ಸಾಯಣಾಚಾರ್ಯರ ಭಾಷ್ಯ.

7 ಕಾಮಸೂತ್ರ: ೧, ೩, ೧೬ ಹಾಗೂ ಅದರ ಮೇಲಿನ ಭಾಷ್ಯ.

8 ಆತ್ಮಾಹಿ ದಾರಾ ಸರ್ವೇಷಾಂ ದಾರಸಂಗ್ರಹವರ್ತಿನಾಂ ।
ಆತ್ಮೇಯಮಿತಿ ರಾಮಸ್ಯ ಪಾಲಯಿಷ್ಯತಿ ಮೇದಿನೀಂ ॥
—ರಾಮಾಯಣ; ೨, ೩೭, ೨೪

9 'ಕುಮಾರೋ ನಾಸ್ತಿ ಯೇಷಾಂ ಚ ಕನ್ಯಾಸ್ತತ್ರಾಭಿಷೇಚಯ'
—ಮಹಾಭಾರತ: ೧೨, ೩೨, ೩೩

ತತ್ಪರಿಣಾಮವಾಗಿ ಮಹಿಳೆಯರ ಚಟುವಟಿಕೆಗಳು ತಮ್ಮ ಮನೆಯ ಮಟ್ಟಿಗೆ ಮಾತ್ರ ಪರಿಮಿತವಾಗ ಬೇಕಾಯಿತು.

ಕನ್ನಡ ಮಹಿಳೆಯು ಬೆಳೆದುದೂ ಸುಮಾರು ಇದೇ ಪರಿಸ್ಥಿತಿಯಲ್ಲಿಯೇ. ಆದರೆ ಸುದೈವದಿಂದ ಬುರುಕಿ ಮುಂತಾದ ಅನಿಷ್ಟ ಪದ್ಧತಿಗಳ ಪರಿಣಾಮ ಇವಳ ಮೇಲೆ ಅಷ್ಟೊಂದಾಗಲಿಲ್ಲ ಮತ್ತು ಈಕೆಗೆ ಸಾಮಾಜಿಕ, ರಾಜಕೀಯ ಜೀವನದಲ್ಲಿ ತನ್ನ ಔತ್ತರೀಯ ಸೋದರಿಯರಿಗಿಂತ ಹೆಚ್ಚು ಸ್ವಾತಂತ್ರ್ಯವಿದ್ದಿತು. ಈ ನಾಡಿನಲ್ಲಿ ಎಷ್ಟೋ ಜನ ಅರಸಿಯರು, ಅರಸುಗುವರಿಯರು ಹಾಗೂ ಇನ್ನಿತರ ಮಹಿಳೆಯರು ರಾಜ್ಯದಾಡಳಿತೆಯಲ್ಲಿ ಆಸ್ಥೆ ವಹಿಸುತ್ತಿದ್ದರು. ಇಂಥವರಲ್ಲಿ ಕೆಲವರು ತಮ್ಮ ಗಂಡಂದಿರೊಂದಿಗೆ ಒಟ್ಟಾಗಿ ರಾಜ್ಯಭಾರ ಮಾಡುತ್ತಿದ್ದರೆ, ಇನ್ನು ಕೆಲವರು ಸ್ವತಂತ್ರವಾಗಿಯೇ ರಾಜ್ಯಸೂತ್ರಗಳನ್ನು ನಿರ್ವಹಿಸುತ್ತಿದ್ದರು. ಇಂಥ ಉದಾಹರಣೆಗಳು ಉತ್ತರ ಭಾರತದ ಇತಿಹಾಸದಲ್ಲಿ ಕಂಡು ಬರುವದಿಲ್ಲವೆಂತಲ್ಲ, ಆದರೆ ಅವು ವಿರಳ. ಕನ್ನಡ ನಾಡಿನ ಶಾಸನಗಳನ್ನವಲೋಕಿಸಿದಾಗ, ರಾಜ್ಯದ ಬೇರೆ ಬೇರೆ ಪ್ರದೇಶಗಳ ಮೇಲೆ ಆಧಿಪತ್ಯ ನಡೆಸುತ್ತಿದ್ದ ಇಂಥ ಅನೇಕ ನಾರಿಯರ ಹೆಸರುಗಳು, ವರ್ಣನೆಗಳು ನಮಗೆ ದೊರೆಯುತ್ತವೆ. ಹೀಗೆ ಸಾರ್ವಜನಿಕ ಜೀವನದಲ್ಲಿ ಭಾಗವಹಿಸಿ, ದೇಶರಕ್ಷಣೆಯಂಥ ಹೊಣೆಗಾರಿಕೆಯನ್ನು ಹೊತ್ತು, ಜಾಣ್ಮೆಯಿಂದ, ಸ್ತ್ರೀಹೃದಯಕ್ಕನುಗುಣವಾದ ದಯೆ, ಅನುಕಂಪ, ಔದಾರ್ಯಗಳಿಂದ, ಸ್ತ್ರೀತ್ವಕ್ಕನುರೂಪವಾದ ಬೆಡಗಿನಿಂದ ನಾಡನಾಳಿದ ಕೆಲವು ನಾರಿಯರ ಶಬ್ದಚಿತ್ರಗಳನ್ನಿಲ್ಲಿ ಕೊಡಲು ಯತ್ನಿಸಿದೆ.

೨

## ಮೈಳಲದೇವಿ

ಮೈಳಲದೇವಿ, ೧೧ನೆಯ ಶತಮಾನದ ಓರ್ವ ಪ್ರತಿಭಾವಂತ ಮಹಿಳೆ. ಕಲ್ಯಾಣದ ಚಾಲುಕ್ಯ ವಂಶದ ತ್ರೈಲೋಕ್ಯಮಲ್ಲ ೧ನೆಯ ಸೋಮೇಶ್ವರನ ಹಿರಿಯರಸಿ. ಚೋಳರಾಜರೊಂದಿಗೆ ಅನೇಕ ಯುದ್ಧಗಳನ್ನೆಸಗಿ ವಿಜಯಿಯಾದ ಧೀರನೀತ — ಸೋಮೇಶ್ವರ. ಇವನ ಮಗನಾದ ಆರ್ಮಡಿ ವಿಕ್ರಮಾದಿತ್ಯನ ಆಶ್ರಿತ ಕವಿಯಾದ ಕಾಶ್ಮೀರ ದೇಶದ ಬಿಲ್ಹಣನ ಹೇಳಿಕೆಯಂತೆ,[10] ಕಲ್ಯಾಣ ಪಟ್ಟಣವು ರಾಜಧಾನಿಯೆಂದು ಖ್ಯಾತಿವೆತ್ತುದು ಈ ಸೋಮೇಶ್ವರನಿಂದಲೇ.[11]

ಮೈಳಲದೇವಿ ಬನವಾಸಿ ಪನ್ನಿರ್ಚ್ಛಾಸಿರವೆಂಬ ಹನ್ನೆರಡು ಸಾವಿರ ಊರುಗಳನ್ನೊಳಗೊಂಡ ವಿಶಾಲವಾದ ಪ್ರಾಂತವನ್ನಾಳುತ್ತಿದ್ದಳೆಂದು[12] ಕ್ರಿ. ಶ. ೧೦೫೩ನೆಯ ವರ್ಷದ ಒಂದು ಶಾಸನದಿಂದ ತಿಳಿದುಬರುತ್ತದೆ. ಈ ಪ್ರಾಂತದ ಆಧಿಪತ್ಯ ಬಹು ಹೊಣೆಗಾರಿಕೆಯುದಾಗಿದ್ದಿತು ಮತ್ತು ಅರಸನ ಪ್ರಮುಖ ಮಾಂಡಲಿಕರಷ್ಟೇ ಇದರ ಆಳಿಕೆಯನ್ನು ನಿರ್ವಹಿಸುತ್ತಿದ್ದರು. ಇದರಲ್ಲಿ ಇಂದಿನ ಧಾರವಾಡ ಜಿಲ್ಹೆ, ಕಾರವಾರ ಹಾಗೂ ಶಿವಮೊಗ್ಗೆ ಜಿಲ್ಹೆಗಳ ಕೆಲವು ಭಾಗಗಳು ಇದ್ದ ಪ್ರದೇಶವು ಸೇರಿದ್ದಿತು. ಇಂಥ ಮಹತ್ವದ ಸ್ಥಳಕ್ಕೆ ಮೈಳಲದೇವಿಯು ನಿಯಮಿಸಲ್ಪಟ್ಟುದು ಇವಳ ಯೋಗ್ಯತೆಗೆ ಸಾಕ್ಷಿಯಾಗಿದೆ. "ಅಂತಃಪುರ ಮುಖಮಂಡನೆ" ಯಾದ ಈಕೆ 'ಸವತಿಮದಭಂಜನೆ' ಯೆಂದು ಕರೆಯಲ್ಪಟ್ಟಿದ್ದಾಳೆ! ಬಹುಶಃ ಅರಸನ ಇತರ ರಾಣಿಯರ ಮೇಲೂ ಇವಳ ಅಧಿಕಾರ ನಡೆಯುತ್ತಿದ್ದಿರಬೇಕು. "ದಾನಚಿಂತಾಮಣಿ" ಯೆಂಬ ಇವಳ ಬಿರುದು ಸಾರ್ಥಕವಾದುದೆಂದು ಮೇಲೆ ಉಲ್ಲಿಖಿತವಾದ ಶಾಸನದಿಂದ ಸ್ಪಷ್ಟವಾಗುತ್ತದೆ. ಇವಳ ಅಧೀನರಾದ ಕೆಲವು ಅಧಿಕಾರಿಗಳು, ಈಕೆಯ ಹೇಳಿಕೆಯಂತೆ, ಚಿಲ್ಲುಕಾಚಾರ್ಯರೆಂಬ ಶೈವಗುರುಗಳಿಗೆ ಭೂಮಿಯನ್ನು ದಾನಮಾಡಿದ ವಿಷಯ ಆದರಲ್ಲಿ ಬರುತ್ತದೆ. ತಿಳವಳ್ಳಿಯಲ್ಲಿಯ ಇವಳ ಇನ್ನೊಂದು ಶಾಸನದಲ್ಲಿ[13] ಚಟ್ಟಮಯ್ಯನೆಂಬ ಇನ್ನೊಬ್ಬ ಅಧಿಕಾರಿಯ ಉಲ್ಲೇಖವಿದೆ. ಆದರೆ ಈ ಶಾಸನದ ಕೆಳಭಾಗ ಒಡೆದು ಹೋಗಿದ್ದುದರಿಂದ ಹೆಚ್ಚಿನ ವಿವರಗಳು ತಿಳಿಯುವದಿಲ್ಲ.

## ಕೇತಲದೇವಿ

ಕೇತಲದೇವಿ, ೧ ನೆಯ ಸೋಮೇಶ್ವರನ ಇನ್ನೋರ್ವ ಅರಸಿ. ಅಗ್ರಹಾರ ಪೊನ್ನವಾಡ ಇವಳ ಅಧಿಪತ್ಯದಲ್ಲಿದ್ದಿತೆಂದು ವಿಜಾಪುರ ಜಿಲ್ಹೆಯಲ್ಲಿಯ ಹೊನ್ನವಾಡದಲ್ಲಿ ದೊರೆತ ಕ್ರಿ. ಶ. ೧೦೫೪ರ ಶಾಸನದಲ್ಲಿ ಹೇಳಿದೆ.[14] ತರ್ದವಾಡಿ ಸಾಯಿರವೆಂಬ ಪ್ರಾಂತದಲ್ಲಿ ಬಾಗೆ ಅಯ್ವತ್ತು ವಿಭಾಗದಲ್ಲಿ ಈ ನಗರವಿದ್ದಿತು. ವಿದ್ಯಾಕೇಂದ್ರವಾದುದರಿಂದ ಅಗ್ರಹಾರವೆನಿಸಿಕೊಂಡು ಐಶ್ವರ್ಯದಿಂದ ಮೆರೆದ ಊರು ಹೊನ್ನಿನಬೀಡು ಎಂದು ಹೆಸರಾ

10 'ಚಕಾರ ಕಲ್ಯಾಣಮಿತಿ ಕ್ರಮಾದಸೌ ಪುರಂ ಪರಾರ್ಧ್ಯಂ ಪೃಥಿವೀ ಪುರಂದರಃ॥ ವಿಕ್ರಮಾಂಕ ದೇವ ಚರಿತಂ. ೨; ೧.

11 ಇವನ ಹಿಂದಿನವನಾದ ಜಯಸಿಂಹನ ಆಳಿಕೆಯ ಉತ್ತರಾರ್ಧದಲ್ಲಿಯೇ ಕಲ್ಯಾಣವು ಚಾಳುಕ್ಯರ ರಾಜಧಾನಿಯಾಗಿದ್ದಿತೆಂದು ಶ್ರೀ ಪಿ. ಬಿ. ದೇಸಾಯಿ ಇವರು ಅಭಿಪ್ರಾಯಪಡುತ್ತಾರೆ.

12 Annual Report on South Indian Epigraphy, 1932-33 App. D. No. 72.

13 Epigraphia Indica Vol. XVI P. 338.

14 Indian Antiquery Vol. XIX; P. 270.

ಅನ್ಯೋನ್ಯ ಪ್ರೇಮ



ಗಿದ್ದಿರಬೇಕು. ಎಂತಲೇ ಇದಕ್ಕೆ ಪೊನ್ನವಾಡವೆಂಬ ಹೆಸರು ಬಂದಿತು. ಕೇತಲದೇವಿ ಈ ಊರಿನ ಆಡಳಿತವನ್ನು ದೀರ್ಘಕಾಲದ ವರೆಗೆ ನಡೆಯಿಸುತ್ತಿದ್ದಳೆಂಬುದು ಇದೇ ಊರಿನ ಕ್ರಿ. ಶ. ೧೦೬೨ರ ಇನ್ನೊಂದು ಶಾಸನದಿಂದ[15] ಕಂಡು ಬರುತ್ತದೆ.

ಕೇತಲದೇವಿ ಸೌಂದರ್ಯದ ಖನಿ, ರೂಪು, ವಿದ್ಯೆ, ಔದಾರ್ಯಗಳ ತವರು. 'ದ್ವಿತೀಯ ಲಕ್ಷ್ಮಿ', 'ಸುಜನೋಪಕಾರಿಣಿ', 'ಸರಸ್ವತೀ ಕರ್ಣಾವತಂಸೆ', 'ರೂಪ ವಿದ್ಯಾಧರಿ' ಎಂದು ಮುಂತಾಗಿ ಶಾಸನಗಳು ಇವಳನ್ನು ಹಾಡಿಹೊಗಳಿವೆ. ಮೈಳಲದೇವಿ 'ಪಿರಿಯರಸಿ' ಯಾಗಿದ್ದರೂ ಅರಸನ ಮೆಚ್ಚಿನ ಮಡದಿ, ಕೇತಲದೇವಿ ಆತನ 'ಮನಸ್ಸರೋಜರಾಜಹಂಸೆ'.

ಕೇತಲದೇವಿ ವಿಶಾಲ ಮನಸ್ಸಿನವಳು. ಧರ್ಮ-ವಿಷಯಗಳಲ್ಲಿ ನಿಷ್ಪಕ್ಷಪಾತಿ. ಶೈವ, ಜೈನಮತಗಳೆರಡೂ ಇವಳಿಂದ ಸಮಾನ ಆಶ್ರಯಪಡೆದವು. ಸಿದ್ಧೇಶ್ವರದೇವರಪೂಜೆಗೆಂದು ಭೂಮಿ, ಎಣ್ಣೆಯ ಗಾಣ ಮೊದಲಾದವುಗಳನ್ನು ತಾನು ದಾನವಿತ್ತರೆ ಚಂಕಿಮಯ್ಯನೆಂಬ ತನ್ನ ಅಧಿಕಾರಿಯೋರ್ವನು ನಿರ್ಮಿಸಿದ ಜೈನ ಚೈತ್ಯಾಲಯಕ್ಕೆ ತನ್ನ ಪತಿಯಿಂದ ದತ್ತಿಯನ್ನು ಕೊಡಿಸಿದ್ದಳು.

## ಕಂಚಲಮಹಾದೇವಿ

೧ನೆಯ ಸೋಮೇಶ್ವರನ ತರುವಾಯ ಅವನ ಮಗ ಭುವನೈಕಮಲ್ಲ ಇಮ್ಮಡಿ ಸೋಮೇಶ್ವರ ಪಟ್ಟಕ್ಕೆ ಬಂದ. ಕಂಚಲಮಹಾದೇವಿ ಈ ಸೋಮೇಶ್ವರನ ರಾಣಿ. ಇವನ ಆಡಳಿತೆ ಸುಗಮವಾಗಿ ಸಾಗಲಿಲ್ಲ. ಮಹತ್ವಾಕಾಂಕ್ಷಿಯಾದ ಇವನ ತಮ್ಮ ಆರ್ಮಡಿ ವಿಕ್ರಮಾದಿತ್ಯ ಇವನಿಂದ ರಾಜ್ಯವನ್ನು ಕಸಿದುಕೊಳ್ಳಲು ಪ್ರಯತ್ನಿಸತೊಡಗಿದ ಈ ಉದ್ದೇಶಸಾಧನೆಗಾಗಿ ಚೋಳರಾಜನ ಕುಮಾರಿಯನ್ನು ವರಿಸಿ,ಆ ಅರಸನ ಸಹಾಯವನ್ನೂ ಪಡೆದ. ಮೊದಮೊದಲು ವಿಕ್ರಮಾದಿತ್ಯನಿಗೆ ಸೋಲುಂಟಾದರೂ ಕೊನೆಗೊಮ್ಮೆ ಅಣ್ಣನನ್ನು ಪಟ್ಟದಿಂದ ತಳ್ಳಿಯೇ ಬಿಟ್ಟ.

ಕಂಚಲಮಹಾದೇವಿ ಮುಳಗುಂದವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುತ್ತಲಿನ ಪ್ರದೇಶವನ್ನೆಲ್ಲ ಆಳುತ್ತಿದ್ದಳು ಎಂದು ಗುಡಿಗೇರಿಯ ಶಾಸನವೊಂದು[16] ಹೇಳುತ್ತದೆ. ಈ ಗುಡಿಗೇ-ರಿಯೂ (ಆಗ ಇದನ್ನು ಗುಡಿಗೆರೆ, ಧ್ವಜತಟಾಕ, ಎಂದು ಕರೆಯುತ್ತಿದ್ದರು) ಈ ಪ್ರದೇಶದಲ್ಲಿ ಸೇರಿದ್ದಿತು. ಈ ಶಾಸನದಲ್ಲಿ ಬರುವ ಇವಳ ಬಿರುದುಗಳು ಇವಳ, ಬಹುಮುಖವ್ಯಕ್ತಿತ್ವವನ್ನು ಚಿತ್ರಿಸುತ್ತವೆ. 'ರೂಪಲಾವಣ್ಯವಿಲಾಸ ವಿಭ್ರಮಾಭಾಸಿ' ಯಾದ ಇವಳು 'ಸಕಳಕಳಾಧರೆ'ಯಾಗಿದ್ದಳು. ದಾನ ಧರ್ಮಾದಿಕಾರ್ಯಗಳಲ್ಲಿ ಇವಳಿಗೆ ಅಸ್ಥೆ ಹೆಚ್ಚು— ಎಂತಲೇ ಇವಳು 'ನಿತ್ಯಪ್ರವರ್ತಿಸಿ' ದಯದಾನಧರ್ಮೋದ್ಯೋಗಿನಿ!

ಗುಡಿಗೆರೆಯನ್ನು ಜೈನ ಆಚಾರ್ಯರಾದ ನಂದಿಪಂಡಿತದೇವರೆಂಬವರಿಗೆ ದಾನ ಮಾಡಿದ ಸನ್ನಿವೇಶ ಈ ಶಾಸನದಲ್ಲಿ ಸುಂದರವಾಗಿ ಚಿತ್ರಿತವಾಗಿದೆ. ಅರಸು, ಅರಸಿ, ದಂಡನಾಯಕರಾದ ರುದ್ರಭಟ್ಟೋಪಾಧ್ಯಾಯರು, ಈಶ್ವರ ಭಟ್ಟೋಪಾಧ್ಯಾಯರು ಮತ್ತು ಇನ್ನಿತರ ಅಧಿಕಾರಿ ವರ್ಗದವರು ನೆರೆದ ಸಭೆಯಲ್ಲಿ ಊರು ದಾನವಾಗಿ ಕೊಡಲ್ಪಡುತ್ತಿದೆ. ಈ ಊರು ಭಾಸ್ಕರ ಭಟ್ಟೋಪಾಧ್ಯಾಯರೆಂಬ ಇನ್ನೊಬ್ಬ ದಂಡನಾಯಕರ ಅಧಿಕಾರಕ್ಕೆ ಸೇರಿದುದರಿಂದ ಈ ದಾನಕ್ಕೆ ಅವರ ಸಮ್ಮತಿಯೂ ಅವಶ್ಯ. ಉತ್ತರ ದಿಗ್ವಿಜಯದಿಂದ ಆದೇ ಮರಳಿ ಬಂದ ಭಾಸ್ಕರಭಟ್ಟೋಪಾಧ್ಯಾಯರು 'ಹಸ್ತೋದಕಂ ಮಾಡಿ' ಸಮ್ಮತಿಯನ್ನು ನೀಡುತ್ತಾರೆ. ಈ ಊರು, ಹಿಂದೆ, ಅರಸನ ಪೂರ್ವಜಳಾದ ಕುಂಕುಮಮಹಾದೇವಿ ಕಟ್ಟಿಸಿದ 'ಆನೆಸೆಜ್ಜೆಯ ಬಸದಿ'ಯ ದತ್ತಿಗೆ ಸೇರಿದ್ದು. ಎಂತಲೇ ಈಗ ಮಾಡಿದ ದಾನ 'ಪುನರ್ದತ್ತಿ' ಎಂದು ಹೇಳಲಾಗಿದೆ.

## ಲಕ್ಷ್ಮೀದೇವಿ

ಚಾಲುಕ್ಯವಂಶ ಕೀರ್ತಿಶಿಖರವನ್ನೇರಿದುದು

---

15 A. R. S. I,, 1933-34, App. E, No. 169.

16. A. S. R. I., 1938-39, App. E, No. 110.

ತ್ರಿಭುವನಮಲ್ಲ (ಆರ್ಮಡಿ), ವಿಕ್ರಮಾದಿತ್ಯನ ಕಾಲದಲ್ಲಿ. ಇವನ ಕಾಲದಲ್ಲಿ ಚಾಲುಕ್ಯರಾಜ್ಯ ದಕ್ಷಿಣೋತ್ತರಗಳೆರಡರಲ್ಲಿಯೂ ವಿಸ್ತೃತವಾಗಿತು. ಚಾಲುಕ್ಯ ವಿಕ್ರಮಪುರುಷನೆಂದು ತನ್ನದೇ ಆದ ಶಕವನ್ನು ಪ್ರಾರಂಭಿಸಿದ ಶಕಪುರುಷನೀತ. ಇವನ ಮಹಿಷಿಯರ ಸಂಖ್ಯೆ ಎಂಟಕ್ಕೂ ಮಿಕ್ಕಿದ್ದಿತು. ಅವರಲ್ಲಿ ಹಿರಿಯಳು ಲಕ್ಷ್ಮೀದೇವಿ.

ಲಕ್ಷ್ಮೀದೇವಿ ಬೇರೆ ಬೇರೆ ಕಾಲಗಳಲ್ಲಿ ರಾಜ್ಯದ ಬೇರೆ ಬೇರೆ ಭಾಗಗಳನ್ನಾಳುತ್ತಿದ್ದಳು. ಕ್ರಿ. ಶ. ೧೦೭೦ ರಲ್ಲಿ ದ್ರೋಣಪುರ (ಇಂದಿನ ದೋಣಿ, ವಿಜಾಪುರ ಜಿಲ್ಲೆ) ವನ್ನಾಳುತ್ತಿದ್ದಳು.[17] ೧೦೭೭ರಲ್ಲಿ ಚಾಲುಕ್ಯ ರಾಜಧಾನಿ ಕಲ್ಯಾಣದಿಂದ ರಾಜ್ಯಭಾರ ಮಾಡುತ್ತಿದ್ದಳು.[18] ೧೦೯೫-೯೬ ರಲ್ಲಿ ಧರ್ಮಪುರ (ಈಗಿನ ಡಂಬಳ, ಧಾರವಾಡ ಜಿಲ್ಲೆ) ಮತ್ತಿತರ 'ಪದಿನೆಂಟಗ್ರಹಾರ'ಗಳ ಅಧಿಪತಿಯಾಗಿದ್ದಳು ಮತ್ತು ೧೧೧೦-೧೧ರಲ್ಲಿ ನಿಟ್ಟಸಂಗಿಯೆಂಬ ಪಟ್ಟಣದ ಒಡೆತನ ಇವಳದಾಗಿದ್ದಿತು.[19] 'ಸಲ್ಲಲಿತಗಾತ್ರೆ' ಯೆಂದು ಹೆಸರಾದ ಈ 'ಸಕಳ ಕಳಾಕಳಾಪಲೀಲಾಧರೆ', 'ದಾನಚಿಂತಾಮಣಿ' ಯೂ ಆಗಿದ್ದಳು. ದೋಣಿಯ ಶಾಸನವೊಂದರಲ್ಲಿಯ ಇವಳ ವರ್ಣನೆಯಿದು.

ಯುವತೀಮುಖತಿಳಕಂ ಲೋ-
ಲವಿಲೋಚನೆ ಸವತಿಗಂಧ ಹಸ್ತಿ ಮಹಾ ದಾ-।
ನ ವಿನೋದೆಯೆನಿಸಿ ನೆಗಳ್ದಳ್
ಭುವನದೊಳ್ ಪುರಾಣಲಕ್ಷ್ಮಿ ಲಕ್ಷ್ಮೀದೇವಿ॥

ಸೂಡಿಯ ಶಾಸನವೊಂದರಲ್ಲಿ, ಇವಳು ಅಲ್ಲಿಯ ಅಚಲೇಶ್ವರ ದೇವಾಲಯದ ಆಚಾರ್ಯರಾದ ಸೋಮನಾಥ ಪಂಡಿತರಿಗೆ ಗ್ರಾಮವೊಂದನ್ನು ದಾನವಾಗಿ ಬಿಟ್ಟ ವಿಷಯವನ್ನು ಹೇಳಿದೆ. ಈ ದಾನದ ಉದ್ದೇಶ, ದೇವತಾಪೂಜೆ, ತಪೋಧನರಿಗೆ ಅನ್ನದಾನ, ವಿದ್ಯಾದಾನ ಇವು ಅವ್ಯಾಹತವಾಗಿ ಸಾಗಲೆಂಬುದು.

## ಪಿರಿಯ ಕೇತಲದೇವಿ

ವಿಕ್ರಮಾದಿತ್ಯನ ಇನ್ನೊಬ್ಬ ಮಹಿಷಿ ಪಿರಿಯ ಕೇತಲದೇವಿ. ಇವಳ 'ಪಿರಿಯ' ಎಂಬ ಅಭಿಧಾನದಿಂದ ವಿಕ್ರಮಾದಿತ್ಯನಿಗೆ 'ಕಿರಿಯ' ಕೇತಲದೇವಿಯೆಂಬ ಇನ್ನೊಬ್ಬ ರಾಣಿಯಿದ್ದಳೇನೋ ಎಂದು ತೋರುತ್ತದೆ. ಆದರೆ ಇಂಥ ಹೆಸರು ಇಲ್ಲಿಯ ವರೆಗಂತೂ ದೊರೆತಿಲ್ಲ. ಕ್ರಿ. ಶ. ೧೦೯೧ ರಲ್ಲಿ ಸಿರಿಗುಪ್ಪೆಯೆಂಬ[20] ಗ್ರಾಮವನ್ನು ಭತ್ತಗ್ರಾಮವಾಗಿ ಆಳುತ್ತಿದ್ದಳು.[21] ಸಿರಿಗುಪ್ಪೆ ಬಲ್ಲಕುಂದೆ ಮೂನೂರರಲ್ಲಿಯ ತಕ್ಕಲೆ ಹನ್ನೆರಡು ಎಂಬ ವಿಭಾಗದಲ್ಲಿಯ ಒಂದು ಊರು.

ಲಕ್ಷ್ಮೀದೇವಿಯಂತೆ ಕೇತಲದೇವಿಯೂ 'ಸಕಳ ಕಳಾಧರೆ', 'ಸಂಗೀತವಿದ್ಯಾಧರಿ' ಯೆಂಬುದು ಇವಳ ವಿಶಿಷ್ಟವಾದ ಬಿರುದು. ಸಂಗೀತದಲ್ಲಿ ಇವಳಿಗೆ ಆಸ್ಥೆ ಬಹಳ. ಎಂತಲೇ, ದೇವತಾರ್ಚನೆಗೆ ಭೂಮಿಯನ್ನು ದತ್ತಿಬಿಡುವಕಾಲದಲ್ಲಿ 'ಪಾತ್ರಕ್ಕಂ ಪಾಡುವರ್ಗ್ಗಂ' ಸಹ ದಾನಮಾಡಿದಳು.[22] 'ಅಭಿನವ ಸರಸ್ವತಿ' ಎಂಬ ಬಿರುದು ಇವಳ ವಿದ್ಯಾವಂತಿಕೆಗೆ ಸಾಕ್ಷಿಯಾಗಿದೆ. ಸಿರುಗೆಪ್ಪೆಯ ಶಾಸನದಲ್ಲಿ, ಇವಳ ಕೈಕೆಳಗಿನ ಅಧಿಕಾರಿಯಾದ, ಸಿಂದವಂಶದ ಚಿಕ್ಕರಸನೂ ದೇವರಿಗೆ ಕೆಲವು ದಾನಗಳನ್ನು ಮಾಡಿದನೆಂದು ಹೇಳಿದೆ.

## ಪದ್ಮಲದೇವಿ

ಪದ್ಮಲದೇವಿಯೂ ವಿಕ್ರಮಾದಿತ್ಯನ ರಾಣಿಯರಲ್ಲೊಬ್ಬಳು. ಕ್ರಿ.ಶ. ೧೧೧೬ರಲ್ಲಿ ಇವಳು ಮಾಂಗೊಳವೆಂಬ ಅಗ್ರಹಾರದ ಅಧಿಪತಿಯಾಗಿದ್ದಳು. ಈ ಅಗ್ರಹಾರವು ತುಂಗಭದ್ರೆಯ ದಕ್ಷಿಣತೀರದಲ್ಲಿದ್ದಿತು.[23] ಪದ್ಮಲದೇವಿಗೆ ರೂಪದಲ್ಲಿ ಸರಿದೊರೆ ಯಾರಿರಲಿಲ್ಲ. ಇನ್ನುಳಿದ ಅರಸಿಯರಂತೆ ಈಕೆಯೂ ಸಕಲಕಲೆಗಳಲ್ಲಿ ಪರಿಣತಿಯನ್ನು ಪಡೆದಿದ್ದಳು. ದಾನಾದಿಕಾರ್ಯಗಳಲ್ಲಿ ತೊಡಗಿರುತ್ತಿದ್ದರಿಂದ 'ದಾನವಿನೋದೆ' ಎಂದು ಹೆಸರಾಗಿದ್ದಳು. 'ಅಭಿನವ ಸರಸ್ವತಿ' ಎಂಬ ಬಿರುದು ಈಕೆಗೂ ಇದ್ದಿತು.

ಮಾಂಗೊಳದ ಮಹಾಜನರು ಅಲ್ಲಿಯ ನರಸಿಂಹದೇವರ ಪೂಜೆಗೆಂದು ಕೆಲವು ದತ್ತಿಗಳನ್ನು ಕೊಡಬೇಕೆಂದು ಪದ್ಮಲದೇವಿಯನ್ನು ಬಿನ್ನವಿಸಲು ಅವಳು ಅದಕ್ಕೊಪ್ಪಿ ಕೆಲವು ಭೂಮಿಗಳನ್ನು ದಾನವಾಗಿತ್ತಳು ಮತ್ತು ಅವಳ ಕೈಕೆಳಗಿನ ಅಧಿಕಾರಿಯಾದ ಪುಳಿನೆಯ ನಾಯಕನೆಂಬವನು ಆ ದಾನಭೂಮಿಗಳನ್ನು ಮಹಾಜನರಿಗೊಪ್ಪಿಸಿದನು ಎಂಬ ಅಂಶವು ಮೇಲೆ ಉಲ್ಲಿಖಿತವಾದ ರಂಗಾಪುರಂ ಶಾಸನದಿಂದ ವಿದಿತವಾಗುತ್ತದೆ.

ಮೇಲೆ ಹೇಳಿದಂತೆ, ರಾಜಕಾರ್ಯದಲ್ಲಿ ಭಾಗವಹಿಸುತ್ತಿದ್ದವರು ಕೇವಲ ಅರಸಿಯರಷ್ಟೇ ಅಲ್ಲ ಅರಸುಗುವರಿಯರು, ಅಧಿಕಾರಿಗಳ ಹೆಂಡಂದಿರು ಇಂಥವರೂ ಈ ಹೊಣೆಯನ್ನು ಹೊರುತ್ತಿದ್ದರು. ಈ ಕೆಳಗಿನವರು ಇಂಥವರಲ್ಲಿ ಕೆಲವರು.

## ರೇವಕನಿಮ್ಮಡಿ

ರೇವಕನಿಮ್ಮಡಿ ರಾಷ್ಟ್ರಕೂಟವಂಶದ ೧ನೆಯ ಅಮೋಘವರ್ಷನ ಮಗಳು ಇವಳು ಕ್ರಿ. ಶ. ೮೩೭ ರಲ್ಲಿ ಎಡೆದೊರೆ ನಾಡನ್ನು ಆಳುತ್ತಿದ್ದಳೆಂದು ಹುನಗುಂದ ತಾಲೂಕಿನ ಕೇಸರಭಾವಿಯಲ್ಲಿ ದೊರೆತ ಶಾಸನವೊಂದರಿಂದ ತಿಳಿದುಬರುತ್ತದೆ.[24] ಕೃಷ್ಣಾ, ತುಂಗಭದ್ರಾ ನದಿಗಳ ನಡುವಿನ, ರಾಯಚೂರು ಜಿಲ್ಲೆಯ ಪ್ರದೇಶವೇ ಎಡೆದೊರೆನಾಡು ಎಂದು ಸಾಮಾನ್ಯವಾಗಿ ಗ್ರಹಿಸಲಾಗಿದೆ.

ರಾಜಕುಮಾರಿ ರೇವಕನಿಮ್ಮಡಿಯ ಪತಿ ಎರೆಗಂಗ. ಹೆಸರಿನ ಮೇಲಿಂದ ಇವರು ಗಂಗಮನೆತನಕ್ಕೆ ಸೇರಿದವನೆಂದು ಹೇಳಬಹುದಾದರೂ ಇವನು ಯಾವ ಗಂಗ ಎಂದು ನಿಶ್ಚಿತವಾಗಿ ಹೇಳುವದು ಕಠಿಣವಾಗುತ್ತದೆ. ಇವಳ ಸಹೋದರಿಯಾದ ಚಂದ್ರೋಬ್ಬಲಬ್ಬೆಯನ್ನು ಗಂಗವಂಶಜನಾದ ಗುಣದುತ್ತರಂಗ ಬೂತುಗನಿಗೆ ಕೊಟ್ಟಿತ್ತೆಂದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ[25] ರಾಷ್ಟ್ರಕೂಟ ಮತ್ತು ಗಂಗವಂಶದವರಲ್ಲಿ ವೈವಾಹಿಕ ಸಂಬಂಧ ಬಹುಕಾಲದವರೆಗೆ ಇದ್ದಿತೆಂದು ತೋರುತ್ತದೆ. ರಾಷ್ಟ್ರಕೂಟ ಮನೆತನದ ಇನ್ನೊಬ್ಬ ರೇವಕನಿಮ್ಮಡಿ-ಮುಮ್ಮಡಿ ಅಮೋಘ ವರ್ಷನ

17 South Indian Inscriptions, Vol. XI, Pt. II, Pp. 145 ft.

18 Epigraphia Indica, Vol. XV, Pp. 100 ft.

19 Bombay Gazetteer, Vol. I, Pt. II, Pp.

20 S. I. I., Vol. IX, Pt. I, Pp. 145.

21 'ಭತ್ತಗ್ರಾಮ'ವೆಂದರೆ 'ಸ್ವಂತ ಆಸ್ತಿ'; 'ಭತ್ತ'ವೆಂಬ ಪದವು 'ಭಜ' ಎಂಬ ಸಂಸ್ಕೃತ ಧಾತುವಿನಿಂದಾಗಿರಬೇಕೆಂದು (ಶ್ರೀ ಪಿ. ಬಿ. ದೇಸಾಯಿಯವರ) ಅಭಿಪ್ರಾಯ.

22 S. I. I. Vol. IX Pt. I. P. 146 Line 16.

23 ಅದೇ ಪು. ೧೮೪ ft.

24 S. I. I. Vol. XI. Pt. I. P. 4.

25 ಅದೇ ಪ್ರಸ್ತಾವನೆ ಪುಟ ೪.




" ಮೂವರೂ ಕೂಡಿಯೇ ಮಲಗೋಣ "

ಮಗಳು ಮತ್ತು ಮುಮ್ಮಡಿ ಕೃಷ್ಣನ ಅಕ್ಕ ಸಹ ಗಂಗರ ಇಮ್ಮಡಿ ಬೂತುಗನನ್ನೂ ಮದುವೆ ಯಾಗಿದ್ದಳು.[26]

ಕೇಸರಭಾವಿಯ ಶಾಸನದಲ್ಲಿ ಈ ಅರಸುಗುದಿಯ ಅಧೀನನಾದ ಅಧಿಕಾರಿಯೋರ್ವನ ಉಲ್ಲೇಖವಿದೆ. ಆದರೆ ಈ ಶಾಸನದ ಬಹುಭಾಗ ನಡೆಸಿಹೋದುದರಿಂದ ಅದರಲ್ಲಿಯ ವಿವರಗಳು ತಿಳಿದು ಬರದಂತಾಗಿವೆ.

### ಮಹಾದೇವಿ

ಮಹಾದೇವಿ, ಕಲ್ಯಾಣದ ಚಾಲುಕ್ಯಮನೆತನದ ಇರಿವಬೆಡಂಗ ಸತ್ಯಾಶ್ರಯನ ಮಗಳು. ಸತ್ಯಾಶ್ರಯ, ಆಹವಮಲ್ಲ ತೈಲಪ (ಇಮ್ಮಡಿ ತೈಲ) ನಮಗ. ತನ್ನ ಪೂರ್ವಜರಿಂದ ರಾಷ್ಟ್ರಕೂಟರು ಕಸಿದುಕೊಂಡ ರಾಜ್ಯವನ್ನು ಮರಳಿ ಪಡೆದು ಚಾಲುಕ್ಯ ಸಾಮ್ರಾಜ್ಯ ಲಕ್ಷ್ಮಿಯನ್ನು ಪುನಃ ಪ್ರತಿಷ್ಠಾಪಿಸಿದ ಕೀರ್ತಿ ಈ ತೈಲನದು.

'ಸತ್ತಿಗನಣುಗಿ' ಮಹಾದೇವಿ 'ಮರವೊಳಲ್' ಎಂಬ ಪಟ್ಟಣವನ್ನಾಳುತ್ತಿದ್ದಳೆಂದು ವಿಜಾಪುರ ಜಿಲ್ಹೆಯಲ್ಲಿಯ 'ಮರೋಳ' ಎಂಬ ಗ್ರಾಮದಲ್ಲಿ ದೊರೆತ ಶಾಸನವೊಂದರಿಂದ ಗೊತ್ತಾಗುತ್ತದೆ.[27] ಈ ಶಾಸನದ ಕಾಲ ಕ್ರಿ. ಶ. ೧೦೨೪. ಈ ಮರೋಳವೇ ಹಿಂದಿನ ಮರವೊಳಲ್ ಈ ಶಾಸನದಲ್ಲಿ, ನೊಳಂಬವಾಡಿ ಮತ್ತು ಕರಿವಿಡಿ ಮೂವತ್ತು ಎಂಬ ಪ್ರಾಂತಗಳ ಅಧಿಪತಿಯಾದ, ನೊಳಂಬವಂಶದ ಘಟಿಯುಂಕಕಾರ ಎಂಬ ಮಾಂಡಲಿಕನೊಬ್ಬನ ಉಲ್ಲೇಖವಿದೆ. ಈ ಘಟಿಯುಂಕಕಾರ ಮಹಾದೇವಿಯ ಪತಿಯಾಗಿರಲು ಸಾಕು. ಯಾಕೆಂದರೆ ಮುಂಡರಗಿ ಪೇಠಾದಲ್ಲಿಯ ಆಲೂರು ಎಂಬಲ್ಲಿಯ ಶಾಸನವೊಂದರಲ್ಲಿ[28] ಇರಿವಬೆಡಂಗ ಸತ್ಯಾಶ್ರಯನು ತನ್ನ ಮಗಳನ್ನು ಇರಿವ-ನೊಳಂಬಾಧಿರಾಜ ಘಟಿಯುಂಕಕಾರನೆಂಬವನಿಗೆ ವಿವಾಹಮಾಡಿಕೊಟ್ಟನೆಂದು ಹೇಳಿದೆ. ಇವನೂ ಮರೋಳ ಶಾಸನದ ಘಟಿಯುಂಕಕಾರನೂ ಒಂದೇ ಆಗಿರಲು ಸಾಕು. ಮರವೊಳಲ ಒಡತಿಯಾದ ಮಹಾದೇವಿಯೇ ಆಲೂರ ಶಾಸನದಲ್ಲಿ ಉಲ್ಲಿಖಿತಳಾದ ಸತ್ಯಾಶ್ರಯನ ಮಗಳು. ಇವಳ ಪತಿ, ಮರವೊಳಲಿನಲ್ಲಿಯ ಜೈನ ಬಸದಿಯೊಂದಕ್ಕೆ ಕೆಲವು ದಾನಗಳನ್ನು ಮಾಡಿದ ಸಂಗತಿಯೂ ಮರೋಳ ಶಾಸನದಲ್ಲಿದೆ.

### ಜಕ್ಕಿಯಬ್ಬೆ

ಜಕ್ಕಿಯಬ್ಬೆ ರಾಜಕಾರ್ಯದಲ್ಲಿ ಬಲ್ಲಿದಳಿದ್ದಂತೆ ಧಾರ್ಮಿಕ ಪ್ರವೃತ್ತಿಯವಳೂ ಆಗಿದ್ದಳು. ನಾಗರಖಂಡ ನಾಡಿನ ನಾಳ್ಗಾವುಂಡನಾದ ಸತ್ತರರ ನಾಗಾರ್ಜುನನ ಸತಿ ಇವಳು. ನಾಗಾರ್ಜುನ,[28a] ತನ್ನ ಒಡೆಯನಾದ ಕಲಿವಿಟ್ಟನ ಅಪ್ಪಣೆಯ ಮೇರೆಗೆ ಯುದ್ಧವೊಂದರಲ್ಲಿ ಭಾಗವಹಿಸಿ ಮೃತನಾಗಲು ಅರಸನಾದ ರಾಷ್ಟ್ರಕೂಟ ಕನ್ನರದೇವನು ನಾಳ್ಗಾವುಂಡತನವನ್ನು ಜಕ್ಕಿಯಬ್ಬೆಗೆ ವಹಿಸಿದನು. ಆಡಳಿತೆಯ ಯೋಗ್ಯತೆ, ದೈವಭಕ್ತಿ ಇವೆರಡೂ ಸಮರಸ ಹೊಂದಿದ ಇವಳ ವ್ಯಕ್ತಿತ್ವದ ವರ್ಣನೆ ಯಿದು :

ಉತ್ತಮಪ್ರಭುಶಕ್ತಿಯುಕ್ತೆ ಜಿನೇಂದ್ರಶಾಸನ-
ಭಕ್ತೆ ಕಾಂ-
ತ್ಯಾತ್ತವಿಭ್ರಮೆ ಜಕ್ಕಿಯಬ್ಬೆ ಸಮಂತು ನಾಗರ-
ಖಂಡಮ-
ಳ್ಪಾತ್ತುಮಂ ವಧುವಾಗಿಯುಂ ನಿಜ ವೀರ-
ವಿಕ್ರಮ ಗರ್ವದಿಂ
ಪೆತ್ತವಂ ಪ್ರತಿಪಾಲಿಸುತೊಸೆದಿಳ್ಳಳ್ದವಸಾನ-
ದೊಳ್ ॥ [29]

---

26 Epigraphia India Vol. IV, pp. ft 350 .

27 S. I. I. Vol. XI, Pt. I, Pp. 50 ft.

28 Ep. Ind Vol XVI, Pp. 27 ft.

28 a ನಾಗಾರ್ಜುನನು, ಕ್ರಿ. ಶ. ೯೦೨ರಲ್ಲಿ, ಕಲಿವಿಟ್ಟನ ತಂದೆಯಾದ ಲೋಕಟೆ ಅಥವಾ ಲೋಕಾದಿತ್ಯನ ಕೈಕೆಳಗೆ, ನಾಗರಖಂಡ ಎಪ್ಪತ್ತರ ನಾಳ್ಗಾವುಂಡನಾಗ್ದಿನೆಂದು ಇನ್ನೊಂದು ಶಾಸನದಿಂದ ತಿಳಿದುಬರುತ್ತದೆ. (Mysore Archaeological Reports, 1909–1910, pp. 38.)

29 Epigraphiac Carnatica, Vol. VII, sk. 219.

ಆದರೆ ಮೊದಲಿನಿಂದಲೂ ಧರ್ಮದೆಡೆಗೇ ಹೆಚ್ಚು ಒಲವುಳ್ಳ ಇವಳಿಗೆ ಅಧಿಕಾರದ ಮೇಲಾಗಲಿ, ಸುಖೋಪಭೋಗಗಳ ಮೇಲಾಗಲಿ ವ್ಯಾಮೋಹ ಉಂಟಾಗಲಿಲ್ಲ. ಅಲ್ಲದೆ ದೈಹಿಕ ಅಶಕ್ತತೆಯೂ ಉಂಟಾಯಿತು. ಆದ್ದರಿಂದ 'ಸಂಸೃತಿ ಭೋಗಮುಸಾರವೆಂದು' ಭಾವಿಸಿ ತನ್ನ ಅಧಿಕಾರವನ್ನೂ ಮಗಳಿಗೊಪ್ಪಿಸಿ, ಬಂದನಿಕೆ ತೀರ್ಥದಲ್ಲಿಯ ಜಿನಾಲಯದಲ್ಲಿದ್ದುಕೊಂಡು, ಕೊನೆಗೊಮ್ಮೆ ಶಕ ವರುಷ ೮೩೩ ನೆಯ ಪ್ರಜಾಪತಿ ಸಂವತ್ಸರದ (ಕ್ರಿ. ಶ. ೯೧೧-೧೨) ಪುಣ್ಯದಿನವೊಂದರಲ್ಲಿ ನೋಂಪಿಯಿಂದ ಇಹಲೋಕವನ್ನು ತ್ಯಜಿಸಿದಳು.

### ಭುಜ್ಜಬ್ಬರಸಿ

ಇದೇ ಶತಮಾನದ ಇನ್ನೊರ್ವ ಪ್ರಮುಖ ಮಹಿಳೆ, ಗಂಗವಂಶದ ಭುಜ್ಜಬ್ಬರಸಿ. ಇವಳ ಮಗನಾದ ಇಮ್ಮಡಿ ಬೂತುಗ ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷನ ಅಳಿಯ. ಇವಳಿಗೆ ತಮ್ಮಂದಿರು ಮೂವರು—ಬಟ್ಟೆಯ್ಯ, ಸಿಂಘವರ್ಮರಸ ಮತ್ತು ಚಟ್ಟಪಯ್ಯ ಇವಳ ವಿಷಯವಾಗಿ ಈ ವಿವರಗಳನ್ನು ಕೊಡುವ ಶಾಸನವು ಹೆಬ್ಬಾಳದಲ್ಲಿದೆ.[30] ಇವರು ಕ್ರಿ. ಶ. ೯೬೨ ರಲ್ಲಿ ಪೆಬ್ಬಾಳವನ್ನು ಅಂದರೆ ಶಾಸನ ದೊರೆತ ಸ್ಥಳವಾದ ಇಂದಿನ ಹೆಬ್ಬಾಳವನ್ನು ಆಳುತ್ತಿದ್ದಳೆಂದು ಆ ಶಾಸನದಲ್ಲಿ ಹೇಳಿದೆ.

ಭುಜ್ಜಬ್ಬರಸಿ ತನ್ನ ಜೀವನದ ಉತ್ತರಾರ್ಧದಲ್ಲಿ ಸಹ ರಾಜಕಾರ್ಯದಲ್ಲಿ ಚಟುವಟಿಕೆಯಿಂದ ಭಾಗ ವಹಿಸುತ್ತಿದ್ದಳೆಂದು ತೋರುತ್ತದೆ. ಯಾಕಂದರೆ ಅವಳು ಪೆರ್ಬಾಳವನ್ನಾಳುತ್ತಿದ್ದ ಕಾಲದಲ್ಲಿ ಗಂಗ ರಾಜ್ಯಕ್ಕೆ ಅಗಲೇ ಅವಳ ಮೊಮ್ಮಗನಾದ ಮಾರಸಿಂಹನು ಅಧಿಪತಿಯಾಗಿದ್ದನೆಂದು ಅದೇ ಶಾಸನದಿಂದ ತಿಳಿದುಬರುತ್ತದೆ.

ಭುಜ್ಜಬ್ಬರಸಿ, ಪೆರ್ಬಾಳದಲ್ಲಿ ತನ್ನ ಹೆಸರಿನಲ್ಲಿ ಭುಜ್ಜಬ್ಬೇಶ್ವರ ಎಂಬ ಶಿವಾಲಯುವನ್ನೂ ಒಂದು ಕೆರೆಯನ್ನೂ ಕಟ್ಟಿಸಿದಳು. ಮೊಮ್ಮಗ ಮಾರಸಿಂಹ ಈ ದೇವಾಲಯಕ್ಕೆ ಕೆಲವು ಭೂಮಿಗಳನ್ನೂ ದಾನವಾಗಿ ಕೊಟ್ಟನು. ಭುಜ್ಜಬ್ಬರಸಿಯ ಪೆಗ್ಗಡೆ ಕನ್ನಪ್ಪಯ್ಯನು ಆ ದಾನವನ್ನು ಕಾರ್ಯಗತಗೊಳಿಸಿದನು.

### ಜೋಗಬ್ಬೆ

ಕುಂದರಾಜ ಅಥವಾ ಕುಂದಮರಸ, ಇರಿವ ಬೆಡಂಗ ಸತ್ಯಾಶ್ರಯನ ಮತ್ತು ಇಮ್ಮಡಿ ಜಯಸಿಂಹನ ಮಾಂಡಲಿಕ. ಇವನು ಸತ್ಯಾಶ್ರಯನ ವಿಶೇಷ ಪ್ರೀತಿಗೆ, ವಿಶ್ವಾಸಕ್ಕೆ ಪಾತ್ರನಾಗಿದ್ದನೆಂಬುದು ಇವನ 'ಸತ್ತಿಗನಚಟ್ಟ' 'ಇರಿವ ಬೆಡಂಗ ದೇವನ ಮಗ' ಎಂಬ ಬಿರುದುಗಳಿಂದ ವ್ಯಕ್ತವಾಗುತ್ತದೆ. ಬನವಾಸಿ, ಹೈವೆ ಮೊದಲಾದ ಪ್ರಾಂತಗಳು ಇವನ ಆಡಳಿತಕ್ಕೆ ಸೇರಿದ್ದವು. ಇವನಿಗೆ ಮೂವರು ಮಡದಿಯರು. ಮೂವರೂ ಬೇರೆ ಬೇರೆ ಪ್ರದೇಶಗಳ ರಾಜ್ಯಾಡಳಿತೆಯನ್ನೂ ನೋಡಿಕೊಳ್ಳುತ್ತಿದ್ದರು.

ಜೋಗಬ್ಬೆ ಅಥವಾ ಜೋಗಲದೇವಿ ಈ ಮೂವರಲ್ಲೊಬ್ಬಳು. ಇವಳು ಕ್ರಿ. ಶ. ೧೦೧೯ ರಲ್ಲಿ ಅಜ್ಜಡಿಯನ್ನಾಳುತ್ತಿದ್ದಳೆಂದು ಹಾವೇರಿ ತಾಲೂಕಿನ ಕಳ್ಳಿಹಾಳದಲ್ಲಿಯ[31] ಶಾಸನವೊಂದರಿಂದ ಗೊತ್ತಾಗುತದೆ. ಕಳ್ಳಿಹಾಳದಲ್ಲಿ ದೊರೆತ ಇನ್ನೂ ಅನೇಕ ಶಾಸನಗಳಲ್ಲಿ ಆ ಊರಿನ ಹೆಸರು ಅಜ್ಜಡಿಯೆಂದೇ ಬರುವದರಿಂದ ಕಳ್ಳಿಹಾಳದ ಮೊದಲಿನ ಹೆಸರು ಅಜ್ಜಡಿಯೆಂದಿರಬೇಕೆಂದು ಊಹಿಸಬಹುದಾಗಿದೆ. ಜೋಗಬ್ಬೆ ಬರ್ಮನೆಂಬವನ ಮಗಳು; ರಾಚಮಲ್ಲನ ಸೋದರಿ (ಅನುಸತೆ). ರೂಪು, ಗುಣಗಳ ತವರುಮನೆ ಇವಳು. ಮೇಲೆ ಉಲ್ಲಿಖಿತವಾದ ಶಾಸನದ ಕರ್ತೃವಾದ ಕಂದರ್ಪನು ಬರೆದ ಜೋಗಬ್ಬೆಯ ಪ್ರಶಸ್ತಿಯಿದು:

ಕಂ॥ ಕುಂದನ ಕುಲಲಲನೆ ಜಗ—
ದ್ವಂದಿತೆ ಜೋಗಬ್ಬೆ ರೂಪವತಿ
ಗುಣವತಿ ಪೂ—।
ರ್ಣೇಂದುಮುಖಿ ಸಂದ ಬರ್ಮ್ಮನ
ನಂದನೆ ವಿಭು ರಾಚಮಲ್ಲನನುಸುತೆ
ನೆಗಳ್ದಳ್ ॥

ವೃ॥ ನೆಟ್ಟನೆ ರೂಪು ವಿಭ್ರಮುಕೆ ದಾನದ
ಧರ್ಮ್ಮದ ರೂಢಿಗುಂಟೆ ಬಾ-
ಯ್ವಿಟ್ಟು ನಿರಂತರಂ ಪಡೆವ
ಕಾಂತೆಯರಾ ವಧು ಕೊಟ್ಟ ದಾನಮಂ
ಕೊಟ್ಟರೊ ಪುಟ್ಟುವಂದೊಡನೆ
ಪುಟ್ಟಿದರೋ ಸತಿ ಪಟ್ಟ ತೊಟ್ಟಿಲೊಳ್
ಪಟ್ಟಮನೋಂತರೋ ನೆಗಳ್ದ
ಜೋಗಲದೇವಿಯನೋಂತನೋಂಪಿಯ ॥

ಅಜ್ಜಡಿಯ ಸೆಟ್ಟಿವಾಳನಾದ ರಾಚಮಲ್ಲನ ಬಿನ್ನಹದ ಮೇರೆಗೆ ಉದಾರಿಯಾದ ಜೋಗಬ್ಬೆಯು ಸಹದೇವೇಶ್ವರ ದೇವರಿಗೆ, ಶಾಲಿವಾಹನ ಶಕ ೯೪೧ ನೆಯ ಸಿದ್ಧಾರ್ಥಿ ಸಂವತ್ಸರದಲ್ಲಿಯ ಉತ್ತರಾಯಣ ಸಂಕ್ರಮಣದ ಪುಣ್ಯದಿನದಂದು ಕೆಲವು ಭೂಮಿಗಳನ್ನು ದತ್ತಿಯಾಗಿ ಬಿಟ್ಟಳೆಂಬ ವಿಷಯುವೂ ಮೇಲಿನ ಶಾಸನದಲ್ಲಿದೆ.

### ಪಂಪಾದೇವಿ

ಪಂಪಾದೇವಿ ಕುಂದರಾಜನ ಇನ್ನೊಬ್ಬ ಮಡದಿ. ಕುಂದರಾಜನು ಬನವಾಸಿ ಪನ್ನಿರ್ಚ್ಛಾಸಿರ ಪ್ರಾಂತವನ್ನು 'ಏಕಚ್ಛತ್ರಛಾಯೆ'ಯಿಂದ ಆಳುತ್ತಿದ್ದಾಗ ಪಂಪಾದೇವಿ ಜಿಡುಗೂರನ್ನಾಳುತ್ತಿದ್ದಳು. 'ಕುಂದನ ಮನೋನಯನವಲ್ಲಭೆ'ಯಾದ ಇವಳು 'ದೇವಗುರುಭಕ್ತೆ'ಯೆಂದು ಪೆಸರ್ವಡೆದಿದ್ದಳು. ಈ ಸಂಗತಿಗಳನ್ನು ವಿವರಿಸುವ ಶಾಸನವೊಂದು ಹಾವೇರಿ ತಾಲೂಕಿನಲ್ಲಿಯ ಬಿದರಗಡ್ಡೆಯಲ್ಲಿ ದೊರೆತಿದೆ.[32] ಆದರೆ ಈ ಶಾಸನದ ಬಹುಭಾಗ ಒಡೆದು ಮುಕ್ಕಾಗಿ ಹೋಗಿರುವದರಿಂದ ಹೆಚ್ಚಿನ ವಿವರಗಳು ಸಿಗುವದಿಲ್ಲ.

### ಕುಂದಲದೇವಿ

ಕುಂದರಾಜನ ಮೂರನೆಯ ಮಡದಿ ಕುಂದಲದೇವಿ. ಹಾವೇರಿ ತಾಲೂಕಿನ ಕುಳೇನೂರಿನಲ್ಲಿ ದೊರೆತ ಶಾಸನವೊಂದರಲ್ಲಿ[33] ಇವಳು ಬಹುವಾಗಿ ವರ್ಣಿತವಾಗಿದ್ದಾಳೆ. ಈಕೆ ಕ್ರಿ. ಶ. ೧೦೨೪ ರಲ್ಲಿ 'ಸುಖದೊಳ್ ಅರಸುಗೆಯ್ಯು'ತ್ತಿದ್ದಳೆಂದು ಆ ಶಾಸನದಲ್ಲಿ ಹೇಳಿದೆ. ಆದರೆ ಯಾವ ಪ್ರದೇಶದಲ್ಲಿ ಅರಸುಗೆಯ್ಯುತ್ತಿದ್ದಳು ಎಂಬದು ಸ್ಪಷ್ಟವಿಲ್ಲ. ಆದ್ದರಿಂದ, ತನ್ನ ಪತಿಯ ಒಡೆತನದಲ್ಲಿದ್ದ ಪ್ರದೇಶಗಳನ್ನೇ ಅಂದರೆ ಬನವಾಸಿ, ಹಯ್ವೆನಾಡುಗಳನ್ನೇ, ಆತನೊಂದಿಗೆ ಆಳುತ್ತಿದ್ದಳೆಂದು ಊಹಿಸಬಹುದು. ಮೇಲಿನ ಶಾಸನದಲ್ಲಿ ವರ್ಣಿತವಾದ ಇವಳ ಮಹತಿಯಿದು.

ಕಂ॥ ಸತಿಗೆ ರತಿಗೆ ರಂಭೆಗೆ
ಗಿರಿಜೆಗರುಂಧತಿಗೆ ರಘುಕುಲೇಶನ ಸತಿಗಂ।
ದೊರೆ ಪಾಸಟಿ ಮಿಗಿಲೆಂ
ಧರೆ ಪೊಗಳ್ವುದು ನೆಗಳ್ದ ಸವತಿಗಜ
ಕೇಸರಿಯ ॥

ಕುಂದಲದೇವಿ ವಿವೇಕ ಮಹಾನಿಧಿ', 'ರೂಪವಿಲಾಸಿ'. ಇವಳು ಮಹಾದಾನಿಯೆಂಬುದಕ್ಕೆ, ಇವಳು ದೇವತಾರಾಧನೆಗೆ ವಿದ್ಯಾಭ್ಯಾಸಕ್ಕೆ ಕೊಳಲೂದುವವರಿಗೆ, ಮದ್ದಳೆಕಾರರಿಗೆ ಇತ್ತ ದಾನಗಳೇ ಸಾಕ್ಷಿ.

೩

ಯಾವದೊಂದು ಸಮಾಜದಲ್ಲಿ ಸ್ತ್ರೀಗಿದ್ದ ಸ್ಥಾನಮಾನ, ಆ ಸಮಾಜದ ಸಾಂಸ್ಕೃತಿಕ ಉನ್ನತಿಯ ಅಳತೆಗೋಲೆಂದು ಭಾವಿಸಲಾಗುತ್ತದೆ; ಯಾಕಂದರೆ ಸಮಾಜದ ಮಹತ್ವದ ಅಂಗವೆನಿಸಿದ ಸ್ತ್ರೀಗೆ ಅವಳಲ್ಲಿಯ ಗುಣಗಳ ವಿಕಾಸಕ್ಕೆಡೆಗೊಟ್ಟು, ದೇಶದ ಉನ್ನತಿಗೆ ಸಹಾಯಕಳಾಗುವ ಅವಕಾಶವನ್ನೊದಗಿಸಿಕೊಡದೆ ಸಮಾಜ ಸಾಂಸ್ಕೃತಿಕ ಉನ್ನತಿಯನ್ನು ಪಡೆಯಬಹುದಾದರೂ ಹೇಗೆ? ಈ ದೃಷ್ಟಿಯಿಂದ, ಮೇಲೆ ಕೆಲ ಗಣ್ಯ ಸ್ತ್ರೀಯರ ವ್ಯಕ್ತಿಚಿತ್ರವನ್ನು ಕೊಟ್ಟದೆ.*

---

30 Epigraphia Indica, Vol. IV, PP. 350, ft.

31 A. R. S. I. E. 1932–33 App. D. No. 124.

32 A. R. S. I. E. A. App. E. No. 8.

33 Epigraphia Indica Vol. XV PP. 329 ft.

* ಈ ಲೇಖನದಲ್ಲಿ ಉಲ್ಲಿಖಿತವಾದ ಅನೇಕ ಅಪ್ರಕಾಶಿತ ಶಾಸನಗಳನ್ನು ಬಳಸಿಕೊಳ್ಳಲು ಅನುಮತಿಯಿತ್ತ ಕೇಂದ್ರ ಸರಕಾರದ ಶಾಸನ ಖಾತೆಯ ವರಿಷ್ಠ ಅಧಿಕಾರಿಗಳಿಗೂ ಇದನ್ನು ಬರೆಯುವದರಲ್ಲಿ ಅನೇಕ ಸಲಹೆಗಳನ್ನಿತ್ತ ಅದೇ ಶಾಖೆಯಲ್ಲಿ ಅಸಿಸ್ಟಂಟ ಸುಪರಿಂಟೆಂಡೆಂಟರಾದ ಶ್ರೀ. ಪಿ. ಬಿ. ದೇಸಾಯಿ, ಎಮ್. ಎ., ಅವರಿಗೂ ಕೃತಜ್ಞನಾಗಿದ್ದೇನೆ.
—ಲೇಖಕ



# ಗಾಲಿಗೆ ಕೊಟ್ಟ ಕೈ

ಕತೆಗಾರರು:— ಮುಳಿಯ

ಹನ್ನೆರಡು ದಿನಗಳ ಅಲೆದಾಟದ ಬಳಿಕ ಪುನಃ ಮನೆಗೆ !

ಹನ್ನೆರಡು ದಿನ ಅಂತಹ ದೊಡ್ಡ ಅವಧಿಯೇನಲ್ಲ. ಆದರೆ ಯಾವಾಗಲೂ ಮನೆಯೊಳಗೇ ಇದ್ದ, ಕರ್ತವ್ಯಕ್ಕೂ ಕೆಲಸಕ್ಕೂ ಗಂಟು ಬಿದ್ದ ಜೀವಕ್ಕೆ ಅದು ಬಹಳ ಹೆಚ್ಚಿನ ಅವಧಿಯಂತೆ ತೋರಿತು. ಮನೆಯಿಂದ ಹೊರಡುವಾಗ ಅದೊಂದೇ ಯೋಚನೆಯಿತ್ತು. ಹೃದಯದಲ್ಲಿ ಎದ್ದ ಬೇಸರ, ಕ್ಷೋಭೆಗಳು ಅರ್ಧದಲ್ಲೇ ಬಿಟ್ಟು ಹೋಗಬೇಕಾದ ರೋಗಿಗಳನ್ನು ಗಣನೆಗೆ ತಗಲು ಬಿಡಲಿಲ್ಲ. ಒಮ್ಮೆ ಹೊರಟ ನಂತರ, ಅಲೆದಾಟದಲ್ಲಿ, ಸುಂದರವಾದ ಸುಖಕರವಾದ ನಿಸರ್ಗದೃಶ್ಯಗಳ ದರ್ಶನದಲ್ಲಿ ಇತರ ಚಿಂತೆಗಳು ಮಾಯವಾದವು. ಹಿಂತಿರುಗುತ್ತ ಅವು ಮರುಕಳಿಸಿದವು. ಊರು ಹತ್ತಿರವಾದಂತೆಲ್ಲ ಹೃದಯ ಬೇಗುದಿಗೊಳ್ಳತೊಡಗಿತು.

ಯಾವದೇ ಆಕಸ್ಮಿಕ ಘಟನೆ ಊರಲ್ಲಿ ನಡೆದಿರಲಿಕ್ಕಿಲ್ಲ. ಡಾಕ್ಟರರು ಇಲ್ಲದಿದ್ದುದರಿಂದ ಯಾರಿಗೂ ಬಹಳ ತೊಂದರೆಯಾಗಿರಲಿಕ್ಕಿಲ್ಲ. . . . . ಅಂತಹದೇನಾದರೂ ನಡೆದಿರುತ್ತಿದ್ದರೆ ದಾರಿಯಲ್ಲಿ ಕಾಣಸಿಕ್ಕಿದ ಗುರುತಿನವರು ತಿಳಿಸುತ್ತಿದ್ದರು. ಅವರು ನಕ್ಕು " ಈಗ ಬಂದಿರಾ . . . . ಪ್ರಯಾಣ ಸುಖವಾಗಿತ್ತಷ್ಟೆ '' ಎಂದು ವಿಚಾರಿಸಿದರಲ್ಲದೆ ಬೇರೇನೂ ಹೇಳಲಿಲ್ಲ. . . . .

ಡಾಕ್ಟರರು ಮನೆ ಬಾಗಿಲಿಗೆ ತಲಪಿದರು. " ಸುಗುಣಾ . . '' ಎಂದು ಕರೆಯಲು ಬಾಯಿ ತೆರೆದು ಸುಮ್ಮನಾದರು. ಬಾಗಿಲು ತೆರೆದೇ ಇತ್ತು. ಅವರು ಚಾವಡಿಯನ್ನೇರಿ ಚಪ್ಪಲಿಗಳನ್ನು ಕಳಚಿ ಕೈಯಲ್ಲಿದ್ದ ಭಾರವಾದ ಚೀಲವನ್ನು ಮೊಳೆಗೆ ತಗಲಿಸಿದರು ; ಮತ್ತೆ ಕ್ಷಣ ತಡೆದು ಒಳಗೆ ಹಣಿಕಿದರು.

ಮನೆಯಲ್ಲಿ ಯಾರೂ ಇದ್ದಂತೆ ತೋರಲಿಲ್ಲ. . ಸುಗುಣಾ ಎಲ್ಲಿ ಹೋದಳು . ? ಮತ್ತೆ ಅಮ್ಮ. . .

ಒಳಗಿನ ಬಾಗಿಲು ತೆರೆದಿದ್ದರೂ ಡಾಕ್ಟರರು ಒಳಗೆ ಹೋಗಲಿಲ್ಲ. ಅಪರಿಚಿತರಂತೆ ಅಳುಕಿ ಚಾವಡಿಯಲ್ಲೇ ಕುಳಿತುಕೊಂಡರು. ನೀಳವಾಗಿ ಎರಡು ಬಾರಿ ಉಸಿರೆಳೆದುಕೊಂಡರು. ಮತ್ತೆ ಎದ್ದು ಬಚ್ಚಲಿನ ಕಡೆಗೆ ನಡೆದರು. ಬಚ್ಚಲಿನ ಬಾಗಿಲು ಹಾಕಿತ್ತು. ಒಳಗೆ ಯಾರೋ ಸ್ನಾನ ಮಾಡುತ್ತಿದ್ದರು. ಡಾಕ್ಟರರು ಹಿಂತಿರುಗಿ ಮನೆಗೆ ಬಂದರು. ಬಳಲಿದವರಂತೆ ಈಝೀಚೇರಿನಲ್ಲಿ ಬಿದ್ದುಕೊಂಡರು . . . . . . .

ನಾಲ್ಕು ಗಂಟೆಗಳ ತರುವಾಯ ಡಾಕ್ಟರರು ಅದೇ ಈಝೀಚೇರಿನಲ್ಲಿ ಬಿದ್ದುಕೊಂಡಿದ್ದರು. ಹೊರಗೆ ಅಂಗಳದಲ್ಲಿ ಬಿಸಿಲು ತೀಕ್ಷ್ಣವಾಗಿ ಬಿದ್ದಿತ್ತು. ಅದರ ಜಳಕ್ಕೆ ಅವರ ಕಣ್ಣೆವೆಗಳು ಅರ್ಧ ಮುಚ್ಚಿದ್ದವು. ಹನ್ನೆರಡು ದಿನಗಳಿಂದ ಅಪರೂಪವಾದ, ಸುಖಕರವಾದ, ನಿದ್ದೆಗೆ ಅವಕಾಶವಿತ್ತು. ಆದರೆ ಕಲ್ಪನೆಗಳು ಬರಡಾಗಿ, ನಿರಾಶೆ ತುಂಬಿ ಯೋಚನೆಗಳ ಸುರುಳಿ ಬಿಚ್ಚಿಕೊಂಡಿತ್ತು.

ಸುಗುಣಾ ಬರುತ್ತಾಳೇನೋ ಎಂದು ಒಂದು ಗಂಟೆಯಿಂದ ಅವರು ಕಾದಿದ್ದರು. ಅವಳ ಊಟ ಇನ್ನೂ ಮುಗಿದಿರಲಿಕ್ಕಿಲ್ಲ, ಈಗ ಬಂದಾಳು ಎಂದು ಹಾರೈಸುತ್ತ ಅರ್ಧ ಗಂಟೆ ಕಳೆದಿತ್ತು. ಮತ್ತೂ ಬಾರದಿರಲು ಎದ್ದು ಒಮ್ಮೆ ಒಳಗೆ ಹಣಿಕಿದಾಗ ಕೈಸಾಲೆಯಲ್ಲಿ ಕಸೂತಿ ಬಿಡಿಸುತ್ತ ಕುಳಿತ ಅವಳು ಕಾಣಸಿದ್ದಳು. " ಸರಿ '' ಎಂದು ತುಟಗಚ್ಚಿ ಅವರು ಹಿಂತಿರುಗಬೇಕು ಅಷ್ಟರಲ್ಲಿ ಅವಳು ತಲೆ ಮೇಲಕ್ಕೆತ್ತಿ ಅವರ ಮುಖ ನೋಡಿದ್ದಳು.

ಬಾಗಿಲಿಗೆ ಅಡ್ಡವಾಗಿ ನಿಂತ ಅವರ ನೀಳವಾದ ದೇಹದ ಕಪ್ಪು ಛಾಯೆ ಕೈಸಾಲೆಯ ಮಂದವಾದ ಬೆಳಕನ್ನು ಇನ್ನೂ ಮಂದವಾಗಿಸಿತ್ತು. ಆ ಕತ್ತಲೆಯನ್ನೂ ಅಭ್ಯಾಸಪಡಿಸಿಕೊಂಡ ಅವಳ ಚುರುಕು ಕಣ್ಣುಗಳೂ ಮೋಸಹೋಗಿ ಹೆಣಗೆ ದಾರಿ ಬಿಟ್ಟು ಸರಿದಿತ್ತು.

ಅವರ ಮುಖ ನೋಡಿ ಅವಳು ಎಂದಿನಂತೆ ಮುಗುಳ್ನಗೆ ನಗಲಿಲ್ಲ. ಅವಳ ಕಣ್ಣುಗಳು ಮಾತ್ರ ಅಪೂರ್ವವಾಗಿದ್ದವು. ಅವುಗಳಲ್ಲಿ ನೀರು ನಿಂತಂತೆ ಕಂಡಿತು. . . .

ಡಾಕ್ಟರರು ಈಝೀಚೇರಿನಲ್ಲಿ ಆಚೀಚೆ ಹೊರಳಾಡಿದರು. ಸುಗುಣಾಳ ಕಣ್ಣಿನಲ್ಲಿ ನೀರು ! ಆಶ್ಚರ್ಯ !

ಅದಕ್ಕೂ ಮಿಗಿಲಾದ ಆಶ್ಚರ್ಯ— ಅವಳ ಮೌನ. ಹನ್ನೆರಡು ದಿನಗಳ ಹಿಂದೆ ಅವರನ್ನು ಕಂಡೊಡನೆ ಸಂತೋಷದಿಂದ ಅರಳುತ್ತಿದ್ದ ಮುಖ ಈ ದಿನ ಭಾವನಾರಹಿತವಾಗಿದೆ.

ಅವರು ಬೆಳಗ್ಗೆ ಮನೆಯನ್ನು ಸಮೀಪಿಸುತ್ತಿದ್ದಂತೆ ಎಣಿಸಿದ್ದರು. . .ಬಾಗಿಲಿಗೆ ತಲಪಿದೊಡನೆ ಸುಗುಣಾ ಓಡಿ ಬಂದು ಎದುಗೊಳ್ಳುತ್ತಾಳೆ. ಅಮ್ಮ ಅವಳ ಹಿಂದಿನಿಂದಲೇ ಬಂದು ಕಣ್ತುಂಬ ನೋಡುತ್ತಾಳೆ. ಆ ಬಳಿಕ ಕಾಲಿನ ಚಪ್ಪಲಿ ಕೂಡಾ ತೆಗೆಯದೆ ಅಲ್ಲೇ ಕುಳಿತು ಪ್ರಯಾಣದ ಕತೆ ತಿಳಿಸಬೇಕು. ಎಷ್ಟು ಸುಂದರವಾದ ದೃಶ್ಯಗಳು ! ಎಷ್ಟು ಅದ್ಭುತ ! ಎಷ್ಟು ಅಮೋಘ. . . ಮಾತಿನ ನಡುವೆ ಅಷ್ಟು ದೂರದಿಂದಲೂ ತಾವು ಸುಗುಣಾಳಿಗಾಗಿ, ಅಮ್ಮನಿಗಾಗಿ ತಂದ ಅರಿವೆಗಳನ್ನು ಚೀಲದಿಂದ ಹೊರತೆಗೆಯಬೇಕು. . . .

ಈಗ ಚೀಲ ತಾನು ತಂದು ತೂಗಾಡಿಸಿದ ಕಡೆ ಹಾಗೇ ತೂಗುತ್ತಿದೆ. ಸುಗುಣಾ ಬಂದು ಅದನ್ನು ಕೊಂಡೊಯ್ಯಲಿಲ್ಲ. ಅವಳಿಗೆ ಏನೋ ಆಗಿದೆ ! ಅಮ್ಮ. . . ಅವರೂ ಹಾಗೆಯೇ. " ಪ್ರಯಾಣ ಸುಖಕರವಾಗಿತ್ತೇನಪ್ಪ. . .'' ಎಂದು ವಿಚಾರಿಸಿ "ನನಗೆ ಬೆಳಗಿನಿಂದ ತಲೆನೋವು ಬಂದಿದೆಯಪ್ಪ, ನಾನು ಮಲಗಿಕೊಳ್ಳುತ್ತೇನೆ. . . . ನಿನ್ನ ಔಷಧಗಿವುಷದ ಒಂದೂ ಬೇಡ ನನಗೆ '' ಎಂದು ಹೋಗಿ ಮಲಗಿಕೊಂಡವರು ಊಟಕ್ಕೂ ಎದ್ದು ಬರಲಿಲ್ಲ. ಇಂತಹ ಮೌನ ಈ ಮನೆಗೇ ಅಪರೂಪ !

ಡಾಕ್ಟರರು ಒಣಗಿ ಹಾರಾಡುತ್ತಿದ್ದ ಕ್ರಾಪಿನ ಕೂದಲುಗಳನ್ನು ಹಿಂದಕ್ಕೆ ಸರಿಸಿ ಈಝೀಚೇರಿನಿಂದ ಎದ್ದು ನಿಂತರು. ಮನೆಗೆ ತಾಗಿಯೇ ಎಂಬಂತೆ ಇದ್ದ ತಮ್ಮ ಚಿಕ್ಕ ಡಿಸ್ಪೆನ್ಸರಿಯ ಕಡೆಗೆ ನಡೆದರು. ಮನೆಯ ಮೆಟ್ಟಲು ಇಳಿಯುತ್ತಿರುವಾಗ ಎದುರು ಕಡೆಯಿಂದ ಯಾರೋ ಬರುತ್ತಿರುವುದು ಕಾಣಸಿತು. ಅವರು ಡಿಸ್ಪೆನ್ಸರಿಯ ಬಾಗಿಲು ತೆಗೆಲು ಒಳಗೆ ಹೊಕ್ಕಕೂಡಲೇ ಅವನೂ ಒಳಗೆ ಬಂದ.

ಅವನು ಕಲಿತವರಂತೆ, ಪಟ್ಟಣದವರಂತೆ ಕಂಡುಬಂದ. ಶುಭ್ರವಾದ ಪಾಯಿಜಾಮಾ ಮತ್ತು ಶರ್ಟು. ಅವನ ನೀಳವಾದ ಕತ್ತಿಗೆ ಹೊಳೆಯುವ ಕ್ರಾಫು ಮತ್ತು ಮಿರುಗುವ ಕಪ್ಪು ಬಾಟಾ ಶೂಗಳ ನಡುವಿನ ಬಿಳಿಯ ಆಕೃತಿ ಮೆಚ್ಚಿಗೆ ಆಗುವಂತಿತ್ತು.

" ಕುಳಿತುಕೊಳ್ಳಿ. . . '' ಎಂದು ಡಾಕ್ಟರರು ಎದುರಿದ್ದ ಕುರ್ಚಿ ತೋರಿಸಿ ತಾವು ತಮ್ಮ ಆಸನದಲ್ಲಿ ಕುಳಿತುಕೊಂಡರು. ಅವನ ಬಳಿ ನೇರವಾಗಿ ಮಾತನಾಡಲು ಅವರಿಗೆ ಸಂಕೋಚವಾಯಿತು. ಅವರ ಬಳಿಗೆ ಬರುತ್ತಿದ್ದ ರೋಗಿಗಳೆಲ್ಲ ಅನಕ್ಷರಸ್ಥರು. ಅಕ್ಷರಸ್ಥರು ಇದ್ದರೂ ಪರಿಚಯದವರು. ಅಪರಿಚಿತ ವ್ಯಕ್ತಿಗಳನ್ನು ದೂರದೂರದಿಂದ ಆಕರ್ಷಿಸುವಂತಹ ಕೀರ್ತಿ ಅವರಿಗಿಲ್ಲ. ತಮ್ಮ ಸುತ್ತಮುತ್ತಲಿನ ಗ್ರಾಮಗಳ ಗಿರಾಕಿಗಳಿಂದಲೇ ಅವರು ತೃಪ್ತರು.

ಬಂದವನು ಒಂದುಕ್ಷಣ ತಡೆದ. ಕಣ್ಣಿನೆವೆಗಳನ್ನು ನಾಲ್ಕಾರುಬಾರಿ ಜೋರಾಗಿ ಮುಚ್ಚಿ ತೆರೆದು ಹೇಳಿದ. "ಎಂತಹ ಬಿಸಿಲು ಡಾಕ್ಟರರೇ! ನೀವು ತೋರಿಸಿದ ಕುರ್ಚಿ ಕಾಣಿಸಲೇ ಇಲ್ಲ ಇಷ್ಟು ಹೊತ್ತು. ಕಣ್ಣು ಕುರುಡಾಗಿದೆ."

ಆ ಬಳಿಕ ನಿಧಾನವಾಗಿ ಅವರು ತೋರಿಸಿದ ಕುರ್ಚಿಯಲ್ಲಿ ಕುಳಿತುಕೊಂಡು ಅವನು ಕೇಳಿದ. "ಯಾವಾಗ ಬಂದಿರಿ ನೀವು? ಎಲ್ಲೋ ಪ್ರವಾಸಕ್ಕೆ ಹೋಗಿದ್ದಿರಂತೆ!"

ಡಾಕ್ಟರರು ನಸುನಕ್ಕರು... "ಬೆಳಗ್ಗೆ ಹತ್ತೂವರೆಗೆ ಬಂದೆ..."

ಮಾತು ಮುಂದುವರಿಸುವ ವಿಧಾನ ಅವರಿಗೆ ಹೊಳೆಯಲಿಲ್ಲ. ಬಂದವನ ಪಾಯಿಜಾಮಾದ ಕಿಸೆ ಬಾಟಲಿಯ ಆಕಾರದಲ್ಲಿ ಉಬ್ಬಿದುದು ಕಾಣಿಸುತ್ತಿತ್ತು. ಅವನು ಅದನ್ನು ತೆಗೆಯುವ ಅವಸರದಲ್ಲಿದ್ದಂತೆ ತೋರಲಿಲ್ಲ; ಬಹುಶಃ ಸಾಮಾನ್ಯವಾದ ಬೇನೆಗೆ ಮದ್ದು ಕೇಳಲು ಬಂದಿರಬೇಕು. ಅವನ ಪರಿಚಯ ಮಾಡಿಕೊಳ್ಳುವ ಆತುರವಿತ್ತು. ನೇರವಾಗಿ ಕೇಳಲು ಮನಸ್ಸು ಬರಲಿಲ್ಲ.

"ಯಾವ ಕಡೆಗೆಲ್ಲ ಹೋದಿರಿ? ಬಹಳ ಅರ್ಜೆಂಟಾಗಿಯೇ ಹೊರಟಿದ್ದಿರಂತೆ...." ಅವನೇ ಕೇಳಿದ.

"ಹೌದು. ಪೂರ್ವನಿಶ್ಚಿತ ಪಯಣ ಅಲ್ಲವೇ ಅಲ್ಲ. ಏಕೋ ತಿಳಿಯದು. ನಾನು ಹೊರಡುವ ದಿನ, ಅದರ ಹಿಂದಿನ ಕೆಲವು ದಿನಗಳಲ್ಲಿ ನನಗೆ ಮನಸ್ಸು ಸ್ವಸ್ಥ ಇರಲಿಲ್ಲ. ನಾನು ಮನೆ ಬಿಟ್ಟು ಅಲೆಯುವುದು ಅಪರೂಪ. ಬಿಡುವು ಇಲ್ಲದ ಉದ್ಯೋಗ ಇದು. ಇಪ್ಪತ್ತನೆಯ ವರ್ಷದಿಂದ ಈ ಕೆಲಸಕ್ಕೆ ಇಳಿದಿದ್ದೇನೆ. ೬ ವರ್ಷವಾಯಿತು. ... ನನ್ನ ರೋಗಿಗಳ ಅವಸ್ಥೆ ಹೇಳಿತೀರದು. ಈ ಹಳ್ಳಿಯವರಿಗೆ ಒಂದು ಮದ್ದಿನ ಉಪಯೋಗ ತಿಳಿಸಬೇಕಾದರೆ ನೂರು ಬಾರಿ ಹೇಳಬೇಕು. ನೂರು ಮನೆಗಳ ದುಃಖವನ್ನು ನಮ್ಮದನ್ನಾಗಿ ಮಾಡಿಕೊಂಡು ದುಡಿಯಬೇಕು. ಮೊನ್ನೆ ಎರಡು ತಿಂಗಳ ಹಿಂದೆ ಒಂದು ಇಂತಹ ಕೇಸ್ ಸಿಕ್ಕಿತ್ತು. ಎರಡು ತಿಂಗಳ ಕಾಲ ರೋಗದೊಂದಿಗೆ ಹೊಡೆದಾಡಿದೆ. ಗುಣವಾಗುತ್ತ ಬಂದಿದ್ದವನು ಅಪಥ್ಯಮಾಡಿಕೊಂಡ; ನಾನು ಹೊರಟ ಹಿಂದಿನ ದಿನ ತೀರಿಹೋದ. ಹೆಸರು ನಮಗೆ... ಬೇರೆ ವಿಶೇಷ ರೋಗಿಗಳಿರಲಿಲ್ಲ. ತಲೆ ಬಿಸಿಯಾಯಿತು. ಹೊರಟುಬಿಟ್ಟೆ..."

ಡಾಕ್ಟರರು ಪಟಪಟನೆ ಅಷ್ಟು ಹೇಳಿ ಮಾತು ನಿಲ್ಲಿಸಿದರು. ಅವನು ಕುತೂಹಲದಿಂದ ಕೇಳುತ್ತಿದ್ದ. ಆದರೆ ಅವನ ತುಟಿಗಳು ಮುಗುಳ್ನಗುತ್ತಿದ್ದ ಹಾಗೆ ತೋರುತ್ತಿದ್ದವು. ಅಥವಾ ಅದು ಅವನ ಸ್ವಭಾವವೋ... ಡಾಕ್ಟರರು ಮುಂದುವರಿಸಲಿಲ್ಲ. ತಾವು ಹೇಳಿದ ಮಾತುಗಳನ್ನು ಬಹಳ ದೊಡ್ಡದಾಗಿಯೇ ಹೇಳಿದ್ದು, ಅವನ ಮನೆಯೊಳಗೆ ಕುಳಿತವರಿಗೂ ಕೇಳಿಸುವಹಾಗಿದುದ್ದು ಅವರಿಗೆ ಅಸಮಾಧಾನವನ್ನುಂಟುಮಾಡಿತು. ಬುದ್ಧಿಯ ಕಳ್ಳತನವನ್ನು ಮನಸ್ಸು ಕಂಡುಹಿಡಿದಿತ್ತು.

"ಹೌದು. ಒಮ್ಮೊಮ್ಮೆ ಹಾಗೇ ಆಗುತ್ತದೆ. ನಾವು ನೆಚ್ಚಿಕೊಂಡ ವೃತ್ತಿಯಲ್ಲೇ ಬೇಸರ ಬರುತ್ತದೆ..." ಅವನು ಡಾಕ್ಟರರಿಗೆ ಮುಂದುವರಿಸಲು ಪ್ರಚೋದನೆ ಕೊಟ್ಟ.

"ಹಾಗೆಯೇ ಆಯಿತು. ಇಲ್ಲಿಂದ ಹೊರಡದಿದ್ದರೆ ಹುಚ್ಚು ಹಿಡಿಯುತ್ತದೇನೋ ಎನ್ನಿಸಿತು. ಆದದ್ದಾಗಲಿ ಎಂದು ಹೊರಟೆ. ಎಲ್ಲೆಲ್ಲಿ ಹೋದೆನೆಂದು ನನಗೆ ಸರಿಯಾಗಿ ನೆನಪಿಲ್ಲ. ನಾನು ಅಲೆದುದು ಒಂದು ಕ್ರಮ ಇಟ್ಟುಕೊಂಡು ಎನ್ನಲಾರೆ. ಒಟ್ಟು ಉದ್ವೇಗ ತೀರುವ ವರೆಗೆ, ಹಣ ತೀರುವ ವರೆಗೆ ಅಲೆದೆ ಎನ್ನಬಹುದು... ಆಗುಂಬೆಯ ಘಾಟಿ ಹಾದು ಮೈಸೂರು ಸ್ಟೇಟನ್ನು ಪ್ರವೇಶಿಸಿದೆ. ಗೆರೆಸೊಪ್ಪೆಗೆ ಹೋದೆ. ಅಲ್ಲಿಂದ ತಾಳಗುಪ್ಪಕ್ಕೆ ಬಂದು ಬೆಂಗಳೂರಿಗೆ ಹೋದೆ. ಅಲ್ಲಿಂದ ಮೈಸೂರು, ಕೃಷ್ಣರಾಜಸಾಗರ, ಬರುವಾಗ ಹಾಸನ ಮಾರ್ಗವಾಗಿ ಬೇಲೂರು ನೋಡಿಕೊಂಡು ಬಂದೆ. ..ಬಹಳ ಸುಂದರವಾದ ಸ್ಥಳಗಳು. ಗೆರೆಸೊಪ್ಪೆಯನ್ನು ನೋಡುವಾಗ ಅಬ್ಬರ ತಡಸಲಿನಂತೆ ಉದ್ವೇಗದಿಂದಿದ್ದೆ. ವೃಂದಾವನದಲ್ಲಿ ಕೃತಕ ಶಾಂತಿ ಸಿಕ್ಕಿತು. ಮತ್ತೆ ಬೇಲೂರಿನಲ್ಲಿ ನಿಜವಾದ ಸಂಪೂರ್ಣವಾದ ತೃಪ್ತಿ ಸಿಕ್ಕಿತು.

ಅವನು 'ಹೂಂ' ಗುಟ್ಟುತ್ತಿದ್ದ. ಡಾಕ್ಟರರು ವಿವರವಾಗಿ ಅವನಿಗೆ ತಾವು ನೋಡಿದ ಸ್ಥಳಗಳನ್ನು ಬಣ್ಣಿಸಿದರು. ಮೊದಲಿನಿಂದ ಕೊನೆಯ ತನಕ ಅವರ ಸ್ವರದೊಡ್ಡದಾಗಿಯೇ ಇತ್ತು... ಕಡೆಗೆ ಅವನು ಕಿಸೆಯಿಂದ ಬಾಟಲಿ ತೆಗೆದು ಮೇಜಿನ ಮೇಲೆ ಇರಿಸಿದ.

"ಓ! ಔಷಧಕ್ಕೆ ಬಂದಿರೇನು ನೀವು! ನಾನು ಸುಮ್ಮನೆ ಗೋಗರೆಯುತ್ತ ಕುಳಿತೆ."

"ಚಿಂತೆಯಿಲ್ಲ ಬಿಡಿ, ಅಂತಹ ವಿಶೇಷವೇನೂ ಇಲ್ಲ. ಸ್ವಲ್ಪ ಜ್ವರ.....ಶೀತದ ಪ್ರಭಾವವೇನೋ..."

ಡಾಕ್ಟರರು ಅವನಿಂದ ರೋಗದ ವಿವರಗಳನ್ನೆಲ್ಲ ಕೇಳಿದರು. ಅವನು ಒಂದೊಂದಾಗಿ ಹೇಳುತ್ತ ಬಂದ. ಅವನು ಮುಗುಳ್ನಗೆ ಇನ್ನೂ ಮಾಯವಾಗಿರಲಿಲ್ಲ.

"ಎಷ್ಟು ದಿನವಾಯಿತು ಜ್ವರ ಸುರುವಾಗಿ?"

"ಎಂಟು ದಿನ"

ಡಾಕ್ಟರರು ಅಸಮಾಧಾನದಿಂದ ಮುಖ ಎತ್ತಿ ಪುನಃ ಕೆಳಗೆ ಹಾಕಿದರು. "ಎಂಟು ದಿನವಾಯಿತು" ಎಂದು ಎಷ್ಟು ಸಮಾಧಾನದಿಂದ ಹೇಳುತ್ತಾನೆ ಪ್ರಾಣಿ! ಇಷ್ಟು ದಿನ ತಡಮಾಡಿದ್ದೂ ಅಲ್ಲದೆ ಈಗಲಾದರೂ ಚುರುಕು ತೋರಿಸಿದನೆ!

ಡಾಕ್ಟರರು ನೋಟ್‌ಬುಕ್ ತೆಗೆದರು. ರೋಗಿಯ ಹೆಸರು ದಿನೆ ಬರಕೊಳ್ಳಲಿತ್ತು.

"ಏನು ಹೆಸರು ಮಗುವಿನದ್ದು...."

ಅವನ ಉತ್ತರದ ಹಾದಿ ಕಾಯದೆ ಅವರು ಪುಟ ಮಗುಚಿದರು. ಹನ್ನೆರಡು ದಿನಗಳ ಹಿಂದೆ ತಾವು ಬರೆದು ನಿಲ್ಲಿಸಿದಲ್ಲಿಗೆ ಬಂದು ನೋಡಿದರು.

ಮುಂದಿನ ಪುಟಗಳಲ್ಲೂ ಅಕ್ಷರಗಳಿದ್ದವು!

ಅಕ್ಷರಗಳು ಅವರವಲ್ಲ. ಆ ಅಕ್ಷರಗಳು ಬಹಳ ಮುದ್ದಾಗಿದ್ದವು. ಮುತ್ತಿನ ಸರ ಜೋಡಿಸಿದಂತೆ ಬರೆಯಲ್ಪಟ್ಟದ್ದವು.

ಸುಗುಣಾ ಬರೆದಿರಬೇಕು ಅದನ್ನ!

ಡಿಸ್ಪೆನ್ಸರಿಯ ಸುತ್ತ ಡಾಕ್ಟರರು ಕಣ್ಣೋಡಿಸಿದರು. ಅವರು ಬಿಟ್ಟು ಹೋಗುವಾಗ ಇದ್ದ ಅಸ್ತವ್ಯಸ್ತತೆ, ಕಸದ ಚೂರುಗಳು, ಧೂಳು ಎಲ್ಲ ಈಗ ಇಲ್ಲವಾಗಿದ್ದವು. ಮದ್ದಿನ ಬಾಟಲಿಗಳು ಕನ್ನಡಿ ಕಪಾಟುಗಳೊಳಗೆ ಶಿಸ್ತಿನಿಂದ ನಿಂತಿದ್ದವು. ಕೆಳಗಿನ ನೆಲ ನಿರ್ಮಲವಾಗಿತ್ತು. ಮೇಲಿದ್ದ ಜೇಡನ ಬಲೆಗಳು ನಿರ್ನಾಮವಾಗಿದ್ದವು.

ಅವನು ನಗುತ್ತಿದ್ದ.

ಡಾಕ್ಟರರು ತುಸು ನಕ್ಕರು. "ವಿವರ ಕೇಳಿ ಸುಮ್ಮನೆ ಕೆಲಸಮಾಡಿದಹಾಗಾಯಿತು. ಈಗ ವಾಸಿಯಾಗುತ್ತ ಬಂದಿದೆಯಲ್ಲವೆ?"

ಅವನು "ಹೂಂ" ಎಂದ.

ಡಾಕ್ಟರರು ನೋಟಬುಕ್ಕಿನಲ್ಲಿ ಬರೆದ ವಿವರದಂತೆ ಔಷಧ ತುಂಬಿಸಿಕೊಟ್ಟರು. ಅವನು ಹಣ ಎಣಿಸಿಕೊಟ್ಟುದನ್ನು ತೆಗೆದು ಡ್ರಾವರಿನೊಳಗೆ ಹಾಕಿದರು.

"ಸಂಜೆ ಊರಿಗೆ ಹೋಗಬೇಕು ನಾನು. ಅದ್ದರಿಂದ ಈಗ ಬರುತ್ತೇನೆ" ಎಂದು ಹೇಳಿ ಅವನು ಹೊರಟ. ಡಾಕ್ಟರರು ಅವನು ಹೋಗುವುದನ್ನೇ ನೋಡುತ್ತ ಕುಳಿತರು. ಅವನು ಕಣ್ಣಿಂದ ಮರೆಯಾದ ಬಳಿಕ ಮೇಜಿನ ಮೇಲೆ ತಲೆಯಿಟ್ಟು ಮಲಗಿದರು. ತೃಪ್ತಿಯ ನಿಟ್ಟುಸಿರು ಹೊರಹೊಮ್ಮಿಸಿ ನಿದ್ರಿಸಲು ಪ್ರಯತ್ನಿಸಿದರು.

ಸಂಜೆಯಾಯಿತು. ಡಾಕ್ಟರರು ಡಿಸ್ಪೆನ್ಸರಿಯಲ್ಲೇ ಇದ್ದರು. ಅಮ್ಮ ಬಂದು "ಕಾಫಿ ಕುಡಿಯುವುದಿಲ್ಲವೇನಪ್ಪ .... ಮನೆಗೇ ಬರಲಿಲ್ಲ" ಎಂದಾಗ

" ಇಲ್ಲಿಗೇ ಕಳುಹಿಸಿ ಬಿಡಮ್ಮ …. '' ಎಂದರು.

ಐದು ನಿಮಿಷಗಳಲ್ಲಿ ಸುಗುಣಾ ಕಾಫಿ ತೆಗೆದುಕೊಂಡು ಬಂದಳು. ಡಾಕ್ಟರರು ಮೇಜಿನ ಮೇಲೆ ತಲೆಯಿಟ್ಟು ನಿದ್ರಿಸಿದವರಂತೆ ತೋರಿದರು. ಒಂದು ಕ್ಷಣ ಯೋಚಿಸಿ ಮೆಲ್ಲನೆ ಕಾಫಿ ತಿಂಡಿ ಮೇಜಿನ ಮೇಲಿರಿಸಿ ಸುಗುಣಾ ಮನೆಯೊಳಗೆ ಜಾರಿದಳು. ಡಾಕ್ಟರರು ತಲೆಯೆತ್ತಿ ಅವಳು ಹೋಗುತ್ತಿದ್ದ ಕಡೆಗೆ ನೋಡಿ ಅಂದುಕೊಂಡರು — ಇಷ್ಟು ಗರ್ವ!

ಗರ್ವವಲ್ಲದೆ ಮತ್ತೇನು?

ಏನು? ಅದೇ ತಿಳಿಯದ ವಿಷಯ. ಮದುವೆಯಾಗಿ ತಿಂಗಳುಗಳು ಎಂಟು ಕಳೆದಿವೆ. ಆದರೂ ಅವಳ ಮನೋಭಾವವನ್ನು ಪೂರ್ತಿಯಾಗಿ ತಿಳಿಯುವುದು ತನ್ನಿಂದಾಗಲಿಲ್ಲ.

ಅವಳನ್ನು ಮದುವೆಯಾಗುವ ಮೊದಲು ಅವರ ಜೀವನ ಪ್ರಶಾಂತವಾಗಿತ್ತು. ಅದರಲ್ಲಿ ವೈಯಕ್ತಿಕ ಕೋಲಾಹಲಕ್ಕೆ ಅಸ್ಪದವಿರಲಿಲ್ಲ. ಮನೆಯಲ್ಲಿದ್ದುದೂ ಅವರಿಬ್ಬರೆ. ಡಾಕ್ಟರ ಮತ್ತು ತಾಯಿ. ರೋಗಿಗಳ, ಗಿರಾಕಿಗಳ ಸುಖ ದುಃಖವೇ ಅವರ ಸುಖ ದುಃಖವಾಗಿತ್ತು. ಅವರ ಅವಶ್ಯಕತೆಗಳು ಕಡಿಮೆಯಿದ್ದವು — ಹಣದ ಆಸೆ ಅವರಿಗೆ ಇರಲಿಲ್ಲ.

ಆ ರೋಗಿಗಳೂ ಅವರ ಪರಿಚಯಸ್ಥರು. ಬಡವರು. ಅವರಿಗೆ ಹಿಡಿದ ದೈಹಿಕ ರೋಗಗಳಲ್ಲದೆ ಮಾನಸಿಕ, ಆರ್ಥಿಕ ರೋಗಗಳೂ ಅವರಿಗೆ ತಿಳಿದಿದ್ದವು. ಆದುದರಿಂದಲೇ ರೋಗಕ್ಕೆ ತಕ್ಕ ಔಷಧ ಕೊಡಬಹುದಿತ್ತು.

ಸುಗುಣಾಳನ್ನು ಮದುವೆಯಾಗುವಾಗ ಅವಳು ಅವರ ಜೀವನದ ಪ್ರತಿಯೊಂದು ಮುಖದಲ್ಲೂ ಸಹಚರಿಯಾದಾಳೆಂಬ ಆಸೆಯಿತ್ತು. ಸುಗುಣಾ ಹುಟ್ಟಿ ಬೆಳೆದುದು ಪಟ್ಟಣದಲ್ಲಿ — ನಿಜ. ಹ್ಯಾಸ್ಕೂಲಿನ ಕಡೆಯ ಕ್ಲಾಸಿನ ತನಕ ಓದಿದ್ದೂ ನಿಜ. ಆದರೂ ಅವಳು ಆಯುರ್ವೇದ ಪಂಡಿತರೊಬ್ಬರ ಮಗಳು. ವಿಧುರರಾದ ಪಂಡಿತರ ಮಗನೂ ಮಗಳೂ ಆಗಿದ್ದವಳು.

ಆ ಪಂಡಿತರ ಪರಿಚಯವಾಗಿ ಕೆಲವು ದಿನಗಳಲ್ಲಿ ಮದುವೆಯ ಮಾತು ಬಂದಿತ್ತು. " ನಮ್ಮ ಗುಣಾ ಶಾಲೆಗೆ ಹೋಗಿ ಇಂಗ್ಲಿಷ್ ಕಲಿತಿದ್ದಾಳೆ …. '' ಎಂದು ಪಂಡಿತರು ನಕ್ಕು ಹೇಳಿದ್ದರು.

ಅವಳು ಶಾಲೆಗೆ ಹೋಗಲಿ ಯಾ ಹೋಗದಿರಲಿ. ಪಂಡಿತರ ಔಷಧಗಳ ನಿಕಟ ಪರಿಚಯ ಅವಳಿಗಿದೆ ಎಂದು ತಿಳಿದೇ ಡಾಕ್ಟರರು ಅವಳನ್ನು ಮದುವೆಯಾಗಿದ್ದರು.

ಅದೇ ಅವರು ಮಾಡಿದ ತಪ್ಪು. ಪಂಡಿತರ ಮಗಳು ಅನುಭವವಿದ್ದರೂ ಅಂದು ತನಕ ತಂದೆಗೆ ಸಹಾಯ ಮಾಡುತ್ತಿದ್ದುದು ನಿರ್ವಾಹವಿಲ್ಲದುದರಿಂದ; ಅವಳಿಗೆ ರೋಗಿಗಳ ಬಗ್ಗೆ ನಿಜವಾದ ಅನುಕಂಪ ಇಲ್ಲ, ತನ್ನ ಉದ್ಯೋಗದ ಬಗ್ಗೆ ಅಭಿಮಾನವಿಲ್ಲ ಎಂಬುದು ಆ ಮೇಲೆ ಅವರ ತಿಳುವಳಿಕೆಗೆ ಬಂದಿತ್ತು.

ಅಮ್ಮ ಪುನಃ ಡಿಸ್ಪೆನ್ಸರಿಯೊಳಕ್ಕೆ ಬಂದರು. " ಯಾಕಪ್ಪ ಕತ್ತಲೆಯಲ್ಲೇ ಕುಳಿತಿದ್ದಿ '' ಎಂದು ದೀಪ ಹತ್ತಿಸಿದರು. ಡಾಕ್ಟರರು ದೀಪಕ್ಕೆ ಕೈಮುಗಿದರು. ಅಮ್ಮ ಅವರ ಬಳಲಿದ ಮುಖ ನೋಡಿ " ಬಾಗಿಲು ಹಾಕಿ ಬಂದು ಬಿಡಪ್ಪ. ಪ್ರಯಾಣದ ಆಯಾಸ ತುಂಬ ಇರುತ್ತದೆ. ಬೇಗನೆ ಮಲಗಿದರೆ ಸರಿಯಾಗುತ್ತದೆ'' ಎಂದು ಮನೆಯ ಕಡೆ ತಿರುಗಿದರು.

ಡಾಕ ರರು ಎದ್ದು ನಿಂತರು ಪುನಃ ಡಿಸ್ಪೆನ್ಸರಿಯ ಸುತ್ತ ಕಣ್ಣೋಡಿಸಿದರು. ಔ..ಶೀ ಷಧಗಳ ದೊಡ್ಡ ಬಾಟಲಿಗಳ ಜೊತೆಗೆ ವಿದೇಶೀ ಔಷಧಿಗಳ ಚಿಕ್ಕ ಬಾಟಲಿಗಳು. ಸ್ಟೆತಸ್ಕೋಪ್ ಇಂಜಕ್ಷನ್ ಸಾಧನಗಳು . ಈ ಕಲಬೆರಕೆಗೆ ಸರಕಾರದ ನಿಯಮಗಳೆಷ್ಟು ಕಾರಣವಾಗಿದ್ದವೋ ಅಷ್ಟೇ ತಮ್ಮ ಬೆಳೆಯುತ್ತಿದ್ದ ಖರ್ಚು ಕಾ' ..ಾಗಿತ್ತಲ್ಲವೆ? ಆ ಖರ್ಚಿಗೆ ಸುಗುಣಾ ದು..ಡ್ಡ ಕಾರಣವಾಗಿದ್ದಳಲ್ಲವೆ?

* * * *

ಬೆಡ್ ಲೇಂಪಿನ ಬೆಳಕು ಮುಖಕ್ಕೆ ಹೊಡೆಯುವಂತಿದ್ದಿಲ್ಲವಾದರೂ ಡಾಕ್ಟರರು ಶಾಲನ್ನು ಮುಖದ ಮೇಲೆಳೆದುಕೊಂಡು ಮಲಗಿದರು. ಬಾಗಿಲ ಬಳಿ ಪರಿಚಿತ ಹೆಜ್ಜೆಯ ಸದ್ದು ಕೇಳಿಸಿತ್ತು.

ಸದ್ದು ಕೋಣೆಯೊಳಕ್ಕ ಬಂತು. ಅವರ ಮಂಚದ ಹತ್ತಿರವಾಗಿ ನಿಂತಿತು. ಕಾಲ ಹೆಜ್ಜೆಯ ಸದ್ದು ನಿಂತಿತಷ್ಟೆ. ಸದ್ದು ಪೂರ್ತಿ ನಿಲ್ಲಲಿಲ್ಲ.

ಸುಗುಣಾ ಅಳುತ್ತಿದ್ದಳು.

ಡಾಕ್ಟರರು ಗಡಿಬಿಡಿಯಿಂದ ಎದ್ದು ಕುಳಿತು ಅವಳ ಕಡೆ ತಿರುಗಿ ಹೇಳಿದರು " ಕುಳಿತುಕೋ ಗುಣಾ….ಯಾಕೆ ಅಳುತ್ತಿ…''

ಅವಳು ಅಳು ನಿಲ್ಲಿಸಲಿಲ್ಲ.

ಡಾಕ್ಟರರಿಗೆ ಗಾಬರಿಯಾಯಿತು. ಎದ್ದು ಹೋಗಿ ಬಾಗಿಲು ಹಾಕಿ ಬಂದರು. ಸುಗುಣಾ ಅಳುವ ಕಾರಣವಾದರೂ ಏನು? ಬೆಳಗ್ಗಿನಿಂದ ಅಷ್ಟು ಗರ್ವದಿಂದಿದ್ದವಳು ಈಗ ಅಳುತ್ತಾಳೆ. ಇದೂ ಒಂದು ಆಟ.

ಆಟವೂ ಹೊಸದೆ. ಅವಳು ಅವರ ಎದುರು ಅತ್ತುದು ಇದೇ ಮೊದಲ ಬಾರಿ.

ಬೆಳಗಿನಿಂದ ಅವಳು ತೋರಿದ ವಿಮನಸ್ಕತೆಗೆ ಕಾರಣ ಕಲ್ಪಿಸುತ್ತ ದಣಿದ ಅವರು ಮಧ್ಯಾನ್ಹದ ಬಳಿಕ ಅದನ್ನು ತಿಳಿದೆನೆಂದುಕೊಂಡಿದ್ದರು. ಡಿಸ್ಪೆನ್ಸರಿಗೆ ಹೋದಬಳಿಕ ಅದು ಸ್ಪಷ್ಟವಾಗಿ ತಿಳಿದಿತ್ತು. ಅವಳ ವಿಮನಸ್ಕತೆ ಒಂದು ವಿಧದ ತಿರಸ್ಕಾರವೇ ಇರಬೇಕು. ದಿನವಿಡೀ ರೋಗಿಗಳ ಸಹವಾಸದಲ್ಲಿರುವ ಅವರ ಸ್ವಭಾವ ಇತ್ತೀಚೆಗೆ ತುಸು ಗಡಿಬಿಡಿಯದ್ದಾಗತೊಡಗಿತ್ತು. ಆಗೀಗ ರೋಗಿಗಳೊಡನೆ ಅವರು ಸಿಡುಕಿಕೊಳ್ಳುವುದನ್ನು ಡಿಸ್ಪೆನ್ಸರಿಯ ಅಸ್ತವ್ಯಸ್ತತೆಯನ್ನು ಕಂಡು ಅವಳು ಯಾವಾಗಲೂ ನಗುತ್ತಿದ್ದಳು. ಸಹಾಯ ಮಾಡುವುದರ ಬದಲು ನಗುವುದು! ಈ ಬಾರಿ ಅವರು ಹೊರಟು ನಿಂತಾಗಲೂ ಅವಳು ಮುಗುಳ್ನಕ್ಕಿದ್ದಳು. ಬಹುಶಃ ಅವರು ಹೋದ ಬಳಿಕ ಅವಳು ಡಿಸ್ಪೆನ್ಸರಿಯ ಕಾರ್ಯವನ್ನು ಮುಂದುವರಿಸಿದ್ದು, ಅದಕ್ಕೊಂದು ಸುವ್ಯವಸ್ಥಿತರೂಪ ಕೊಟ್ಟುದು ಅವರನ್ನು ಹಂಗಿಸುವುದಕ್ಕೆ ಆಗಿರಬೇಕು. . . ಡಾಕ್ಟರರು ಹಾಗೆ ತಿಳಿದುಕೊಂಡಿದ್ದರು. ರಾತ್ರೆ ಗಂಭೀರವಾಗಿ ಅವಳಿಗೆ ನಾಲ್ಕು ಮಾತು ಹೇಳಬೇಕು ಎಂದು ಅಣಿಮಾಡಿ ಇಟ್ಟುಕೊಂಡಿದ್ದರು. " ಗುಣಾ ನಾಲ್ಕುದಿನ ಒಂದು ಕೆಲಸವನ್ನು ಶ್ರದ್ಧೆಯಿಂದ ಮಾಡುವುದು ಸುಲಭ ಜೀವನದ ವೃತ್ತಿಯೇ ಅದಾದರೆ ಮಾತ್ರ ಬೇಸರ ಬರುತ್ತದೆ. ನಾನೂ ಮೊದಲು ಬಹಳ ಅಚ್ಚುಕಟ್ಟಾಗಿಯೇ ಇದ್ದೆ. . .''

ಆದರೆ ಈಗ ಸುಗುಣಾ ಅಳುತ್ತಿದ್ದಾಳೆ. ಅವಳನ್ನು ಏನೆಂದು ಸಂತೈಸಬೇಕು? ಏನಾದರೂ ಹೇಳಲೇ ಬೇಕು.

ಡಾಕ್ಟರರು ಮೆಲ್ಲಗೆ ಹೇಳಿದರು. "ನೀನು ಯಾಕೆ ಅಳುತ್ತೀ ಗುಣಾ….ನೀನು ಮಾಡಿದ ಕೆಲಸ ಒಳ್ಳೆಯದೇ ಆಯಿತಲ್ಲ. ನಾನು ಹೋದುದೇ ತಪ್ಪು. ಆ ತಪ್ಪನ್ನು ಮುಚ್ಚಿದುದು ಅಳುವಂತಹ ಕೆಲಸವಲ್ಲ. ನಮ್ಮನ್ನ ನಂಬಿಕೊಂಡಿದ್ದ ರೋಗಿಗಳಿಗೆ ತೊಂದರೆಯಾಗಲಿಲ್ಲ. ಅದು ಸಂತೋಷ. . .'' ಮತ್ತೆ ತುಸು ತಡೆದು ರಮಿಸುವ ಧ್ವನಿಯಲ್ಲಿ ಹೇಳಿದರು " ಇಷ್ಟು ದಿವಸ ನೀನು ಮದ್ದಿನ ಇಲಾಖೆಯಿಂದ ದೂರವಿದ್ದರೂ ನೀನು ಕೊಟ್ಟ ಔಷಧ ಸರಿಯಾಗಿಯೇ ಇದೆ.''

ಸುಗುಣಾ ಅಳು ನಿಲ್ಲಿಸಿದಳು. ಅವಳ ತುಟಿಗಳು ನಗಲು ಯತ್ನಿಸಿದವು. ಡಾಕ್ಟರರು ಅವಳನ್ನು ಎಬ್ಬಿಸಿ ಹೇಳಿದರು. " ನಾನು ನಿನಗೇನು ತೆಗೆದುಕೊಂಡು ಬಂದಿದ್ದೇನೆ ಗೊತ್ತೇ? ಹೊರಗೆ, ಚೀಲದಲ್ಲಿದೆ. ತೆಗೆದುಕೊಂಡು ಬಾ..ನೋಡುವ''

ಅವಳು ಚೀಲ ತೆಗೆದುಕೊಂಡು ಬಂದು ಉಡುಗರೆಯನ್ನು ಪರೀಕ್ಷಿಸಿ ಆದ ಬಳಿಕ ಡಾಕ್ಟರರು ಅವಳಿಗೆ ತಮ್ಮ ಪ್ರಯಾಣದ ಕತೆಯನ್ನು ಹೇಳತೊಡಗಿದರು. ಮಧ್ಯಾಹ್ನ ಒಮ್ಮೆ ಕೇಳಿದ್ದ ಆ ಕತೆಯನ್ನು ಸುಗುಣಾ ಅದೇ ಆಸಕ್ತಿಯಿಂದ, ನೀರವವಾಗಿಯೇ, ಪುನಃ ಕೇಳಿದಳು.

* * * *

ಬೆಳಿಗ್ಗೆ ಕಾಫಿ ತೀರಿಸಿ ಡಿಸ್ಪೆನ್ಸರಿಯ ಬಾಗಿಲು ತೆಗೆದು ಕುಳಿತು ಡಾಕ್ಟರರು ಹರ್ಷಚಿತ್ತರಾಗಿ ಸಿಳ್ಳು ಹಾಕುತ್ತಿದ್ದರು. ಅವರು ಬಂದುದು ಈ ಮೋದಲೇ ಊರಲ್ಲಿ ಸುದ್ದಿಯಾಗಿ ಇಂದು ರೋಗಿಗಳ ತಂಡವೇ ಬರುವ ಸಂಭವವಿತ್ತು.

ಅವರು ನೋಡುತ್ತಿದ್ದಂತೆ ಹರಕು ಮುಂಡಾಸು ಸುತ್ತಿ ಕೆಂಪಗಿನ ಲಂಗೋಟಿ ಒಂದರ ಹೊರತು ಉಳಿದೆಲ್ಲ ಮೈ ಬತ್ತಲೆಯಾಗಿದ್ದ ರಾಮ ನಾಯಕ ಅವರ ಅಂಗಳವನ್ನು ಹಾದುಹೋದ. ನರೆತ ತಲೆಯನ್ನು ಮುಂಡಾಸು ಮುಚ್ಚಿದ್ದರೆ ಮುಖವನ್ನು ಬೀಡಿಯ ಹೊಗೆ ಕವಿದಿತ್ತು. ಡಾಕ್ಟರರು ಹೊರಟ ಎರಡು ದಿನಗಳ ಹಿಂದೆ ಅವನು ಚಿಕ್ಕಮಗುವಿಗೆ ಜ್ವರ ಎಂದು ಮದ್ದು ಕೊಂಡುಹೋಗಿದ್ದ. ಆ ವಿಷಯ ಏನಾಯಿತು ಎಂಬ ಕುತೂಹಲದಲ್ಲಿ ಡಾಕ್ಟರರು ಅವನನ್ನು ಬಳಿಗೆ ಕರೆದರು.

ಅವನು ಬೀಡಿಯನ್ನು ಬಿಸುಟು, ಮುಂಡಾಸನ್ನು ತೆಗೆದು ಸೊಂಟಕ್ಕೆ ಸುತ್ತಿಕೊಂಡು ವೇಗವಾಗಿ

ಬಂದು ನಮಸ್ಕರಿಸಿ ಹೇಳಿದ "ಅಯ್ಯನವರು ಯಾವಾಗ ಬಂದಿರಿ. ನೀವು ಇಲ್ಲ ಅಂತ ನಾನು ಇದ್ದಾ ಹೋದೆ..."

"ಮಗುವಿಗೆ ಔಷಧ ಸರಿಯಾಯಿತೋ ...."

"ಸರಿಯೇನು ಸ್ವಾಮಿ. ನೀವು ಕೊಟ್ಟ ಔಷಧಿ ಕೊಟ್ಟೆ. ಸ್ವಲ್ಪ ವಾಸಿ ಆಯಿತು; ಸುಮ್ಮನೆ ಕೂತೆ. ಒಂದು ದಿನ ಮದ್ದು ಬಿಟ್ಟರೆ ಪುನಃ ಜೋರಾಯಿತು. ಇಲ್ಲಿಗೆ ಬರುವಾಗ ನೀವು ಇರಲಿಲ್ಲ. ಯಾವಾಗ ಬರುತ್ತೀರಿ ಎಂದು ಕೇಳಿದ್ದಕ್ಕೆ ಚಿಕ್ಕ ಅಮ್ಮ ಗೊತ್ತಿಲ್ಲಾ ಅಂದರು. ಮತ್ತೆ ಔಷಧಿ ಮಾಡಲೇ ಇಲ್ಲ ........ ಹೋಯಿತು ...."

"ಎಂಥದ್ದು ಹೋಯಿತು ?" ಡಾಕ್ಟರರು ಉದ್ವೇಗದಿಂದ ಕೇಳಿದರು.

"ಜ್ವರ ತನ್ನಷ್ಟಕ್ಕೇ ಬಿಟ್ಟಿತು ಸ್ವಾಮಿ..."

ರಾಮನಾಯಕ ಹೊರಟು ಹೋದ. ಡಾಕ್ಟರರು ನೋಟ್ ಬುಕ್ ತೆರೆದರು. ಸುಗುಣಾ ಮದ್ದು ಕೊಡಲು ತೊಡಗಿದ್ದು ಅವರು ಹೋದ ಆರು ದಿನಗಳ ಬಳಿಕ.

ಅದುವರೆಗಿನ ದಿನಗಳು... ಆರು ದಿನಗಳು ... ಡಿಸ್ಪೆನ್ಸರಿ ಬಾಗಿಲು ಹಾಕಿಕೊಂಡೇ ಇದ್ದಿರಬೇಕು.

ನೋಟ್‌ಬುಕ್ಕಿನಲ್ಲಿ ಮೊದಲಿಗೆ ಇರುವುದು ಆ ಮಗುವಿನ ಹೆಸರು. C/o ಶಂಕರ ಎಂದು ಬರೆದಿದೆ. ಶಂಕರ. ಅದೇ ಶುಭ್ರವಾದ ಬಟ್ಟೆಗಳ ಚುರುಕು ಹುಡುಗ.... ಅವನಿಗಾಗಿಯೇ ಡಿಸ್ಪೆನ್ಸರಿಯ ಬಾಗಿಲು ತೆರೆಯಿತು. ಅವನಿಗಾಗಿಯೇ ಸುಗುಣಾ ತನ್ನ ವ್ರತ ಮುರಿದು ಡಿಸ್ಪೆನ್ಸರಿಯು ಒಳಗೆ ಬಂದಳು....

ಡಾಕ್ಟರರು ಎದ್ದು ನಿಂತರು. ಈ ಶಂಕರ ಯಾರು?.... ಸುಗುಣಾಳಿಗೆ ಅವನ ಮೇಲೆ ಯಾಕೆ ಇಷ್ಟು ಅಭಿಮಾನ....?

ಅವರು ಆಸ್ಪತ್ರೆಯಿಂದ ಹೊರಗೆ ಬಂದರು. ನೇರವಾಗಿ ಮನೆಯೊಳಗೆ ಹೊಕ್ಕು ಕರೆದರು.... "ಸುಗುಣಾ...."

"ಅವಳು ಸ್ನಾನಕ್ಕೆ ಹೋಗಿದ್ದಾಳೆ. ಯಾಕಪ್ಪ?..." ಎಂದು ಅಮ್ಮ ಮುಂದೆ ಬಂದರು.

"ಅಮ್ಮ ! ಶಂಕರ ಎಂಬವ ನಿಮಗೆ ಗುರುತೆ ? ಮೊನ್ನೆ ಔಷಧಿಗೆ ಬಂದಿದ್ದ.... ಆ ಹುಡುಗ" ಡಾಕ್ಟರರು ಅಧೀರರಾಗುತ್ತಿದ್ದರು.

ಅಮ್ಮ ಜ್ಞಾಪಿಸಿಕೊಂಡು ಹೇಳಿದರು "ಓ ಅವನೇ ? ಆ ಬೆಳ್ಳಗಿನ ಹುಡುಗ. ಅವನ ಪರಿಚಯ ಇಲ್ಲವೇನೋ ನಿನಗೆ ? ನಿನ್ನ ಮದುವೆಯ ದಿನ ಪಂಡಿತರ ಬಲಗೈಯ ಹಾಗೆ ಸಹಾಯ ಮಾಡುತ್ತಿದ್ದ. ಅವನ ಮನೆ ಪಂಡಿತರ ಮನೆಯ ಒತ್ತಿನದ್ದು. ನಾನು ಅವನ ತಾಯಿಯನ್ನು ನೋಡಲು ಹೋಗಿದ್ದೆ ಅವರ ಮನೆಗೆ.. ಪಾಪ ! ಅವರಿಗೂ ನನ್ನ ಹಾಗೆ ಯಾವಾಗಲೂ ಸುಖವಿಲ್ಲ. "ನಮ್ಮ ಗುಣಾಗೂ ಅವನಿಗೂ ಒಂದೇ ಪ್ರಾಯವಂತೆ...." ಮತ್ತೆ ತುಸು ತಡೆದು "ನಮ್ಮ ಗ್ರಾಮದ ಶ್ಯಾನುಭಾಗರು ಅವನ ಸೋದರಮಾವ ಅಲ್ಲಿಗೆ ಬಂದವನೇ ಇಲ್ಲಿಗೆ ಬಂದದ್ದು. ಮದ್ದು ಅವರ ಮಗುವಿಗೇ.... ಮೊನ್ನೆ ಎರಡನೇ ಸಲ ಬಂದಾಗ ವಾಸಿ ಉಂಟೆಂದು ಹೇಳಿದ. ನಮ್ಮ ಗುಣಾ ಚಿಂತೆಯಿಲ್ಲ" ಎಂದರು.

ಅಮ್ಮ ಸೊಸೆಯ ಗುಣವರ್ಣನೆ ಮಾಡುತ್ತಿದ್ದರು. ಡಾಕ್ಟರರು ಅವಡುಗಚ್ಚಿ ಕೇಳುತ್ತ ನಿಂತವರು ತುಸು ನಕ್ಕು ಹೇಳಿದರು.. "ಒಳ್ಳೆಯದೇ ಆಯಿತು ಬಿಡಮ್ಮ. ಗುಣಾ ಇನ್ನು ಸ್ವಲ್ಪ ನನಗೂ ಸಹಾಯ ಮಾಡಲಿ."

ಹಾಗೆಯೇ ಅವರು ಇನ್ನೊಮ್ಮೆ ನಕ್ಕರು. ಸ್ನಾನದ ಮನೆಯಿಂದ ಬರುತ್ತಿದ್ದ ಸುಗುಣಾಳನ್ನು ಕಂಡು ಅವಳಿಗೂ ಹೇಳಿದರು "ಓ ! ನೀನು ಅತ್ತುದು ಇದಕ್ಕೇನು ? ಶಂಕರನಿಗಾಗಿಯೇ ನೀನು ಡಿಸ್ಪೆನ್ಸರಿಗೆ ಬಂದುದೆಂದು ನಾನು ಸಂಶಯ ತಾಳಬಹುದು ಅಂತ ? ಸಂಶಯ.... ಶಂಕರ ಒಳ್ಳೆಯ ಹುಡುಗ.... ನಾನು.... ನನಗೆ ಯಾಕೆ ಅವನ ಗುರುತು ಸಿಗಲಿಲ್ಲ !"

ಸುಗುಣಾ ಮಾತನಾಡಲಿಲ್ಲ. ಮುಖದ ಮೇಲೆ ಮೂಡಿದ ಬೆವರಹನಿಗಳು ತಲೆಯಿಂದ ಇನ್ನೂ ಇಳಿಯುತ್ತಿದ್ದ ನೀರಬಿಂದುಗಳೆಡೆಯಲ್ಲಿ ಕಾಣದಾದವು.

ಡಾಕ್ಟರರು ಮುಂದುವರಿಸಿದರು. "ಸ್ವಾರ್ಥ... ಸ್ವಾರ್ಥ. ಅಂತಲೂ ಅನಿಸುತ್ತದೆ. ಆದರೂ ನಿನ್ನ ಕೆಲಸ ಅಲ್ಲಿಗೇ ನಿಲ್ಲಲಿಲ್ಲವಲ್ಲ.... ಯಾವ ಒಳ್ಳೆಯ ಕೆಲಸ ಸ್ವಾರ್ಥದಿಂದ ಅಲ್ಲದೆ ತೊಡಗುತ್ತದೆ ? ಗಾಲಿಗೆ ಕೈಕೊಟ್ಟದ್ದಿ. ಇನ್ನು ನಾನು ಬಿಡುವುದಿಲ್ಲ...."

ಸುಗುಣಾ ಮೆಲುವಾಗಿ ನಕ್ಕಳು.

# ನಿಮಗೂ ಹೀಗಾಗಿರಬಹುದು

## ( ಒಂದು ಲಹರಿ )

ಲೇಖಕರು: ಪ್ರೊ. ಎ. ಕೆ. ರಾಮಾನುಜನ್, ಬೆಳಗಾವಿ.

ನಾನು ಹುಟ್ಟಿ ಎಷ್ಟೋ ವರುಷವಾಯಿತು. ಅವತ್ತಿನಿಂದ ಇವತ್ತಿನವರೆಗೆ ನನ್ನನ್ನು ನೋಡಿ ಅನೇಕರು ನಕ್ಕಿದ್ದಾರೆ. ನಾನೂ ಅವರನ್ನು ನೋಡಿ ನಕ್ಕಿದ್ದಾಗಿದೆ.

ಸ್ನೇಹಿತರು ನನ್ನನ್ನು ನೋಡಿ ನಕ್ಕಾಗ, 'ನನ್ನಂತಹ ಗಂಭೀರ ವ್ಯಕ್ತಿಯಲ್ಲಿ ನಗುವಿಗೇನು ಅವಕಾಶ ?' ಎಂದು ಆಶ್ಚರ್ಯಪಟ್ಟಿದ್ದೇನೆ. ನಿಮಗೂ ಹೀಗಾಗಿರಬಹುದು. ನಿಮ್ಮನ್ನು ನೋಡಿ ಜನ ನಕ್ಕಾಗ ನಿಮಗೂ 'ನಮ್ಮ ಸೌಂದರ್ಯಸದ್ಗುಣಗಳನ್ನೇ ಹಾಸ್ಯಮಾಡುತ್ತಾರಲ್ಲ !' ಅನಿಸಿರಬೇಕು. ನಮ್ಮ ನಿಮ್ಮಂಥವರ ಸಮಾಧಾನಕ್ಕೋಸ್ಕರವೇ ಈ ಲೇಖನ ಬರೆಯುತ್ತಿದ್ದೇನೆ.

ನಮ್ಮಂತಹ ಶ್ರೀಸಾಮಾನ್ಯರು 'ಮನುಷ್ಯ ಮಗುವಿನ ತಂದೆ' ಎಂದುಕೊಂಡಿದ್ದರೆ, ಕವಿಯೊಬ್ಬ ಮಾತನ್ನು ಕೊಂಕಿಸಿ 'ಮಗುವೇ ಮನುಷ್ಯನ ತಂದೆ' ಎಂದುಬಿಟ್ಟ. ಈಗಿನ ಮನಶ್ಶಾಸ್ತ್ರಜ್ಞರೂ ಅವನ ಪಕ್ಷವನ್ನೇ ಹಿಡಿದು, ಅಸ್ತು ಎಂದು ಅಕ್ಕಿಕಾಳು ಹಾಕಿದ್ದಾರೆ: ನೀವು ಇಂದು ನಿಮ್ಮ ಹೆಂಡತಿಯ ಜತೆಗೆ ಜಗಳವಾಡಿದರೆ, ನಿಮ್ಮ ಎರಡನೇ ವರ್ಷದಲ್ಲಿ ನಿಮ್ಮ ತಾಯಿ ನಿಮ್ಮ ಕಿವಿ ಹಿಂಡಿದ್ದೇ ಕಾರಣ, ಎಂದೆಲ್ಲ ಹೆದರಿಸುತ್ತಾರೆ. ಆದ್ದರಿಂದ ಒಂದು ಬಾಲ್ಯದ ನೆನವನ್ನು ಹೇಳಿಬಿಡುತ್ತೇನೆ.

ನಾನು ಹುಟ್ಟಿದ ಎರಡನೇ ತಿಂಗಳಲ್ಲಿ, ಯಾರೋ ಮನೆಗೆ ಬಂದವರೊಬ್ಬರು, "ಅಯ್ಯೊ, ಮಗು ಎಷ್ಟು ಚೆನ್ನಾಗಿ ನಗ್ತಾ ಇದೆ ನೋಡೀಂದ್ರೆ-ಸದ್ದೇ ಇಲ್ಲದೆ, ಮೈ ಎಲ್ಲ ಕುಲುಕಿಕೊಂಡು !" ಎಂದರಂತೆ. ನಾನು ಮೈ ಕುಲುಕಿಕೊಂಡು ಸದ್ದೇ ಇಲ್ಲದೆ ನಗುವುದನ್ನು ನೋಡುವುದಕ್ಕೆ ನನ್ನ ನಾಲ್ಕು ಸೋದರತ್ತೆಯರೂ ಮೂವರು ಚಿಕ್ಕಮ್ಮ ದೊಡ್ಡಮ್ಮಂದಿರೂ ಓಡಿಬಂದು, "ಚೀ ಕಳ್ಳ, ನಗ್ತಾನೆ ಎರಡು ತಿಂಗಳಿಗೇ, ಏನರ್ಥ ಆಗೋಯ್ತೋ ಈಗಲೇ" ಎಂಬ ಪ್ರೀತಿಯಿಂದ ಮೂದಲಿಸಿದರು; ಕೆನ್ನೆ ಚಿವುಟಿದರು. (ಈಗಲೂ ಸ್ವಲ್ಪ ಆಗಾಗ ನೋಯುತ್ತೆ); ದೃಷ್ಟಿಪರಿಹಾರಕ್ಕೆಂದು, ಮುಂಗೈಯಿಂದ ನನ್ನ ಮುಖದ ಎರಡು ಕೆನ್ನೆಯನ್ನೂ ನೇವರಿಸಿ ಲಟಪಟ ಅಂತ ಅದರ ಮುಷ್ಟಿಯಲ್ಲಿ ಅಡಗಿದ್ದ ನೆಟಗೆಯನ್ನೆಲ್ಲ ಮುರಿದು ಚೆಲ್ಲಿದರು. "ಲೇ, ನೋಡೇ ನಿನ್ನ ಮಗ ಬಚ್ಚು ಬಾಯನ್ನೂ ಬಿಟ್ಟುಕೊಂಡು ಕುಲುಕಾಡಿಕೊಂಡು ನಗ್ತಾ ಇದಾನೆ! ನೋಡು ಬಾ !" ಎಂದು ಒಕ್ಕೊರಲಿನಲ್ಲಿ ಕೂಗು ಹಾಕಿದರು. ಇಷ್ಟೆಲ್ಲ ಒಂದು ನಿಮಿಷದಲ್ಲಿ ಆಗಿಹೋಯಿತು. ನಮ್ಮ ತಾಯಿ ಬಂದು ನೋಡಿದರು. ತಕ್ಷಣ, ಮಗು (ನಾನೇ) ವನ್ನು ಎತ್ತಿಕೊಂಡು, ಮಿಕ್ಕವರ ಮೇಲೆಲ್ಲ ಕೋಪಿಸಿಕೊಂಡರು. "ಪಾಪ, ಮಗು ಅಳುತ್ತಾ ಇದೆ; ಅಷ್ಟು ಗೊತ್ತಾಗೋದಿಲ್ಲವೇ ? ನಗ್ತಾ ಇದೆಯಂತೆ !" ಎಂದು ತಂಗಿಯರನ್ನು ಅನ್ನುವ ನೆವದಲ್ಲಿ ನಾದಿನಿಯರಿಗೂ ಬಿಸಿ ಮುಟ್ಟಿಸಿದರಂತೆ. ನನಗೆ ಹಲ್ಲಿಲ್ಲದ ಕಾಲದಿಂದ ಬಂದ ದಂತಕಥೆ, ಇದು.

ಇದನ್ನೇಕೆ ಹೇಳಿದೆ ಅಂದರೆ, ಆಗಿನಿಂದ ಈಗಿನವರೆಗೂ ಇದೇ ಪಾಡಾಗಿದೆ. ಹಲ್ಲುನೋವು ಬಂದು ಕೆನ್ನೆ ಊದಿಕೊಂಡಿದ್ದರೆ, "ಏನೋ, ಎಲ್ಲಿ ಸಿಕ್ಕಿತೋ ಬಾದಾಮಿ ಪೆಪ್ಪರಮಿಂಟು ?" ಎನ್ನುತ್ತಾರೆ. ಆಗತಾನೇ Shave ಮಾಡಿಕೊಂಡು, ನುಣ್ಣದಪಿನ ಮದನ ಕಾಮರಾಜನ್ ನಾನೇ ಇರಬಹುದೇ ಎಂದುಕೊಂಡ ಹೊತ್ತಿನಲ್ಲಿ, "ಏನ್ರೀ ಕಾಲೇಜಿಗೆ ಹೊತ್ತಾಗಲಿಲ್ಲವೇ ? ಇನ್ನೂ Shave ಏ ಮಾಡ್ಕೊಂಡಿಲ್ಲ ?" ಎನ್ನುವವರೇ ಮಂದಿ. ಸ್ನಾನ ಮುಗಿಸಿಕೊಂಡು ಮುಖ ಮಿರಗಿಸುತ್ತ ಹೊರಗೆ ಬಂದರೆ, "ಏನ್ರೀ, ಜಳಕ ಇನ್ನೂ ಮಾಡಿಲ್ಲೇನs ?" ಎನ್ನುತ್ತಾರೆ ನೆರೆ ಹೊರೆಯವರು. ಹೀಗೆ ನನ್ನ ಸ್ವರೂಪ, ಒಳಗಿನ ಸತ್ಯಕ್ಕೆ ಸಂಕೇತವಾಗದೆ ಶತ್ರುವಾಗಿದೆ; ಏನು ಮಾಡೋಣ ?

ಮಾಸ್ತರನಾದ ನಾನು, ಇವತ್ತು ಬಹಳ ಚೆನ್ನಾಗಿ ಪಾಠ ಹೇಳಿದೆ ಎಂದುಕೊಂಡೆ ಎನ್ನಿ. ಅವತ್ತೇ ಯಾರಾದರೂ ವಿದ್ಯಾರ್ಥಿಗಳು ಬಂದು, "ನಿನ್ನೆ ಪಾಠ ಬಹಳ ಚಲೋ ಆತ್ರೀ ಸರs" ಎಂತಲೋ —"ಇದು ತಿಳೀಲಿಲ್ರೀ ಸರs" ಎಂದು ಹಗಲು ಮಾಡಿದ ಇಡೀ ಪಾಠವನ್ನೇ ತೋರಿಸಿಯೋ, ನನ್ನ ಆತ್ಮಭಂಗ ಮಾಡಿಬಿಡುತ್ತಾರೆ. ಒಬ್ಬ ಹುಡುಗನಂತೂ ಒಮ್ಮೆ. "ನೀವು ಪದ್ಯ ಪಾಠಮಾಡುವಾಗ Essayಗೆ ಬಹಳ ಉಪಯೋಗ ಆಗ್ತದರೀ ಸರ್" ಎಂದು ಬೆನ್ನುಚಪ್ಪರಿಸಿದ. ಈ ವಾಮಾಚಾರ ಪ್ರಶಂಸೆಗೆ ನಾನು ಸಂತೋಷಪಡಬೇಕೋ, ಸಂಕಟಪಡಬೇಕೋ ಎಂದು ಯಾರಾದರೂ ತಿಳಿದವರು ನಿಶ್ಚಿತವಾಗಿ ಹೇಳಿಬಿಟ್ಟರೆ ನನಗೆ ಮನಶ್ಶಾಂತಿ ಬಂದೀತು.

ನನ್ನ ಮಾತು, ನಿರೀಕ್ಷೆ ಎಲ್ಲದರಲ್ಲೂ ಇದೇ ವಿಪರ್ಯಾಸ. ನಾನು ಹಾಸ್ಯವೆಂದು ಹೇಳಿದ ಮಾತಿಗೆ ಜನ ಕಲ್ಲಾಗಿ, ಬೇಲೂರಿನ ಶಿಲಾಬಾಲಿಕೆಯರಂತೆ ನೀರವ ಸಂಭ್ರಮ ತಾಳಿ ಅಲಂಕಾರವಾಗಿ ಕೂತಿರುತ್ತಾರೆ. ಸ್ವಲ್ಪ ಗಂಭೀರವಾದ ವಿಷಯವೆಂದು ಮುಖಗಂಟಿಕ್ಕಿಕೊಂಡು ಹೇಳಿದಾಗ, ಹೊಟ್ಟೆ ಹಿಡಿದುಕೊಂಡು ನಕ್ಕುಬಿಡುತ್ತಾರೆ.

ಆದರೆ ಎಲ್ಲರೂ ಹೀಗಿರುವುದಿಲ್ಲ. ಕೆಲವರು ಅದೃಷ್ಟಶಾಲಿಗಳಿದ್ದಾರೆ. ಅವರ ಮನಸ್ಸಿನಲ್ಲಿ ಬಂದದ್ದು ಮಾತಿನಲ್ಲಿ ಹಾಗೇ ಪಾರದರ್ಶಕವಾಗಿ ಗಟ್ಟಿಗಾಜಿನ ಹೃದಯದಲ್ಲಿಟ್ಟ ಹೂವಿನ ಹಾಗೆ ಕಾಣಿಸಿಕೊಳ್ಳುತ್ತದೆ. ಎಚ್. ಜಿ. ವೆಲ್ಸ್ ಸೃಷ್ಟಿಸಿದ 'ಅದೃಶ್ಯ ಮಾನವ' ( Invisible man ) ಸಿಗರೇಟು ಸೇದಿದಾಗ, ಹೊಗೆ ಅವನ ಗಂಟಲನಾಳದಲ್ಲಿಳಿದು ಶ್ವಾಸಕೋಶದ ಕಣಗಳಲ್ಲಿ ತೆಳುವಾಗಿ ಕವಲೊಡೆದು ಹರಡಿದ್ದು ಸ್ವಚ್ಛವಾಗಿ ಕಾಣಿಸಿಕೊಂಡ ಹಾಗೆ.

ಅವರ ಮುಖ ಅವರ ಮನಸ್ಸಿನ ಮುಖ. ಅವರ ನಗು, ನಗು. ಅವರ ಅಳು, ಅಳು. ನಮ್ಮಲ್ಲಿ ಕೆಲವರ ಹಾಗೆ ಖಿಕ್ಕಿ ಖಿಕ್ಕಿ ನಕ್ಕು, ಘೊಳ್ಳೆಂದು ಅಳುವ ಜಾತಿಯಲ್ಲ. ಅವರ ಬಹಿರಂಗ, ಅಂತರಂಗದ ಸಾದಾ ಕನ್ನಡಿ ; ನಮ್ಮಂತಹರ ಬಹಿರಂಗ ನಿಮ್ನ ದರ್ಪಣ— ಇದ್ದದ್ದನ್ನು ಇದ್ದ ಹಾಗೆ ಹೊಳಿಸದೆ, ಸೊಟ್ಟಗೆ ಮೂಗನ್ನು ಹಿಂಜಿ ತಲೆಯೋಡನ್ನು ಜಜ್ಜಿ ಒಂದು ಕಣ್ಣನ್ನು ಹಿಗ್ಗಲಿಸಿ, ತನ್ನದೇ ಆದ ಶೈಲಿಯಲ್ಲಿ ಭಾಷಾಂತರಿಸಿ ಬಿಡುತ್ತದೆ. ಭಾಷಾಂತರಕಾರರೆಲ್ಲ ದ್ರೋಹಿಗಳು (Translators are traitors) ಎನ್ನುತ್ತದೆ



"ನನ್ನಂತಹ ಗಂಭೀರವ್ಯಕ್ತಿಯಲ್ಲಿ ನಗುವಿಗೇನು ಅವಕಾಶ" ಎಂದು ಆಶ್ಚರ್ಯಪಟ್ಟಿದ್ದೇನೆ.

ಇಟಲಿಯ ಗಾದೆ; ನಮ್ಮ ಮುಖವೇ ಮನಸ್ಸನ್ನು ಹೀಗೆ, ಕಂಡಾಪಟ್ಟಿ ತರ್ಜುಮೆ ಮಾಡಿಬಿಟ್ಟರೆ ಮಾಡುವುದೇನು? ನನ್ನ ಮುಖಕ್ಕೆ ಮನಸ್ಸನ್ನು ಕಂಡರೆ ಏನಾದರೂ ದ್ವೇಷವೋ, ಇಲ್ಲವೆ ತನ್ನ ವ್ಯಕ್ತಿತ್ವವನ್ನೇ ಸಾಧಿಸಿ ಸ್ವತಂತ್ರ ಜೀವನ ನಡೆಸುವ ಆಸೆಯೋ, ನನಗೆ ತಿಳಿಯದಾಗಿದೆ.

ಇನ್ನೊಂದು ಸಂಶಯವೂ ನನಗೆ ಆಗಾಗ ಬರುತ್ತದೆ. ನಮ್ಮ ಭಾಷೆ, ನಮ್ಮ ಮುಖಮುದ್ರೆ, ನಮ್ಮ ಅಳು-ನಗು-ಭಾವ-ಭಂಗಿಗಳ ನುಡಿಗಟ್ಟು ಮಿಕ್ಕವರಿಗೆ ತಿಳಿಯುವುದಿಲ್ಲವೇನೋ. ಒಬ್ಬೊಬ್ಬರಿಗೂ ಅವರವರ ಭಾಷೆಯಲ್ಲೇ ಶೈಲಿಯಲ್ಲೇ ತಿಳಿಸಬೇಕೋ? ಹಾಗೆ ತಿಳಿಸದಿದ್ದರೆ, ತಮಗೆ ಬೇಕಾದ ಹಾಗೆ, ತಮ್ಮ ಮನಸ್ಸು ಕೊಟ್ಟ ಜಾಯಮಾನದಲ್ಲಿ ನಿಮ್ಮನ್ನು ಭಾಷಾಂತರಿಸಿಕೊಳ್ಳುತ್ತ ಇರಬಹುದು. ಶತಮಾನಗಳ ಹಿಂದೆ ಇಂಗ್ಲೆಂಡಿನವನೊಬ್ಬ ಆಸ್ಟ್ರೇಲಿಯಕ್ಕೆ ಹೋದನಂತೆ, ಅಲ್ಲಿ, ಹಿಂಗಾಲಿನ ಮೇಲೆ ಕುಪ್ಪಳಿಸುತ್ತ ಮರಿಗಳನ್ನು ಎದೆಜೇಬಿನಲ್ಲಿಟ್ಟುಕೊಂಡು ಜೀವನ ಸಾಗಿಸುತ್ತಿದ್ದ ಪ್ರಾಣಿಯೊಂದನ್ನು ಕಂಡ. ಹತ್ತಿರದಲ್ಲಿದ್ದ ಆದಿವಾಸಿಯನ್ನು ಕರೆದು, 'ಇದರ ಹೆಸರೇನು?' ಎಂದು ಕೇಳಿದನಂತೆ. ಆದಿವಾಸಿಗೆ ಇವನ ಪ್ರಶ್ನೆ ತಿಳಿಯದೆ, "ಕಾಂಗರೂ" (ನನಗೆ ಗೊತ್ತಿಲ್ಲ) ಎಂದನಂತೆ. ಆ ವಿದೇಶೀಯನಿಗೆ ಈ ಉತ್ತರ ಅರ್ಥವಾಗದೆ, ಕಾಂಗರೂ ಎಂದರೆ ಆ ವಿಚಿತ್ರ ಪ್ರಾಣಿಯ ಹೆಸರು ಎಂದುಕೊಂಡನಂತೆ. ತನ್ನ ಪ್ರಶ್ನೆಗೆ ಉತ್ತರ ಬೇಕಾಗಿತ್ತು, ಕಂಡುಕೊಂಡ. ಅವನ ತಪ್ಪಿನಿಂದ ಇಂಗ್ಲಿಷಿಗೊಂದು ಪದ ಲಾಭವಾಯಿತು. ಇದು ನಿಜವೋ ಸುಳ್ಳೋ ಕಾಣೆ. ನಾನು ಹೇಳಬೇಕಾದ ವಿಷಯಕ್ಕೆ ದೃಷ್ಟಾಂತವಂತೂ ಹೌದು.

ಹೀಗೇ ನಮ್ಮಲ್ಲೂ ಒಂದು ಕತೆ ಹೇಳುತ್ತಾರಲ್ಲ, ಕೇಳಿರಬಹುದು. ಒಬ್ಬ ವಿದೇಶೀ ಪ್ರಯಾಣಿಕ ಮೈಸೂರಿಗೆ ಬಂದಾಗ ಒಂದು ಜಟಕ ಗೊತ್ತುಮಾಡಿಕೊಂಡು ಊರು ನೋಡಲು ಹೊರಟನಂತೆ. ಪ್ರಪಂಚದ ಸಕಲ ಸರಕುಗಳನ್ನೂ ತುಂಬಿಕೊಂಡ ಒಂದು ಅಂಗಡಿಸಾಲಿಗೆ ಬಂದಾಗ, ಆತ ಜಟಕಾಸಾಬಿಯನ್ನು "ಈ ಅಂಗಡಿಸಾಲು ಯಾರದು ಗೊತ್ತೆ?" ಎಂದು ಇಂಗ್ಲಿಷಿನಲ್ಲಿ ಕೇಳಿದ. ಸಾಬಿ ಕನ್ನಡದಲ್ಲಿ, "ಗೊತಿಲ್ಲ ಸ್ವಾಮಿ" ಎಂದು ಉತ್ತರಿಸಿದ. ಆ ಇಂಗ್ಲಿಷಿನವನಿಗೆ 'ಸ್ವಾಮಿ' ಎನ್ನುವದು ದಕ್ಷಿಣದ ಹಿಂದೂ ಜನರಿಟ್ಟುಕೊಳ್ಳುವ ಹೆಸರೆಂದು ಗೊತ್ತಿತ್ತು; ಅದರ ಮೇಲೆ ಊಹೆಯನ್ನೂರಿ, 'ಗೊತ್ತಿಲ್ಲ ಸ್ವಾಮಿ' ಎನ್ನುವುದು ಯಾರೋ ವರ್ತಕನ ಹೆಸರೆಂದುಕೊಂಡ. ಇಡಿ ಅಂಗಡಿಸಾಲೂ 'ಗೊತ್ತಿಲ್ಲ ಸ್ವಾಮಿ'ಯ ಸ್ವತ್ತೆಂದುಕೊಂಡು ಆಶ್ಚರ್ಯಪಟ್ಟ. ಮುಂದೆ ದೊಡ್ಡ ಚಿತ್ರಮಂದಿರಗಳೆರಡು ಬಂದುವು; ಇದು ಯಾರದು ಎಂದು ಕೇಳಿದಾಗಲೂ ಜಟಕಾವಾಲ "ಗೊತ್ತಿಲ್ಲ ಸ್ವಾಮಿ" ಎಂದ. ಓಹೋ "ಗೊತ್ತಿಲ್ಲ ಸ್ವಾಮಿ" ಎನ್ನುವವನು ಲಕ್ಷಾಧಿಕಾರಿ ಇರಬೇಕು, ಎಂದುಕೊಂಡವನೇ, ಮುಂದೆ ಕಂಡ ಚಿನ್ನದ ಕಲಶವಿಟ್ಟ ಅರಮನೆ ಯಾರದು ಎಂದು ವಿಚಾರಿಸಿದ. ಆತನ ಭಾಷೆ ತಿಳಿಯದೆ ಬೇಸರಪಟ್ಟುಕೊಂಡ ಜಟಕಾವಾಲ, "ಏನೋ ಗೊತ್ತಿಲ್ಲ ಸ್ವಾಮಿ" ಎಂದುಬಿಟ್ಟ. ಆ ವಿದೇಶೀಯನಿಗೆ 'ಗೊತ್ತಿಲ್ಲ ಸ್ವಾಮಿ'ಯ ಐಶ್ವರ್ಯ ನೋಡಿ ಮೂಗಿನ ಮೇಲೆ ಬೆರಳಿಡುವಂತಾಯಿತು. ಕಡೆಗೆ ಒಂದು ಹೆಣದ ಮೆರವಣಿಗೆ ಹೋಗುತ್ತಿತ್ತು. "ಇದು ಯಾರು?" ಎಂದು ಮತ್ತೆ ಕೇಳಿದಾಗ, ಜಟಕಾವಾಲ "ಯಾರೋ ಸತ್ತವರು, ಗೊತ್ತಿಲ್ಲ ಸಾಮಿ" ಎಂದ. ಆಗ ಆಗಂತುಕ ಗಾಡಿ ನಿಲ್ಲಿಸಿ, ಹತ್ತಿರದ ಹೂವಂಗಡಿಯಿಂದ ಹೂಮಾಲೆ ತಂದುಕೊಟ್ಟು, ನಮ್ರನಾಗಿ ಹ್ಯಾಟು ತೆಗೆದು, "ಅಯ್ಯೋ ಪಾಪ, ಊರಿನ ಅಂಗಡಿ ಅರಮನೆಗಳಿಗೆಲ್ಲ ಒಡೆಯನಾದ ಇಂತಹ ಕೋಟ್ಯಧೀಶ್ವರ ತೀರಿಕೊಂಡನೇ" ಎಂದು ಮರುಗಿ ಮರ್ಯಾದೆಮಾಡಿದನಂತೆ!

ಈ ಭಾಷಾಂತರದ ಗಲಿಬಿಲಿಗೆ ಮತ್ತೊಂದು ಮಹಾಸ್ಮಾರಕ ಮದರಾಸಿನಲ್ಲಿ ಈಗಲೂ ಇದೆ. Barber's Bridge ಎಂಬ ಸೇತುವೆ ಇದೆಯಲ್ಲ, ಅದರ ಹೆಸರು Hamilton Bridge ಎಂದಿತ್ತಂತೆ. Hamilton ಎಂಬ ಇಂಗ್ಲಿಷ್‌ಪದ ಸಾಮಾನ್ಯರ ನಾಲಗೆಯ ಮೇಲೆ ನಯವಾಗಿ ನಡೆಯಲಿಲ್ಲ; ಅಪಭ್ರಂಶವಾಗಿ, 'ಅಮಟ್ಟನ್, ಅಂಬಟ್ಟನ್ ಎಂಬ ರೂಪಕ್ಕಿಳಿಯಿತು. (ಅಂಬಟ್ಟನ್ ಎಂದರೆ ತಮಿಳಿನಲ್ಲಿ ಕ್ಷೌರಿಕ ಎಂದರ್ಥ.)

ಈ ರೂಪವಿಪರ್ಯಾಸದಿಂದಾಗಿ, ಜನ Hamilton Bridge ಅನ್ನು 'ಅಂಬಟ್ಟನ್ Bridge' ಮಾಡಿ, ಆದನ್ನು ತಮಿಳಿಗೆ 'ಅಂಬಟ್ಟನ್ ಕಾಲಾವದಿ' (ಕ್ಷೌರಿಕರ ಸೇತುವೆ) ಎಂದು ಭಾಷಾಂತರಿಸಿ ಕೊಂಡರು. ಮುಂದೆ ಆ ಸೇತುವೆಗೆ ಇಂಗ್ಲಿಷ್ ಹೆಸರು ಬೇಕಾದಾಗ, 'ಅಂಬಟ್ಟನ್ ಕಾಲಾವದಿ' ಯನ್ನು ಮತ್ತೆ ಇಂಗ್ಲಿಷಿಗೆ ತರ್ಜುಮೆ ಮಾಡಿ Barber's Bridge ಆಯಿತಂತೆ! ಹೇಗಿದೆ ತರ್ಜುಮೆಯ ತೋರಣ!

ಪ್ರತಿಯೊಂದು ಕ್ಷೇತ್ರದಲ್ಲೂ ದೇಶದಲ್ಲೂ ಇಂತಹ ಭಾಷಾಂತರ ದ್ರೋಹದ ಫಿತೂರಿ ಕಾಣಿಸಿ ಕೊಳ್ಳುತ್ತದೆ. ಇದರ ಪರಿಣಾಮ ಇಷ್ಟಕ್ಕೇ ಮುಗಿಯದೆ, ಇನ್ನೂ ಗಹನವಾಗಿ ಇಡೀ ವಿಚಾರದ ಹಂದರವನ್ನೇ ರೂಪಿಸಬಹುದು, ಬದಲಾಯಿಸ ಬಹುದು. ಮಾನವಶಾಸ್ತ್ರಜ್ಞರು ಒಂದು ಅಚ್ಚರಿಯ ಸಂಗತಿ ಹೇಳುತ್ತಾರೆ. ಕೆಲವು ಆದಿವಾಸೀ ಭಾಷೆಗಳಲ್ಲಿ "ದೇವರಿಲ್ಲ" ಎಂದು ಹೇಳುವುದೇ ಸಾಧ್ಯವಿಲ್ಲವಂತೆ; ನಿರೀಶ್ವರವಾದದ ಎಲ್ಲ ತರ್ಕವನ್ನೂ ಆ ಭಕ್ತಿಪರ ಭಾಷೆಗಳಿಗೆ ಭಾಷಾಂತರಿಸಿದರೆ ದೇವರಿದ್ದಾನೆ" ಎಂದೇ ಅರ್ಥ ಬರುತ್ತದಂತೆ! ಭಾಷೆ ವಿಚಾರವನ್ನು ವ್ಯಕ್ತಪಡಿಸುವುದಲ್ಲದೆ, ಹೀಗೆ ಮುಚ್ಚಿಡುವುದೂ ಸಾಧ್ಯವಿದ್ದಾಗ, ಭಾಷಾಂತರದ ಹಾವಳಿಯ ವ್ಯಾಪ್ತಿ ಎಷ್ಟು, ವಿಚಾರಿಸಿ.

ಹೀಗೆ ಅವರವರ ಮನಸ್ಸಿನ ಭಾಷೆಯ ಸಂಪತ್ತಿ ಕೊರತೆಗಳಿಗನುಸಾರವಾಗಿ ನಾವು ಮಿಕ್ಕವರಿಗೆ ಕಾಣಿಸಿಕೊಳ್ಳುವುದು ಮಾತ್ರವಲ್ಲ. ನಮ್ಮ ಅವರ ಮನೋಭಾವದಿಂದಲೂ ಈ ಭಾಷಾಂತರ ಬಣ್ಣ ಬದಲಾಯಿಸುತ್ತದೆ. ದ್ವೇಷದ ನುಡಿಗಟ್ಟು ಬಂದಿದ್ದರೆ, ಹೆಗ್ಗಣ ಹುಟ್ಟಿಗೆ ಮುದ್ದುಮೊಗ ಸೃಷ್ಟಿಸುತ್ತದೆ ಪ್ರೇಮದ ಶೈಲಿ. ಪ್ರೇಮದ ಕಣ್ಣಿಗೆ ಹೆಣ್ಣು ಕಪ್ಪೆಕೂಡ ಪದ್ಮಿನಿಯಂತೆ ಕಾಣಿಸಿಕೊಳ್ಳುತ್ತದೆಂದು ಹಿಂದಿಯಲ್ಲಿ ಗಾದೆ ಇದೆಯಂತೆ.

ಆದ್ದರಿಂದಲೇ ಇರಬೇಕು, ಅಮೇರಿಕದ ವಾಕ್ಪಟುವಾದ ಆಲಿವರ್ ವೆಂಡೆಲ್ ಹೋವ್ಸ್ ಒಮ್ಮೆ ಹೇಳಿದ: "ನಾನೂ ನೀನೂ ಮಾತನಾಡುವಾಗ ಇಲ್ಲಿರುವವರು ಇಬ್ಬರಲ್ಲ, ಆರು ಮಂದಿ ಎಂದು. ನನ್ನ ಮನಸ್ಸಿನಲ್ಲಿರುವ ನಾನು, ನಿನ್ನ ಮನಸ್ಸಿನಲ್ಲಿಕಲ್ಪಿತವಾದ ನಾನು ಅಲ್ಲದೆ ನನ್ನ ಮನಸ್ಸಿನಲ್ಲಿ ಚಿತ್ರಿತವಾದ ನೀನು, ನಿನ್ನ ಮನಸ್ಸಿನಲ್ಲಿರುವ ನೀನು ಈ ನಾಲ್ವರ ಜತೆಗೆ ಕಣ್ಣು ಮುಚ್ಚಾಲೆಯಾಡುತ್ತ ನಿಜವಾದ ನಾನು, ನಿಜವಾದ ನೀನು! ಹೀಗೆ ನಾನು-ನೀನು ಎನ್ನುವುದು ಇಬ್ಬರ ಏಕಾಂತವಲ್ಲ, ಆರು ಮಂದಿಯ ಸಂತೆ!

ಇಂತಹ ಅಂತರ-ಭಾಷಾಂತರಗಳನ್ನು ಪಾಟೀ ಮಿಕ್ಕವರಿಗೆ ನಾನೂ ನನಗೆ ಅವರೂ (ಕಡೆಗೆ ನನಗೆ ನಾನೇ) ಹೇಗೆ ಸತ್ಯಸ್ವರೂಪದಲ್ಲಿ ಅರ್ಥವಾದೀತೋ ಕಾಣೆ. ಮುಂದಿನದೊಂದು ಜನ್ಮ ಇದ್ದರೆ, ಆ ಜನ್ಮದಲ್ಲಿ ಕೋಳಿಯೋ ಮೀನೋ ಆಗಿ ಹುಟ್ಟದೆ ಮನುಷ್ಯನಾಗೇ ಹುಟ್ಟುವುದಾದರೆ, ಆ ಜನ್ಮಕ್ಕೆ ಹೋಗುವ ದಾರಿಯಲ್ಲಿ ಏನನ್ನಾದರೂ ಬೇಡಿಪಡೆಯುವುದು ಸಾಧ್ಯವಾದರೆ, "ನಾನು ನಕ್ಕಾಗ ಮಿಕ್ಕವರಿಗೂ ನಾನು ನಕ್ಕಂತೆ ಕಾಣಲಿ; ನಾನು ಪ್ರೀತಿಯಿಂದ ಮಾತನಾಡಿಸಿದಾಗ ಮಿಕ್ಕವರು 'ಇವನೆಂಥ ಮುಂಗೋಪಿ' ಎನ್ನದಿರಲಿ; ಅಂತರಂಗವನ್ನು ಬಹಿರಂಗ ನೇರವಾಗಿ ಕನ್ನಡಿಸಲಿ; ಮಿಕ್ಕವರ ಭಾಷೆಯೇ ನನ್ನ ಭಾಷೆಯಾಗಲಿ" ಎಂದು ಕೇಳಿಕೊಳ್ಳೋಣ ವೆಂದಿದ್ದೇನೆ. ಇಲ್ಲದಿದ್ದರೆ ಇದೇ ಗತಿ. ಮನಸ್ಸಿನಲ್ಲಿರುವ ಸರ್ವಾಂಗ ಸುಂದರ ಭಾವವೊಂದು, ಮುಖದಲ್ಲಿ ಕಾಣಿಸಿಕೊಳ್ಳುವ ಬೀಭತ್ಸವ್ಯಂಗ್ಯ ಮುದ್ರೆಯೊಂದು, ಅದು ಮಿಕ್ಕವರಿಗೆ ತೋರಿಸಿಕೊಳ್ಳುವ ಅರ್ಥ ಮತ್ತೊಂದು. ಹೀಗಾದರೆ, ಮುಖ ಮನಸ್ಸಿನ ಭಾಷೆಯನ್ನೂ ನಮ್ಮ ನುಡಿಗಟ್ಟು. ಮಿಕ್ಕವರ ನುಡಿಗಟ್ಟನ್ನೂ ಹೊಂದಿಕೊಳ್ಳದಿದ್ದರೆ, ನಮ್ಮ ಅರ್ಥ ಒಳಗೆ ಸಿಕ್ಕಿಕೊಂಡು, ಏಕಾಕಿಯಾಗಿ ಬಾಯಿಲ್ಲದೆ ತಪಿಸುತ್ತದೆ.

I have heard the key<br>
Turn in the door once and<br>
turn once only<br>
We think of the key<br>
each in his prison<br>
Thinking of the key,<br>
each confirms a prison<br>
Only at nightfall

ಎಂದು ಟಿ. ಎಸ್. ಎಲಿಯಟ್ ಹೇಳಿಲ್ಲವೇ?

---

**ಜ್ಯೋತಿಷಿ ಶ್ರೀ. ಕೃಷ್ಣಶಾಸ್ತ್ರಿ ಭಿಡೆ**
ಭವಿಷ್ಯ ಕಥನ ಕಾರ್ಯಾಲಯ,
ಮನೆ ನಂ. ೨೮೮೦ ಪೋಲೀಸ ಸ್ಟೇಶನ ಎದುರಿಗೆ
**ಖಡೇಬಜಾರ-ಬೆಳಗಾಂವಿ**

# ವರ್ಷ ಭವಿಷ್ಯ

**...ಲಿವಾಹನ ಶಕೆ ೧೮೭೯ ಹೇಮಲಂಬಿ ಸಂವತ್ಸರದ ಕಾರ್ತಿಕ ಶುದ್ಧ ೧ ಗುರುವಾರದಿಂದ**
**ಶಕೆ ೧೮೮೦ ಆಶ್ವಿನ ಬಹುಳ ಅಮಾವಾಸ್ಯ ಮಂಗಳವಾರ ಅಂದರೆ**

**...೨೪ ಅಕ್ಟೋಬರ ೧೯೫೭ ರಿಂದ**
**...೧೧ ನವಂಬರ ೧೯೫೮ರ ವರೆಗೆ**

**( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ )**

...ಸೂಚನೆ:—ಪ್ರತಿಯೊಂದು ರಾಶಿಯವರ ಮೇಲೆ ಈ ವರ್ಷ ಆಯಾ ಗ್ರಹಗಳ ಇಷ್ಟಾನಿಷ್ಟ ಪರಿಣಾಮವೆಷ್ಟರ ಮಟ್ಟಿಗೆ ಆಗುವದೆಂಬುದನ್ನು ಸಂಕಲಿತವಾಗಿ ವಿಚಾರಮಾಡಿ ಈ ಭವಿಷ್ಯವನ್ನು ಸಿದ್ಧಪಡಿಸಿದ್ದಾಗಿದೆ. ಇದನ್ನೋದಿದ ಪ್ರತಿಯೊಬ್ಬರಿಗೆ ತಮಗೆ ಈ ವರ್ಷ ದೊರೆಯುವ ಫಲಾಫಲಗಳ ಬಗ್ಗೆ ಬಹಳಷ್ಟು ಅಂದಾಜ ಮಾಡಿಕೊಳ್ಳಲು ಬರುವದು, ಇದರಲ್ಲಿ ಸಂಶಯವಿಲ್ಲ.

ವಾಸ್ತವಿಕವಾಗಿ ವೈಯಕ್ತಿಕ ಅರ್ಥಾತ್ ಪ್ರತಿಯೊಬ್ಬನ ಭವಿಷ್ಯ ಆಯಾ ಜನ್ಮಕುಂಡಲಿಯ ಮೇಲಿಂದ ಬರೆದದ್ದಾದರೆ ಮಾತ್ರ ಅಕ್ಷರಶಃ ಕೂಡಿಬರುವದು. ಆದರೂ ಯಾವ ಬಗೆಯ ಸುಖದುಃಖದ ವಾತಾವರಣದಲ್ಲಿ ಈ ವರ್ಷವನ್ನು ಕಳೆಯಬೇಕಾಗುವದೆಂಬದರ ಕಲ್ಪನೆ ಮಾತ್ರ ಈ ವರ್ಷಭವಿಷ್ಯದಿಂದ ನಿಶ್ಚಿತವಾಗಿ ಬರುವದು.

ಪ್ರತಿಯೊಬ್ಬನು ಈ ವರ್ಷ ಜನ್ಮರಾಶಿಯಂತೆ ಜನ್ಮಲಗ್ನದಿಂದಲೂ ಗ್ರಹಫಲಗಳನ್ನು ಚೆನ್ನಾಗಿ ಮನನಮಾಡಿಕೊಂಡು ಅದರಂತೆ ನಡೆದದ್ದಾದರೆ ಅಶುಭ ಫಲಗಳ ಬಗ್ಗೆ ಬಹಳ ಜಾಗ್ರತೆಯಿಂದ ಇರಲು ಬರುವದು. ಅದರಂತೆ ಶುಭಫಲ ಪ್ರಾಪ್ತಿಗಾಗಿ ಉತ್ಸಾಹದಿಂದಿದ್ದು ಆ ಬಗ್ಗೆ ಹೆಚ್ಚು ಪ್ರಯತ್ನ ಮಾಡಲಿಕ್ಕೆ ಅನುಕೂಲವಾಗುವದು. ಪುರುಷರಂತೆ ಸ್ತ್ರೀಯರಿಗೂ ಅದೇ ಬಗೆಯ ಫಲಗಳು ದೊರೆಯುವವು. ಆದರೂ ದೈಹಿಕ ಭೇದದ ತಾರತಮ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗುವದು.

## ಮೇಷ

ಒಟ್ಟಾರೆ ಈ ರಾಶಿಯವರು ಸಾವಕಾಶವಾಗಿ...ಯಾದರೂ ಬಹುತರ ವಿಷಯಗಳಲ್ಲಿ ಪ್ರಗತಿ...ಯನ್ನೇ ಹೊಂದುವರೆಂದು ತಿಳಿಯತಕ್ಕದ್ದು.

ಈ ರಾಶಿಯ ಜನರು ಆರೋಗ್ಯವನ್ನು ಸ್ವಲ್ಪ ...ತಪ್ಪಿಸಿಕೊಳ್ಳಬೇಕಾದ ಪ್ರಸಂಗ ಬಂದರೂ ಜುಲೈ...ಯಿಂದ ಸ್ವಾಭಾವಿಕವಾಗಿ ನಿರೋಗಿಯಾಗುಳಿಯು...ವರು. ಮತ್ತು ಸಪ್ಟಂಬರ ೨೪ರ ನಂತರವಂತೂ ...ವೃದ್ಧರಲ್ಲಿ ಕೂಡ ತರುಣರಷ್ಟು ಬಲ ಬರುವದು. ...ಮಾನ ಅದರಂತೆ ಎನಿಸುವದು. ಅದರಲ್ಲಿಯೂ ...ದ್ಧಿ ವಿಕಾರ ಟಾನ್ಸಿಲ್ಸ ಇಲ್ಲವೆ ನೇತ್ರವಿಕಾರ ...ಮತ್ತು ಅರೆತಲೆಶೂಲಿ ಇದ್ದವರು ಮಾತ್ರ ತಮ್ಮ ತಮ್ಮ ಪಥ್ಯ ಮತ್ತು ಔಷಧವನ್ನು ವರ್ಷ ಮುಗಿಯುವ ವರೆಗೂ ಬಿಡದೆ ಇರುವದು ಒಳಿತು.

ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ನವಂಬರ ೨೮ರಿಂದ ಅನುಕೂಲ ಕಾಲ ಪ್ರಾಪ್ತವಾಗುತ್ತ ಹೋಗುವದು. ಮತ್ತು ಸಪ್ಟಂಬರ ೨೪ರ ನಂತರ ಎಲ್ಲ ಬಗೆಯ ಸಮಾಧಾನವೆನಿಸುವದು. ದಿಸೆಂಬರ ನಂತರ ಬಹುತರ ಎಲ್ಲರ ಮನಸ್ಸಿನಲ್ಲಿಯೂ ನಿಮ್ಮ ಬಗ್ಗೆ ಆದರ, ಪ್ರೇಮ ಹೆಚ್ಚಹತ್ತುವವು. ಮತ್ತು ನಿಮ್ಮ ಅವರ ವಿಚಾರಗಳಲ್ಲಿ ಐಕಮತ್ಯವುಂಟಾಗುವದು. ಕೈಕೆಳಗಿನ ನೋಕರ ಚಾಕರರು ನವಂಬರ ವರೆಗೆ ಬಹಳ ದರ್ಪದಿಂದ ಮತ್ತು ಕೆಲಸ ತಪ್ಪಿಸಿ ನಡೆಯಹತ್ತುವದರಿಂದ ಅವರಲ್ಲಿ ಕೆಲವರನ್ನು ಕೆಲಸದಿಂದ ತೆಗೆದುಹಾಕಿ ಆ ಸ್ಥಳದಲ್ಲಿ ಹೊಸಬರನ್ನು ನೇಮಿಸಿಕೊಳ್ಳಬೇಕಾದ ಪ್ರಸಂಗ ಬರುವದು. ಆದರೆ ಡಿಸೆಂಬರ ನಂತರ ಮಾತ್ರಹಳೆ ಹೊಸ ಎಲ್ಲ ನೋಕರರೂ ಯೋಗ್ಯ ರೀತಿಯಿಂದ ವರ್ತಿಸುವರು. ಆದರೆ ಮಾರ್ಚ ೭ ರಿಂದ ಎಪ್ರಿಲ ೧೮ರ ಮಧ್ಯದಲ್ಲಿ ವಿಶ್ವಾಸಿಕ ನೋಕರನೊಬ್ಬನು ಸ್ವರ್ಗಸ್ಥನಾಗುವನು ಇಲ್ಲವೆ ಕಾಯಂವಾಗಿ ನಿರುಪಯೋಗಿಯಾಗುವಂತೆ ಗಾಯಗೊಳ್ಳುವನು.

ಹೆಂಡತಿಯ ಆರೋಗ್ಯ ಈ ವರ್ಷ ಸಪ್ಟಂಬರ ೨೪ರ ವರೆಗೆ ಅಷ್ಟಕ್ಕಷ್ಟೇ. ನಡುನಡುವೆ ಮೇಲಿಂದ ಮೇಲೆ ಕ್ಲೇಶವೂ ಆಗುವದು. ಅದರಲ್ಲಿಯೂ ಎಪ್ರಿಲ ೯ರಿಂದ ಮೇ ೨೫ರ ಕಾಲವು ಅವಳಿಗೆ ಬಹಳ ಕಷ್ಟದ್ದು. ಉಭಯತರಲ್ಲಿ ಎಲ್ಲ ವಿಷಯಗಳಲ್ಲಿಯೂ ಒಳ್ಳೇ ಮತೈಕ್ಯ. ಆದರೆ ಸಪ್ಟಂಬರ ೨೪ರ ವರೆಗೆ ಇಬ್ಬರ ಮನಸ್ಸೂ ಏನಾದರೊಂದು ಮನೆತನದ ಕಾರಣಕ್ಕಾಗಿ ಇರಬೇಕಾದಷ್ಟು ಪ್ರಸನ್ನವುಳಿಯುವದಿಲ್ಲ. ಅನಂತರ ಮಾತ್ರ ಪೂರ್ಣವಾಗಿ ಉತ್ಸಾಹದಲ್ಲಿ ಉಳಿದು ನಿಜವಾದ ಸುಖ ದೊರೆಯಹತ್ತುವದು. ನಿಮ್ಮ ವಿವಾಹವಿನ್ನೂ ಆಗುವದಿದ್ದರೆ ದಿಸೆಂಬರದ ನಂತರವೇ ಉತ್ತಮ ಬಾಸಿಂಗಬಲ ಬರುವದರಿಂದ ಅದು ಅಲ್ಪಾಯಾಸವಾಗಿ ಕೂಡಿಬರುವದು. ವಧು ಇಲ್ಲವೆ ವರ ಗುಣಗಳಿಂದ ಪೂರ್ಣ ಅನುರೂಪ ಇರುವರು. ಆದರೆ ಬಣ್ಣ ರೂಪಗಳ ಅಂತರ ಬಹಳಷ್ಟು ಎನಿಸುವದು. ವಿವಾಹದಲ್ಲಿ ಮಾತ್ರ ಯಾವದೇ ಬಗೆಯ ಅಡಚಣೆ ಇಲ್ಲವೆ ಕಿಟಕಿಟಯುಂಟಾಗದೆ ಗೊತ್ತುಪಡಿಸಿದಂತೆ ಎಲ್ಲವೂ ಯಥಾಸಾಂಗ ಸಾಗುವದು. ನಿಮಗಿಂತ ನಿಮ್ಮ ಮಾವನ ಮನೆಯವರು ಹೆಚ್ಚು ಉತ್ಸಾಹದವರು ಸಿಕ್ಕುವರು.

ನಿಮ್ಮ ಮಕ್ಕಳುಮರಿಗಳ ಲಗ್ನವಾಗುವದಿದ್ದರೆ ಈ ವರ್ಷ ಅದು ಸುಲಭವಾಗಿ ಮತ್ತು ವ್ಯವಸ್ಥಿತ ರೀತಿಯಿಂದ ಸಾಂಗವಾಗುವ ಯೋಗವಿದೆ. ಅದರಲ್ಲಿಯೂ ಫೆಬ್ರುವರಿ ೮ ರಿಂದ ಮೇ ೧೫ರ ವರೆಗಿನ ಕಾಲವು ಮನಸ್ಸಿನಲ್ಲಿಲ್ಲದಿದ್ದರೂ ಆಗಿಹೋಗುವಷ್ಟು ಅನುಕೂಲವಿರುವದು. ಇದು ಅನೇಕರ ಅನುಭವಕ್ಕೆ ಬರಬಹುದು. ಡಿಸೆಂಬರದಿಂದ ಮಾರ್ಚ ಕೊನೆಯವರೆಗೆ ಮತ್ತು ಜೂನದಿಂದ ಮುಂದೆ ಆಗುವ ವಿವಾಹಗಳಲ್ಲಿ ಸೊಸೆ ಇಲ್ಲವೆ ಅಳಿಯ ರೂಪಗುಣಗಳಿಂದ ಬಹಳಷ್ಟು ಮನಸ್ಸಿಗೆ ಒಪ್ಪುವಂತಹರು ದೊರೆಯುವರು. ಮಕ್ಕಳಲ್ಲಿ ಯಾರ ಜನ್ಮರಾಶಿಯು ಸಿಂಹ, ತುಲಾ, ಕುಂಭ ಇಲ್ಲವೆ ಮಿಥುನವಿದೆಯೋ ಅವರು ಈ ವರ್ಷ ಬಹಳ ಉತ್ಕರ್ಷ ಹೊಂದುವರು ಮತ್ತು ಎಲ್ಲರಿಂದ ಡಿಸೆಂಬರದಿಂದ ಮುಂದೆ ಬಹಳಷ್ಟು ಸುಖ ದೊರೆಯುವದು.

ಧಂದೆ ಕೂಲಿಕಾರರ ದೃಷ್ಟಿಯಿಂದ ಈ ವರ್ಷ ಕಳೆದ ಎರಡು ವರ್ಷಗಳಿಗಿಂತ ಬಹಳ ಪ್ರಗತಿದಾಯಕವಿದೆಯೆಂದು ಹೇಳಬಹುದು. ದಿಸೆಂಬರದಿಂದ ಅಂಥ ಲಕ್ಷಣಗಳು ಕಾಣಹತ್ತುವವು. ಫೆಬ್ರುವರಿ ೮ ರಿಂದ ಮೇ ೧೫ ಮತ್ತು

ಜುಲೈ ೧೩ ರಿಂದ ಸಪ್ಟಂಬರ ೬ ಈ ಮಧ್ಯದ ಅವಧಿಯಲ್ಲಿ ಪ್ರತಿಯೊಬ್ಬರ ನಿದರ್ಶನಕ್ಕೆ ಇದು ಬರುವದು. ಸ್ವತಂತ್ರ ಧಂದೆಮಾಡುವವರಿಗೆ ಜನೆವರಿ ೨೫ ರಿಂದ ಮೇ ೩೦ರ ಕಾಲವು ಹೆಚ್ಚು ಉತ್ಸಾಹ-ದ್ದೆನಿಸುವದು. ನೋಕರವರ್ಗದವರಿಗಂತೂ ಡಿಸೆಂಬರದಿಂದಲೆ ಹಾಗೆನಿಸಹತ್ತುವದು. ಬದಲಿಯಾಗುವ ನೋಕರಿ ಇದ್ದರೆ ಮಾರ್ಚ ೭ ರಿಂದ ಎಪ್ರಿಲ ೧೮ ಮತ್ತು ಜುಲೈ ೧೩ ರಿಂದ ಸಪ್ಟಂಬರ ೬ ರ ಮಧ್ಯಂತರ ಅವಧಿಯಲ್ಲಿ ಆಗುವ ಸಂಭವ ಹೆಚ್ಚಿಗಿದೆ ಮತ್ತು ಅನುಕೂಲಸ್ಥಳಕ್ಕೆ ಹಾಗು ಬಡತಿಯಿಂದ ವರ್ಗವಾಗುವದೆಂದು ಖಾತ್ರಿಹಿಡಿಯಿರಿ. ಅದರಂತೆಯೆ ಈ ವರ್ಷ ಸ್ವಲ್ಪಿಲ್ಲ ಸ್ವಲ್ಪ ಅಕಸ್ಮಾತ ಲಾಭ. ಅಕ್ಟೋಬರ ೩೦ ರ ವರೆಗೆ ಇಲ್ಲವೆ ಮಾರ್ಚ ೩೦ ರಿಂದ ಎಪ್ರಿಲ್ ೨೯, ಜೂನ ೨೦ ರಿಂದ ಜುಲೈ ೧೫ ಇಲ್ಲವೆ ಸಪ್ಟೆಂಬರ ೩ ರಿಂದ ೧೭ ಈ ಮಧ್ಯಂತರ ಅವಧಿಯಲ್ಲಿ ನಿಶ್ಚಿತವಾಗಿ ಆಗುವದು. ದೊಡ್ಡ ಗಿರಾಕಿಗಳ ಇಲ್ಲವೆ ವರಿಷ್ಠ ಅಧಿಕಾರಿಗಳ ಮರ್ಜಿ ಹೇಳಿಕೊಳ್ಳುವಷ್ಟು ಉಳಿಯದಿದ್ದರೂ ಸಾಮಾನ್ಯ ಗಿರಾಕಿಗಳು ಮತ್ತು ಕೈಕೆಳಗಿನ ನೌಕರರ ಮರ್ಜಿ ಹೆಚ್ಚಿಗುಳಿಯುವದು. ಪ್ರಪಂಚದ ವೆಚ್ಚ ಕಳೆದು ಸ್ವಲ್ಪು ಹಣ ಶಿಲ್ಲಕು ಕೂಡಿಹಾಕಬಹುದಾಗಿದೆ. ಡಿಸೆಂಬರದಿಂದ ಸುಖಪ್ರವಾಸ ಸಂಭವಿಸುವದು.

ಮಿತ್ರಸುಖ ಗತವರ್ಷಕ್ಕಿಂತ ಈ ಸಲ ಹೆಚ್ಚು. ತಾಯಿತಂದೆಗಳಿದ್ದರೆ ಅವರ ಆರೋಗ್ಯ ಮಾರ್ಚದಿಂದ ಹೆಚ್ಚು ಸುಧಾರಿಸುವದು. ವಾಹನ ಸುಖ ಬಹಳ ಉತ್ತಮ ದೊರೆಯುವುದು. ಪ್ರತಿಯೊಂದು ವಿಷಯದಲ್ಲಿ ಪ್ರಗತಿಯ ಹೆಜ್ಜೆ ಮುಂದೆ ಮುಂದೆ ಬೀಳುವದು.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಡಿಸೆಂಬರದಿಂದ ವಾತಾವರಣ ಆಶಾದಾಯಕವೆನಿಸಿದರೂ ಸಪ್ಟಂಬರ ೨೩ ರ ನಂತರವೆ ಶತ್ರುಗಳು ಪೂರ್ಣವಾಗಿ ಪರಾಭವ ಹೊಂದಿ ಪ್ರತ್ಯಕ್ಷವಾಗಿ ಯಶಸ್ಸು ಉಡಿಯಲ್ಲಿ ಬೀಳುವದು.

ಈ ವರ್ಷ ಹಡೆಯುವ ಸ್ತ್ರೀಯರು ಸಪ್ಟಂಬರ ೨೩ ರ ವರೆಗೆ ಸುಲಭವಾಗಿ ಪ್ರಸವಹೊಂದುವರು ಮತ್ತು ಡಿಸೆಂಬರದಿಂದ ಮಾರ್ಚ ಕೊನೆಯ ವರೆಗೆ ಮತ್ತು ಜೂನದಿಂದ ಮುಂದಿನ ಕಾಲದಲ್ಲಿ ಹಡೆಯುವವರಿಗೆ ಬಹುಶಃ ಗಂಡು ಹುಟ್ಟುವವು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೮ ರಿಂದ ಮೇ ೧೫ ಮತ್ತು ಜೂನ ೧೫ರಿಂದ ಜುಲೈ ೧೫ ಅಗಸ್ಟ ೧೭ ರಿಂದ ಸಪ್ಟಂಬರ ೧೫ ಮತ್ತು ಅಕ್ಟೋಬರ ೧೭ರ ನಂತರದ ಅವಧಿಯಲ್ಲಿ ಆಗುವದೊ ಅವರು ಉತ್ತಮ ರೀತಿಯಿಂದ ತೇರ್ಗಡೆ ಹೊಂದುವರೆಂಬಲ್ಲಿ ಸಂಶಯವಿಲ್ಲ.

---

# ವೃಷಭ

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಆರ್ಥಿಕ ಮತ್ತು ಮಾನಸಿಕ ವಿಷಯಗಳಲ್ಲಿ ಸ್ವಲ್ಪ ತೊಂದರೆಯೆನಿಸಿದರೂ ಸಂಕಟಗಳನ್ನು ಎದುರಿಸಿ ವಿಜಯ ಗಳಿಸಿಕೊಟ್ಟು ಭವಿಷ್ಯದಲ್ಲಿ ಅನುಕೂಲ ವಾತಾವರಣವನ್ನು ಉತ್ಪನ್ನ ಮಾಡುವದು ನಿಶ್ಚಿತ.

ಈ ವರ್ಷ ನಿಮ್ಮ ಆರೋಗ್ಯವು ಫೆಬ್ರುವರಿ ೮ ರಿಂದ ಮೇ ೧೫ರ ಅವಧಿಯಲ್ಲಿ ಅಲ್ಪ ಸ್ವಲ್ಪ ಕ್ಲೇಶದ್ದೆನಿಸುವದು. ಅನಂತರ ಅನುಕೂಲ. ಆದರೆ ಗ್ಯಾಸಿನ ಉಪದ್ರವವಿದ್ದವರು ಡಿಸೆಂಬರದಿಂದ ಮುಂದೆ ಯಾವದೇ ಬಗೆಯ ಅಪಥ್ಯ ಮಾಡಬಾರದು. ಅದರಂತೆ ಅಕ್ಟೋಬರ ೯ರ ನಂತರ ಅಪಘಾತದ ಅಂಜಿಕೆ ಇರುವದರಿಂದ ಪ್ರವಾಸದಲ್ಲಿ ಆದಷ್ಟು ಜಪ್ಪಿಸಿಕೊಂಡು ಇರಬೇಕು.

ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಡಿಸೆಂಬರ ವರೆಗೆ ಬಹಳ ಆನಂದದ ವಾತಾವರಣವುಳಿಯುವದು. ಅನಂತರ ಸಪ್ಟಂಬರ ೨೩ರ ವರೆಗೆ ಯಾವದೇ ವಿಷಯದಲ್ಲಿ ಮೊದಲು ಮನೋಭಂಗ ಮತ್ತು ಎರಡನೆಯವರ ಲಹರಿಯನ್ನು ಸಂಭಾಳಿಸುವ ಸರತಿ, ಮನೆಯಲ್ಲಿ ಎಲ್ಲ ಬಗೆಯ ಅನುಕೂಲತೆಗಳಿದ್ದರೂ ಅನಾಹೂತವಾಗಿ ಬರುವ ಅಡಚಣೆಗಳಿಂದ ಯೋಜಿತ ಕಾರ್ಯಗಳು ಕೂಡ ಪೂರ್ಣವಾಗಲು ಕೆಲ ದಿನಗಳು ಹಿಡಿಯುವವು. ಆದರೂ ಕೊನೆಯಲ್ಲಿ ಅವು ಬಯಸಿದಂತೆ ನಡೆಯುವವು. ಅನಂತರದಲ್ಲಿ ಮಾತ್ರ ಬಹಳ ಹಾನಿಯಿದೆ. ಉದ್ವೇಗ ಮತ್ತು ಕಲಹವನ್ನು ಎದುರಿಸಬೇಕಾದ ಪ್ರಸಂಗ ಬರುವದು. ಆಪ್ತರು ಭುಲಥಾಪೆ ಹೊಡೆದು ಮೋಸಗೊಳಿಸುವ ಪ್ರಯತ್ನ ಮಾಡುವರು. ಎಪ್ರಿಲ ೧೩ರಿಂದ ಮೇ ೧೪ರ ಮಧ್ಯಂತರ ಅವಧಿಯಲ್ಲಿ ಅವರಲ್ಲಿ ಅತ್ಯಂತ ಪ್ರೀತಿಪಾತ್ರರೊಬ್ಬರು ದಿವಂಗತರಾಗುವ ಸಂಭವವಿದೆ.

ಹೆಂಡತಿಯ ಆರೋಗ್ಯ ಮಾತ್ರ ಈ ವರ್ಷ ನಡನಡುವೆ ಸ್ವಲ್ಪ ಕ್ಲೇಶದ್ದೆನಿಸುವದು. ಆದರೂ ಅಕ್ಟೋಬರ ೨೯ ರ ವರೆಗೆ ಮತ್ತು ಮಾರ್ಚ ೭ ರಿಂದ ಎಪ್ರಿಲ ೧೮, ಮೇ ೩೦ ರಿಂದ ಜುಲೈ ೧೩ ಮತ್ತು ಸಪ್ಟಂಬರ ೬ ರ ನಂತರ ಮುಂದೆಲ್ಲ ಅನುಕೂಲ ಉಳಿಯುವುದು. ಮತ್ತು ಇಬ್ಬರೂ ಯಾವಾಗಲೂ ಮತ್ತೈಕ್ಯದಿಂದ ಇರುವಿರಿ. ನಿಮ್ಮ ಮದುವೆ ಇನ್ನೂ ಆಗುವದಿದ್ದರೆ ನವಂಬರ ಕೊನೆಯವರೆಗೆ ಇದ್ದಷ್ಟು ಅನುಕೂಲ ಯೋಗ ಮುಂದೆ ಇರುವದಿಲ್ಲ. ಅಂದರೆ ಲಗ್ನವನ್ನು ಮಾಡಿಕೊಂಡೇ ತೀರಬೇಕೆಂದು ನಿಶ್ಚಯಿಸಿದ್ದಾದರೆ ಅಷ್ಟೊಂದು ತೊಂದರೆ, ಅಪಮಾನ, ಹಾನಿಯನ್ನು ಸಹಿಸಿಯೂ ಅವನ್ನೆಲ್ಲ ಲೆಕ್ಕಿಸದೆ ಮಾಡಿಕೊಂಡುಬಿಡಬೇಕಾಗುವದೆಂದು ಗ್ರಹಿಸಬೇಕು. ವಧೂವರ ಪರಸ್ಪರ ಅನುರೂಪ ಇರುವರು.

ಅದರಂತೆ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದಕ್ಕಾದರೂ ನವಂಬರ ವರೆಗೆ ಇದ್ದಷ್ಟು ಅನುಕೂಲ ಬಾಶಿಂಗಬಲ ಮುಂದೆ ಇರುವದಿಲ್ಲ. ಕೂಡಿಬರುವದೆನ್ನುವಷ್ಟರಲ್ಲಿ ಯಾವದೊಂದು ಕ್ಷುಲ್ಲಕ ಕಾರಣಕ್ಕಾಗಿ ಇಲ್ಲವೆ ಹಾಸ್ಯಾಸ್ಪದ ನಿಮಿತ್ತದಿಂದ ಪ್ರತಿಪಕ್ಷಿಗಳು ನಿರಾಕರಿಸಬಹುದು. ಅದರಲ್ಲಿಯೂ ಒಂದು ವೇಳೆ ಒದಗಿಬಂದರೆ ಕಾರ್ಯಪ್ರಸಂಗದಲ್ಲಿ ಮನಸ್ಸು ಉದ್ವೇಗಗೊಳ್ಳುವಂತೆ ಅನೇಕ ಸಂಗತಿಗಳು ಸಂಭವಿಸುವವು. ಅಲ್ಲದೆ ಸೊಸೆ ಅಥವಾ ಅಳಿಯ ಮನಸ್ಸಿಗೆ ಒಗ್ಗದಂತಹರು ದೊರೆಯುವರು. ಮಕ್ಕಳಿಂದ ನಿಮಗೆ ದೊರೆಯತಕ್ಕ ಸುಖವೂ ಅಷ್ಟಕ್ಕಷ್ಟೇ. ಆದರೆ ಅವರಲ್ಲಿ ಫೆಬ್ರುವರಿ ೨ ರಿಂದ ೨೧, ಮೇ ೩೦ ರಿಂದ ಜುಲೈ ೨೦ ಮತ್ತು ಸಪ್ಟಂಬರ ೨೬ ರಿಂದ ಅಕ್ಟೋಬರ ೧೨, ಈ ಅವಧಿಯಲ್ಲಿ ಕೆಲ ಜನರ ಉನ್ನತಿಯಾಗಬಹುದು.

ಉಳಿದ ದೃಷ್ಟಿಯಿಂದಲೂ ಈ ವರ್ಷ ಡಿಸೆಂಬರದಿಂದ ಮುಂದೆ ಅಷ್ಟಕ್ಕಷ್ಟೆ ಲಾಭ. ಉದ್ದಿಮೆದಾರರ ಉದ್ಯೋಗ ಬಹಳಮಟ್ಟಿಗೆ ಬೀಳುವಂಥ ಘಟನೆಗಳು ಸಂಭವಿಸುವವು. ಅನೇಕರಿಗೆ ವಾಹನಗಳ ಅಡಚಣೆಯಿಂದ ಹಾನಿಯಾದರೆ ಇನ್ನು ಅನೇಕರಿಗೆ ಕರಭಾರದಿಂದ ತೊಂದರೆಯಾಗುವದು; ಹಾನಿಯೂ ಆಗುವದು. ಇನ್ನು ಹಲವರಿಗೆ ವಿಪರೀತ ಹವ್ಯಾಸದಿಂದ ಹಾನಿಯಾಗುವದು. ಧಂದೆಯವರಿಗಿಂತ ನೋಕರಿಯವರಿಗೆ ಅನುಕೂಲವಿದೆ. ಡಿಸೆಂಬರದಿಂದ ವರಿಷ್ಠರ ಮರ್ಜಿ ಹೆಚ್ಚಿಗೆ ಆಗುವದು ಮತ್ತು ಮುಂದೆ ಮುಂದೆ ಉತ್ಕರ್ಷದ ಆಶೆಯ ವಾತಾವರಣವುಂಟಾಗುವದು. ಲಾಭದಲ್ಲಿ ಪ್ರತ್ಯಕ್ಷವಾಗಿ ಹೆಚ್ಚಳವಾಗದಿದ್ದರೂ ಸಿಕ್ಕಬೇಕಾದ ಲಾಭವು ನಿಯಮಿತವಾಗಿ ಮತ್ತು ಏನೂ ತಕರಾರು ಇಲ್ಲದೆ ದೊರೆಯುತ್ತ ಹೋಗುವದು. ಬದಲಿಯಾಗುವ ಸಂಭವ ಕಡಮೆಯೇ. ಆದರಲ್ಲಿಯೂ ಬದಲಿಯಾದದ್ದಾದರೆ ಮೇ ೩೦ ರಿಂದ

ಜುಲೈ ೧೩ರ ಮಧ್ಯಂತರ ಅವಧಿಯಲ್ಲಿ ಯೋಗ್ಯ ಸ್ಥಳಕ್ಕೇ ಆಗುವದು. ಕೈಕೆಳಗಿನ ನವಕರರು ವ್ಯವಸ್ಥಿತ ರೀತಿಯಿಂದ ಯೋಗ್ಯ ರೀತಿಯಿಂದ ವರ್ತಿಸುವರು. ಎಷ್ಟು ಪ್ರಯತ್ನಿಸಿದರೂ ಹೊಸ ಸಂಗ್ರಹ ವಸ್ತುರೂಪವಾಗಿಯಾಗಲಿ ರೋಖ ರೂಪದಿಂದಾಗಲಿ ಆಗುವ ಸಂಭವವಿಲ್ಲ—ಒಂದುವೇಳೆ ಸಂಗ್ರಹನಾದರೆ ಕೂಡಲೆ ವೆಚ್ಚವಾಗಿ ಹೋಗುವುದು. ಆದರೆ ಯೋಗ್ಯ ಪ್ರಾಸಂಗಿಕ ವೆಚ್ಚಕ್ಕೆ ಯಾವದೆ ಬಗೆಯ ಕೊರತೆ ಬೀಳಲಾರದು. ಸಾಲ ಇಲ್ಲವೆ ಕೈಗಡದ ಪ್ರಸಂಗವೂ ಸಹಸಾ ಬರುವದಿಲ್ಲ, ಇದು ನಿಶ್ಚಯ. ಬಹಳ ದೂರದ ಪ್ರವಾಸ ಒಮ್ಮೆ ಒದಗಿಬಂದು ಅದರ ಉದ್ದೇಶವೂ ಚನ್ನಾಗಿ ಸಾಧಿಸುವದು. ಬಹಳ ಮಹತ್ವದ ಒಂದೆರಡು ಧರ್ಮಕೃತ್ಯಗಳೂ ಸಂಭವಿಸುವವು. ಪೂಜ್ಯ ವ್ಯಕ್ತಿಯ ದರ್ಶನ, ಸಹವಾಸ ಈ ವರ್ಷ ಬಹಳ ಸಲ ಒದಗಿ ಬರುವವು. ಸ್ಥಾವರ ಆಸ್ತಿಯ ಉತ್ಪನ್ನ ವ್ಯವಸ್ಥಿತವಾಗಿ ದೊರೆಯುವದು. ಆದರೆ ನೆರೆಹೊರೆಯವರಿಂದ ಇಲ್ಲವೆ ಹಕ್ಕುದಾರರಿಂದ ವಿಪರೀತ ಉಪದ್ವ್ಯಾಪ. ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ವಿತುಷ್ಟಿಯ ವಿಷಯದಲ್ಲಿ ಮಾತ್ರ ಶತ್ರುಗಳನ್ನು ಪೂರ್ಣವಾಗಿ ಛಲಿಸಿ ವಿಜಯವನ್ನು ಸಂಪಾದಿಸುವಿರಿ. ಸಪ್ಟಂಬರ ೨೩ರ ವರೆಗಿನ ಕಾಲವಂತೂ ಶತ್ರುಗಳನ್ನು ಪೂರ್ಣ ಫಜೀತಿ ಮಾಡುವಂತಹ ಕಾಲ. ಆದರೆ ಕೆಲವು ಮಿತ್ರರೇ ಒಳಗಿಂದೊಳಗೆ ಅವರಿಗೆ ಫಿತೂರಾಗಿ ನಿಮ್ಮ ಕುತ್ತಿಗೆ ಕೊಯ್ಯುವ ಗುಪ್ತಕಾರಸ್ಥಾನದ ತಯಾರಿಯಲ್ಲಿ ಇದ್ದ ವಿಪರೀತ ದೃಶ್ಯವು ಅನೇಕರಿಗೆ ಕಂಡುಬರಬಹುದು.

ಯಾವ ಸ್ತ್ರೀಯರು ಸಪ್ಟಂಬರ ೨೩ರ ವರೆಗೆ ಹಡೆಯುವರೋ ಅವರು ಸುಲಭವಾಗಿ ಪ್ರಸವ ಹೊಂದುವರು. ಅನೇಕರಿಗೆ ಗಂಡುಹುಡುಗರೂ ಆಗುವರು. ಅನಂತರ ಹಡೆಯುವವರಿಗೆ ಬಹಳಷ್ಟು ತೊಂದರೆಯಾಗದಿದ್ದರೂ ಹೆಣ್ಣು ಹಡೆಯುವದರಿಂದ ಮನಸ್ಸು ವಿಷಾದಗೊಳ್ಳುವದು.

ಯಾರ ಪರೀಕ್ಷೆ ನವಂಬರ ಕೊನೆಯ ವರೆಗೆ ಮತ್ತು ಜನೆವರಿ ೧೪ ರಿಂದ ಫೆಬ್ರುವರಿ ೨೧, ಮಾರ್ಚ ೯ ರಿಂದ ೨೭, ಮೇ ೩೦ ರಿಂದ ಜೂನ ೧೫, ಮತ್ತು ಸಪ್ಟಂಬರ ೨೬ ರಿಂದ ಅಕ್ಟೋಬರ ೧೨ ಈ ಅವಧಿಯಲ್ಲಿ ಆಗುವದೋ ಅವರು ನಿಶ್ಚಿತವಾಗಿಯೂ ಯಶಸ್ವಿಗಳಾಗುವರು.

ಇಲ್ಲೆಂದೂ ಅವಳಿಗೆ ಎನಿಸಹತ್ತುವದು. ಈ ಬಗೆಯ ನಿಜ ಅಥವಾ ಸುಳ್ಳು ತಪ್ಪುತಿಳಿವಳಿಕೆ ಅವಳಿಗೆ ಆಗುವ ಸಂಭವವಿದೆ. ನಿಮ್ಮ ಮದುವೆ ಇನ್ನೂ ಆಗಬೇಕಿದ್ದರೆ ಅದು ಡಿಸೆಂಬರದಿಂದ ಮುಂದೆ ಬೇಕಾದಾಗ ಆಗಲು ಒಳ್ಳೆ ಗುರುಬಲವಿರುವದು. ಅಂತೆಯೇ ಈ ಗುರುಬಲದ ಪರಿಣಾಮವಾಗಿ ಸಹಜವಾಗಿ ಮತ್ತು ಅಲ್ಪ ವಿಚಾರ ವಿನಿಮಯದಿಂದ ಲಗ್ನ ಕೂಡಿಬರುವದು ಮತ್ತು ಸ್ವಲ್ಪೆ ದಿನಗಳಲ್ಲಿ ವ್ಯವಸ್ಥಿತವಾಗಿ ಸಾಂಗವಾಗುವದು. ವಧೂವರ ಪರಸ್ಪರ ಅನುರೂಪ ದೊರೆಯುವರು. ವಿವಾಹೋತ್ತರದಲ್ಲಿಯೂ ಒಂದರ ಹಿಂದೊಂದರಂತೆ ಅನುಕೂಲ ಹಾಗೂ ಲಾಭದಾಯಕ ಘಟನೆಗಳು ಸಂಭವಿಸುವವು. ಲಾಭವಾಗುವದಕ್ಕೆ ವಧುವಿನ ಕಾಲ್ಗುಣವೆಂದೂ ಅನುಭವಕ್ಕೆ ಬರುವದು. ಆದರೆ ಬೀಗರು ಮಾತ್ರ ಸ್ವಲ್ಪ ಕಂಜೂಷ ಮತ್ತು ದರಿದ್ರರಿರುವ ಸಂಭವವಿದೆ.

ಅದರಂತೆ ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಅದರ ಪ್ರಯತ್ನಕ್ಕೂ ಒಳ್ಳೇ ಅನುಕೂಲ ಕಾಲವಿರುವದು. ಅಲ್ಪಾವಧಿಯಲ್ಲಿಯೇ ವಿವಾಹವು ಕೂಡಿಬಂದು ಸ್ವಲ್ಪೇ ಖರ್ಚಿನಲ್ಲಿ ಅದು ಸಾಂಗವಾಗುವದು. ಆದರೆ ಸೊಸೆ ಇಲ್ಲವೆ ಅಳಿಯ ಮಾತ್ರ ಅಪೇಕ್ಷಿಸಿದಷ್ಟು ಮನಸ್ಸಿಗೆ ಬರುವಂಥವರು ಇರುವರೆಂಬ ನಿಯಮವಿಲ್ಲ. ಮಕ್ಕಳ ಉನ್ನತಿಗೆ ಮಾತ್ರ ಮಾರ್ಚ ೩೦ ರ ನಂತರವೇ ಹೆಚ್ಚು ಅನುಕೂಲವಿರುವದು.

ಧಂದೆ ಕೂಲಿಕಾರರಿಗೆ ಈ ವರ್ಷ ಬಹಳ ಉತ್ತಮವಿದೆ. ಫೆಬ್ರುವರಿ ೧೨ ರಿಂದ ಒಳ್ಳೇ ಪ್ರಗತಿಯಾಗಹತ್ತುವದು. ಧಂದೆಯವರ ಕೈಯನ್ನಂತೂ ಯಾರೂ ಹಿಡಿಯುವಂತಿಲ್ಲ. ಎಪ್ರಿಲ ೧೮ ರಿಂದ ಸಪ್ಟಂಬರ ೬ ವರೆಗೆ ಬಹಳಷ್ಟು ಲಾಭವಾಗುವದು. ಪತ್ತು ಹಾಗೂ ಪ್ರತಿಷ್ಠೆ ಯಾವಾಗಲೂ ಉಳಿಯುವದು. ಅದರಂತೆ ನೋಕರರಿಗೂ ಮೇಲಿನ ಗ್ರೇಡು ನಿಶ್ಚಯವಾಗಿ ಸಿಕ್ಕುವ ಯೋಗವಿರುವದು. ಮತ್ತು ನಿಮ್ಮ ಹೊರತು ವರಿಷ್ಠರು ಅತ್ತಿತ್ತ ಸರಿಯಲಾರದಷ್ಟು ಅವರ ಮರ್ಜಿ ನಿಮ್ಮ

## ಮಿಥುನ

ಈ ರಾಶಿಯವರಿಗೆ ಕಿರುಕಳ ವಿಷಯಗಳನ್ನು ಬಿಟ್ಟರೆ ಒಟ್ಟಿಗೆ ಬಹುತರ ವಿಷಯಗಳಲ್ಲಿ ಈ ವರ್ಷ ಸುಖ ಸಮಾಧಾನಗಳದ್ದಿರುವದೆಂಬಲ್ಲಿ ಸಂದೇಹವಿಲ್ಲ.

ಈ ವರ್ಷ ಈ ರಾಶಿಯವರ ಆರೋಗ್ಯ ಒಟ್ಟಿಗೆ ಚೆನ್ನಾಗಿ ಇರುವದು. ಆದರೆ ಸಪ್ಟಂಬರ ೨೩ ರಿಂದ ಮುಂದೆ ದಮ್ಮಿನವಿಕಾರವಿದ್ದವರಿಗೆ ಸ್ವಲ್ಪತೊಂದರೆಯಾಗಹತ್ತುವದು. ಅದರಂತೆ ಅನೇಕರಿಗೆ ಆ ಅವಧಿಯಿಂದ ಮನೆಯಲ್ಲಿ ಭೂತಪ್ರೇತಗಳ ಬೇರೆಬೇರೆ ದೃಶ್ಯಗಳನ್ನು ನೋಡಬೇಕಾದ ಪ್ರಸಂಗ ಬಹಳ ಸಲ ಬರುವ ಸಂಭವವಿದೆ. ಡಿಸೆಂಬರದಿಂದ ಸಪ್ಟಂಬರದ ವರೆಗಿನ ಕಾಲದಲ್ಲಿ ಪ್ರಕೃತಿಗೆ ಮತ್ತು ಮಾನಸಿಕ ಸಮಾಧಾನಕ್ಕೆ ಬಹಳ ಉತ್ತಮ ಯೋಗವಿದೆ.

ಉಳಿದ ವಿಷಯಗಳಲ್ಲಿಯೂ ಬಹುಶಃ ಎಲ್ಲ ದಿನಗಳು ಬಹಳ ಸುಖದಿಂದ ಹೋಗುವವು. ಅಕ್ಟೋಬರದಲ್ಲಿ ಮತ್ತು ಮೇ ೩೦ ರಿಂದ ಜುಲೈ ೧೩ರ ವರೆಗಿನ ಕಾಲದಲ್ಲಿ ಯಾವನೊಬ್ಬ ವ್ರಾತ್ಯ ಆಪ್ತನಿಂದ ಮಾತ್ರ ಸ್ವಲ್ಪತೊಂದರೆಯಾಗುವ ಸಂಭವವಿದೆ. ಉಳಿದವೇಳೆಯಲ್ಲಿ ಎಲ್ಲರಿಂದ ಒಳ್ಳೆ ಸುಖದೊರೆಯುತ್ತ ಹೋಗುವದು. ನೆರೆಹೊರೆಯವರೂ ನಿಮ್ಮೊಡನೆ ಸಹಕಾರದಿಂದ ವರ್ತಿಸುವರು. ದೂರದ ಒಬ್ಬ ಆಪ್ತರಿಂದ ನಿಮಗೆ ಒಂದು ಮಹತ್ವದ ಕೆಲಸದಲ್ಲಿ ಮೇ ೩೦ ರಿಂದ ಜೂನ ೧೫ ಇಲ್ಲವೆ ಸಪ್ಟಂಬರ ೨೬ ರಿಂದ ಅಕ್ಟೋಬರ ೧೨ ಈ ಅವಧಿಯಲ್ಲ ಬಹಳ ದೊಡ್ಡ ಸಹಾಯಸಿಕ್ಕುವದು. ಮನೆಯಲ್ಲಿಯ ನೋಕರಚಾಕರರು ಪ್ರಾಮಾಣಿಕ ರೀತಿಯಿಂದ ವರ್ತಿಸಿ ನಿಮ್ಮ ಲೌಕಿಕವು ಬೆಳೆಯುವಂತೆ ವರ್ತಿಸುವರು. ಗೃಹವ್ಯವಸ್ಥೆಗಾಗಿ ಯೋಜಿಸಿದ ಹೊಸಹೊಸ ಕಾರ್ಯಗಳನ್ನು ಡಿಸೆಂಬರದಿಂದ ಮುಂದೆ ಒಳ್ಳೆ ಸಮಾಧಾನದಿಂದ ಮಾಡಬಲ್ಲಿರಿ.

ಹೆಂಡತಿಯ ಪ್ರಕೃತಿಗೆ ಫೆಬ್ರುವರಿ ೮ ರಿಂದ ಮೇ ೧೫ ರ ವರೆಗೆ ಕೆಲಮಟ್ಟಿಗೆ ತೊಂದರೆಯಾಗುವದು ಇಲ್ಲವೆ ಅವಳು ಅಥವಾ ನೀವು ಪರಸ್ಥಳಕ್ಕೆ ಹೋಗುವದರಿಂದ ಪರಸ್ಪರ ಸಹವಾಸ ಸುಖದಲ್ಲಿ ವ್ಯತ್ಯಯವುಂಟಾಗುವದು. ಉಳಿದ ಕಾಲದಲ್ಲಿ ಅವಳ ಆರೋಗ್ಯ ಮತ್ತು ಸಹವಾಸ ಸೌಖ್ಯ ಉತ್ತಮ. ಆದರೂ ಅನೇಕ ವಿಷಯಗಳಲ್ಲಿ ನಿಮ್ಮ ಮತ್ತು ಅವಳ ವಿಚಾರಗಳು ಭಿನ್ನಭಿನ್ನವಾಗುವದರಿಂದ ಕೂಡಿನಡೆಯುವದಾಗುವದಿಲ್ಲ. ನಿಜವಾದ ಪ್ರೇಮ ತನ್ನ ಮೇಲೆ

ಮೇಲೆ ಆಗುವದು. ಫೆಬ್ರುವರಿ ೮ ರಿಂದ ಮೇ ೧೫ ಈ ಮಧ್ಯಂತರ ಅವಧಿಯಲ್ಲಿ ಪೂರ್ವ ಸಂಚಿತ ಬಲದಿಂದ ಹೆಚ್ಚುಕಡಿಮೆ ಭಾಗ್ಯ ವೃದ್ಧಿ ಯಾದ ಅನುಭವ ಪ್ರತಿಯೊಬ್ಬರಿಗೆ ಬರುವದು. ಇದರಲ್ಲಿ ಸಂಶಯವಿಲ್ಲ. ಬದಲಿಯಾಗುವದಿದ್ದರೆ ಅದು ನಿಶ್ಚಯವಾಗಿ ಆಗುವದು. ನಿಮ್ಮ ಸುಖ ಸೌಕರ್ಯ ಮತ್ತು ಲಾಭ ವರ್ಚಸ್ಸು ಹೆಚ್ಚುವಂಥ ಸ್ಥಳಕ್ಕೇ ವರ್ಗವಾಗುವದು. ದ್ರವ್ಯಲಾಭ ವಿಶೇಷ ವಾಗಿ ಆಸ್ತಿಯ ದೃಷ್ಟಿಯಿಂದ ಆಗಿ ಸಂಗ್ರಹವನ್ನು ಮಾಡುವಿರಿ. ದೂರದ ಪ್ರವಾಸಕ್ಕಿಂತ ಸಮೀಪದ ಪ್ರವಾಸ ಹೆಚ್ಚು ಸಲ ಒದಗಿ ಬಂದು ಅದರಲ್ಲಿಯ ಉದ್ದೇಶವೂ ಚೆನ್ನಾಗಿ ಸಾಧಿಸುವದು. ಧಾರ್ಮಿಕ ಕೃತ್ಯಗಳಲ್ಲಿ ಮಾತ್ರ ಬರುವ ಅನಪೇಕ್ಷಿತ ಅಡಚಣೆ ಗಳಿಂದ ಸ್ವಲ್ಪ ಮನೋಭಂಗವಾಗುವ ಸಂಭವ ವಿದೆ. ವಾಹನ ಸುಖ ಕಡಿಮೆಯೇ. ಅವು ಉತ್ತ ಮವಿದ್ದರೂ ನಿಮ್ಮ ಉಪಯೋಗದ ಕಾಲಕ್ಕೆ ಸ್ವಲ್ಪಾದರೂ ಕೆಡುವವು. ಮಿತ್ರಸುಖ ಅಷ್ಟ ಕ್ಕಷ್ಟೇ. ಸ್ವಜಾತಿಯವರಿಗಿಂತ ಪರಕೀಯ ರಿಂದಲೆ ಹೆಚ್ಚು ಸುಖ ಸಿಕ್ಕುವುದು.

ದಾವೆ ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಯ ಕಾರ್ಯ ಗಳಲ್ಲಿ ಶತ್ರುಗಳ ಮೇಲೆ ನೀವು ಬಹಳಷ್ಟು ವಿಜಯ ವನ್ನು ಸಂಪಾದಿಸುವಿರಿ. ಆದರೆ ಅದರಿಂದ ಆಗುವ ಲಾಭ ಮಾತ್ರ ನಿಮ್ಮ ಉಡಿಯಲ್ಲಿ ಬೀಳುವದಿಲ್ಲ. ಹದಿನೆಂಟು ಅಡಚಣೆಗಳು ಅಡ್ಡ ಬರುವವು. ಅಲ್ಲದೆ ಶತ್ರುಗಳು ಮತ್ತೆ ತಲೆಯೆತ್ತುವರು.

ಈ ವರ್ಷದಲ್ಲಿ ಯಾವ ಸ್ತ್ರೀಯರು ಪ್ರಸವ ಹೊಂದಲಿರುವರೋ ಅವರ ಪ್ರಸೂತಿಯು ಸಪ್ಟಂ ಬರ ೨೩ರ ವರೆಗೆ ಸ್ವಲ್ಪ ಕಷ್ಟದಿಂದಾಗುವದು. ಅನಂತರ ಮಾತ್ರ ಸುಲಭವಾಗಿ ಪ್ರಸವಹೊಂದು ವರು. ಹುಟ್ಟುವ ಮಕ್ಕಳು ಮಾತ್ರ ಅಶಕ್ತರೆ. ಅನೇಕರಿಗೆ ಹೆಣ್ಣು ಹುಟ್ಟುವ ಸಂಭವ ಹೆಚ್ಚಿಗಿದೆ.

ಯಾರ ಪರೀಕ್ಷೆ ಡಿಸೆಂಬರದ ನಂತರ ಆಗುವ ದಿದೆಯೋ ಅವರು ಬಹುಶಃ ಯಶಸ್ವಿಗಳಾಗುವರು ಎಂಬುದು ನಿಶ್ಚಿತ.

## ಕರ್ಕ

ಈ ರಾಶಿಯವರು ಒಟ್ಟಿಗೆ ಈ ವರ್ಷ ವ್ಯವ ಸ್ಥಿತ ರೀತಿಯಿಂದ ಮತ್ತು ದಕ್ಷತೆಯಿಂದ ಇದ್ದು ದಾದರೆ ಸ್ವಲ್ಪೂ ಅಪಾಯವಿಲ್ಲ; ಹಾನಿಯೂ ಇಲ್ಲ ಎಂಬುದು ನಿಶ್ಚಿತವೆಂದು ತಿಳಿದುಕೊಳ್ಳ ತಕ್ಕದ್ದು.

ಈ ರಾಶಿಯವರ ಆರೋಗ್ಯ ಡಿಸೆಂಬರ ೧೩ ರಿಂದ ಜನೆವರಿ ೨೫ ಎಪ್ರಿಲ ೧೮ ರಿಂದ ಮೇ ೩೦ ಮತ್ತು ಸಪ್ಟಂಬರ ೬ ರಿಂದ ೨೩, ಈ ಅವಧಿ ಯಲ್ಲಿ ಅಲ್ಪ ಸ್ವಲ್ಪ ಕ್ಲೇಶವಾಗುವ ಸಂಭವ ವಿದೆ. ಆದರೆ ಹಾಸಿಗೆ ಹಿಡಿಯುವಷ್ಟು ಅದೇನು ಹೆಚ್ಚಿಗಿರುವದಿಲ್ಲೆಂದು ನಿಶ್ಚಿತ ತಿಳಿದುಕೊಳ್ಳ ಬೇಕು. ಎದೆಯಲ್ಲಿ ಇಲ್ಲವೆ ಬೆನ್ನಿನಲ್ಲಿ ಹೊಡೆಯ ಹತ್ತುವದು. ಇದು ವಿಶೇಷ. ಉಳಿದ ಸಮಯ ದಲ್ಲಿ ಪ್ರಕೃತಿ ಚೆನ್ನಾಗಿಯೇ ಇರುವದು.

ಬೇರೆ ವಿಷಯಗಳಲ್ಲಿ ದೇಹಸುಖ ಮಾತ್ರ ಸಪ್ಟಂ ಬರ ೨೩ ರ ವರೆಗೆ ಬಹಳ ದಗದಗಿಯದು. ಆದರೆ ಫೆಬ್ರವರಿ ೮ ರಿಂದ ಮೇ ೧೫ ರ ಅವಧಿಯಲ್ಲಿ ಅತ್ಯಂತ ಉತ್ಸಾಹದ ಮತ್ತು ಹೃದಯಸ್ಪರ್ಶಿ ಯಾದ ಸಂಗತಿಗಳೂ ಸಂಭವಿಸುವ ಯೋಗವಿದೆ. ಇದೆಲ್ಲವನ್ನು ಯಾರು ಬಲ್ಲರು ? ಈ ವರ್ಷ ಹೊರ ಗಿನ ಶತ್ರುಗಳಿಗಿಂತ ಸಮೀಪದ ಆಪ್ತರು, ನೋಕರ ಚಾಕರರೇ ಹೆಚ್ಚು ತೊಂದರೆ ಕೊಡುವರು. ಬಹಳ ವಿಷಯಗಳಲ್ಲಿ ಆಯತ್ತಸಮಯಕ್ಕೆ ಅಡಚಣೆ ಯನ್ನುಂಟುಮಾಡುವರು. ಅವರಲ್ಲೊಬ್ಬ ಬಹ- ಳಷ್ಟು ತಲೆತಿರುಕನಾಗಿ ನಿಮ್ಮನ್ನು ನಿರರ್ಥಕವಾಗಿ ಅಪಕೀರ್ತಿಗೆ ಗುರಿಮಾಡುವನು. ವಾಹನಗಳನ್ನು ದುರಸ್ತಿ ಮಾಡಿಮಾಡಿ ಸಾಕುಬೇಕಾಗಿ ಹೋಗು ವದು. ಕೆಲ ಕೆಲ ವಸ್ತುಗಳು ನೋಡು ನೋಡು ವಷ್ಟರಲ್ಲಿ ಮಾಯವಾಗುವವು. ಆದರೆ ಸಪ್ಟಂಬರ ೨೩ ರ ನಂತರ ಅವರೆಲ್ಲರಿಗೆ ನೋರೆ ಕೆಳಗೆ ಹಾಕುವ ಪ್ರಸಂಗ ಬರುವದು. ಈ ವಿಷಯವನ್ನು ನೆನಪಿನಲ್ಲಿಟ್ಟುಕೊಂಡು ಅದಷ್ಟು ಸಂಯಮದಿಂದ ನಡೆದುಕೊಳ್ಳಬೇಕು. ಹೆಂಡತಿಯ ಆರೋಗ್ಯ ಅನುಕೂಲವುಳಿದರೂ ಅವಳದು ಮತ್ತು ನಿಮ್ಮ ತಾಯಿ ತಂದೆಗಳದು ಅನೇಕ ಸಲ ಕೆಡುವದ ರಿಂದ ಔಪಚಾರಿಕವಾಗಿ ಬಾ, ಹೋಗು ಎನ್ನು ವದಕ್ಕಿಂತ ಹೆಚ್ಚು ಅವಳ ಸಹವಾಸ ಸುಖ ಮಾತ್ರ ಚೆನ್ನಾಗಿ ಸಿಕ್ಕುವದಿಲ್ಲ. ಉಭಯತರಲ್ಲಿ ಪ್ರೇಮ ಮತ್ತು ವಿಚಾರ ಸಾಮ್ಯ ಮಾತ್ರ ಒಂದೇ ಸವನೆ ಉಳಿಯುವದು. ಅನೇಕರ ಪತಿ ಇಲ್ಲವೆ ಪತ್ನಿಗೆ ಮಾತ್ರ ಅಕ್ಟೋಬರ ೨೯ ರಿಂದ ಡಿಸೆಂಬರ ೧೩ ರ ವರೆಗೆ ಅಲ್ಪಸ್ವಲ್ಪ ಕಾಯಿಲೆಯಾಗುವ ಸಂಭವ ವಿದೆ. ನಿಮ್ಮ ವಿವಾಹ ಆಗುವದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅದಕ್ಕೆ ನವಂ ಬರ ೨೮ ರ ವರೆಗೆ ಮತ್ತು ಇಡಿ ಮೇ ತಿಂಗಳು ಅನುಕೂಲವಿರುವದು ಆದರೆ ಅದೆಲ್ಲ ಕೂಡಿ ಬರು ವಲ್ಲಿ ಮತ್ತು ಸಾಂಗವಾಗುವಲ್ಲಿ ಬಹಳ ದಗದಗಿ ಯಾಗುವದು. ವಧೂವರರು ಸಾಮಾನ್ಯವಾಗಿ ರೂಪ ಮತ್ತು ಗುಣಗಳಿಂದ ಬಹಳ ಭಿನ್ನಭಿನ್ನ ವಿರುವ ಸಂಭವವಿದೆ ಮತ್ತು ಬೀಗರೂ ನಿಮ್ಮನ್ನು ಬಹಳಷ್ಟು ಉಪೇಕ್ಷೆ ಮಾಡುವರು.

ಅದರಂತೆಯೇ ಮಕ್ಕಳಲ್ಲಿ ಯಾರಾದರೊಬ್ಬರ ವಿವಾಹ ಮಾಡುವದಿದ್ದರೆ ಮೇ ತಿಂಗಳವೊಂದನ್ನು ಬಿಟ್ಟು ಉಳಿದ ಕಾಲದಲ್ಲಿ ಬಾಸಿಂಗಬಲವಿಲ್ಲವೆಂ ದರೂ ನಡೆಯುವದು. ಮಗನ ಮದುವೆ ಮಾಡು ವದಿದ್ದರೆ ಬಹಳಷ್ಟು ಅಂಜುವ ಕಾರಣವಿಲ್ಲ. ಆದರೆ ಮಗಳ ಮದುವೆ ಮಾಡುವದಿದ್ದರೆ ಮಾತ್ರ ಬಹಳಷ್ಟು ತೊಂದರೆ ಮತ್ತು ಕಷ್ಟವೆನಿಸುವದು. ಗೊತ್ತಾದಂತೆಯಾದರೂ ಆಗುವ ನಿಯಮವಿಲ್ಲ. ಬೀಗರು ಬೇಕಂತಲೆ ಅದನ್ನು ಮುರಿಯುವರು. ತುರ್ತಕ್ಕೆ ಅದು ಸಾಂಗವಾಗದಂತೆ ಚಮ ತ್ಕಾರಿಕ ಅಡಚಣೆಗಳು ತಾವಾಗಿಯೇ ಒದ ಗುವ ಸಂಭವ. ಆದರೆ ದೇವರ ದಯೆಯಿಂದ ಸಾಂಗವಾದರೆ ಸೊಸೆ ಇಲ್ಲವೆ ಅಳಿಯ ಬಹಳಷ್ಟು ಮನಸ್ಸಿಗೆ ಬರುವರು. ಮಕ್ಕಳ ಉನ್ನತಿಗೆ ಮಾತ್ರ ಈ ವರ್ಷ ಅಷ್ಟಕ್ಕಷ್ಟೇ. ಆದರೆ ಒಬ್ಬರ ಉನ್ನ ತಿಯು ಮೇ ೩೦ ರಿಂದ ಜುಲೈ ೧೩ ಇಲ್ಲವೆ ಸಪ್ಟಂ ಬರ ೬ರ ನಂತರ, ಆಗುವ ಸಂಭವವಿದೆ. ಎಲ್ಲ ಮಕ್ಕಳೂ ಲೌಕಿಕ ದೃಷ್ಟಿಯಿಂದ ನಿಮ್ಮ ಜೊತೆ ಬಹಳ ಉತ್ತಮ ರೀತಿಯಿಂದ ವರ್ತಿಸುವರು.

ಧಂದೆ ಕೂಲಿಕಾರರಿಗೆ ಈ ವರ್ಷ ಸಾಧಾರಣ ವಾಗಿ ಲಾಭದ ಯೋಗವೆ ಇದೆ. ಧಂದೆಯವರ ವ್ಯಾಪ ಮತ್ತು ವ್ಯವಹಾರ ಡಿಸೆಂಬರದಿಂದ ದೊಡ್ಡ ಪ್ರಮಾಣದಲ್ಲಿ ಹೆಚ್ಚುವವು. ಆದರೆ ಸ್ಪರ್ಧೆಯ ಮೂಲಕ ಪ್ರತ್ಯಕ್ಷ ಲಾಭ ಬಹಳ ಕಡಿ ಮೆಯೇ. ತದ್ವಿರುದ್ಧವಾಗಿ ಕೊಡತಕ್ಕೊಳ್ಳುವ ಕೆಲವುಟ್ಟಿಗೆ ಹೆಚ್ಚುವದು. ಅದರಲ್ಲಿಯೂ ನವಂ ಬರ ೨೮ರ ವರೆಗೆ ಮತ್ತು ಫೆಬ್ರುವರಿ ೮ರಿಂದ ಮೇ

೧೫ರ ವರೆಗಿನ ಕಾಲವು ಲಾಭದಾಯಕವೆನಿಸುವದು. ಧಂದೆಯುವರು ಯಾವದೊಂದು ಕೆಲಸವನ್ನು ದೂರದೃಷ್ಟಿಯುನ್ನಿಟ್ಟು ಮತ್ತು ಪೂರ್ಣ ವಿಚಾರಮಾಡಿ ಅನಂತರವೇ ಮಾಡಬೇಕು. ಸಪ್ಟಂಬರ ೨೩ರ ವರೆಗೆ ಈ ರಾಶಿಯುವರಿಗೆ ಇರುವ ೬ನೇ ರಾಹುವಿನಿಂದ ಮೇಲೆ ಹೇಳಿದ್ದೆಲ್ಲ ಧ್ವನಿತವಾಗುವದು. ನೋಕರರಿಗೆ ಈ ವರ್ಷ ಮೇಲಿನವರಿಂದ ಇಲ್ಲವೆ ಒಡೆಯರಿಂದ ಮೇಲಿಂದ ಮೇಲೆ ಉಪಹಾಸವಾಗುವದಾದರೂ ಲಾಭಕ್ಕೆ ಮಾತ್ರ ಸ್ವಲ್ಪೂ ವ್ಯತ್ಯಯ ಬರಲಾರದು. ನಿಮ್ಮ ಸದ್ವರ್ತನೆಯ ಬಗ್ಗೆ ಅವರು ಸದಾಕಾಲದಲ್ಲಿ ಧನ್ಯವಾದವನ್ನರ್ಪಿಸುವರು. ಆದರೆ ಕೆಲಸ ಮಾತ್ರ ಬೇಗನೆ ಚೆನ್ನಾಗಿ ಅಗುವದಿಲ್ಲೆಂಬುದು ಅವರ ತಕರಾರು. ಬದಲಿಯಾಗುವ ಶಾಖೆಯಿದ್ದರೆ ನೋಕರಿ ದೃಷ್ಟಿಯಿಂದ ಅನುಕೂಲ. ಆದರೆ ಪ್ರಾಪಂಚಿಕ ಅನನುಕೂಲತೆಯಿರುವ ಸ್ಥಳಕ್ಕೆ ಅಗುವದು. ನಾಲ್ಕು ದುಡ್ಡು ಕೂಡಿಬೀಳುವದಂತೂ ದೂರೇ ಉಳಿಯಿತು. ಆದರೆ ಹೊಸಹೊಸ ಸಾಲ ಇಲ್ಲವೆ ಕೈಗಡ ತೆಗೆದುಕೊಳ್ಳುವ ಅಂಜಿಕೆಯೂ ಇರುವದಿಲ್ಲ. ದಿವಸಗಳನ್ನೆಲ್ಲ ಸ್ವಾಭಿಮಾನದಿಂದ ಕಳೆಯುವ ಯೋಗವಿದೆ. ಯಾವದೊಂದು ವಿಶಿಷ್ಟ ದೇವ-ಧರ್ಮದ ಕೃತ್ಯ ನಡೆಯುವದು. ಪ್ರವಾಸ ಸ್ವಲ್ಪ ಮಾಡಿದರೂ ಅದರ ಉದ್ದೇಶ ಸಫಲವಾಗುವದು. ಬಂಧುವರ್ಗದವರಿಗೆ ಮಾತ್ರ ಈ ವರ್ಷ ನಿಮ್ಮಕ್ಕಿಂತ ಬಹಳ ಉನ್ನತಿಕಾರಕವಿರುವದು. ಮಿತ್ರ ಸುಖ ಮನಸ್ಸಿನಂತೆ ದೊರೆಯುವದು.

ವಾದ ವಿವಾದಗಳಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ನವಂಬರ ೨೭ ರಿಂದ ಸಪ್ಟಂಬರ ೨೩ ರ ವರೆಗೆ ಪ್ರತಿಪಕ್ಷಿಗಳ ಜೋರು ಹೆಚ್ಚು. ಈ ಅವಧಿಯಲ್ಲಿ ಒಡಂಬಡಿಕೆ ಮಾಡಿಕೊಂಡದ್ದಾದರೆ ಹೆಚ್ಚು ಲಾಭದಾಯಕವಾಗಬಹುದು.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅವರಲ್ಲಿ ಯಾರು ಅಕ್ಟೋಬರ ೨೯ ರ ವರೆಗೆ ಮತ್ತು ಜಾನೆವರಿ ೨೫ ರಿಂದ ಎಪ್ರಿಲ ೧೮ ಮತ್ತು ಮೇ ೩೦ ರಿಂದ ಜುಲೈ ೧೩ರ ವರೆಗೆ ಹಡೆಯುವರೋ ಅವರು ಸುಲಭವಾಗಿ ಹಡೆಯುವರು ಮತ್ತು ಬಹುಶಃ ಗಂಡುಹುಟ್ಟುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಅಕ್ಟೋಬರ ೨೯ರ ವರೆಗೆ ಮತ್ತು ಮಾರ್ಚ ೭ ರಿಂದ ಎಪ್ರಿಲ ೧೮ ಮತ್ತು ಮೇ ೩೦ ರಿಂದ ಸಪ್ಟಂಬರ ೭ ರ ವರೆಗಿನ ಅವಧಿಯಲ್ಲಿ ಆಗುವದೊ ಅವರು ನಿಶ್ಚಯವಾಗಿ ತೇರ್ಗಡೆ ಹೊಂದುವರು.

ದೋಷವನ್ನೇ ಹುಡುಕಹತ್ತುವರು. ಸಪ್ಟಂಬ[ರ] ೨೩ರ ನಂತರ ಅಣ್ಣತಮ್ಮಂದಿರ ಇಲ್ಲವೆ ಗೃಹಕ[ಲ]ಹದ ಝುಳಕು ಕಂಡುಬರುವದು. ಅದರ ಅನು[ಭ]ವವೂ ನಿಮಗೆ ಉಂಟಾಗುವದು. ನಿಮ್ಮ ವಾಹ[ನ]ಗಳಿದ್ದರೆ ಅವು ನಿಮ್ಮಕ್ಕಿಂತ ಎರಡನೆಯವರ ಉ[ಪ]ಯೋಗಕ್ಕೇ ಹೆಚ್ಚಿಗೆ ಮೀಸಲಾಗಿರುವಂತೆ ಉ[ಳಿ]ಯುವವು. ನೋಕರ ಚಾಕರರು ಪ್ರಾಮಾಣಿ[ಕ] ರೀತಿಯಿಂದ ವರ್ತಿಸಿದರೂ ಬಹಳ ಉದ್ಧಟರಾಗ[ಿ]ವರು. ಬೇಡಾದ ಮನೆ ಇಲ್ಲವೆ ಹೊಲವನ್ನು ಮಾ[ಡಿ] ಎರಡನೆಯದನ್ನು ಕೊಳ್ಳುವಿರಿ.

ಈ ವರ್ಷ ಬಂಡವಲ ಲಾಭಕ್ಕೆ ಗ್ರಹಗಳು ಅನ[ು]ಕೂಲವಿದ್ದಷ್ಟೇ ವಿಪರೀತ ವೆಚ್ಚಕ್ಕೂ ಇರುವವು. ಧಂದೆಯುವರಿಗೆ ದಿಸೆಂಬರದಿಂದ ಪರ್ವಕಾಲ ಸು[ರು] ವಾಗುವದು. ವರ್ಚಸ್ಸು ಇಲ್ಲವೆ ಪ್ರತಿಷ್ಠೆಯ ದೃಷ್ಟಿಯಿಂದ ಬಹಳಷ್ಟು ಉಲಾಢಾಲಿಗಳಾಗ[ು]ವವು. ಮತ್ತು ಧಂದೆ ಹೆಚ್ಚಿಗೆ ಬೆಳೆಯುವದು. ಜನರಲ್ಲಿ ಒಳ್ಳೆ ಪ್ರತಿಷ್ಠೆ ಹಬ್ಬುವದು. ಕೆಲವ[ರಿ]ಗಂತೂ ಇದ್ದ ಧಂದೆಯ ಬಗ್ಗೆ ಬೇರೆ ಬೇ[ರೆ] ಸ್ಥಳಗಳಲ್ಲಿ ಶಾಖೆಗಳನ್ನು ತೆಗೆಯಬೇಕಾಗುವದು. ಮತ್ತು ನವಂಬರ ೭ರ ವರೆಗೆ ಅನಂತರ ನವಂಬ[ರ] ೨೭ ರಿಂದ ಫೆಬ್ರುವರಿ ೩, ಫೆಬ್ರುವರಿ ೨೧ ರಿಂ[ದ] ಮಾರ್ಚ ೯, ಎಪ್ರಿಲ ೨೬ ರಿಂದ ಮೇ ೯, ಮೇ ೩೦ ರಿಂದ ಜೂನ ೧೫ ಮತ್ತು ಸಪ್ಟಂಬರ ೩ ರಿಂ[ದ] ನವಂಬರ ೩ ಈ ಅವಧಿಯು ಬಹಳಷ್ಟು ಲಾಭ[ವಾ]ದ್ದಿರುವದು. ನೋಕರರಿಗೆ ಕೂಡ ಯಾವದೆ[ೇ] ಬಗೆಯ ದಗದಗಿಯಾಗದೆ ಕೈಯಲ್ಲಿಯ ಕೆಲಸವು ಯಾವತೊಂದರೆಯಿಲ್ಲದೆ ಸರಳವಾಗಿ ನಡೆಯುವದು. ವರಿಷ್ಠರು ಸಂತುಷ್ಟ ಉಳಿಯುವರು. ಕೈ[ಕೆ]ಳಗಿನವರು ಆದರದಿಂದ ನಡೆದುಕೊಳ್ಳುವರು. ಆದರೆ ವೆಚ್ಚ ಬಹಳವಾಗುತ್ತದೆ ಎಂಬ ಕಿರಿಕಿ[ರಿ] ಸದಾ ಇದ್ದದ್ದೇ. ಬದಲಿಆಗುವ ಶಾಖೆಯಲ್ಲಿ ನೀವು ಇದ್ದರೆ ಆದಾಗುವ ಯೋಗ ಕಡಮೆಯೇ. ಒಂದ[ು] ವೇಳೆ ಆದರೆ ನವಂಬರ ೨೮ರ ವರೆಗೆ ಅಥವಾ ಎಪ್ರಿ[ಲ] ೧೮ ರಿಂದ ಮೇ ೩೦ ಈ ಅವಧಿಯಲ್ಲಿ ಅಗುವದು. ಆದರೆ ಆ ಸ್ಥಳವು ಮೊದಲಿನಷ್ಟು ಸುಖ ಸೌಕರ್[ಯ]ಗಳದ್ದಿರುವದಿಲ್ಲ. ಆದರೆ ಗ್ರೇಡು ಸಿಕ್ಕುವದರಿಂದ ಅಥವಾ ಸಂಬಳ ಹೆಚ್ಚುವದರಿಂದ ಸಮಾಧಾ[ನ]

## ಸಿಂಹ

ಈ ರಾಶಿಯವರಿಗೆ ಬಹುತರ ವಿಷಯಗಳಲ್ಲಿ ಈ ವರ್ಷ ಬಹಳ ಉತ್ಕರ್ಷದ್ದಿರುವದು.

ಈ ರಾಶಿಯುವರಿಗೆ ಈ ವರ್ಷ ಸಪ್ಟಂಬರ ೨೩ ರ ವರೆಗೆ ಆರೋಗ್ಯ ಬಹಳ ಉತ್ತಮವಿರುವದು. ಅನಂತರ ಮಾತ್ರ ಒಂದಿಲ್ಲೊಂದು ರಗಳೆ ಇದ್ದದ್ದೆ. ಮತ್ತು ಮನಸ್ಸು ಅಸ್ವಸ್ಥವಾಗುವಂತೆ ಸ್ವಪ್ನಗಳು ಬೀಳಹತ್ತುವವು. ಅದರಂತೆಯೇ ಬಹುತರ ವಿಷಯುಗಳಲ್ಲಿ ಮಾನಸಿಕ ಸಮಾಧಾನ ಉಳಿಯುವದಿಲ್ಲ. ಈ ವರ್ಷದಲ್ಲಿ ಬಹಳಷ್ಟುಕಾಲ ಶನಿ ೬ನೇ ಸ್ಥಾನದಲ್ಲಿರುವದರಿಂದ ಪ್ರತಿಯೊಂದು ಕೆಲಸದಲ್ಲಿ ಆತ್ಮವಿಶ್ವಾಸವುಳಿಯುವದಿಲ್ಲ. ಕೆಲವರಿಗೆ ನೇತ್ರ ವಿಕಾರವಾದರೆ ಹಲವರಿಗೆ ಕಣ್ಣು ಮಂದವಾಗಿ ಕಾಣಹತ್ತುವವು. ಆದರೂ ಇವೆಲ್ಲ ಕೇವಲ ಕಿರಕಳ ಸ್ವರೂಪದ ವಿಕಾರಗಳು.

ಸ್ತ್ರೀಸುಖಕ್ಕೆ ಈ ವರ್ಷ ಬಹಳ ಅನುಕೂಲವಿದ್ದು ನವಂಬರ ೨೮ ರಿಂದ ಅವಳ ಪ್ರಕೃತಿ ಬಹಳಷ್ಟು ಚೆನ್ನಾಗಿ ಉಳಿಯುವದು. ಕಿರಕಳವಾಗಿ ಉಂಟಾಗುವ ಮತಭೇದವನ್ನು ಬಿಟ್ಟರೆ ಬಹುತರ ವಿಷಯಗಳಲ್ಲಿ ಉಭಯತರಲ್ಲಿ ಒಳ್ಳೆಮತ್ತೈಕ್ಯವಾಗುವದು. ಒಂದು ವೇಳೆ ನಿಮ್ಮ ಮದುವೆ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವ ವಿಚಾರವಿದ್ದರೆ ನವಂಬರದ ನಂತರ ಅದಾದರೂ ಅಲ್ಪಾಯಾಸದಿಂದ ಕೂಡಿಬಂದು ಕೂಡಲೆ ಸಾಂಗವಾಗಿ ಹೋಗುವದು. ವಧೂ ಇಲ್ಲವೆ ವರ ನಿಮಕಿಂತ ಹೆಚ್ಚು ಚಾಣಾಕ್ಷ ಮತ್ತು ಸುರೂಪಿ ಇರುವರು. ಆದರೆ ಅವರು ಬಹಳಮಟ್ಟಿಗೆ ಸಿಟ್ಟಿನ ಸ್ವಭಾವದವರು.

ಅದರಂತೆ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವದಿದ್ದರೆ ಈ ವರ್ಷ ಯಾವಾಗಲೂ ಬಾಶಿಂಗ ಬಲ ಅನುಕೂಲವಿರುವದರಿಂದ ಕೇವಲ ಹೆಸರಿಗೆ ಪ್ರಯತ್ನ ಮಾಡಿದರೆ ಸಾಕು ಕೂಡಿ ಬರುವದು. ಮತ್ತು ಮುಂದೆ ಅಲ್ಪಾವಧಿಯಲ್ಲಿ ವ್ಯವಸ್ಥಿತವಾಗಿ ಸಾಂಗವಾಗುವದು. ಸೊಸೆ ಅಥವಾ ಅಳಿಯ ಅಪೇಕ್ಷೆಗಿಂತ ಹೆಚ್ಚು ಜಾಣ ಮತ್ತು ಸುರೂಪಿಯಿರುವದರಿಂದ ಮನಸ್ಸು ಒಳ್ಳೆ ಸಂತುಷ್ಟವಾಗುವದು. ಮಕ್ಕಳ ಉತ್ಕರ್ಷಕ್ಕೂ ಈ ವರ್ಷ ಬಹಳ ಅನುಕೂಲವಿದೆ ಅವರಿಂದ ನಿಮಗೆ ಯಥಾಯೋಗ್ಯ ಸುಖ ದೊರೆಯುತ್ತ ಹೋಗುವದು. ಆದರೆ ಉಳಿದ ಆಪ್ತರಿಂದ ಮಾತ್ರ ಸುಖ ದೊರೆಯುವದಿಲ್ಲ. ಅವರು ಎಲ್ಲಿ ನೋಡಿದಲ್ಲಿ ನಿಮ್ಮ

ದಿಂದ ಇರಬೇಕಾಗುವದು. ವಿಪರೀತ ವೆಚ್ಚದಿಂದ ಹಣವೇನೂ ಉಳಿಯದಿದ್ದರೂ ವೆಚ್ಚ ಮಾಡಿದ್ದರ ಉದ್ದೇಶ ಮಾತ್ರ ಚೆನ್ನಾಗಿ ಸಾಧಿಸುವದು. ಸಪ್ಟಂಬರ ೨೩ರ ವರೆಗೆ ಎಂಥ ದುರ್ಘಟ ಕಾರ್ಯಗಳಾದರೂ ಯಶಸ್ವಿಯಾಗುವವು. ಪ್ರವಾಸ ಬಹಳ ದೂರಿನದು ಮತ್ತು ಅದಾದರೂ ಅಕಲ್ಪಿತವಾಗಿ ಒದಗಿಬರುವದು. ಅನೇಕರಿಗೆ ತಡೆದುನಿಂತ ಕಾರ್ಯದಲ್ಲಿ ತನುಮನಧನಗಳಿಂದ ಸಹಾಯ ಮಾಡುವ ಔದಾರ್ಯವು ಕಂಡುಬರುವದು. ಒಂದು ವರ್ಗದವರಿಗೆ ಈ ವರ್ಷ ಅಷ್ಟೊಂದು ಅನುಕೂಲವಿರುವದಿಲ್ಲ ಮತ್ತು ಯಾರು ಚೆನ್ನಾಗಿರುವರೊ ಅವರೊಡನೆ ಕೂಡಿ ನಡೆಯುವದಿಲ್ಲ. ಮಿತ್ರಸುಖ ಉತ್ತಮ ದೊರೆತು ಸ್ವಲ್ಪಿಲ್ಲ ಸ್ವಲ್ಪ ದಿನ ಅನೇಕರೊಡನೆ ಸಹವಾಸ ಸುಖ ದೊರೆಯುವದು. ಬೌದ್ಧಿಕ ಕಾರ್ಯಗಳಲ್ಲಿ ಬಹಳಷ್ಟು ಮುಂದೆ ಹೋಗುವಿರಿ.

ದಾವೆ ಖಟ್ಲೆ ಮತ್ತು ಖಾಸಗಿ ಸ್ಪರ್ಧೆಗಳಲ್ಲಿ ಪ್ರತಿಪಕ್ಷಿಗಳು ಮೊದ ಮೊದಲು ನಿಮ್ಮನ್ನು ಬಹಳ ಕೆಳಗೆತರುವರು ಆದರೆ ಹಿಂದುಗಡೆ ಮಾತ್ರ ಅವರು ಹಾಕಿದ ಹೊಂಚು ಅವರ ಮೇಲೆಯೇ ತಿರುಗಿ ಬಿದ್ದು ನಿಮಗೆ ಸಂತೋಷವೆನಿಸುವಂಥ ವಿಜಯ ಖಾತ್ರಿಯಿಂದ ದೊರೆಯುವದು. ಇದು ನಿಶ್ಚಿತ. ಜುಲೈ ೧೩ರ ನಂತರ ಮೇಲಿನ ಯೋಗ ನಿಶ್ಚಿತವಾಗಿ ಬರುವದು.

ಈರಾಶಿಯ ಸ್ತ್ರೀಯರು ಈವರ್ಷ ಪ್ರಸವರಾಗುವವರಿದ್ದರೆ ಫೆಬ್ರುವರಿ ೮ ರಿಂದ ಮೇ ೧೫ರ ಮಧ್ಯಂತರ ಅವಧಿಯಲ್ಲಿ ಹಡೆದವರಿಗೆ ಅಲ್ಪ ಸ್ವಲ್ಪ ಕಷ್ಟವೆನಿಸುವದು. ಮತ್ತು ಹೆಣ್ಣುಹುಟ್ಟುವವು. ಆದರೆ ಉಳಿದವೇಳೆಯಲ್ಲಿ ಹಡೆದವರಿಗೆ ಸುಲಭವಾಗಿ ಪ್ರಸೂತಿಯಾಗಿ ಬಹುಶಃ ಗಂಡು ಮಗು ಹುಟ್ಟುವದು. ಯಾವ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೧೪ ರಿಂದ ಎಪ್ರಿಲ ೧೩ ಮತ್ತು ಜುಲೈ ೧೫ ರಿಂದ ಅಗಸ್ಟ ೧೭ ಈ ಅವಧಿಯಲ್ಲಿ ಆಗುವದೊ ಅವರು ಸುಳ್ಳು ಸುಳ್ಳೆ ಆತ್ಮವಿಶ್ವಾಸವನ್ನು ಅವಲಂಬಿಸಿ ಕೂಡ್ರದೆ ತಮ್ಮ ಅಭ್ಯಾಸವನ್ನು ಜೋರಿನಿಂದ ಮಾಡಬೇಕು ಅಂದರೆ ಉಳಿದ ಕಾಲದಲ್ಲಿ ಯಶಸ್ಸು ದೊರಕಿಸುವ ವಿದ್ಯಾರ್ಥಿಗಳಂತೆ ಇವರೂ ಯಶಸ್ವಿಗಳಾಗುವರೆಂಬಲ್ಲಿ ಸಂದೇಹವಿಲ್ಲ.

# ಕನ್ಯಾ

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಶಾರೀರಿಕ ಮತ್ತು ಪ್ರಾಪಂಚಿಕ ದೃಷ್ಟಿಯಿಂದ ಅಲ್ಪ ಸ್ವಲ್ಪ ತೊಂದರೆಯೆನಿಸಿದರೂ ಆರ್ಥಿಕವಿಷಯಗಳಲ್ಲಿ ಬಹಳ ಸುಖಕರವೆನಿಸುವದು ಎಂಬುದು ನಿಃಸಂಶಯವಾಗಿದೆ.

ಈ ರಾಶಿಯ ಜನರು ಈ ವರ್ಷ ಆರೋಗ್ಯದ ಬಗ್ಗೆ ಸದಾ ತಕರಾರು ಹೇಳುವವರೆ. ಆದರೆ ಸಪ್ಟಂಬರ ೨೩ರ ನಂತರ ಅದರ ಪ್ರಮಾಣ ಸ್ವಲ್ಪ ಕಡಿಮೆಯಾಗುವದು. ಹೀಗೆಯೇ ಆಗುವದು ಎಂದು ಅವರಿಗಾದರೂ ಹೇಳಲಿಕ್ಕೆ ಬಾರದಂಥ ವಿಕಾರಗಳಾಗುವವು. ವೈದ್ಯರು ಮತ್ತು ಡಾಕ್ಟರರಿಗೆ ಕೂಡ ಗೊತ್ತಾಗದಂಥ ವಿಕಾರಗಳಾಗುವವು ಅರ್ಥಾತ್ ಆಗುವ ಕಷ್ಟತೊಂದರೆ ಪಿಶಾಚವತ್ ಎನಿಸುವವು. ಆದರೆ ಅದರಿಂದ ಗಂಡಾಂತರವಿಲ್ಲ ಅಥವಾ ಹಾಸಿಗೆ ಹಿಡಿಯುವ ಅಂಜಿಕೆಯೂ ಇರುವದಿಲ್ಲ.

ಹೆಂಡತಿಯ ಆರೋಗ್ಯ ಸಪ್ಟಂಬರ ೨೩ರ ವರೆಗೆ ಅನುಕೂಲವಿರುವದು. ಅನಂತರ ತಲೆನೋವು ಇಲ್ಲವೆ ಕಣ್ಣುನೋವು ಹಲ್ಲುನೋವು ಇವುಗಳ ತೊಂದರೆಯಾಗುವ ಸಂಭವವಿದೆ. ಪ್ರತಿಯೊಬ್ಬರಿಗೆ ಮಾಸಿಕ ರಜೋದರ್ಶನದ ತಕರಾರು ಪ್ರಾರಂಭವಾಗುವ ಸಂಭವವಿದೆ. ಪತಿ ಪತ್ನಿಯರು ಕ್ಷಣದಲ್ಲಿ ಕೂಡಿ ನಡೆದರೆ ಮರುಕ್ಷಣದಲ್ಲಿ ಪರಸ್ಪರ ಕೆಡುವದು. ಆದರೆ ಇನ್ನೂ ನಿಮ್ಮ ಮದುವೆಯಾಗಿದ್ದಿಲ್ಲವಾದರೆ ಇಡಿ ವರ್ಷ ಬಾಸಿಂಗಬಲ ಚೆನ್ನಾಗಿ ಇರುವದು. ಆದರಲ್ಲಿಯೂ ನವಂಬರ ೨೮ರ ವರೆಗೆ ಬಹಳ ಉತ್ತಮವಿರುವದೆಂದು ತಿಳಿಯಬೇಕು. ಲಗ್ನ ಕೂಡಿಬರುವದರಲ್ಲಿ ಮೊದಲು ಕೆಲ ಅಡಚಣೆಗಳು ಬರುವವು. ಆದರೆ ಒಮ್ಮೆ ಪೂರ್ಣವಾಗಿ ನಿಶ್ಚಯವಾದ ಬಳಿಕ ಮುಂದೆ ಅನುಕೂಲವಾಗಿ ಪರಿಣಮಿಸುವದು. ಮತ್ತು ವಧೂವರರು ರೂಪ ಗುಣಗಳಿಂದ ಎಣಿಸಿದ್ದಕ್ಕಿಂತ ಬಹಳ ಚೆನ್ನಾಗಿ ದೊರೆಯುವರು.

ಆದರಂತೆ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಇಡಿ ವರ್ಷ ಬಾಶಿಂಗಬಲ ಅನುಕೂಲವಿದೆ. ಆದರೆ ಡಿಸೆಂಬರದೊಳಗಾಗಿ ಎಷ್ಟು ಅಲ್ಪಾಯಾಸದಿಂದ ಅದು ಒದಗಿ ಬರುವದೋ ಅಷ್ಟು ಹಿಂದುಗಡೆ ಒದಗಿಬರುವದಿಲ್ಲ. ನಿಷ್ಕಾರಣವಾಗಿ ಮಾತುಕತೆ ನಡೆಸಬೇಕಾಗುವದು ಮತ್ತು ಅದೆಲ್ಲ ಯಶಸ್ವಿಯಾಗುವ ವರೆಗೆ ಅಕಲ್ಪಿತ ಅಡಚಣೆಗಳನ್ನೆದುರಿಸಬೇಕಾಗುವದು. ಅದರಂತೆ ಸೊಸೆ ಇಲ್ಲವೆ ಅಳಿಯ ಮೊದಲು ಅಪೇಕ್ಷಿಸಿದಷ್ಟು ಒಪ್ಪಿಗೆಯಾಗುವರೊ ಇಲ್ಲವೊ ನಿಯಮವಿಲ್ಲ. ಆದರೆ ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ಬಹಳ ಅನುಕೂಲವಿದೆ. ಅನೇಕರ ಉತ್ಕರ್ಷವು ನವಂಬರ ೮ ರಿಂದ ೨೭, ಫೆಬ್ರುವರಿ ೨ರಿಂದ ೨೧, ಮೇ ೯ರಿಂದ ೩೦, ಜೂನ ೧೫ ರಿಂದ ಅಗಷ್ಟ ೨೦ ಮತ್ತು ಸಪ್ಟಂಬರ ೨೬ ರಿಂದ ಅಕ್ಟೋಬರ ೧೨, ಈ ಮಧ್ಯಂತರ ಅವಧಿಯಲ್ಲಿ ಬಹಳಷ್ಟು ಆಗುವ ಸಂಭವವಿದೆ. ಆದರೆ ನಿಮ್ಮದು ಅವರದು ಅಷ್ಟಕ್ಕಷ್ಟೇ ಕೂಡಿ ನಡೆಯುವದು. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖವಾದರೂ ಒಳ್ಳೆಯದೂ ಅಲ್ಲ ಕೆಟ್ಟದ್ದೂ ಅಲ್ಲ ಹೀಗೆ ಎನಿಸುವದು. ಸಮೀಪದ ಆಪ್ತರಿಗಿಂತ ದೂರಿನ ಆಪ್ತರು ಹೆಚ್ಚು ಪ್ರೇಮದಿಂದ ನಡೆಯುವರು. ವಾಹನಗಳು ಅನೇಕ ಸಲ ಕೆಟ್ಟರೂ ಕೆಲಸಕ್ಕೆ ವ್ಯತ್ಯಯ ಬರದಂಥ ಸಮಯದಲ್ಲಿ ಕೆಡುವವು. ನೋಕರ ಚಾಕರರು ಪ್ರಾಮಾಣಿಕರಾಗಿ ನಡೆದರೂ ಚುಕಾರ ತಟ್ಟು ಆಗುವರು. ಸಮೀಪದ ಆಪ್ತರೊಬ್ಬರಲ್ಲಿ ಅತಿ ಪ್ರೇಮದ ವ್ಯಕ್ತಿಯೊಬ್ಬನು ಬಹಳ ಉನ್ನತಿ ಹೊಂದುವನು ಮತ್ತು ಅದರ ಕೀರ್ತಿಯೆಲ್ಲ ನಿಮಗೆ ದೊರೆಯುವದು. ಹೊಸದಾಗಿ ಸ್ಥಾವರ ಸಂಗ್ರಹ ಮಾಡುವ ಯೋಗವಿಲ್ಲದಿದ್ದರೂ ಹೊಸ ಹೊಸ ಕೆಲ ಆಶ್ಚರ್ಯಕರ ಉಚ್ಚ ವಸ್ತುಗಳನ್ನು ಸಂಗ್ರಹಿಸುವಿರಿ.

ಈ ವರ್ಷ ಧಂದೆ ಕೂಲಿಕಾರರಿಗೆ ಬಹಳ ದಗದಗಿಯಿದ್ದರೂ ಬಹಳ ಲಾಭದಾಯಕವಾಗುವದು. ನವಂಬರ ೨೯ ರಿಂದ ಮಾರ್ಚ ೩೦, ಎಪ್ರಿಲ ೨೯ ರಿಂದ ಮೇ ೨೫, ಜೂನ ೨೦ ರಿಂದ ಸಪ್ಟಂಬರ ೩ ಮತ್ತು ಅಕ್ಟೋಬರ ೨೧ ರಿಂದ ಮುಂದೆ ಇಡೀ ಕಾಲ ಧಂದೆಯವರಿಗೆ ವಿಶೇಷ ಲಾಭದಾಯಕವಿದೆ ಆದರೆ ಮಾಲು ಖರೀದಿಮಾಡುವ ಪೇಟೆ ಇಲ್ಲವೆ ಅಡತಿ ಬದಲಾಗುವವು ಅಷ್ಟೇ. ನೌಕರರಿಗೆ ಡಿಸೆಂ-ಬರದಿಂದ ಮುಂದೆ ಗ್ರೇಡು ದೊರೆಯುವ ಸಂಭವ ಬಹಳವಿದೆ. ಬದಲಿಯಾದರೆ ಸಪ್ಟಂಬರ ೨೩ ವರೆಗೆ ಅನುಕೂಲಸ್ಥಳಕ್ಕೆ ಆಗುವದು. ಆದರೆ ಅನಂತರ ಬದಲಿಯಾದರೆ ಅನನುಕೂಲಸ್ಥಳಕ್ಕೆ ಆಗುವದು. ಲಾಭ ಎಣಿಸಿದ್ದಕ್ಕಿಂತ ಹೆಚ್ಚೇ ಆಗುವದು. ಆದರೆ ಅದೇ ಕಾಲಕ್ಕೆ ವೆಚ್ಚ ಹೆಚ್ಚಿಗೆ ಆಗುವ ಸಂಗತಿಗಳು ಸಂಭವಿಸುವವು. ವರಿಷ್ಠರು ಕೆಲ ಸಮಯ ವಿನಮ್ರರಾಗಿದ್ದರೆ ಬೇರೆ ಕೆಲಸಲ ಬಹಳ ಉಗ್ರರಾಗಿರುವರು ಆದರೆ ಕೈಕೆಳಗಿನವರು ಪ್ರೇಮದಿಂದ ನಡಕೊಳ್ಳುವರು. ಮಿತ್ರಸುಖ ದೊರೆಯುವದು. ದೈವಿಕ ಇಲ್ಲವೆ ಮಂಗಳದಾಯಕ ಕೃತ್ಯಗಳು ನಿಶ್ಚಿತ

ಕಾಲಕ್ಕೆ ನಡೆಯದೆ ಹಿಂದೆಮುಂದೆ ಜರಗುವವು. ಆದರೂ ಅದೆಲ್ಲ ವ್ಯವಸ್ಥಿತವಾಗಿ ನಡೆಯುವವು. ಎರಡು ಮೂರುಸಲ ಬಹಳ ದೂರದ ಪ್ರವಾಸ ಒದಗುವದು. ಬಂಧುಗಳಿಗೆ ಈ ವರ್ಷ ಬಹಳ ಉನ್ನತಿಯದಿರುವದು.

ದಾವೆ ಖಟ್ಲೆ ಮತ್ತು ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಫೆಬ್ರುವರಿ ೮ ರಿಂದ ಮೇ ೧೫ ರಲ್ಲಿ ಬಹಳ ಯಶಸ್ಸು. ಉಳಿದ ವೇಳೆಯಲ್ಲಿ ಪ್ರತಿಪಕ್ಷಿಗಳ ಜೋರು ಬಹಳ ಹೆಚ್ಚು. ಹಳೆಯ ಶತ್ರುಗಳಲ್ಲದೆ ಹೊಸ ಶತ್ರುಗಳೂ ಹೆಚ್ಚುವರು.

ಈರಾಶಿಯ ಸ್ತ್ರೀಯರು ಈವರ್ಷ ಹಡೆಯುವವರಿದ್ದರೆ ಮಾರ್ಚ ೭ರಿಂದ ಎಪ್ರಿಲ ೧೮ ಮತ್ತು ಜುಲೈ ೧೩ ರಿಂದ ಸಪ್ಟಂಬರ ೬ ಈ ಅವಧಿಯಲ್ಲಿ ಬಿಟ್ಟು ಉಳಿದ ಕಾಲದಲ್ಲಿ ಹಡೆದರೆ ಅತ್ಯಂತ ಸುಲಭವಾಗಿ ಹಡೆಯುವರು. ಈ ವರ್ಷ ಬಹುಶಃ ಅನೇಕರಿಗೆ ಹೆಣ್ಣೇ ಹುಟ್ಟುವ ಯೋಗ ವಿಶೇಷವಿದೆ.

ಯಾರ ಪರೀಕ್ಷೆ ಫೆಬ್ರುವರಿ ೮ ರಿಂದ ಮೇ ೧೫ ಈ ಅವಧಿಯನ್ನು ಬಿಟ್ಟು ಉಳಿದ ಕಾಲದಲ್ಲಿ ಆಗುವದೊ ಅವರು ನಿಶ್ಚಿತವಾಗಿ ಯಶಸ್ವಿಗಳಾಗುವರು.

ಮನಸ್ಸಿಗೆ ಅಷ್ಟೊಂದು ಒಪ್ಪಿಗೆಯಾಗುವರೆಂದು ಮಾತ್ರ ಹೇಳಲಿಕ್ಕೆ ಬರುವದಿಲ್ಲ. ಮಕ್ಕಳ ಉನ್ನತಿಗೆ ಈ ವರ್ಷ ಡಿಸೆಂಬರದಿಂದ ಮುಂದೆ ಬಹಳ ಉತ್ತಮಯೋಗವಿದೆ. ಅನೇಕರು ಬಹಳ ಪ್ರಶಂಸನೀಯ ಕೀರ್ತಿಸಂಪಾದಿಸುವರು. ಅವರೆಲ್ಲರಿಂದ ನಿಮಗೆ ಬಹಳ ಸೌಖ್ಯದೊರೆಯುವದು.

ಧಂದೆ ಕೂಲಿಯವರಿಗೆ ಕೂಡ ಈ ವರ್ಷ ಡಿಸೆಂಬರದಿಂದ ಮುಂದೆ ಬಹಳ ಸುಖ ಉತ್ಕರ್ಷ ಮತ್ತು ಅಪೇಕ್ಷೆಗಿಂತ ಹೆಚ್ಚು ಲಾಭ ದೊರೆಯುವದು. ಧಂದೆಯವರ ಪರಿಸ್ಥಿತಿ ಎಷ್ಟೇ ಕೆಟ್ಟದ್ದರೂ ಅಂದಿನಿಂದ ಮತ್ತೆ ಅದು ಸರಿಯಾಗುವದು ಮತ್ತು ನಿರಾಕರಿಸಿದ ಮತ್ತು ಧಿಕ್ಕರಿಸಿದ ಜನರು ಕೂಡ ಮತ್ತೆ ಆದರದಿಂದ ನಿಮ್ಮೊಡನೆ ಮಾತುಕತೆ ಪ್ರಾರಂಭ ಮಾಡುವರು ಮತ್ತು ಅವರೇ ಅವಶ್ಯಕ ವಿಷಯುಗಳಲ್ಲಿ ಅತ್ಯಂತ ಮನೆಯವರಂತೆ ಸಹಾಯ ಮಾಡಲು ಪ್ರಯತ್ನಿಸುವರು. ಕೆಲ ವಿಷಯುಗಳಲ್ಲಿ ಮೊದಲು ವೆಚ್ಚಮಾಡಿದ್ದೆಲ್ಲ ಮುಳುಗು ಗಂಟೆಂದು ಗಾಬರಿಯಾದರೂ ಕೊನೆಯ ಆರು ತಿಂಗಳು ಅದರಲ್ಲಿ ಬಹಳಷ್ಟು ಲಾಭವಾಗುವದು-ಎಂಬುದು ನಿಶ್ಚಿತ. ನೋಕರರಿಗೆ ಕೂಡ ಫೆಬ್ರುವರಿ ೮ ರ ವರೆಗೆ ವರಿಷ್ಟರ ಕಿರಿಕಿರಿಎನಿಸಿದರೂ ಮುಂದೆ ಅದು ತಾನಾಗಿಯೆ ಕಡಿಮೆ ಆಗುವದು. ತದ್ವಿರುದ್ಧವಾಗಿ ಭಾವಿಉತ್ಕರ್ಷಕ್ಕೆ ಹಿತಕರವಾಗುವಂತೆ ಶಿಫಾರಸು ಮಾಡಲ್ಪಡುವದು. ಕೆಲ ಜನರಿಗೆ ಎಪ್ರಿಲ ೧೮ ರಿಂದ ಮೇ ೩೦ ಇಲ್ಲವೆ ಜುಲೈ ೧೩ ರಿಂದ ಸಪ್ಟಂಬರ ೬ ಮಧ್ಯಂತರ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವ ಸಂಭವವದೆ. ಕೈಕೆಳಗಿನವರೂ ಬಹಳ ಪ್ರೇಮದಿಂದ ವರ್ತಿಸುವರು. ಬದಲಿಯಾಗುವ ಶಾಖೆಯಿದ್ದರೆ ಮೊದಲು ಬಹಳಷ್ಟು ಕಾಲ ಆಗುವದೋ ಇಲ್ಲವೊ ಎಂಬ ಸಂಶಯ. ಆದರೆ ಕೊನೆಗೆ ಖಾತ್ರಿಯಿಂದ ಮತ್ತು ಒಳ್ಳೆ ಸುಖಸೌಕರ್ಯದ ಸ್ಥಳಕ್ಕೆ ವರ್ಗವಾಗುವದು. ಈ ಯೋಗವು ಸಪ್ಟಂಬರ ೨೩ ರ ನಂತರವೇ ಹೆಚ್ಚಿಗೆ ಇರುವದು. ನಿಮ್ಮ ಬಗ್ಗೆ ಲೋಕಮತವು ಅನುಕೂಲ ಹಾಗೂ ಪ್ರತಿಕೂಲ ಹೀಗೆ ದ್ವಿಧಾ ಕಂಡುಬರುವದು. ದೂರದ ಪ್ರವಾಸ ಅನೇಕ ಸಲ ಒದಗಿಬರುವದು ಮತ್ತು ಅದರಲ್ಲಿಯ ಹೇತು ಬಹಳ ಮಟ್ಟಿಗೆ

# ತುಲಾ

ಈ ರಾಶಿಯವರಿಗೆ ಒಟ್ಟಾರೆ ಶಾರೀರಿಕ ಮತ್ತು ಪ್ರಾಪಂಚಿಕ ಸುಖಕ್ಕೆ ಈ ವರ್ಷ ಅಷ್ಟೊಂದು ಹಿತಕರವಾಗಿರದಿದ್ದರೂ ದ್ರವ್ಯ ಲಾಭ ಮತ್ತು ಔದ್ಯೋಗಿಕ ಉತ್ಕರ್ಷಕ್ಕೆ ಉತ್ತರೋತ್ತರ ಅಭಿವೃದ್ಧಿಯದಾಗಿದೆ.

ಶನಿಯು ಮಾರ್ಗಿ ಮತ್ತು ವಕ್ರೀಯಾಗಿ ಸಂಚರಿಸುವದರಿಂದ ಸುಮ ಸುಮಾರು ಇಡಿ ವರ್ಷ ಈ ರಾಶಿಯವರಿಗೆ ಸಾಡೇಸಾತಿಯೇ ಇದೆ. ಅದುದರಿಂದ ಈ ರಾಶಿಯವರ ಆರೋಗ್ಯ ಹಾಸಿಗೆ ಹಿಡಿಯುವಷ್ಟು ಕೆಡುವ ಅಂಜಿಕೆಯಿರದಿದ್ದರೂ ಇರಬೇಕಾದಷ್ಟು ನಿರೋಗಿಯೂ ಉಳಿಯುವದಿಲ್ಲ. ವಿಶೇಷತಃ ಉರುಪು, ಅರೆತಲೆಶೂಲಿ ಮತ್ತು ಕರ್ಣವಿಕಾರ ಇವುಗಳಿಂದ ತೊಂದರೆಯಾಗುವ ಸಂಭವ ಬಹಳಷ್ಟು ಇದೆ. ಮತ್ತು ಅದು ಅಕ್ಟೋಬರ ೨೯ರ ವರೆಗೆ ಮತ್ತು ಅನಂತರ ಡಿಸೆಂಬರ ೧೩ರಿಂದ ಜನೆವರಿ ೨೫, ಎಪ್ರಿಲ ೧೮ ರಿಂದ ಮೇ ೩೦ ಮತ್ತು ಜುಲೈ ೧೩ ರಿಂದ ಸಪ್ಟಂಬರ ೬ ಈ ಅವಧಿಯಲ್ಲಿ ಹೆಚ್ಚಿಗೆ ಎನಿಸುವದು. ಆದರೆ ಸಪ್ಟಂಬರ ೨೩ ರಿಂದ ಮುಂದೆ ಅದು ತಾನಾಗಿಯೇ ಸುಧಾರಿಸುತ್ತ ಹೋಗುವದು.

ಹೆಂಡತಿಯ ಆರೋಗ್ಯಕ್ಕೆ ಮಾತ್ರ ಆ ಸಮಯದವರೆಗೆ ಅಂದರೆ ಸಪ್ಟಂಬರ ೨೩ರ ವರೆಗೆ ಪಿತ್ತ ಪ್ರಕೋಪದಿಂದ ಅಲ್ಪಸ್ವಲ್ಪ ಕಿರಿಕಿರಿ ಇದ್ದುದೇ. ಅಲ್ಲದೆ ಉಭಯತರಲ್ಲಿ ಮನಃಸ್ವಾಸ್ಥ್ಯವೂ ಕಡಮೆಯೇ ಆದರಲ್ಲಿಯೂ ನವಂಬರ ೨೫ರ ವರೆಗೆ ಪರಸ್ಪರ ಮಾತುಕತೆ ನಿಲ್ಲುವಷ್ಟು ದೂರಹೋಗುವದು. ಪ್ರತಿಯೊಬ್ಬರು ಎರಡನೆಯವರು ನಿರರ್ಥಕ ವೆಚ್ಚ ಮಾಡುವರೆಂಬ ಆರೋಪಮಾಡುತ್ತ ಕೂಡ್ರುವರು. ಆದರೆ ಇನ್ನೂವಿವಾಹವಾಗಿರದಿದ್ದರೆ ಮತ್ತು ಮಾಡಿಕೊಳ್ಳುವದಿದ್ದರೆ ಡಿಸೆಂಬರದಿಂದ ಮುಂದೆ ಇಡೀ ವರ್ಷ ಮುಗಿಯುವವರೆಗೆ ಒಳ್ಳೆ ಬಾಸಿಂಗ ಬಲವಿರುವದರಿಂದ ಖಾತ್ರಿಯಿಂದ ವಿವಾಹವಾಗುವದು. ಮಾತುಕತೆ ಅಷ್ಟೊಂದು ನಡೆಯದೆ ಕೂಡ ತ್ವರಿತವಾಗಿ ಕೂಡಿ ಬರುವದು ನಿಜ. ಆದರೆ ಮುಂದೆ ಪ್ರತ್ಯಕ್ಷ ಮಂಗಳ ಕಾರ್ಯ ಮಾತ್ರ ಗೊತ್ತಾದ ಮುಹೂರ್ತಕ್ಕೆ ಆಗುವದಿಲ್ಲ ಅಷ್ಟೊಂದು ಅಪರಿಹಾರ್ಯ ಇಲ್ಲವೆ ವಿಚಿತ್ರ ಪ್ರಕಾರದ ಕೆಲ ಅಡಚಣೆಗಳು ಉದ್ಭವಿಸುವ ಬಹಳಷ್ಟು ಅಂಜಿಕೆ. ಇದರಿಂದ ನಿಷ್ಕಾರಣವಾಗಿ ಅಡ್ಡಾತಿಡ್ಡಾ ವೆಚ್ಚ ಮಾಡಬೇಕಾಗುವ ಪ್ರಸಂಗ ಬರುವದು. ಆದರೆ ವಧೂ ಮತ್ತು ವರ ಪೂರ್ಣ ಅನುರೂಪ ಇರುವರು, ವಿವಾಹೋತ್ತರದಲ್ಲಿ ಮಾತ್ರ ಯಾವದೇ ಬಗೆಯ ಅಡಚಣೆ ಬರುವದಿಲ್ಲ. ಅವಾಂತರ ವಿಷಯುಗಳಲ್ಲಿಯೂ ಸಪ್ಟಂಬರ ೨೩ ರ ನಂತರ ಮನಸ್ಸಿನಂತೆ ಪ್ರಾಪಂಚಿಕ ಸುಖ ಸಿಕ್ಕುವದು ಅಲ್ಲಿಯವರೆಗೆ ಗೃಹಕಲಹದ ದುಸಮುಸಿ ಬಹಳಷ್ಟು ನಡೆಯುವದು. ಮತ್ತು ಪ್ರತಿಯೊಬ್ಬರು ನಿಮ್ಮಬಗ್ಗೆ ಬೇಸರಗೊಂಡಂತೆ ಕಾಣುವದು. ನೋಕರ ಚಾಕರರು ಮಾತ್ರ ನಿಷ್ಠೆಯಿಂದ ಮತ್ತು ಪ್ರಾಣಪಣವಾಗಿ ನಡೆಯುವರು. ಸಮೀಪದ ಆಪ್ತರಿಗಿಂತ ದೂರದ ಅಪ್ತರು ಹೆಚ್ಚು ಪ್ರೇಮದಿಂದ ವರ್ತಿಸುವರು. ವಾಹನ ಸುಖ ಸಾಮಾನ್ಯವೇ ಸುಮಾರಾಗಿ ಹೆಚ್ಚುಬೆಲೆ ಬಿದ್ದರೂ ಈರ್ಷೆಗಾಗಿ ಇಲ್ಲವೆ ಹಳೆಯ ಲೌಕಿಕವನ್ನು ಕಾಯ್ದುಕೊಳ್ಳಲು ಅಲ್ಪಸ್ವಲ್ಪ ಸ್ಥಾವರ ಇಲ್ಲವೆ ಜಂಗಮ ಸಂಗ್ರಹ ಮಾಡುವಿರಿ.

ಮಕ್ಕಳ ಮರಿಗಳ ಮದುವೆ ಮಾಡುವದಿದ್ದರೆ ಅದಕ್ಕೂ ಡಿಸೆಂಬರದಿಂದಲೆ ಒಳ್ಳೆ ಗುರುಬಲ ಬರುವದರಿಂದ ಅದು ಕೂಡಲೆ ಕೂಡಿಬರುವದು. ಮತ್ತು ನಿಶ್ಚಿತ ಮುಹೂರ್ತಕ್ಕೆ ಯಥಾಸಾಂಗವಾಗಿ ಜರಗುವದು. ಆದರೆ ಸೊಸೆ ಇಲ್ಲವೆ ಅಳಿಯ ರೂಪದಿಂದ ಇಲ್ಲವೆ ಗುಣದಿಂದ ನಿಮ್ಮ

ಸಾಧಿಸುವದು. ಧಾರ್ಮಿಕ ಇಲ್ಲವೆ ಮಂಗಳ ಕಾರ್ಯಗಳಲ್ಲಿ ಮೊದಲು ಒಮ್ಮೆಯಾದರೂ ಅಡಚಣೆ ಬಂದು ಮುಂದೆ ವ್ಯವಸ್ಥಿತವಾಗಿ ಸಾಂಗವಾಗುವದು. ಕೊಡತಕ್ಕೊಳ್ಳುವ ವ್ಯವಹಾರ ಕೆಲ ಮಟ್ಟಿಗೆ ತಕರಾರಿನಿಂದಲೆ ಪೂರ್ಣವಾಗುವದು.

ವಾದದಲ್ಲಿ ಅಥವಾ ಸ್ಪರ್ಧೆಯಲ್ಲಿ ಸಾಮಾನ್ಯನಾಗಿ ಹಿಮ್ಮೆಡಬೇಕಾಗಿ ಬಂದರೂ ಈ ವರ್ಷ ಅಲ್ಪ ಸ್ವಲ್ಪ ಯಶಸ್ಸು ದೊರೆಯುವುದಾದರೆ ಸಪ್ಟಂಬರ ೨೩ರ ನಂತರವೆ ಅದು ದೊರೆಯುವದು. ಹಳೆಯ ಶತ್ರುಗಳಲ್ಲದೆ ಹೊಸ ಶತ್ರುಗಳೂ ಏಳುವರು.

ಈ ರಾಶಿಯು ಸ್ತ್ರೀಯರಲ್ಲಿ ಯಾರಾದರೂ ಹಡೆಯುವವರಿದ್ದರೆ ಅವರು ನವಂಬರ ೨೮ರ ವರೆಗೆ ಹಡೆದದ್ದಾದರೆ ಸ್ವಲ್ಪಾದರೂ ಕಷ್ಟವನ್ನನುಭೋಗಿಸಬೇಕಾಗುವದು ಮತ್ತು ಬಹುಶಃ ಹೆಣ್ಣುಹಡೆಯುವರು. ಆದರೆ ಡಿಸೆಂಬರದಿಂದ ಮುಂದೆ ಹಡೆಯುವವರಿಗೆ ತೊಂದರೆ ಸ್ವಲ್ಪವೂ ಆಗುವದಿಲ್ಲ ಅಲ್ಲದೆ ಗಂಡು ಹುಟ್ಟಿದ ಸಂತೋಷವೂ ಲಭಿಸುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರದಿಂದ ಮುಂದೆ ಆಗುವದೊ ಅವರು ನಿಶ್ಚಯವಾಗಿ ಪಾಸಾಗುವರು. ಆದರೆ ಫೆಬ್ರೂವರಿ ೮ ರಿಂದ ಮೇ ೧೫ ರ ಅವಧಿಯಲ್ಲಿ ಪರೀಕ್ಷೆಯ ದರೆ ಅವರಿಗೆ ವರ್ಗವೂ ದೊರೆಯುವ ಭರವಸೆಯಿದೆ.

## ವೃಶ್ಚಿಕ

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ಕಷ್ಟಸಾಧ್ಯವಾದ ಯಶಸ್ಸು ದೊರೆಯುವದೆಂದು ತಿಳಿದುಕೊಳ್ಳಬೇಕು.

ಈ ರಾಶಿಯವರಿಗೆ ಸಾಡೇಸಾತಿಯು ಮಧ್ಯಕಾಲವೀಗ. ಮಧ್ಯಂತರ ಅಂದರೆ ಫೆಬ್ರುವರಿ ೮ ರಿಂದ ಮೇ ೧೫ ರ ಅವಧಿಯಲ್ಲಿ ಶನಿಯು ಎರಡನೆಯವನಾಗುವನೆಂದೆನಿಸಿದರೂ ಮತ್ತು ವ್ಯಕ್ತಿಯಾಗಿ ಮೊದಲಿನಂತೆ ಒಂದನೆಯವನಾಗಿ ವರ್ಷ ಮುಗಿಯುವವರೆಗೆ ಅದೇ ಸ್ಥಾನದಲ್ಲಿ ಉಳಿಯುವನು. ಆದರೆ ಅವರಿಗೆ ಯಾವದೇಸ್ಥಾನದಲ್ಲಿದ್ದರೂ ಶಾರೀರಕ ಮಾನಸಿಕ ತೊಂದರೆಯನ್ನು ಒಂದೇಸವನೆ ಕೊಡುವನು ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಆಹಾರವಿಹಾರಗಳಲ್ಲಿ ಸದಾ ಮಿತದಿಂದ ಇರಬೇಕು ಮತ್ತು ಆದಷ್ಟು ಶನಿಯ ಬಗ್ಗೆ ಜಪದಾನಾದಿಗಳನ್ನು ಮಾಡಿ ಅವರ ಆರಾಧನೆಯನ್ನು ಮಾಡುತ್ತಿರಬೇಕು. ಮೂಲವ್ಯಾಧಿ ಸಂಗ್ರಹಣೆ ಭಗೇಂದ್ರ ಕಿಡ್ನಿಯಂಥ ವಿಕಾರಗಳಿದ್ದವರು ಪಥ್ಯ ಮತ್ತು ಉಪಾಸನೆಯನ್ನು ಮಾಡುತ್ತಲೇ ಇರಬೇಕು. ಸಾಡೇಸಾತಿಗೆ ಪುಷ್ಟಿಕರವಾದ ಗುರುಕೂಡ ಡಿಸೆಂಬರದಿಂದ ೧೨ನೇ ಸ್ಥಾನದಲ್ಲಿ ಬರುವದರಿಂದ ಈ ಸೂಚನೆಯನ್ನು ಮಾಡಬೇಕಾಗಿದೆ. ಸಾಧ್ಯವಾದರೆ ಗುರುವಿನ ಸಂಪೂರ್ಣ ೧೯ ಸಾವಿರ ಜಪಮಾಡಬೇಕು.

ಹೆಂಡತಿಯ ಆರೋಗ್ಯ ಬಹಳ ಅನುಕೂಲ. ಆದರೂ ಡಿಸೆಂಬರ ೧೩ ರಿಂದ ಜನೆವರಿ ೨೫ ಮತು ಸಪ್ಟಂಬರ ೬ ರ ನಂತರ ಮುಂದೆ ಸ್ವಲ್ಪ ಕಿರಿಕಿರಿಯಾಗುವ ಸಂಭವವಿದೆ. ಉಳಿದದ್ದರಲ್ಲಿ ಉಭಯತರದೂ ಒಳ್ಳೆ ಕೂಡಿ ನಡೆಯುವದು. ಮತ್ತು ನಿಮ್ಮಗಿಂತ ಅವಳ ವಿಚಾರವೇ ಹೆಚ್ಚು ಉತ್ಸಾಹವರ್ಧಕ ಮತ್ತು ಯಶಃಪ್ರದವೆನಿಸುವದು. ನಿಮ್ಮ ಮದುವೆಯಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳದಿದ್ದರೆ ನವಂಬರ ೨೮ರ ವರೆಗೆ ಕದಾಚಿತ್ ಸಾಂಗವಾಗುವದು. ಆದರೆ ಆನಂತರ ಮಾತ್ರ ಅದು ಒದಗಿ ಬರುವ ಯೋಗವಿಲ್ಲ. ಒಂದು ವೇಳೆ ಕೂಡಿ ಬಂದರೂ ಪ್ರತ್ಯಕ್ಷವಾಗಿ ಸಮಾರಂಭವಂತೂ ಆಗುವದಿಲ್ಲ. ಒಂದಿಲ್ಲೊಂದು ಅಡಚಣೆ ಬರುವದರಿಂದ ಮುಂದಕ್ಕೆ ಹಾಕಬೇಕಾಗುವದು. ಆದರೆ ಅದರಲ್ಲಿಯೂ ದೈವಯೋಗದಿಂದ ಯಾರ ಮದುವೆಯಾಗುವದೋ ಆ ವಧುವರರು ಪೂರ್ಣ ಅನುರೂಪ ಇರುವರು. ಉಳಿದ ವಿಷಯಗಳಲ್ಲಿಯೂ ಸಾಂಸಾರಿಕ ಸುಖ ಈ ವರ್ಷ ನವಂಬರ ೨೮ ರಿಂದ ಸಪ್ಟಂಬರ ೨೩ ರ ವರೆಗೆ ಬಹಳಷ್ಟು ಅನುಕೂಲ ವಿರುವದಿಲ್ಲ. ವಿಪರೀತ ವೆಚ್ಚವಾಗಿಯೂ ಅದರಲ್ಲಿಯ ಹೇತು ಸಾಧ್ಯವಾಗುವದಿಲ್ಲ. ಅಣ್ಣ ತಮ್ಮಂದಿರಲ್ಲಿ ಬಹಳಷ್ಟು ಅಡ್ಡಕ್ಕೊಡ್ಡ ಬಡೆಯುವರು. ಸಮೀಪದ ಆಪ್ತರೂ ಬಹಳಷ್ಟು ವೆಚ್ಚದಲ್ಲಿ ಬೀಳುವರು ಚಾಕರ ನೋಕರರೂ ಕೂಡ ಅವ್ಯವಸ್ಥಿತವಾಗಿ ಮತ್ತು ತುಚ್ಛತೆಯಿಂದ ವರ್ತಿಸುವರು. ವಾಹನಗಳಿದ್ದರೆ ಮೇಲಿಂದಮೇಲೆ ಅವು ಮುರಿದು ಅವುಗಳಿಂದ ದೊರೆಯಬೇಕಾದ ಸುಖಕ್ಕಿಂತ ತೊಂದರೆಯೇ ಹೆಚ್ಚು. ಸ್ಥಾವರ ಆಸ್ತಿಯಲ್ಲಿ ದುರಸ್ತಿ ವೆಚ್ಚ ಬಹಳ. ಆದರೆ ವಾರ್ಷಿಕ ಉತ್ಪನ್ನ ಏನೂ ತೊಂದರೆಯಿಲ್ಲದೆ ದೊರೆಯುವದು. ಹೊಸ ಸಂಗ್ರಹದ ಯೋಗವಂತೂ ಇಲ್ಲ.ಆದರೆ ಇದ್ದವೇ ಮುರಿಯದಿದ್ದರೆ ಸಾಕು. ಮಿತ್ರರೂ ಕೂಡ ಕಪಟದಿಂದ ಇಲ್ಲವೆ ಮನೆಮುರುಕುರೀತಿಯಿಂದ ವರ್ತಿಸುವರು. ಆದರೂಕೊನೆಯಲ್ಲಿ ನಿಮ್ಮ ವರ್ಚಸ್ಸು ಎಲ್ಲರ ಮೇಲೂ ಉಳಿಯುವದು. ಮತ್ತು ಅನೇಕರು ವಿನಮ್ರರಾಗಬೇಕಾಗುವದು.

ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದಕ್ಕಾದರೂ ಡಿಸೆಂಬರದಿಂದ ಇರಬೇಕಾದಷ್ಟು ಬಲಿಷ್ಠ ಯೋಗವಿರುವದಿಲ್ಲ. ಅವಸರ ಮಾಡಿ ನವಂಬರದೊಳಗಾಗಿಯೇ ಸಾಂಗಮಾಡಿಕೊಂಡು ಬಿಡುವದು ಒಳಿತು. ಅನಂತರ ಮೊದಲು ಕೂಡಿಬರುವ ಕೂಡಿಬಂದರೆ ಅದು ಸಾಂಗವಾಗುವದಕ್ಕೆ ಸಾಕುಬೇಕಾಗಿ ಹೋಗುವದು. ಒಂದೊಮ್ಮೆ ಲಗ್ನ ಮುರಿದೂ ಹೋಗಬಹುದು ಏನೋ ಸುದೈವದಿಂದ ಲಗ್ನವಾದರೆ ಸೊಸೆ ಇಲ್ಲವೆ ಅಳಿಯ ಅಪೇಕ್ಷೆಗೆ ತೀರ ವಿರುದ್ಧ ಸಿಕ್ಕಂತೆನಿಸಿ ಮನಸ್ಸು ವ್ಯಗ್ರವಾಗುವದು. ಮಕ್ಕಳ ಉನ್ನತಿಗೂ ಈ ವರ್ಷ ನವಂಬರದ ವರೆಗೆ ಕೆಲ ಮಟ್ಟಿಗೆ ಅನಕೂಲ. ಅನಂತರ ಖಾತ್ರಿಯಿದ್ದರೂ ಆಗುವದಿಲ್ಲ. ಅಯುತ್ತ ಸಮಯಕ್ಕೆ ಏನಾದರೊಂದು ಗೊಂದಲವೆದ್ದು ಎಲ್ಲವೂ ನಿರರ್ಥಕವಾಗುವ ಅಂಜಿಕೆ ಬಹಳ. ಆದರೆ ಮಕ್ಕಳುಮಾತ್ರ ಏಕನಿಷ್ಠ ಉಳಿಯುವರು.

ಧಂದೆ ಕೂಲಿಯವರಿಗೆ ಈ ವರ್ಷ ವ್ಯಾಪ ಮತ್ತು ಉಲಾಢಾಲಿ ದೃಷ್ಟಿಯಿಂದ ಅಷ್ಟೊಂದು ಲಾಭದಾಯಕವಿರುವದಿಲ್ಲ. ಧಂದೆಯವರ ಉದ್ದರಿ ಹೆಚ್ಚುವದು ಸ್ವತಃ ಅವಶ್ಯಕ ಪ್ರಸಂಗದಲ್ಲಿ ಸಾಲ ಇಲ್ಲವೆ ಕೈಗಡ ಮಾಡಬೇಕಾದ ಪ್ರಸಂಗ ಬರುವದು. ನವಂಬರ ೨೮ ರ ವರೆಗೆ ಮತ್ತು ಸಪ್ಟಂಬರ ೨೩ ರ ನಂತರ ಬಹಳಷ್ಟು ಲಾಭವಾಗಹತ್ತುವದು. ಆದರೆ ಬೇರೆ ಬೇರೆ ಕಾರಣಗಳಿಗಾಗಿ ಒಂದರ ಹಿಂದೊಂದರಂತೆ ವೆಚ್ಚ ಮಾಡಬೇಕಾಗುವದು. ನೋಕರರಿಗೂ ಇದೇ ಬಗೆಯಸ್ಥಿತಿ. ಇಲ್ಲವೆ ಅಳ. ದಕ್ಕೆ ನಡೆಯುವದು. ಡಿಸೆಂಬರದಿಂದ ಸಪ್ಟಂಬರ ವರೆಗ, ವರಿಷ್ಠರು ಅಷ್ಟಷ್ಟ ಕಾರಣಗಳಿಗಾಗಿ ಬೇಸರ ಕೊಳ್ಳುವರು. ಮತ್ತು ನಿಮಗೆ ಗೊತ್ತಿಲ್ಲದ ಕೆಲಸಗಳನ್ನು ನಿಮಗೊಪ್ಪಿಸುವರು. ಎರಡನೆಯವರು ಮಾಡಿದ ತಪಿನ ಆರೋಪವನ್ನು ನಿಮ್ಮ ಮೇಲೆ ಹೊರಿಸುವರು. ಬದಲಿಯಾಗುವದಿದ್ದರೆ ಅತ್ಯಂತ ಅನಾನುಕೂಲ ಸ್ಥಳಕ್ಕೆ ಆಗು

ವದು. ಆದರೆ ಅಲ್ಲಿಯ ಲೋಕಮತವು ಮನಸ್ಸಿನ ಧೈರ್ಯ ಮತ್ತು ಸಮಾಧಾನ ಬೆಳೆಯುಲಿಕ್ಕೆ ಹೆಚ್ಚು ಅನುಕೂಲವಾಗುವದು. ಮೇಲಿನ ಗ್ರೇಡು ಸಿಕ್ಕುವ ಸಂಭವ ಬಹಳಷ್ಟು ಕಡಿಮೆ. ಒಂದು ವೇಳೆ ತಾತ್ಪೂರ್ತಿಕವಾಗಿ ದೊರೆತರೆ ಮುಳ್ಳಿನ ಕಿರೀಟದಂತೆ ಚುಚ್ಚಹತ್ತುವದು. ಅದರಲ್ಲಿಯೂ ಅಕ್ಟೋಬರ ೨೯ರ ವರೆಗೆ ಮತ್ತು ಅನಂತರ ಜನೇವರಿ ೨೫ ರಿಂದ ಎಪ್ರಿಲ ೧೪ ಮತ್ತು ಜುಲೈ ೧೩ ರಿಂದ ಅಕ್ಟೋಬರ ೯ ಈ ಅವಧಿ ಲಾಭಕ್ಕೆ ಬಹಳ ಅನುಕೂಲ ಕೊಡತಕ್ಕೊಳ್ಳುವದಿದ್ದರೆ ಅದು ಕೂಡಲೆ ಮುಟ್ಟುವದು. ಯಾರು ಎಷ್ಟೇ ನಿಮ್ಮನ್ನು ದ್ವೇಷಿಸುತಿದ್ದರೂ ಸಪ್ಟಂಬರ ೨೩ರ ವರೆಗೆ ಅವರು ಹಿಂದೆಯೇ ಉಳಿಯಬೇಕಾಗುವದು. ನಿಮ್ಮ ತೇಜಸ್ಸು ಉಳಿಯುವದು. ಮೇ ೩೦ ರಿಂದ ಜುಲೈ ೧೩ ರ ಮಧ್ಯಂತರ ಅವಧಿಯಲ್ಲಿ ಯಾವದೊಂದು ಯಾತ್ರೆ ಸಂಭವಿಸುವದು. ಇಲ್ಲವೆ ಪೂಜ್ಯ ವ್ಯಕ್ತಿಯ ಸಹವಾಸವಂತೂ ನಿಶ್ಚಯವಾಗಿ ದೊರಕುವದು. ಸಮೀಪದ ಪ್ರವಾಸವು ದೂರದ ಪ್ರವಾಸಕ್ಕಿಂತ ಹೆಚ್ಚು ಸಲ ಒದಗಿಬಂದು ಅದರಲ್ಲಿಯ ಉದ್ದೇಶವೂ ಚೆನ್ನಾಗಿ ಸಾಧಿಸುವದು.

ದಾವೆಖಟ್ಲೆ ಇಲ್ಲವೆ ಸ್ಪರ್ಧೆಯ ಕೆಲಸಗಳಲ್ಲಿ ತೊಂದರೆ ಮತ್ತು ವೆಚ್ಚ ವಿಪರೀತವಾಗುವದು. ಆದರೆ ಸಪ್ಟಂಬರ ೨೩ರ ವರೆಗೆ ಶತ್ರುಗಳ ಮೇಲೆ ವಿಜಯವೂ ದೊರೆಯುವದು. ಅನಂತರ ಮಾತ್ರ ಅವರ ಏರಿಕೆ ಬಹಳಾಗುವ ಅಂಜಿಕೆ ಇದೆ.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ನವಂಬರ ೨೮ರ ವರೆಗೆ ಮತ್ತು ಎಪ್ರಿಲ ೯ ರಿಂದ ಜೂನ ೧೮ರ ವರೆಗೆ ಬಹಳ ಸುಲಭವಾಗಿ ಮತ್ತು ಉಳಿದ ವೇಳೆ ಆದರೆ ಸ್ವಲ್ಪ ಕಷ್ಟದಿಂದ ಹಡೆಯುವರು. ಅನೇಕರಿಗೆ ಕನ್ಯಾರತ್ನವೇ ಹುಟ್ಟುವ ಯೋಗವಿದೆ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ನವಂಬರ ೨೮ರ ವರೆಗೆ ಆಗುವದೊ ಮತ್ತು ಸಪ್ಟಂಬರ ೨೩ ರಿಂದ ಮುಂದೆ ಆಗುವದಿದೆಯೋ ಅವರು ನಿಶ್ಚಯವಾಗಿ ಯಶಸ್ವಿಗಳಾಗುವರು.

ನಾಲ್ಕು ಶಬ್ದಗಳು ಕೇಳಬರುವವು. ಸ್ಥಾವರ ಉತ್ಪನ್ನ ವ್ಯವಸ್ಥಿತ ಮತ್ತು ನೇಮದಷ್ಟು ದೊರೆಯುವದು ಆದರೆ ಅದರ ವಿನಿಯೋಗ ಮಾತ್ರ ಗೊತ್ತು ಪಡಿಸದಿದ್ದ ವಿಷಯಗಳಿಗಾಗಿ ಮಾಡಬೇಕಾದ ಪ್ರಸಂಗ ಬರುವದು. ವಾಹನಸುಖ ದೊರೆಯುವಂತಿದ್ದರೂ ಅದನ್ನು ಪಡೆಯಬೇಕೆಂದೆನಿಸುವದಿಲ್ಲ. ನೋಕರ ಚಾಕರರು ಹೇಳಿದಷ್ಟು ಕೆಲಸ ಮಾತ್ರ ಮಾಡುವರು. ಸುತ್ತಲೂ ದೃಷ್ಟಿಯನ್ನು ಇಟ್ಟುಕೊಂಡು ವರ್ತಿಸುವದಿಲ್ಲ.

ಮಕ್ಕಳಲ್ಲಿ ಯಾರದಾದರೂ ಮದುವೆಯಾಗುವದಿದ್ದರೆ ಅದಕ್ಕೆ ಕೂಡ ಡಿಸೆಂಬರದಿಂದ ಒಳ್ಳೆ ಗುರು ಬಲ ಬರುವದು. ಆದ್ದರಿಂದ ಬಹಳಷ್ಟು ಯಾತಾಯಾತವಾಗದೆ ಅದು ಒದಗಿ ಬರುವದು. ಮತ್ತು ಮುಂದೆ ಬೇಗನೆ ಸಾಂಗವಾಗುವದು. ಆದರೆ ಸಮಾರಂಭಕ್ಕಾಗಿ ಯಾವ ಪ್ರೀತಿಯ ಆಪ್ತೇಷ್ಟರು ಬರಬೇಕೆಂದಿರುವದೋ ಅವರು ಬೇಕಂತಲೆ ಬಂದಿರುವದಿಲ್ಲ. ಬೀಗರೊಡನೆಯೂ ಅಷ್ಟೊಂದು ಕೂಡಿ ನಡೆಯುವದಿಲ್ಲ. ಆದರೆ ಸೊಸೆ ಇಲ್ಲವೆ ಅಳಿಯ ಮನಸ್ಸಿಗೆ ಬರುವಂತಹರಿರುವರು. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಉತ್ತಮವಿದೆ. ಅಕ್ಟೋಬರ ೨೯ ರಿಂದ ಡಿಸೆಂಬರ ೧೩ ಜನೆವರಿ ೨೫ ರಿಂದ ಎಪ್ರಿಲ ೧೪ ಮತ್ತು ಜುಲೈ ೧೩ ರಿಂದ ಸಪ್ಟಂಬರ ೬ ಈ ಅವಧಿಯಲ್ಲಿ ಮಕ್ಕಳ ಉನ್ನತಿಯ ವಿಶೇಷ ಯೋಗವಿರುವದು. ಅವರೆಲ್ಲ ನಿಮ್ಮೊಡನೆ ಒಳ್ಳೇ ರೀತಿಯಿಂದ ನಡೆದುಕೊಳ್ಳುವರು. ಆದರೆ ನೀವು ಮಾತ್ರ ದೂರದೂರೇ ಇರುವಿರಿ.

ಧಂದೆ ಕೂಲಿಕಾರರಿಗೆ ಈ ವರ್ಷ ದ್ರವ್ಯ ಪ್ರಾಪ್ತಿಯ ದೃಷ್ಟಿಯಿಂದ ಬಹಳ ಲಾಭದಾಯಕವಿದೆ. ಡಿಸೆಂಬರದಿಂದ ಬರುವ ೧೧ ನೇ ಗುರುವಿನಿಂದ ಪ್ರಾರಂಭಿಸುವ ಯಾವಧಂದೆಯಲ್ಲಿಯೂ ಮೊದಲು ಖಾತ್ರಿಯೆನಿಸದಿದ್ದರೂ ಕೊನೆಯಲ್ಲಿ ಹಾನಿಯಾಗದೆ ಲಾಭವೇ ಆಗುವದು. ಪ್ರಮಾಣ ಮೀರಿ ಉಲಾಢಾಲಿಗಳು ನಡೆಯುವವು. ಅನಂತರ ದರಬಾರದಲ್ಲಿ ಕೂಡ ಒಳ್ಳೇ ವರ್ಚಸ್ಸು ಹೆಚ್ಚುವದು. ಪ್ರಸಿದ್ಧ ಪುರುಷರ ಭೆಟ್ಟಿ ಸಹವಾಸ ಯೋಗವಾಗುವದು. ಮಿತ್ರತ್ವವೂ ಲಭಿಸುವದು. ನೋಕರಿಯುವರಿಗೆ ಕೂಡ ಬಹುತರ ವಿಷಯಗಳಲ್ಲಿ ತೊಂದರೆಯಾ

## ಧನು

ಒಟ್ಟಿಗೆ ಈ ವರ್ಷ ನಿಮಗೆ ಪ್ರಾಪಂಚಿಕ ಸುಖ ಅಷ್ಟೊಂದು ಅನುಕೂಲವಿಲ್ಲದಿದ್ದರೂ ಧನ್ಯೋತ್ಪಾದನೆಗೆ ಬಹಳ ಸಮಾಧಾನಕರವಾಗಿದೆ.

ಕಳೆದ ವರ್ಷದಂತೆ ಈ ವರ್ಷವೂ ಇದ್ದ ಸಾಡೇಸಾತಿಯ ಹನ್ನೆರಡನೇ ಶನಿಯಲ್ಲಿ ವ್ಯತೀತವಾಗುವದು, ಅದರಿಂದ ಸುಖ ಕಡಿಮೆಯಾಗುವದು. ಆದರೆ ಪ್ರಕೃತಿಗೆ ಮಾತ್ರ ಈ ವರ್ಷ ಬಹಳ ಅನುಕೂಲವಿದೆ. ನವಂಬರ ೨೮ ರಿಂದ ಬರುವ ೧೧ ನೇ ಗುರು ಒಳ್ಳೇ ಆರೋಗ್ಯದಾಯಕ ಮತ್ತು ಬಹಳಷ್ಟು ಮಾನಸಿಕ ಸಮಾಧಾನ ಕೊಡುವಂತಹನಿರುವನು. ಆದರೂ ೧೨ ನೇ ಶನಿಯ ಗುಪ್ತ ಮತ್ತು ಪ್ರತ್ಯಕ್ಷವಾಗಿ ಆಗುವ ಕಷ್ಟ ಪರಿಹಾರಾರ್ಥವಾಗಿ ಅವನ ಪೂಜಾರಾಧನೆ ಜಪಾದಿಗಳನ್ನು ಮಾಡಿ ಅವನ ಬಗ್ಗೆ ಉಪಾಸನೆಯನ್ನು ನಡೆಸುತ್ತಲೆ ಇರಬೇಕು.

ಸ್ತ್ರೀ ಸುಖಕ್ಕೆ ಈ ವರ್ಷ ಅಷ್ಟೊಂದು ಅನುಕೂಲವಿಲ್ಲ. ಅವಳ ಪ್ರಕೃತಿ ಚೆನ್ನಾಗಿ ಉಳಿಯುವದು ನಿಜ, ಆದರೆ ಒಂದಿಲ್ಲೊಂದು ಯೋಗ್ಯ ಇಲ್ಲವೆ ಅಪರಿಹಾರ್ಯ ಕಾರಣಗಳಿಗಾಗಿ ಅವಳ ಸಹವಾಸದಲ್ಲಿ ಮೇಲಿಂದ ಮೇಲೆ ವ್ಯತ್ಯಯವಾಗುವದು. ಅವಳ ಮತ್ತು ನಿಮ್ಮ ಮತಗಳಾದರೂ ಭಿನ್ನ ಭಿನ್ನವಾಗುವವು. ಇದರಿಂದ ಪ್ರಾಪಂಚಿಕ ಸುಖವೂ ಕಡಿಮೆ. ಆದರೆ ಪರಸ್ಪರರಲ್ಲಿಯ ಈ ವ್ಯತ್ಯಯ ಬಹಳಷ್ಟು ಬಲಿಷ್ಠವುಳಿಯುವದು. ಒಂದು ವೇಳೆ ಇನ್ನೂ ನಿಮ್ಮ ಮದುವೆಯೇ ಆಗಿರದಿದ್ದರೆ ಅದಕ್ಕೆ ಡಿಸೆಂಬರದಿಂದ ಉತ್ತಮ ಬಾಸಿಂಗ ಬಲವಿದೆ. ಅದುದರಿಂದ ಅಲ್ಪಾಯಾಸದಿಂದ ಅದು ಕೂಡಿಬರುವದು ಮತ್ತು ನಿಮ್ಮಕಿಂತ ಹೆಚ್ಚು ಪ್ರತಿಷ್ಠಿತ ಜನರೊಡನೆ ಕೂಡಿಬರುವದು. ಗೊತ್ತುಪಡಿಸಿದ ಮುಹೂರ್ತದ ಸಮಯದಲ್ಲಿ ಒಂದುವೇಳೆ ಲಗ್ನವಾಗದಿದ್ದರೂ ಮುಂದೆ ನಾಲ್ಕೆಂಟು ದಿನಗಳಲ್ಲಿ ನಿಶ್ಚಯವಾಗಿ ಸಾಂಗವಾಗುವದು. ವಧೂ ಮತ್ತು ವರ ಪರಸ್ಪರ ಸಾಧಾರಣ ಅನುರೂಪ ಇರುವರೆಂದೆನಿಸಹತ್ತುವದು. ಮನೆಯಲ್ಲಿಯ ಬಹುತರ ಜನರ ಅಲ್ಪಸ್ವಲ್ಪ ಉನ್ನತಿಯಾಗುವದು. ಆದರೆ ಪ್ರತಿಯೊಬ್ಬರೂ ಎರಡನೆಯವರೊಡನೆ ಸಹಾನುಭೂತಿಯಿಂದ ವರ್ತಿಸದೆ ಬಹಳ ದೂರ ದೂರ ಇರುವರು. ವೆಚ್ಚವನ್ನು ಮನಸ್ಸಿಗೆ ಬಂದಂತೆ ಮಾಡುವರು. ಇದರಿಂದ ಬೇಕಾದಷ್ಟು ಉತ್ಪನ್ನ ಬಂದರೂ ಸಂಗ್ರಹ ಸ್ವಲ್ಪೂ ಉಳಿಯುವದಿಲ್ಲ. ನಮ್ಮದೆಲ್ಲ ನಿರರ್ಥಕವೆಂದೆನಿಸಹತ್ತುವದು. ಸಮೀಪದ ಆಪ್ತರಿಗಿಂತ ದೂರದ ಆಪ್ತರಿಂದ ಸುಖದ

ಗಡೆ ಸುಖ ಸಮಾಧಾನಗಳಿಂದ ದಿವಸ ಕಳೆಯು ವಿರಿ. ವರಿಷ್ಠರ ಕೃಪೆ ಬಹಳ ಇರುವದು. ಕೈಕೆಳಗಿನವರೂ ಚನ್ನಾಗಿ ನಡೆಯುವರು. ಅನೇಕರಿಗೆ ಮೇಲಿನ ಗ್ರೇಡು ದೊರೆಯುವದು. ಮತ್ತು ದ್ರವ್ಯವನ್ನು ಸಂಪಾದಿಸುವ ಅನೇಕ ಮಾರ್ಗಗಳು ಸೂಚಿತವಾಗುವವು. ಬದಲಿಯಾಗುವದಿದ್ದರೆ ಕೇಳದಲೆ ಯೋಗ್ಯ ಸ್ಥಳಕ್ಕೆ ಆಗುವದು. ಆದರೆ ಅಲ್ಲಿ ಸಪ್ಟಂಬರ ೨೩ ರ ನಂತರ ಸ್ವಲ್ಪ ತೊಂದರೆಯೂ ಆಗಬಹುದು. ನವಂಬರ ೨೮ ರಿಂದ ಸಪ್ಟಂಬರ ೨೩ ಈ ಕಾಲವು ಲಾಭಕ್ಕೆ ಒಟ್ಟಿಗೆ ಅನುಕೂಲವೆ ಮತ್ತು ಅದರಲ್ಲಿಯೂ ನವಂಬರ ೨೭ ರಿಂದ ಫೆಬ್ರುವರಿ ೨೧ ಮೇ ೯ ರಿಂದ ೩೦, ಜೂನ ೧೫ ರಿಂದ ಜುಲೈ ೨೦ ಮತ್ತು ಸಪ್ಟಂಬರ ೩ ರಿಂದ ಅಕ್ಟೋಬರ ೨೧ ಈ ಕಾಲದಲ್ಲಿ ಅದು ವಿಶೇಷವಾಗುವದು. ದೊಡ್ಡ ಅಧಿಕಾರಸ್ಥರು ಮುಂದಾಳುಗಳ ಮತ್ತು ಉದ್ದಿಮೆದಾರರ ಭೆಟ್ಟಿಯ ಯೋಗ ಅನೇಕಸಲ ದೊರೆಯುವದು. ಅದರಿಂದ ಧಂದೆ ಕೂಲಿಕಾರರ ಕಠಿಣ ಸಮಸ್ಯೆಗಳು ಪರಿಹಾರವಾಗಿ ಬಹಳ ಮಟ್ಟಿಗೆ ಸುಧಾರಿಸುವವು. ಉಳಿದ ಜನರಲ್ಲಿಯೂ ಒಳ್ಳೆ ಪ್ರತಿಷ್ಠೆ ಮತ್ತು ಆದರ ಉಳಿಯುವದು. ಮಿತ್ರಸುಖ ಬಹಳ ಉತ್ತಮ. ಆದರೆ ಸಪ್ಟಂಬರ ೨೩ರ ನಂತರ ಯಾವದೊಂದು ಕ್ಷುಲ್ಲಕ ಕಾರಣದಿಂದ ಬಹಳ ವಿತುಷ್ಟಿಯಾಗುವ ಸಂಭವವಿದೆ. ಅನೇಕ ಪುಣ್ಯ ಕೃತ್ಯಗಳು ಸಂಭವಿಸುವವು. ಅದರಂತೆ ಪರಸ್ತ್ರೀ ಬಗ್ಗೆ ಕುವಿಚಾರಗಳ ಪಾಪವೂ ಕೆಲಮಟ್ಟಿಗೆ ತಟ್ಟುವದು. ದೂರದ ಪ್ರವಾಸ ಬಹಳಾದರೆ ಒಂದೆರಡು ಸಲ ಮಾತ್ರ ಒದಗಿ ಬರುವದು. ಬಗೆಬಗೆಯ ಅಪರಿಹಾರ್ಯ ವೆಚ್ಚ ಸಹಿತ ಬಹಳ ಹೆಚ್ಚಿಗೆ ಮಾಡಬೇಕಾದ ಪ್ರಸಂಗವುಂಟಾಗುವದು ಮತ್ತು ಅವುಗಳಲ್ಲಿ ಬಹಳಷ್ಟು ನಿರರ್ಥಕವಾಗುವವು. ಸ್ವಪ್ನಗಳು ಬಹಳ ಬಿದ್ದರೂ ಭಾವೀ ಸೂಚಕವಾದವುಗಳು ಬೀಳುವವು.

ದಾವೆ ಫಿರ್ಯಾದಿ ಮತ್ತು ಖಾಸಗಿ ಸ್ಪರ್ಧೆಗಳ ಕೆಲಸಗಳಲ್ಲಿ ವೆಚ್ಚ ಮತ್ತು ತೊಂದರೆ ಕ್ವಚಿತ್ತಾಗಿ ಆಗುವದು. ಒಬ್ಬಿಬ್ಬ ಸ್ತ್ರೀಯರು ಮಾತ್ರ ಶತ್ರುಗಳಂತೆ ಬಹಳ ಅವಹೇಳನ ಮಾಡುವರು. ಆದರೆ ಡಿಸೆಂಬರದಿಂದ ಸಪ್ಟಂಬರ ಈ ಅವಧಿಯಲ್ಲಿ ಬಹಳಷ್ಟು ವಿಜಯ ದೊರೆಯುವದೆಂಬಲ್ಲಿ ಸಂಶಯವಿಲ್ಲ.

ಈ ರಾಶಿಯ ಸ್ತ್ರೀಯರು ನವಂಬರ ೨೮ರೊಳಗೆ ಹಡೆದರೆ ಬಹಳ ತೊಂದರೆಯಾಗುವದು ಮತ್ತು ಸಪ್ಟಂಬರ ೨೩ರ ವರೆಗೆ ಆಗುವ ಮಕ್ಕಳು ಬಹಳ ಅಶಕ್ತರೂ ಇರುವರು. ಡಿಸೆಂಬರದಿಂದ ಸಪ್ಟಂಬರ ವರೆಗೆ ಹಡೆಯುವವರಲ್ಲಿ ಅನೇಕರಿಗೆ ಗಂಡು ಹುಟ್ಟುವ ಯೋಗವೇ ಇದೆ. ಸಪ್ಟಂಬರ ೨೩ರ ನಂತರ ಪ್ರಸೂತಿ ಸುಲಭವಾದರೂ ಅನಂತರ ಬಾಣಂತಿತನದ ಕಾಲದಲ್ಲಿ ಮಾತ್ರ ಶಾರೀರಿಕ ಇಲ್ಲವೆ ಮಾನಸಿಕ ಸುಖ ಸಾಕಷ್ಟು ಸಿಕ್ಕಲಾರದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆಯು ನವೆಂಬರ ನಂತರ ಆಗುವದಿದ್ದರೆ ಅವರಲ್ಲಿ ಬಹಳಷ್ಟು ಜನರು ಪಾಸು ಆಗುವರು. ಆದರೆ ಸಪ್ಟಂಬರ ೨೩ರ ನಂತರ ಪರೀಕ್ಷೆಯಾದರೆ ವರ್ಗದೊರೆಯುವ ಸಂಭವ ಮಾತ್ರ ಇದೆ.

ಕೂಲ. ಆದರೆ ವೆಚ್ಚ ಅಂದಾಜಿಗಿಂತ ಹೆಚ್ಚುವದು. ಅಲ್ಪಸ್ವಲ್ಪ ಸ್ಥಾವರ ಇಲ್ಲವೆ ಜಂಗಮ ವಸ್ತುಗಳನ್ನು ಸಂಗ್ರಹಮಾಡಲು ಸಾಧ್ಯವಿದೆ. ಆದರೆ ಅದಕ್ಕಾಗಿ ಮಾಡಲ್ಪಡುವ ಕರಾರು ಮುಂತಾದವುಗಳು ಸಕಾಲದಲ್ಲಿ ಪೂರ್ಣವಾಗುವದಿಲ್ಲ ಮತ್ತು ಅದರ ಕ್ರಯವಿಕ್ರಯಕರ್ತರೊಡನೆ ಬಹಳ ದ್ವೇಷವುಂಟಾಗುವದು. ನೆರೆಯುವರ ಮನಸ್ಸು ಬಹಳವಿರೋಧಕ ಮತ್ತು ಯಾವದೇತರದ ಒಳ್ಳೆ ಕೆಟ್ಟಪರಿಸ್ಥಿತಿಯಲ್ಲಿ ಮನಸ್ಸು ಉದಾಸೀನವೇ ಉಳಿಯುವದು.

ಕನ್ಯಾ-ಪುತ್ರರಲ್ಲಿ ಯಾರ ಮದುವೆ ಮಾಡಬೇಕಾಗಿದೆಯೊ ನವಂಬರ ೨೮ರೊಳಗಾಗಿ ಅದು ಅಲ್ಪಾಯಾಸದಿಂದ ಕೂಡಿಬರುವದು ಆದರೆ ಅನಂತರ ಸ್ವಲ್ಪ ಜಡವೆನಿಸುವದು. ಆದರೆ ಶರೀರ ಸಂಬಂಧ ಒಳ್ಳೆ ಮನೆತನದವರೊಡನೆ ಆಗುವದು. ಒಮ್ಮೆ ಕೂಡಿದ ಬಳಿಕ ಬೇಗನೆ ಆಗಲಿ ಅಥವಾ ತಡಮಾಡಿಯಾಗಲಿ ಗೊತ್ತಾದಂತೆ ತೊಂದರೆಯಿಲ್ಲದೆ ಸಾಂಗವಾಗುವದು. ಸೊಸೆ ಇಲ್ಲವೆ ಅಳಿಯ ಅಪೇಕ್ಷೆಗಿಂತ ಹೆಚ್ಚು ಉತ್ತಮ ಇದ್ದುದು ಕಂಡುಬರುವದು. ಅವರ ಉನ್ನತಿಗೆ ಈ ವರ್ಷ ಬಹಳ ಅನುಕೂಲ. ಆದರ ಪ್ರತೀತಿಯೂ ನವಂಬರ ೨೯ ರಿಂದ ಮಾರ್ಚ ೩೦ ಇಲ್ಲವೆ ಎಪ್ರೀಲ ೨೯ ರಿಂದ ಮೇ ೨೫ ಈ ಅವಧಿಯಲ್ಲಿ ಖಾತ್ರಿಯಿಂದ ಆಗುವದು. ಮತ್ತು ಅವರೆಲ್ಲ ನಿಮ್ಮೊಡನೆ ಯಥೋಚಿತ ನಡೆಯುವರು.

ಉಪಜೀವನದ ಸಾಧನವು ನೋಕರಿ ಇಲ್ಲವೆ ಧಂದೆ ಇದರ ಪೈಕಿ ಏನೇ ಇದ್ದರೂ ಅದರಲ್ಲಿ ಒಳ್ಳೆ ಉತ್ಕರ್ಷ ಮತ್ತು ವಿಪುಲ ಲಾಭ ದೊರೆಯುವದು ಮತ್ತು ಪ್ರತಿಷ್ಠೆಯೂ ಹೆಚ್ಚುವದು. ಧಂದೆಯವರದೂ ಚನ್ನಾಗಿ ನಡೆಯುವದು. ಅನೇಕರು ಶಾಖೆ ಉಪಶಾಖೆಗಳನ್ನು ತೆರೆಯುವರು. ನಿಮ್ಮ ಮಾತಿಗೆ ಬಹಳಷ್ಟು ಬೆಲೆ ದೊರೆತು, ಧಂದೆಯಲ್ಲಿ ಪ್ರಾವೀಣ್ಯ ಮತ್ತು ಪ್ರಾಮಾಣಿಕತನದ ಬಗ್ಗೆ

# ಮಕರ

ಈ ರಾಶಿಯವರಿಗೆ ಕೆಲವೊಂದು ಮನೆತನದ ಮಾತುಗಳಲ್ಲಿ ಸ್ವಲ್ಪ ದಗದಗಿಯೆನಿಸಿದರೂ ಧಂದೆ ಕೂಲಿಯಲ್ಲಿ ಮತ್ತು ಸಾಮಾಜಿಕ ಜೀವನದಲ್ಲಿ ಸಾಧಾರಣ ನೂರಕ್ಕೆ ನೂರರಷ್ಟು ಅನುಕೂಲವಾಗಿಪರಿಣಮಿಸುವದೆಂಬುದು ನಿಶ್ಚಿತ.

ಈ ವರ್ಷ ಫೆಬ್ರುವರಿ ೮ ರಿಂದ ಮೇ ೧೫ ಈ ಕಾಲವನ್ನು ಬಿಟ್ಟು ಉಳಿದ ಸಮಯದಲ್ಲಿ ಬಹಳ ಅನುಕೂಲ ಮತ್ತು ಸಪ್ಟಂಬರ ೨೩ ರ ನಂತರವಂತೂ ಆರೋಗ್ಯವು ಬಹಳ ಅನುಕೂಲವುಳ್ಳದ್ದಾಗುವದು. ಆದರೆ ಮುಂದೆ ನವಂಬರದಿಂದ ನಿಮ್ಮ ರಾಶಿಗೆ ಸಾಡೇಸಾತಿ ಪ್ರಾರಂಭನಾಗುವದೆಂಬ ವಿಚಾರದಿಂದ ತರ್ಕವಿತರ್ಕ ಪ್ರಾರಂಭವಾಗಿ ಮನಃಸ್ವಾಸ್ಥ್ಯ ಬಹಳ ಕೆಡುವದು.

ಹೆಂಡತಿಯ ಆರೋಗ್ಯವು ಡಿಸೆಂಬರದಿಂದ ಕಿರಕಳ ಕ್ಲೇಶವನ್ನನುಭವಿಸಬೇಕಾಗುವದು. ಅದರೂ ಹಾಸಿಗೆ ಹಿಡಿದು ಬೀಳುವಷ್ಟು ಅಂಜಿಕೆಯೇನೂ ಇಲ್ಲ. ವಿಶೇಷವಾಗಿ ಹೊಟ್ಟೆಯಲ್ಲಿ ಗ್ಯಾಸಾಗುವ ತಕರಾರು ಬಹಳ. ಸ್ವಭಾವದಲ್ಲಿಯೂ ಮೊದಲಿಗಿಂತ ಬಹಳ ಬದಲಾವಣೆಯಾಗಿ ತ್ರಸ್ಥವಾಗುವದು ಅಷ್ಟಿಷ್ಟಕ್ಕಾಗಿ ಸಿಟ್ಟಗೇಳುವಿರಿ. ಇದರಿಂದ ಉಭಯತರಲ್ಲಿ ಬಹಳಷ್ಟು ಮನಃಶಾಂತಿವುಳಿಯುವದಿಲ್ಲ. ನಿಮ್ಮ ಮದುವೆಯಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವ ಇಚ್ಛೆ ಇದ್ದರೆ ಬಾಸಿಂಗಬಲ ಅಷ್ಟಕ್ಕಷ್ಟೆ, ಇದನ್ನು ತಿಳಿದುಕೊಂಡು ಎಲ್ಲಿ ಅಷ್ಟೊಂದು ಕೂಡಿ ನಡೆಯುವದಿಲ್ಲವೊ ಅಲ್ಲಿ ಹೆಚ್ಚು ತಿಕ್ಕಾಟಕ್ಕೆಳಸದೆ ಒಪ್ಪಿಗೆಕೊಡುವ ಧ್ಯೇಯವನ್ನಿಟ್ಟುಕೊಳ್ಳಬೇಕು. ಡಿಸೆಂಬರದಿಂದ ಸಪ್ಟಂಬರ ವರೆಗೆ ಕೂಡಿಬರಲು ಎಷ್ಟು ತೊಂದರೆಯಾಗುವದೊ ಅಷ್ಟು ಮುಂದೆ ಮಾತ್ರ ಆಗುವದಿಲ್ಲ. ವಧೂವರ ಪರಸ್ಪರ ಅಪೇಕ್ಷಿಸಿದಷ್ಟು ಅನುರೂಪ ದೊರೆಯುವ ಸಂಭವವೂ ಕಡಿಮೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖಕ್ಕೆ ಮಾತ್ರ ಅಷ್ಟೊಂದು ತೊಂದರೆಯಿಲ್ಲ. ಮನೆಯಲ್ಲಿ ಬಹು ಜನರು ಐಕ್ಯದಿಂದ ವರ್ತಿಸುವರು. ನಿಮ್ಮ ಮಾತನ್ನು ಸಹಸಾ ಮೀರುವದಿಲ್ಲ. ಅನೇಕರ ಉನ್ನತಿಯಾಗುವದು. ಆಪ್ತರಲ್ಲಿ ಕೆಲ ಜನರು ನಿಂದೆಯನ್ನು ಮಾಡುತ್ತ ನಡೆಯುವರು. ಆದರೆ ಯಾರೂ ಆದಕ್ಕಷ್ಟೊಂದು ಮಹತ್ವಕೊಡುವದಿಲ್ಲ. ಮನೆಯಲ್ಲಿಯ ನೋಕರಚಾಕರರು ಪ್ರಾಮಾಣಿಕತನದಿಂದಇದ್ದರೂ ಸಕಾಲಕ್ಕೆ ಯಾವ ಕೆಲಸವನ್ನೂ ಮಾಡುವದಿಲ್ಲ. ವಾಹನಸುಖ ಅನು

ಸರ್ವತೋಮುಖವಾಗಿ ಪ್ರಶಂಸೆ ಕೇಳಿಬರುವದು. ದೊಡ್ಡವರ ಭೆಟ್ಟಿ ಸಹವಾಸದ ಯೋಗ ಮೇಲಿಂದ ಮೇಲೆ ದೊರೆಯುವದು. ಯೋಜಿತ ಕೆಲಸಗಳ ಲ್ಲಿಯೂ ಅನುಕೂಲ ಸಹಾಯ ದೊರೆಯುವದು. ಮಾಡಬೇಕೆಂದಿಟ್ಟುಕೊಂಡ ಕೆಲಸ ಇಲ್ಲವೆ ಗೊತ್ತುಪಡಿಸಿದ ಯೋಜನೆ ಎಷ್ಟೊಂದು ದುರ್ಘಟವಿದ್ದರೂ ಕೊನೆಯಲ್ಲಿ ಅಷ್ಟೊಂದು ದಗದಗಿಯೆನಿಸದೆ ಮನಸ್ಸಿನಂತೆ ಸಾಂಗವಾಗುವವು. ಇಲ್ಲವೆ ಆ ಮಾ[illegible]ವಲ್ಲಿ ಸಾಗುವುದು. ಆದರೆ ಪ್ರತಿಯೊಂದು ಕೆಲಸದಲ್ಲಿ ಮಧ್ಯದಲ್ಲಿಯೇ ಏನಾದರೊಂದು ಕೆಡಕು ಬರುವದೋ ಏನೋ ಎಂಬ ಅಂಜಿಕೆ. ಆದರೆ ಫೆಬ್ರುವರಿ ೮ ರಿಂದ ಮೇ ೧೫ ಈ ಅವಧಿಯಲ್ಲಿ ಇಂಥ ಅಂಜಿಕೆ ಬಹಳವೆನಿಸುವ ಯೋಗವಿದೆ. ನೋಕರರ ಮೇಲೆ ಅವರ ವರಿಷ್ಠರು ಬಹಳ ಸಂತೋಷ ಉಳಿಯುವರು. ಮತ್ತು ಸ್ವಯಂಪ್ರೇರಣೆಯಿಂದ ತತ್ಕಾಲದಲ್ಲಿ, ಇಲ್ಲವಾದರೆ ಭವಿಷ್ಯದಲ್ಲಿ ಬಹಳ ಪರಿಪೋಷಕವಾಗುವಂಥ ಶಿಫಾರಸು ನಿಶ್ಚಯವಾಗಿ ಮಾಡುವರು. ನವಂಬರ ೨೮ರ ವರೆಗೆ ಇಲ್ಲವಾದರೆ ಮಾರ್ಚ ೭ ರಿಂದ ಎಪ್ರಿಲ ೧೮ ಈ ಮಧ್ಯಂತರ ಅವಧಿಯಲ್ಲಿ ಮೇಲಿನ ಗ್ರೇಡ ಕೂಡ ಅನೇಕರಿಗೆ ದೊರೆಯುವದು. ಪಗಾರದಲ್ಲಿ ಬಡತಿಯಂತೂ ಆಗೇ ತೀರುವದು. ಒಳ್ಳೆ ಸುಖ ಸೌಕರ್ಯಗಳ ಸ್ಥಳಕ್ಕೆ ತಾನಾಗಿಯೆ ಬದಲಿಯಾಗುವದು. ಮತ್ತು ಅಲ್ಲಿಯೂ ನಿಮ್ಮ ವರ್ಚಸ್ಸು ಚನ್ನಾಗಿ ಹೆಚ್ಚುವದು. ಗ್ರೇಡ ಮತ್ತು ಬದಲಿ ಒಮ್ಮೆಲೇ ಸಂಭವಿಸಬಹುದು ಮತ್ತು ಬಹುಶಃ ಈ ಯೋಗ ನವಂಬರ ೨೯ರಿಂದ ಮಾರ್ಚ ೩೦ ಮೇ ೨೫ ರಿಂದ ಜೂನ ೨೦ ಇಲ್ಲವೆ ಅಗಸ್ಟ ೯ ರಿಂದ ಸಪ್ಟಂಬರ ೩ ಈ ಅವಧಿಯಲ್ಲಿ ಬರುವದು.

ಆದರಂತೆಯೇ ಪ್ರಾರಂಭದಿಂದ ಜನೆವರಿ ೨೫ರ ವರೆಗೆ ಅನಂತರ ಮಾರ್ಚ ೭ ರಿಂದ ಎಪ್ರಿಲ ೧೮, ಮೇ ೩೦ ರಿಂದ ಜುಲೈ ೧೩ ಮತ್ತು ಸಪ್ಟಂಬರ ೬ ರಿಂದ ಅಕ್ಟೋಬರ ೯ ಈ ಅವಧಿಯಲ್ಲಿ ದುಡ್ಡು ಬೇಕಾದಷ್ಟು ಸಿಕ್ಕುವದು. ಮಿತ್ರ ಸುಖ ಅನುಕೂಲ. ಆದರೆ ಜುಲೈ ೧೩ ರಿಂದ ಸಪ್ಟಂಬರ ೬ರ ಮಧ್ಯದಲ್ಲಿ ಅವರಲ್ಲಿ ಒಬ್ಬರಿಗೆ ಇದ್ದ ವ್ಯಸನವೂ ನಿಮಗೂ ಹತ್ತುವ ಅಂಜಿಕೆಯಿದೆ ದೂರದ ಪ್ರವಾಸ ಅನೇಕ ಸಲ ಒದಗಿ ಬಂದು ಅದರಲ್ಲಿಯು ಉದ್ದೇಶ ಸ್ವಲ್ಪ ತಡವಾಗಿಯಾದರೂ ಕೊನೆಗೆ ವ್ಯವಸ್ಥಿತವಾಗಿ ಸಾಧಿಸುವದು. ಧಾರ್ಮಿಕ ಮತ್ತು ಮಂಗಲ ಕೃತ್ಯಗಳು ಬಹಳಷ್ಟು ಒದಗಿ ಬರುವವು. ಮತ್ತು ಚಿರಕಾಲ ಬಾಳಿ ಕೀರ್ತಿ ತರುವ ಕಾರ್ಯ ನಿಮ್ಮಿಂದ ಆಗುವದು. ದಾವೆ ಖಟ್ಲೆ ಇಲ್ಲವೆ ಉಳಿದ ಸ್ಪರ್ಧೆಯ ಕೆಲಸಗಳಲ್ಲಿ ನವಂಬರ ೨೯ರ ವರೆಗೆ ಬಹಳ ಉತ್ತಮ ಯಶಸ್ಸು ಸಿಕ್ಕುವದು. ಮತ್ತು ಅದಕ್ಕಿಂತ ಸ್ವಲ್ಪ ಕಡಿಮೆ ಸಪ್ಟಂಬರ ೨೩ರ ನಂತರ ದೊರೆಯುವದು. ಈ ವರ್ಷ ದೊಡ್ಡ ಶತ್ರುಗಳಿಗಿಂತ ಸಣ್ಣ ಶತ್ರುಗಳ ಹಾವಳಿಯೇ ಹೆಚ್ಚುವದು. ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಸಪ್ಟಂಬರ ೬ರ ವರೆಗೆ ಆಗುವ ಪ್ರಸೂತಿ ಕಷ್ಟವಿಲ್ಲದೆ ಆಗುವದು. ಆದರೆ ನವಂಬರ ೨೮ಕ್ಕಿಂತ ಮೊದಲು ಆದರೆ ಪುತ್ರ ಮತ್ತು ಅನಂತರ ಕನ್ಯಾ ಹಡೆಯುವ ಸಂಭವ ಬಹಳವಿದೆ.

ಯಾರ ಪರೀಕ್ಷೆ ಅಕ್ಟೋಬರ ೩೦ ರ ವರೆಗೆ ಇಲ್ಲವೆ ನವಂಬರ ೨೯ ರಿಂದ ಮಾರ್ಚ ೩೦, ಎಪ್ರಿಲ ೨೯ ರಿಂದ ಮೇ ೨೫, ಜೂನ ೨೦ ರಿಂದ ಜುಲೈ ೧೫ ಇಲ್ಲವೆ ಸಪ್ಟಂಬರ ೩ ರಿಂದ ೧೭ ಈ ಅವಧಿಯಲ್ಲಿ ಪರೀಕ್ಷೆಯಿದ್ದರೆ ಯಶಸ್ಸು ನಿಶ್ಚಿತ.

## ಕುಂಭ

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಮಕರ ರಾಶಿಯವರಂತೆಯೇ ಅಲ್ಪ ಸ್ವಲ್ಪ ಪ್ರಾಪಂಚಿಕ ದಗ ದಗಿಯದಾಗಿದ್ದರೂ ಧಂದೆ ಕೂಲಿಯವರ ಉತ್ಕರ್ಷ ಮತ್ತು ಲಾಭಕ್ಕೆ ಬಹಳಷ್ಟು ಅನುಕೂಲವಿರುವದು. ಇದು ನಿಶ್ಚಿತ.

ಆರೋಗ್ಯದ ದೃಷ್ಟಿಯಿಂದ ನವಂಬರ ೨೮ ರಿಂದ ಸಪ್ಟಂಬರ ೨೩ರ ವರೆಗಿನ ಕಾಲವು ಉತ್ತಮವಿದ್ದಷ್ಟು ಉಳಿದ ಕಾಲ ಅಷ್ಟೆ ಕ್ಲೇಶಕಾರಕವಿರುವದು. ಈಮಾತನ್ನು ಈ ರಾಶಿಯವರು ಗಮನದಲ್ಲಿಟ್ಟುಕೊಳ್ಳಬೇಕು. ಆದರಲ್ಲಿಯೂ ಅಕ್ಟೋಬರ ೨೯ರ ವರೆಗೆ ಮತ್ತು ೧೯೫೮ ಅಕ್ಟೋಬರ ೯ರ ನಂತರದ ಕಾಲವು ಬಹಳ ಕಷ್ಟದ್ದಾಗಿ ಪರಿಣಮಿಸುವದು. ಮೂತ್ರಕೃಚ್ಛ ಅಪೆಂಡಾಯಟಿಸ್ ಮತ್ತು ಹರ್ನಿಯಾದಂಥ ಬೇನೆ ಇದ್ದವರು ಹೆಚ್ಚು ಜಪ್ಪಿಸಬೇಕು. ಮತ್ತು ಗುರು ಹಾಗೂ ರಾಹುವಿನ ಸಂಪೂರ್ಣ ಜಪಮಾಡಬೇಕು.

ಸ್ತ್ರೀ ಸಹವಾಸ ಸುಖಕ್ಕೆ ಈ ವರ್ಷ ಅನುಕೂಲವಾಗಿದ್ದರೂ ಫೆಬ್ರುವರಿ ೮ರ ವರೆಗೆ ಅವರ ಆರೋಗ್ಯ ಅಷ್ಟೊಂದು ಅನುಕೂಲವಿರುವದಿಲ್ಲ. ಹೊಟ್ಟೆನೋವು ಕಣ್ಣುನೋವು ಇವುಗಳ ತೊಂದರೆಯಾಗುವ ಸಂಭವವಿದೆ ಅಲ್ಲದೆ ಅವಳು ಮತ್ತು ನಿಮ್ಮಲ್ಲಿ ಬಹಳಷ್ಟು ಪ್ರೇಮ ಉಳಿಯದೆ ಎಲ್ಲ ವಿಷಯಗಳು ಅಷ್ಟಕ್ಕಷ್ಟೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅತ್ಯಂತ ತೊಂದರೆಯದು. ಸಮೀಪದ ಆಪ್ತರಿಗಿಂತ ದೂರಿನ ಆಪ್ತರಲ್ಲಿ ಹೆಚ್ಚು ಸಹಾನುಭೂತಿ ಉಳಿಯುವದು. ಸಪ್ಟಂಬರ ೨೩ರ ವರೆಗೆ ಮನೆಯಲ್ಲಿ ಅಷ್ಟೊಂದು ವ್ಯಾಜ್ಯಗಳೇನು ನಡೆಯುವದಿಲ್ಲ. ಅನಂತರ ಮಾತ್ರ ಅದೂ ಬಹಳಷ್ಟು ಕಂಡುಬರುವದು. ಒಂದು ವೇಳೆ ನಿಮ್ಮ ಮದುವೆಯಾಗಿರದಿದ್ದರೆ ಅದು ಕೂಡಿ ಬರಲಿಕ್ಕೆ ಫೆಬ್ರುವರಿ ೨೮ ರಿಂದ ಸಪ್ಟಂಬರ ೨೩ ಈ ಕಾಲ ಬಹಳಷ್ಟು ಅನುಕೂಲವಿದೆ. ಸ್ವಲ್ಪೇ ವಿಚಾರ ವಿನಿಮಯದಲ್ಲಿ ಕೂಡಿಬರುವದು. ಆದರೆ ಅಷ್ಟು





ದೀಪಾವಳಿಯು ಸರ್ವರಿಗೂ ಸುಖದಾಯಕ ವಾಗಲಿ



ಸಾಧ್ಯವಾಗಬೇಕಾದರೆ ಬಹಳಷ್ಟು ಕಾಲವಿಲಂಬ ವಾಗುವದು. ಏನಾದರೊಂದು ಅಡ್ಡಿ ಅಡಚಣೆ ಅನಪೇಕ್ಷಿತವಾಗಿ ಏಳುವವು. ಮತ್ತು ವಧೂ ಇಲ್ಲವೆ ವರ ಮೊದಲು ಇಟ್ಟುಕೊಂಡ ಕಲ್ಪನಾ ತರಂಗಗಳಿಗೆ ಹೋಲುವಷ್ಟು ಅನುರೂಪವೇ ಇರುವರೆಂದು ಹೇಳಲಿಕ್ಕೆ ಬರುವದಿಲ್ಲ. ಸ್ಥಾವರ ಜಂಗಮ ಆಸ್ತಿಯ ವಾರ್ಷಿಕ ಉತ್ಪನ್ನವು ಬಹಳಷ್ಟು ಮತ್ತು ವ್ಯವಸ್ಥಿತವಾಗಿ ಉಡಿಯಲ್ಲಿ ಬೀಳುವದು. ಮತ್ತು ಫೆಬ್ರುವರಿ ೮ ರಿಂದ ಮೇ ೧೫ ಈ ಕಾಲದಲ್ಲಿ ಅಲ್ಪ ಸ್ವಲ್ಪ ಸಂಗ್ರಹವಾಗುವ ಸಂಭವವೂ ಇದೆ. ಈ ವರ್ಷ ನಿಮ್ಮಕಿಂತ ಎರಡನೆಯವರ ವಾಹನಗಳಿಂದಲೆ ಸುಖ ಹೆಚ್ಚು. ಮನೆಯಲ್ಲಿಯ ನೋಕರ ಚಾಕರರು ಸ್ವಲ್ಪ ಅಸಂತೋಷ ಉಳಿಯುವರು. ಆದರೆ ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ವ್ಯವಸ್ಥಿತವಾಗಿ ಮಾಡುವರು. ಸಪ್ಟಂಬರ ೨೩ರ ವರೆಗೆ ಒಂದಿಲ್ಲೊಂದು ಕಾರಣದಿಂದ ಬಂಧುಗಳೊಡನೆ ವಾಗ್ಯುದ್ಧವೇಳುವವು. ಆದರೆ ಅವರ ಉನ್ನತಿಗೆ ಮಾತ್ರ ಈ ವರ್ಷ ಬಹಳ ಅನಕೂಲವಿರುವದು.

ಮಕ್ಕಳಲ್ಲಿ ಯಾರ ವಿವಾಹಮಾಡುವದಿದೆಯೋ ಅದಕ್ಕೆ ನವಂಬರ ೨೮ರ ನಂತರ ಬೇಗನೆ ಕೂಡಿ ಬರುವ ಯೋಗವಿದೆ. ಮತ್ತು ಶರೀರಸಂಬಂಧ ನಿಮಗಿಂತ ಹೆಚ್ಚು ವರ್ಚಸ್ವೀ ಜನರ ಕೂಡ ಆಗುವದು. ಮತ್ತು ಸೊಸೆ ಇಲ್ಲವೆ ಅಳಿಯ ಬಹಳಷ್ಟು ಮನಸ್ಸಿಗೆ ಬರುವರು. ಮಕ್ಕಳ ಉನ್ನತಿಗೂ ಈ ವರ್ಷ ಬಹಳಷ್ಟು ಅನುಕೂಲವಿದೆ. ವಿಶೇಷವಾಗಿ ನವಂಬರ ೨೬ ರಿಂದ ಫೆಬ್ರುವರಿ ೨, ಫೆಬ್ರುವರಿ ೨೧ ರಿಂದ ಮಾರ್ಚ ೯, ಮೇ ೯ ರಿಂದ ೩೦ ಮತ್ತು ಸಪ್ಟಂಬರ ೩ ರಿಂದ ನವಂಬರ ೩, ಈ ಅವಧಿಯಲ್ಲಿ ಆಗುವದು. ಆದರೆ ಎಲ್ಲ ಮಕ್ಕಳು ನಿಮ್ಮಗೂಡ ಸ್ವಲ್ಪ ದೂರದೂರೇ ಉಳಿಯುವರು.

ಧಂದೆ ಕೂಲಿಯುವರಿಗೆ ಈ ವರ್ಷ ಸದಾ ಸುಸ್ಥಿತಿಯದೇ ಆಗಿರುವದು. ನವಂಬರ ೨೮ ರ ವರೆಗೆ ಅನೇಕರಿಗೆ ಸಟ್ಟಾ, ಲಾಟರಿ, ಭೂಗತ ದ್ರವ್ಯ ಪ್ರಾಪ್ತಿ ಮೊದಲಾದ ಗುಪ್ತ ಇಲ್ಲವೆ ಆಕಸ್ಮಾತ್ ಲಾಭವಾಗುವ ಸಂಭವವೂ ಇದೆ. ಡಿಸೆಂಬರದಿಂದ ಧಂದೆಯುವರಿಗೆ ಮೇಲಿಂದಮೇಲೆ ಒಳ್ಳೆ ಅವಕಾಶ ದೊರೆತು ತುಂಬ ಲಾಭವಾಗುವದು. ಸಪ್ಟಂಬರ ೨೩ರ ವರೆಗೆ ಯಶಸ್ವಿಯಾಗದಂತಹ ಸಾಹಸದ ಧಂದೆಗಳೂ ಒಳ್ಳೆ ಯಶಸ್ವಿಯಾಗುವವು. ಫೆಬ್ರುವರಿ ೮ ರಿಂದ ಮೇ ೧೫ ರ ವರೆಗೆ ಅವುಗಳಲ್ಲಿ ತೋರುತ್ತಿದ್ದ ತಪ್ಪುಗಳಾದರೂ ಹಾನಿಕರವೆನಿಸದೆ ತದ್ವಿರುದ್ಧ ಬಹಳಷ್ಟು ಲಾಭದಾಯಕವೆನಿಸುವವು. ಪತ್ತು ಮತ್ತು ಪ್ರತಿಷ್ಠೆ ಉತ್ತಮ ಉಳಿಯುವ ಯೋಗವಿದ್ದರೂ ಮಾರ್ಚ ೬ ರಿಂದ ಎಪ್ರಿಲ ೧೮ರ ವರೆಗೆ ಸ್ವಲ್ಪ ಜಾಗ್ರತೆಯಿಂದಲೆ ಇರಬೇಕು.

ನೋಕರರಿಗೂ ಈ ವರ್ಷ ಸ್ವಲ್ಪವೂ ಪ್ರತಿಕೂಲವಿಲ್ಲ. ಡಿಸೆಂಬರದಿಂದ ಆದೊಳ್ಳೆ ಭಾಗ್ಯದಾಯಕವೆನಿಸುವದು. ಬಹುತರ ಜನರಿಗೆ ಮೇಲಿನ ಗ್ರೇಡ ದೊರೆಯುವದು. ಮತ್ತು ಡಿಸೆಂಬರ ೧೩ ರಿಂದ ಜನೆವರಿ ೨೫ ರ ವರೆಗಿನ ಕಾಲ ವಿಶೇಷ ಸಂಸ್ಮರಣೀಯವೆನಿಸುವದು. ಬದಲಿಯಾಗುವದಿದ್ದರೆ ಅದು ಬಹಳ ದೂರದ ಸ್ಥಳಕ್ಕಾದರೂ ಒಳ್ಳೆ ಸುಖ ಸೌಕರ್ಯಗಳ ಸ್ಥಳಕ್ಕೆ ಆಗುವದು. ವರಿಷ್ಠ ಅಧಿಕಾರ ಸ್ಥಳದಲ್ಲಿ ಸ್ತ್ರೀಯರೊಬ್ಬರಿದ್ದರೆ ಅವರು ಹೆಚ್ಚು ಹಿತ ಮಾಡುವರು. ಕೈಕೆಳಗಿನ ಜನರು ಒಳ್ಳೇ ನೀತಿಯಿಂದ ವರ್ತಿಸುವರು. ದೂರದ ಪ್ರವಾಸ ಅನೇಕ ಸಲ ಮತ್ತು ಹೇತು ಸಾಧ್ಯಮಾಡುವಂತಹವು ಒದಗಿಬರುವವು. ಡಿಸೆಂಬರದಿಂದ ಮಿತ್ರರು ಹೆಚ್ಚು ಸೌಜನ್ಯದಿಂದ ವರ್ತಿಸುವರು. ಡಿಸೆಂಬರದ ವರೆಗೆ ಪ್ರತ್ಯಕ್ಷ ಅನುಭವಕ್ಕೆ ಬರುವಂಥ ಸ್ವಪ್ನಗಳು ಬಹಳ ಬೀಳುವವು. ಈ ರಾಶಿಯ ಸ್ತ್ರೀಯರು ಡಿಸೆಂಬರದಿಂದ ಸಪ್ಟಂಬರದೊಳಗಾಗಿ ಹಡೆಯುವವರಿದ್ದರೆ ಪ್ರಸೂತಿ ಬಹಳ ಸುಲಭವಾಗಿ ಅನೇಕರಿಗೆ ಪುತ್ರರತ್ನ ಪ್ರಾಪ್ತವಾಗುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ನವಂಬರ ೨೬ ರಿಂದ ಸಪ್ಟಂಬರ ೨೩ ರ ಕಾಲದಲ್ಲಿ ಆಗುವದಿದೆಯೋ ಅವರು ಪಾಸಾಗುವರು. ಆದರೆ ಯಾರ ಪರೀಕ್ಷೆ ನವಂಬರ ೬ರ ವರೆಗೆ ಮತ್ತು ಫೆಬ್ರುವರಿ ೨೧ ರಿಂದ ಮಾರ್ಚ ೯ ಮತ್ತು ಮಾರ್ಚ ೨೬ ರಿಂದ ಎಪ್ರಿಲ ೨೬, ಮೇ ೩೦ ರಿಂದ ಜೂನ ೧೫ ಮತ್ತು ಸಪ್ಟಂಬರ ೩ ರಿಂದ ೨೩ ಈ ಕಾಲದಲ್ಲಿ ಆದರೆ ಅವರು ಬಹುಶಃ ವರ್ಗದಲ್ಲಿ ಬರುವರು.

## ಮೀನ

ಒಟ್ಟಿಗೆ ಈ ವರ್ಷ ನೀವು ಬಹಳಷ್ಟು ಹೊಡೆತಗಳನ್ನು ತಿನ್ನುತ್ತ ಕೊನೆಯಲ್ಲಿ ಹೇಗಾದರೂ ಸುರಕ್ಷಿತತೆಯಿಂದ ಪಾರಾಗುವಿರಿ ಎಂಬುದರಲ್ಲಿ ಮಾತ್ರ ಸಂಶಯವಿಲ್ಲ. ಇದನ್ನು ಚನ್ನಾಗಿ ತಿಳಿದುಕೊಳ್ಳಬೇಕು.

ಈ ರಾಶಿಯ ಜನರ ಪ್ರಕೃತಿ ಸಾಧಾರಣವಾಗಿ ವರ್ಷವಿಡಿ ಕಿರಿಕಿರಿಯಿಃದೆ ಇರುವದು. ಆದರೆ ಆಕ್ಟೋಬರ ೨೯ ರಿಂದ ಡಿಸೆಂಬರ ೧೩ ಮತ್ತು ಜುಲೈ ೧೩ರಿಂದ ಸಪ್ಟಂಬರ ೬ ಈ ಕಾಲದಲಿ ಅದು ಹೆಚ್ಚು ಕೆಡುವ ಸಂಭವವಿದೆ. ಅದರ ಪರಿಹಾರಾರ್ಥ ಮಂಗಳ ಮತ್ತು ಗುರುವಿನ ಸಂಪೂರ್ಣವೆಂದರೆ ಅನುಕ್ರಮವಾಗಿ ೧೦ ಸಾವಿರ ಮತ್ತು ೧೯ ಸಾವಿರ ಜಪ ಮಾಡಬೇಕು.

ಹೆಂಡತಿಯ ಆರೋಗ್ಯ ಒಟ್ಟಾರೆ ಅನುಕೂಲವೆ, ಆದರೆ ಸಪ್ಟಂಬರ ೨೩ರ ನಂತರ ಹಲ್ಲುನೋವು ಕಾಲು ಒಳಿಯುವದು ಮೊದಲಾದ ಕಿರಕಳ ಉಪದ್ರವ ಸ್ವಲ್ಪ ಸ್ವಲ್ಪವಾಗುವ ಸಂಭವವಿದೆ. ಉಭಯತರಲ್ಲಿಯೂ ಒಳ್ಳೆ ಮತ್ತೈಕ್ಯ, ಆದರೆ ಯಾವಾಗಾದರೊಮ್ಮೆ ಕ್ಷುಲ್ಲಕ ಕಾರಣಗಳಿಗಾಗಿ ಅವಳು ಬಹಳ ಸಂತಪ್ತಳಾಗುವಳು. ಅವಳ ಸಹವಾಸದಲ್ಲಿ ಮಾತ್ರ ವ್ಯತ್ಯಯ ಬರಲಾರದು. ಮತ್ತು ಅವಳ ವಿಚಾರಗಳು ಬಹಳ ಮಟ್ಟಿಗೆ ಹಿತಕಾರಿಯಾಗಿ ಪರಿಣಮಿಸುವವು. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಮತ್ತು ಇದೇ ವರ್ಷ ಮಾಡಿಕೊಳ್ಳುವದಿದ್ದರೆ ಅದಕ್ಕೆ ಮಾತ್ರ ಡಿಸೆಂಬರಕ್ಕಿಂತ ಮೊದಲು ಎಷ್ಟು ಬಾಸಿಂಗಬಲವಿದೆಯೊ ಅಷ್ಟುಮುಂದೆ ಇರುವದಿಲ್ಲ ಡಿಸೆಂಬರದಿಂದ ಮುಂದೆ ಮಾಡಿಕೊಳ್ಳುವದಿದ್ದರೆ ಮೊದಲು ಕೂಡಿ ಬರುವದೇ ಕಠಿನ. ಒಂದುವೇಳೆ ಕೂಡಿಬಂದದ್ದಾದರೆ ಅದು ಸಾಂಗವಾಗಬೇಕಾದರೆ ಬಗೆಬಗೆಯ ಅಡಚಣಿಗಳು ಬಂದು ಸಾಕುಬೇಕಾಗಿ ಹೋಗುವದು. ವಧೂವರರು ಮಾತ್ರ ಬಹಳ ಅಪರೂಪ ಇರುವರು. ಯಾವದೊಂದು ಕಾರಣದಿಂದ ಬೀಗ ಬೀಗರಲ್ಲಿ ಮಾತ್ರ ಬಹಳ

ವಾಗುದ್ಧವಾಗುವದು. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖಕ್ಕೆ ಒಳ್ಳೆ ಇಲ್ಲವೆ ಕೆಡಕು ಎನ್ನಬಹುದು. ಕೆಲಸಮಯ ಅಪ್ರಿಯ ಜನ ಕೂಡನೆ ಸಹವಾಸ ಮಾಡುವ ಪ್ರಸಂಗ ಬರುವದು. ಯಾವದೊಂದು ವಸ್ತುವನ್ನು ಇಡುವ ಮೂಲಕ, ಅತ್ಯಾವಶ್ಯಕ ಪ್ರಸಂಗದಲ್ಲಿ ಅದು ದೊರೆಯದೆ ಕಳವಾಗಿ ಹೋಗಿದೆ. ಇಲ್ಲವೆ ಕಳೆದು ಹೋಗಿದೆ ಎಂದು ಎನಿಸುವದು. ಮುಂದೆ ಕೆಲದಿನಗಳ ನಂತರ ಇದ್ದಕ್ಕಿದ್ದಂತೆ ಅದು ನಿಮಗೆ ದೊರೆಯುವದು. ಕಣ್ಣು ಸ್ವಲ್ಪ ಮಂದವಾಗುವವು. ಸ್ಥಾವರ ಜಂಗಮ ಸಂಗ್ರಹವನ್ನು ಈರ್ಷೆಯಿಂದ ಅಲ್ಪಸ್ವಲ್ಪ ಮಾಡುವಿರಿ. ಆದರೆ ಅಗಕ್ಕಾಗಿ ಹೆಚ್ಚು ಹಣ ಕೊಡಬೇಕಾದ ಪ್ರಸಂಗ ಬರುವದು. ನೋಕರ ಚಾಕರರು ನಿಷ್ಠೆಯಿಂದಾದರೂ ಅನಿಯಮಿತ ಮತ್ತು ಅವ್ಯವಸ್ಥಿತವಾಗಿ ವರ್ತಿಸಿ ಬಹಳ ರೊಚ್ಚಿಗೆಬ್ಬಿಸುವರು. ವಾಹನ ಸುಖ ದೊರೆಯುವದಿಲ್ಲ. ಫೆಬ್ರುವರಿ ೮ ರಿಂದ ಮೇ ೧೫ ರ ಅವಧಿಯಲ್ಲಿ ವಾಹನಗಳು ಅನೇಕ ಸಲ ಕೆಟ್ಟು ವಿಪರೀತ ವೆಚ್ಚದಲ್ಲಿ ಬೀಳುವಿರಿ. ಎಲ್ಲ ಆಪ್ತರು ಕಪಟದಿಂದ ಮತ್ತು ಸ್ವಾರ್ಥದಿಂದ ವರ್ತಿಸುವರು. ಇಂಥ ಅನೇಕ ವಿಷಯುಗಳಲ್ಲಿ ಜುಲೈ ೨೦ ರಿಂದ ಆಗಸ್ಟ ೨೦ ಮತ್ತು ಸಪ್ಟಂಬರ ೩ ರಿಂದ ೨೬ ಈ ಕಾಲ ಬಹಳ ಘಟನೆಗಳ ಕಾಲವಾಗಿ ಪರಿಣಮಿಸುವದು.

ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಈ ವರ್ಷ ಆ ಬಗ್ಗೆ ವಿಶೇಷ ಗದ್ದಲದಲ್ಲಿ ಬೀಳದಿರುವದು ಉತ್ತಮ. ನವಂಬರ ನಂತರ ಕೂಡಿಬಂದರೆ ಅದು ಸಾಂಗವಾಗುವದರ ಬದಲು ಮುರಿಯುವ ಸಂಭವವೇ ಹೆಚ್ಚು. ಈ ಬಗೆಯ ಅಂಜಿಕೆ ಬಹಳಿದೆ. ಅದರಲ್ಲಿಯೂ ಒಂದು ವೇಳೆ ಲಗ್ನವಾದರೆ ಸೊಸೆ ಇಲ್ಲವೆ ಅಳಿಯ ಮುಂದೆಬೇಗನೆ ನಿಮ್ಮ ಪ್ರೇಮದಲ್ಲಿ ಉಳಿಯದಿರುವ ಸಂಭವವಿದೆ.

ಮಕ್ಕಳ ಉನ್ನತಿಗೆ ಮೊದಲು ಮಂದವೆನಿಸಿದರೂ ಕೊನೆಯ ೬ ತಿಂಗಳೊಂದರಲ್ಲಿಯೂ ಬಹಳಷ್ಟು ಆಶಾದಾಯಕವಾಗಿ ಪರಿಣಮಿಸುವದು. ಅವರೆಲ್ಲ ನಿಮಗೆ ಸಪ್ಟಂಬರ ೨೩ರ ವರೆಗೆ ಸ್ವಲ್ಪ ವಿರೋಧದಿಂದ ಆದರೆ ಮುಂದೆ ಮಾತ್ರ ಬಹಳ ಸರಳವಾಗಿ ವರ್ತಿಸುವರು.

ಧಂದೆಕೂಲಿಯುವರಿಗೆ ಈ ವರ್ಷ ಕೆಲ ಸಲ ಅನುಕೂಲವಿದ್ದರೆ ಕೆಲಸಲ ಪ್ರತಿಕೂಲ ಹೀಗೆ ಏರಿಳಿತಗಳು ಉಂಟಾಗುವವು. ಆದರಿಂದ ಧಂದೆಯುವರಿಗೆ ಸ್ವಲ್ಪ ತೊಂದರೆ. ಬಹಳ ವಸ್ತುಗಳ ತೇಜೀಮಂದಿ ಅಂದಾಜು ಪೂರ್ಣವಾಗಿ ತಪ್ಪುವದು. ವಿಶೇಷವಾಗಿ ಅಕ್ಟೋಬರ ೨೯ ರಿಂದ ಡಿಸೆಂಬರ ೧೩ ಮತ್ತು ಎಪ್ರಿಲ ೧೮ ರಿಂದ ಮೇ ೩೦ ಈ ಅವಧಿಯಲ್ಲಿ ಬಹಳ ಹಾನಿಕಾರಕವೆನಿಸುವದು. ಆದರೆ ಸಪ್ಟಂಬರ ೨೩ ರಿಂದ ಮುಂದೆ ವ್ಯವಹಾರದಿಂದ ಬೆಳೆದು ಲಾಭದಾಯಕವಾಗಿ ಒಟ್ಟಿಗೆ ಆಘಾವು ತೆಗೆದರೆ ಹಾನಿಯಾಗದೆ ಸ್ವಲ್ಪವಾದರಾಗಲೊಲ್ಲದೇಕೆ ಲಾಭವೇ ಆದುದು ಕಂಡುಬರುವದು.

ನೋಕರವರ್ಗದವರಿಗೆ ಕೂಡ ಇದೇ ಬಗೆಯ ಅಳದಕ್ಕಿತನವನ್ನು ಸಹಿಸಬೇಕಾಗುವದು. ಎಷ್ಟೇ ಜಪ್ಪಿಸಿಕೊಂಡು ಮತ್ತು ಉತ್ತಮರೀತಿಯಿಂದ ಕೆಲಸಮಾಡಿದರೂ ಸಭ್ಯ ರೀತಿಯಿಂದ ವರ್ತಿಸಿದರೂ ವರಿಷ್ಠರು ಅಸಂತುಷ್ಟರಾಗುವರು. ಜನೆವರಿ ೭ರಿಂದ ಮಾರ್ಚ ೭ ರ ವರೆಗಿನ ಕಾಲದಲ್ಲಿ ಅವರ ವಿಶೇಷ ಅವಕೃಪೆಗೆ ಪಾತ್ರರಾಗುವ ಭೀತಿಯಿದೆ. ಯೋಗ್ಯ ಹಕ್ಕಿನ ಕಾಲ ಬಂದಿದ್ದರೂ ಮೇಲಿನ ಗ್ರೇಡು ಸಿಕ್ಕುವ ಸಂಭವವಿಲ್ಲ. ಕೈಕೆಳಗಿನವರೂ ಉನ್ಮತ್ತತನದಿಂದ ವರ್ತಿಸುವರು. ಬದಲಿಯಾಗುವದೆಂದೆನಿಸಿದರೂ ಅದಾಗುವದಿಲ್ಲ. ಮತ್ತು ಯಾರಿಗೆ ಬದಲಿಯಾಗುವದಿಲ್ಲೆಂದೆನಿಸುವದೊ ಅವರಿಗೆ ಆಗಿಯೇ ತೀರುವದು. ಮತ್ತು ಅನುಭವದ ನಂತರ ಆ ಸ್ಥಳ ವಿಶೇಷ ಸುಖ ಸೌಕರ್ಯಗಳಿಂದ ಒಡಗೂಡಿದೆಂಬುದು ಕಂಡುಬರುವದು. ಅದರಲ್ಲಿಯೂ ಅಕ್ಟೋಬರ ೨೮ರ ವರೆಗೆ ಮತ್ತು ಅನಂತರ ಡಿಸೆಂಬರ ೧೩ ರಿಂದ ಜನೆವರಿ ೨೫, ಮಾರ್ಚ ೭ ರಿಂದ ಎಪ್ರಿಲ ೧೫, ಮೇ ೩೦ ರಿಂದ ಜುಲೈ ೧೩ ಹಾಗು ಸಪ್ಟಂಬರ ೬ ರಿಂದ ಮುಂದಿನಕಾಲ ಬಹಳ ಸಮಾಧಾನದ್ದು ಮತ್ತು ಲಾಭದ್ದು ಎನಿಸುವದು. ದೂರದ ಪ್ರವಾಸ ಒಂದೆರಡು ಸಲ ಒದಗಿ ಬರುವದು. ಆದರೂ ಅದರಲ್ಲಿಯು ಉದ್ದೇಶ ಸಾಧ್ಯವಾಗುವದು. ಪ್ರಯತ್ನಕ್ಕಿಂತ ದೈವವಾದವನ್ನೇ ಹೆಚ್ಚಾಗಿ ಅವಲಂಬಿಸಬೇಕಾಗುವದು. ಬಹಳ ವೆಚ್ಚದ ಧಾರ್ಮಿಕ ಕೃತ್ಯವೊಂದನ್ನು ಮಾಡುವಿರಿ. ಮಿತ್ರಸುಖ ಅನುಕೂಲ. ಆದರೆ ಫೆಬ್ರುವರಿ ೮ ರಿಂದ ಮೇ ೧೫ ಈ ಕಾಲವು ಅವರಲ್ಲಿ ಒಬ್ಬನಿಗೆ ಆರ್ಥಿಕ ಇಲ್ಲವೆ ಪ್ರಕೃತಿಯ ವಿಷಯದಲ್ಲಿ ನಿಮ್ಮನ್ನು ಬಹಳ ಪೀಡಿಸುವರು. ಸಮಾಜದಲ್ಲಿ ಪತ್ತು ಮತ್ತು ಲೌಕಿಕ ಉತ್ತಮ ದೊರೆಯುವದು.

ದಾನೆ ಖಟ್ಲೆ ಮತ್ತು ಸ್ಪರ್ಧೆಯಂಥ ಕೆಲಸಗಳಲ್ಲಿ ಬಹುಶಃ ಕೊನೆಗೆ ನಿಮ್ಮದೇ ವಿಜಯವಾಗುವದು. ಆದರೆ ಅದಕ್ಕಾಗಿ ಮೊದಲು ವೆಚ್ಚ ಮತ್ತು ದಗದಗಿ ಬಹಳ. ಅಳಬುರಕ ಶತ್ರುಗಳ ಸುಳಿದಾಟವೂ ಬಹಳ. ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅವರು ನವಂಬರ ೨೮ರಿಂದ ಸಪ್ಟಂಬರ ೨೩ರ ಅವಧಿಯಲ್ಲಿ ಹಡೆದರೆ ಅವರಿಗೆ ಅಲ್ಪಸ್ವಲ್ಪ ಕಷ್ಟವೆನಿಸುವದು. ಈ ವರ್ಷ ಬಹುಶಃ ಎಲ್ಲರಿಗೆ ಪುತ್ರರತ್ನ ಹುಟ್ಟುವದು. ಇದೂ ನಿಜವಾಗುವದು.

ಯಾರ ಪರೀಕ್ಷೆ ಡಿಸೆಂಬರ ೧೩ರಿಂದ ಎಪ್ರಿಲ ೧೫ ಮತ್ತು ಜುಲೈ ೧೩ರಿಂದ ಸಪ್ಟಂಬರ ೬ ಈ ಕಾಲದಲ್ಲಿ ಆಗುವದೊ ಅವರು ಖಾತ್ರಿಯಿಂದ ಪಾಸಾಗುವರು.

**ಶುಭಂ ಭವತು**

# ವಿದ್ಯಾರ್ಥಿಗಳು ಮತ್ತು ಶಿಸ್ತು

ಲೇಖಕರು : ಶ್ರೀ ಎಚ್. ಬಿ. ಕೊಣ್ಣೂರ, ಎಂ. ಎ.
ಹೈದರಾಬಾದ

ಇಂದಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಕಂಡುಬರುವದಿಲ್ಲನೆಂದು ಹೇಳುವದು ಎಲ್ಲರಿಗೂ ವಾಡಿಕೆಯ ಮಾತಾಗಿರುವದು. ಆದರೆ ಅದರ ನಿಜವಾದ ಕಾರಣ ವೇನೆಂಬುದನ್ನು ಯಾರೂ ವಿಚಾರಿಸುವ ಗೋಜಿಗೆ ಹೋಗುವದಿಲ್ಲ. ಸಮಾಜದ ರೀತಿನೀತಿಗಳೇ ಅದಕ್ಕೆ ಕಾರಣವೆಂದರೆ ಆಶ್ಚರ್ಯವೆನಿಸುವಂತಿದೆ. ಲೇಖಕರು ತಮ್ಮ ದೀರ್ಘ ಅನುಭವದ ನುಡಿಯಿಂದ ಇಲ್ಲಿ ಈ ಪರಿಸ್ಥಿತಿಯ ವಿಶ್ಲೇಷಣವೊದಗಿಸಿದ್ದಾರೆ.

ಈಗಿನ ಕಾಲದಲ್ಲಿ ಇದೊಂದು ಜಟಿಲವಾದ ಪ್ರಶ್ನೆಯಾಗಿದೆ. ಸಮಾಜದಲ್ಲಿ ಕೆಲವು ರೀತಿಗಳು ನಡತೆ-ನಡಾವಳಿಗಳು ಪರಂಪರೆಯಿಂದ ಬಂದಿವೆ. ಇವುಗಳಿಗೆ ನೀವು ಕಟ್ಟುಗಳೆನ್ನಬಹುದು; ನಿಯಮಗಳೆನ್ನಬಹುದು; ನೀತಿಗಳೆಂದೆನ್ನಬಹುದು; ನಿಯಂತ್ರಣಗಳೆಂದೆನ್ನಬಹುದು; ಶಿಸ್ತು ಎಂದೆನ್ನಬಹುದು. 'ಶಿಸ್ತು' ಈ ಶಬ್ದವು ಬಹ್ವರ್ಥಸೂಚಕವಾಗಿದೆ. 'ಶಿಸ್ತಿ' ನಲ್ಲಿ ರೀತಿಯಿದೆ; ನೀತಿ ಇದೆ; ನಿಯಂತ್ರಣವಿದೆ; ಸಂಯಮವಿದೆ. ಆ ನೀತಿನಿಯಮಗಳಿಗೆ-ಸಂಯಮಬಂಧನಗಳಿಗೆ ಹೊರಗಿನ ಒತ್ತಾಯವಿಲ್ಲ. ಸ್ವಯಂಸ್ಫುರಣದಿಂದ ಸಾಗಿ ಬಂದಿರುತ್ತದೆ. ಸಮಾಜದ ತಳಹದಿಯೇ ಸ್ಥಿರವಾಗಿ ರೀತಿ-ನೀತಿ-ಅಥವಾ ಶಿಸ್ತು ಇದರ ಮೇಲೆಯೇ ನಿಂತಿದೆ. ಶಿಸ್ತು ಕಿತ್ತಿ ಹೋದರೆ ಸಮಾಜದ ಸ್ಥಿತಿಯು ಕೆಡುವದು. ಸ್ವಚ್ಛಂದ ವೃತ್ತಿಗೆ ಎಡೆಯಾಗುವದು. ಸ್ವೈರವೃತ್ತಿಯ ಜೀವನವು ಬಲಿತರೆ ಶಾಂತಿಭಂಗವಾಗುವದು. ಸುಖ ಸಂಪತ್ತುಗಳ ಮಾರ್ಗಗಳು ಕುಂಠಿತವಾಗುವವು. ಸಮಾಜ ಯಂತ್ರವು ಘರ್ಷಣವಿಲ್ಲದೆ ನಡೆಯಬೇಕಾದರೆ ಸಮಾಜದ ನಡಿಗೆಯು ನುಣುಪಾಗಬೇಕಾದರೆ ಶಿಸ್ತಿನ ಎಣ್ಣೆಯನ್ನು ಹೊಯ್ಯಬೇಕಾಗುವದು. ಶಿಸ್ತು ಇಲ್ಲದೆ ಸ್ಥಿತಿಯು ಇಲ್ಲ. ಸ್ಥಿತಿಯಿಲ್ಲದಿದ್ದರೆ ಗತಿಯಿಲ್ಲ. ಸಮಾಜದಲ್ಲಿ ಅಶಾಂತಿಯ ಅಕಾಂಡ ತಾಂಡವವು ತಲೆದೋರುವದು. ಇಷ್ಟು ಅನರ್ಥಗಳು ಕಟ್ಟುನಿಟ್ಟುಗಳಿಲ್ಲದೆ ಸಮಾಜಕ್ಕೆ ಒದಗುವವು.

ಈಗಿನ ಸಮಾಜದಲ್ಲಿ ಅನೇಕ ಕಾರಣಗಳಿಂದ ಕ್ಷೋಭವೂ ಅಸ್ವಾಸ್ಥ್ಯವೂ ತಲೆಯೆತ್ತಿದೆ. ಈ ಅನರ್ಥಗಳಲ್ಲಿ ವಿದ್ಯಾರ್ಥಿಗಳೊಳಗೆ ಕಂಡುಬರುವ ಶಿಸ್ತಿನ ಅಭಾವವು ಒಂದಾಗಿರುವದು. ವಿದ್ಯಾರ್ಥಿಗಳಲ್ಲಿ ಹಬ್ಬಿದ ಈ ಸ್ವೈರವೃತ್ತಿಯು ಭಯಸೂಚಕವಾಗಿದೆ. ವಿದ್ಯಾರ್ಥಿಗಳ ಸ್ವತಂತ್ರವಾದ ಬೆಳವಣಿಗೆಗೆ ಬಾಧೆ ಬರದಂತೆ ಈ ಅಸಿಯಂತ್ರಣವೃತ್ತಿಗೆ ತಡೆಹಾಕುವದು ಅತ್ಯಾವಶ್ಯಕವಾಗಿದೆ ಯೋಗ್ಯಕಾಲದಲ್ಲಿ ಪ್ರತಿಕಾರ ಮಾಡದಿದ್ದರೆ ಸಮಾಜದ ಸ್ಥಿತಿಯು ಮಿತಿಮೀರಿ ಕೆಟ್ಟು ಭೀಕರ ಸ್ವರೂಪವನ್ನು ತಾಳಬಹುದು. ಕೈಮೀರಿ ಹೋಗದಿರುವಾಗಲೇ ಉಪಾಯಗಳನ್ನು ಕೈಕೊಳ್ಳುವದು ಸಮಾಜದ ಸರಕಾರದ ಆದ್ಯಕರ್ತವ್ಯವಾಗಿದೆ. ಭಾವೀ ಸಮಾಜದ, ಭವಿತವ್ಯತೆಯು ವಿದ್ಯಾರ್ಥಿಗಳನ್ನೇ ಅವಲಂಬಿಸಿರುತ್ತದೆ.

## ಮುಖ್ಯ ಕಾರಣಗಳು

ವಿದ್ಯಾರ್ಥಿಗಳಲ್ಲಿ ಕಂಡುಬರುವ ಶಿಸ್ತಿನ ಅಭಾವಕ್ಕೆ ಸ್ಥೂಲಮಾನವಾಗಿ ಮೂರು ಮುಖ್ಯ ಕಾರಣಗಳಿವೆ. ೧. ಶೈಕ್ಷಣಿಕ ೨. ಸಾಮಾಜಿಕ ಮತ್ತು ೩. ರಾಜಕೀಯ. ಶಿಕ್ಷಣದಲ್ಲಿ ವಿದ್ಯಾರ್ಥಿಗೆ ಯೋಗ್ಯ ಮಾರ್ಗವು ದೊರೆಯುವದಿಲ್ಲ. 'ದರ್ಶನ' ತೋರುವ ಗುರುಗಳಾದರೂ ವಿರಳ. ಇದಕ್ಕೆ ಗುರುಗಳಲ್ಲಿರುವ ಅನಾಸ್ಥೆಯೇ ಕಾರಣ. ಕಾಲಿದಾಸನು ಶಿಕ್ಷಕರ ಗುರಿಯನ್ನು ಮಾಲವಿಕಾಗ್ನಿಮಿತ್ರದಲ್ಲಿ ಮನಸ್ಸಿಗೆ ಹಿಡಿಯುವಂತೆ ರೂಪಿಸಿದ್ದಾನೆ.

श्लिष्टाक्रिया कस्यचिदात्म संस्था
संक्रान्तिरन्यस्य विशेषयुक्ता ।
यस्योभये साधु मशिक्षकाणां
धुरि प्रतिष्ठापयितव्य एव ॥

ಕೆಲವು ಶಿಕ್ಷಕರಲ್ಲಿ ವಿಷಯಜ್ಞಾನವು ಅಖಂಡವಾಗಿರುತ್ತದೆ. ಆದರೆ ಸಂಕ್ರಮಣಶಕ್ತಿಯು ಇರುವದಿಲ್ಲ. ಕೆಲವರಲ್ಲಿ ವಿಷಯಜ್ಞಾನವು ಅಷ್ಟಕಷ್ಟೆ ಇರುವದು. ಆದರೆ ಅವರಲ್ಲಿ ಸಂಕ್ರಾಂತಿ ಶಕ್ತಿಯು ವಿಶಿಷ್ಟವಾಗಿರುತ್ತದೆ. ಆದರೆ ಗಾಢ ವಿಷಯಜ್ಞಾನ, ಪ್ರಬಲ ಸಂಕ್ರಮಣ ಶಕ್ತಿ ಇವೆರಡೂ ಇದ್ದವರೇ ಶಿಕ್ಷಕಧುರೀಣರು. ಇದರಲ್ಲಿ ಮಾರ್ಗದರ್ಶನದ ಮಂತ್ರವೇ ಮೂಡಿದೆ ಈಗಿನ ಅನೇಕ ಶಿಕ್ಷಕರಲ್ಲಿ ಪಾಂಡಿತ್ಯವಂತೂ ಇರುವದೇ ಇಲ್ಲ; ಆದರೆ ಓದಿಕೊಂಡು ವಿಷಯವನ್ನು ನುರಿಸಿಕೊಂಡು ಹೇಳಬೇಕೆಂಬ ಪ್ರವೃತ್ತಿಯೆ ಕಂಡುಬರುವದಿಲ್ಲ. ಹುಡುಗರೆಂದರೆ ಅರಳು ಮೊಗ್ಗೆಗಳೆಂಬ ಭಾವನೆಯು ಅವರಿಗೆ ಕನಸಿನಲ್ಲಿಕೂಡ ಬರುವದಿಲ್ಲ; ತಮ್ಮ ಕೃತಾರ್ಥತೆಯು ಹುಡುಗರನ್ನು ತಿದ್ದುವದರಲ್ಲಿ ಇರುತ್ತದೆಂಬದು ಅವರ ಮನಸ್ಸಿನಲ್ಲಿ ಎಂದೂ ಮೂಡುವದಿಲ್ಲ. ಅವರಿಗೆ ಧ್ಯೇಯವಿಲ್ಲ; ಅಂದಮೇಲೆ ಹುಡುಗರಲ್ಲಿ ಧ್ಯೇಯವು ಬರುವದೆಂತು? ಒಳ್ಳೆಯ ರೀತಿಯಿಂದ ಶಿಕ್ಷಣವು ದೊರೆಯದ್ದರಿಂದ ವಿದ್ಯಾರ್ಥಿಗಳ ಮನಸ್ಸು ಕಿಡಿಗೇಡಿತನದ ಕಡೆಗೆ ಎಳೆಯುವದು ಸ್ವಾಭಾವಿಕ.

## ಶಿಕ್ಷಣವೆಂದರೇನು ?

ಶಿಕ್ಷಣವೆಂದರೆ ಕೆಲವು ಗದ್ಯಪಾಠಗಳನ್ನೂ ಪದ್ಯ ಸಂಗ್ರಹವನ್ನೂ ವರ್ಗದಲ್ಲಿ ಬಿಟ್ಟಿಬೇಸರದಿಂದ ಓದುವದಲ್ಲ. ಶಿಕ್ಷಣದಲ್ಲಿ ತೇಜವಿರಬೇಕು. ಶಿಕ್ಷಣದಲ್ಲಿ ಸ್ಫುರಣವಿರಬೇಕು. ಕಾಂತಿಯಿರಬೇಕು, ಕಳೆಯಿರಬೇಕು, ಜೀವವಿರಬೇಕು ; ರಸವಿರಬೇಕು ; ಭಾವವಿರಬೇಕು. ರಸವಿದ್ದಲ್ಲಿ ಸಮರಸವಾಗುವದು. ಸಮರಸತೆಯಲ್ಲಿಯೇ ನೀತಿಯ ನೆಲೆಯಿದೆ; ನಿಯಂತ್ರಣದ ಕಟ್ಟಿದೆ. ಮಕ್ಕಳೆಂದರೆ ಚಿಕ್ಕೆಯ ಕಾಳಾಗಬೇಕು. ಸಮಾಜದ ಹರವಾದ ಮುಗಿಲಿನಲ್ಲಿ ತೇಜಃಪುಂಜರಾಗಿ ಮಿನುಗಬೇಕು. ಅಂದರೆ 'ಶಿಸ್ತಿ'ನ ಭಂಗಕ್ಕೆ ಅನುವೇ ದೊರೆಯದು.

ಎರಡನೆಯ ಮಾತೆಂದರೆ, ಶಿಕ್ಷಕರಲ್ಲಿ ಹುಡುಗರಿಗೆ ಕಲ್ಯಾಣಮಾಡುವ ತವಕವೇ ಇರುವದಿಲ್ಲ. ಆದರೆ ಕೆಡಕು ಮಾತ್ರ ಹೇರಳವಾಗಿ ಮಾಡುವ ವೃತ್ತಿಯು ಕಂಡುಬರುವುದು. ಈಗ ಎಲ್ಲೆಡೆಯಲ್ಲಿ ಖಾಸಗೀ ಶಿಕ್ಷಣದ ಭೂತಸಂಚಾರವಾಗಿದೆ. ಶಿಕ್ಷಕರು ದುಡ್ಡಿನ ಆಶೆಗಾಗಿ ಖಾಸಗೀ ಶಿಕ್ಷಣವನ್ನು ಸಾಗಿಸುತ್ತಾರೆ. ಮನೆಯಲ್ಲಿ ಶಿಕ್ಷಣಕೊಡಲು ನನ್ನ ಆತಂಕವಿಲ್ಲ. ಆದರೆ ಪರೀಕ್ಷೆಯಲ್ಲಿ ಅವರಿಗೆ ಪ್ರಶ್ನೆಗಳನ್ನು ಹೇಳುತ್ತಾರೆ; ಮನೆಯಲ್ಲಿ ಹೊಸ ಉತ್ತರ ಪುಸ್ತಕಗಳನ್ನು ಬರೆಯಿಸಿಕೊಳ್ಳುತ್ತಾರೆ. ಅಯೋಗ್ಯರಾದ ಹುಡುಗರಿಗೆ ಗುಣಗಳನ್ನು ಹಾಕಿ ಮೇಲಿನ ಇಯತ್ತೆಗೆ ನೂಕುತ್ತಾರೆ. ಇದು ಬಹಳ ನಾಚಿಕೆಗೇಡಿ ಮಾತು. ಇದರಿಂದ ಶಿಕ್ಷಕರ ನೈತಿಕ ಬಲವಂತೂ ಹೇಳಹೆಸರಿಲ್ಲದೆ ಅಳಿದು ಹೋಗುವದು. ಹುಡುಗರ ಮುಂದಿನ ಭವಿತವ್ಯತೆಯು ಮೂಲವೇ ಕಡಿದುಹೋಗುವದು. ಶಿಕ್ಷಕರಲ್ಲಿ ನೈತಿಕಶಕ್ತಿಯು ತಗ್ಗುವದರಿಂದ ಅವರು ಹೇಡಿಗಳಾಗುತ್ತಾರೆ. ಹುಡುಗರಿಗೆ ಅಂಕಿತರಾಗುತ್ತಾರೆ. ಹುಡುಗರನ್ನು ಮೇಲಿನ ವರ್ಗಕ್ಕೆ ಸೇರಿಸಲಿಲ್ಲವೆಂದರೆ ವಿದ್ಯಾರ್ಥಿಗಳು ಕೆರಳಿ ಅತ್ಯಾಚಾರ ಮಾಡುತ್ತಾರೆ. ಶಿಕ್ಷಕರಿಗೆ ಹೊಡೆದದ್ದರ ಉದಾಹರಣೆಗಳೂ ಇವೆ. ಹೀಗಿದ್ದ ಮೇಲೆ ಶಿಸ್ತಿನ ಮಾತೆತ್ತುವದೇ ಕಠಿಣವಾಗುತ್ತದೆ. ಇವೆಲ್ಲ ನನ್ನ ಅಧ್ಯಾಪಕವೃತ್ತಿಯಲ್ಲಿ ಕಂಡುಂಡ ಮಾತುಗಳಾಗಿವೆ. ಶಿಕ್ಷಕರೇ ಅನಾಗರಿಕರೂ ಸ್ವಾರ್ಥಸಾಧುಗಳೂ ದಾಂಭಿಕರೂ ಇರುವಾಗ 'ಶಿಸ್ತಿ'ನ ಸಾಮ್ರಾಜ್ಯವು ಸ್ಥಿರವಾಗಿ ನಿಲ್ಲಲಾರದು; ರೋಗದ ಬೀಜವನ್ನು ಕಿತ್ತೊಗೆಯದೆ ಮೇಲುಪಚಾರದಿಂದ

ಜೀನೆಯು ಅಳಿಯಲಾರದು. ಇನ್ನು ಕಾಲೇಜದಲ್ಲಿ ಪ್ರಾಧ್ಯಾಪಕವೃತ್ತಿಯು ಶಾಲೆಯ ಶಿಕ್ಷಕರ ವೃತ್ತಿಗಿಂತಲೂ ಹೀನವಾಗಿದೆ. ಸಾಮಾನ್ಯವಾಗಿ ಪ್ರಾಧ್ಯಾಪಕರು ಕರ್ತವ್ಯವಿಮುಖರೂ ವಿದ್ಯಾಪ್ರಗತಿಪರಾಙ್ಮುಖರೂ ಆಗಿರುವರು. ವಿಷಯಸಿದ್ಧತೆಯು ಸಾಕಷ್ಟಿಲ್ಲದಿರುವದರಿಂದ ಹುಡುಗರನ್ನು ಆಕರ್ಷಿಸುವ ಶಕ್ತಿಯು ಅವರಲ್ಲಿರುವದಿಲ್ಲ. ವ್ಯಾಖ್ಯಾನಗಳು ವಿರಸವಾಗಲು ಹುಡುಗರು ಗಲಾಟೆಯನ್ನು ಎಬ್ಬಿಸುವರು. ಬರಬರುತ್ತ ಅದು ಕಾಲೇಜದ ಚಿರಸ್ಥಾಯಿಯಾದ ಲಕ್ಷಣವೇ ಆಗಿಬಿಡುತ್ತದೆ. ಈಗ ಬಹಳ ಕಾಲೇಜುಗಳಲ್ಲಿ 'ಶಿಸ್ತಿನ' ಕುರುಹುಗಳೇ ಅಳಿಸಿಹೋಗಿವೆ. ಇದಕ್ಕೆ ಅಪವಾದಗಳಿವೆ.



### ಜ್ಞಾನ ಪ್ರೀತಿಗಳಲ್ಲಿ ಶಿಸ್ತಿನ ಕಲೆ

ಇವೆಲ್ಲ ಅನಾಹುತಗಳಿಗೆ ತಡೆಹಾಕುವದು ಅತ್ಯಾವಶ್ಯಕವಾಗಿರುವದು. ಇಲ್ಲದಿದ್ದರೆ ಸಮಾಜಕ್ಕೂ ರಾಷ್ಟ್ರಕ್ಕೂ ವಿಪ್ಲವವೇ ಬಂದೊದಗುವದು. ಆದ್ದರಿಂದ ಶಿಕ್ಷಕರೂ ಪ್ರಾಧ್ಯಾಪಕರೂ ತಮ್ಮ ಕರ್ತವ್ಯವನ್ನು ಅರಿತು ತಮ್ಮ ನೈತಿಕ ಉನ್ನತಿಯನ್ನು ಗಳಿಸಿಕೊಂಡು ಸಮಾಜದ ನೀತಿಯನ್ನು ಉಳಿಸಬಹುದು. ರಾಷ್ಟ್ರದ ಅಳಿವು ಉಳಿವುಗಳು ಶಿಕ್ಷಕರನ್ನೇ ಪ್ರಾಮುಖ್ಯವಾಗಿ ಅವಲಂಬಿಸಿರುವದು. ನಲಂದಾ, ತಕ್ಷಶಿಲಾ, ವಲಭೀ ಮೊದಲಾದವುಗಳಲ್ಲಿಯ ಪ್ರಾಧ್ಯಾಪಕವೃತ್ತಿಯನ್ನು ನೆನೆದು ಅವರ ಮೇಲುಪಂಕ್ತಿಯನ್ನು ಮನಃಪೂರ್ವಕವಾಗಿ ಅನುಸರಿಸಬೇಕು. ದೇಶಸೇವೆಯ ಆಡಂಬರದ ಮಾತುಗಳನ್ನಾಡುವ ಶಿಕ್ಷಕರು ವಿದ್ಯಾರ್ಥಿಗಳಿಗೆ ಯೋಗ್ಯವಾದ ಮಾರ್ಗದರ್ಶನವನ್ನು ತಮ್ಮ ವಿಚಾರದಿಂದಲೂ ಆಚಾರದಿಂದಲೂ ಮಾಡಿದರೆ ತಾನಾಗಿಯೇ ದೇಶಸೇವೆ ಮಾಡಿದ ಶ್ರೇಯಸ್ಸು ಬರುವುದು. न हि ज्ञानेन सदृ पवित्रमिह विद्यते || ಜ್ಞಾನದಿಂದಲೇ ಜಗತ್ತಿನ ಉದ್ಧಾರ. ಆದರೆ ಜ್ಞಾನಕ್ಕೆ ನಿಜವಾದ ಪ್ರೀತಿಯ ಜೋಡು ಬೇಕು. ಜ್ಞಾನಪ್ರೀತಿಗಳಲ್ಲಿಯೇ 'ಶಿಸ್ತಿ'ನ ಕಲೆಯಿದೆ. 'ಶಿಸ್ತೇ' ಜಗತ್ತಿನ ತ್ರಾಣವು; ಜಗತ್ತಿನ ಪ್ರಾಣವು.

ಈಗಿನ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಒಳ್ಳೆಯ ರೀತಿಗಳು ಕಂಡುಬರುವದಿಲ್ಲ. ಮೊದಲಿನ ಮರ್ಯಾದೆಯು ಪರಂಪರೆಯೇ ನಷ್ಟವಾಗಿದೆ. ಅವಿಭಕ್ತ-ಕುಟುಂಬಗಳು ಈಗಿನ ಕಾಲದಲ್ಲಿ ಕಂಡುಬರುವದಿಲ್ಲ. ಇದು ನಿಜವಾಗಿ ಅವನತಿಯ ದ್ಯೋತಕ. ಅವಿಭಕ್ತಕುಟುಂಬವೆಂದರೆ ಒಂದು ಪ್ರೀತಿಯ ಕುರುಹು, ತಾಳ್ಮೆಯ ತವರೂರು; ತ್ಯಾಗದ ಆಗರ; ಮರ್ಯಾದೆ ವಿಧೇಯತೆಗಳ ನಿವಾಸಸ್ಥಾನ. ಅವಿಭಕ್ತಕುಟುಂಬವು ಉಚ್ಚಸಂಸ್ಕೃತಿಯ ಉನ್ನತವಾದ ಶಿಖರವು. ಅದರಲ್ಲಿ ಕೆಲವು ದೋಷಗಳಿದ್ದರೂ ತಾಳ್ಮೆ ತಪಸ್ಸುಗಳು ಅಲ್ಲಿ ಫಲದ್ರೂಪವನ್ನು ಹೊಂದುತ್ತಿದ್ದವು. ಸಮಾಜದ ಸುಶ್ಲಿಷ್ಟತೆಯು ಅದರಲ್ಲಿ ರೂಪಗೊಂಡಿದ್ದಿತು. ಇಂತಹ ಹಿತಕರವಾದ ಸಂಸ್ಥೆಗಳು ಮಾಯವಾಗಿರುವದು ಹೀನತೆಯ ಲಕ್ಷಣವೇ ಸರಿ. ಆಗ ಮಾನವೆಷ್ಟು! ಮರ್ಯಾದೆ ಎಷ್ಟು! ನಯವೆಷ್ಟು! ಭಯವೆಷ್ಟು! ಆಗಿನ ಸಮಾಜಕ್ಕೂ ಈಗಿನ ಸಮಾಜಕ್ಕೂ ಅಜಗಜಾಂತರವಿದೆ. ಹಿರಿಯರು, ಕಿರಿಯರು, ಗುರುಗಳು, ಶಿಷ್ಯರು ಎಂಬುವದರ ಭಾವನೆಯೇ ಇಲ್ಲದಾಗಿದೆ. 'ನೀನೆಂದರೆ ನಿಮ್ಮಪ್ಪ' ನೆಂಬುವ ವೃತ್ತಿಯೇ ಪ್ರಬಲವಾಗಿದೆ. ನುಡಿಯಲ್ಲಿ ನಡೆಯಲ್ಲಿ ಉಚ್ಛೃಂಖಲ ವೃತ್ತಿಯು ಒಡೆದು ತೋರುತ್ತದೆ. ತಂದೆಮಕ್ಕಳಲ್ಲಿ ತಾಳಮೇಳವಿಲ್ಲ.

### ಗುರುಶಿಷ್ಯ ಸಂಬಂಧ

ಈಗ ಗುರುಶಿಷ್ಯರಲ್ಲಿ ಅನ್ಯೋನ್ಯವಾದ ಆದರವಿರುವದಿಲ್ಲ. ಮೊದಲು ಅಯ್ಯನವರಿಗಾಗಿ ಹಚ್ಚಡ ಮೊದಲಾದವುಗಳನ್ನು ಶಿಷ್ಯರು ಬೇಡಿತರುತ್ತಿದ್ದರು. ಅದರಲ್ಲಿ ಒತ್ತಾಯವಿರುತ್ತಿದ್ದಿಲ್ಲ. ಅದು ಆದರಪ್ರೇರಿತವಾದದ್ದು ಆಗಿದ್ದಿತು. ಗುರುಭಕ್ತಿಯ ದ್ಯೋತಕವಾಗಿದ್ದಿತು. ಈಗಿನವರಲ್ಲಿ ಗುರುಭಕ್ತಿಯ ಗಂಧವಿರುವದಿಲ್ಲ. ಇದಕ್ಕೆಲ್ಲ ಪ್ರೇಮದ ಅಭಾವವೇ ಕಾರಣವು. ಸ್ವಾರ್ಥದ ಪ್ರಭಾವವು. ನೀತಿಯ ಹೀನತೆಯು. ವಿಷಯಲೋಲುಪತೆಯ ಅತಿರೇಕವು. ಪರದೇಶದ ಘಾತಕವಾದ ರೂಢಿಗಳ ಅನುಕರಣವು ಇವಕ್ಕೆ ಬಹ್ವಂಶದಿಂದ ಕಾರಣವಾಗಿವೆ. ಅದಕ್ಕೆ ಚಿತ್ರಪಟಗಳ ಜೋಡಿಯು ದೊರೆತಿದೆ. ಮಂಗನಿಗೆ ಸೆರೆ ಕುಡಿಸಿದಂತಾಗಿದೆ. ಸ್ವತಂತ್ರ ವೃತ್ತಿಯೆಂದರೆ ಸ್ವಚ್ಛಂದ ವೃತ್ತಿಯೆಂದು ಅರ್ಥಮಾಡಿಕೊಂಡು ಬೇಕು ಬೇಕಾದಂತೆ ನಡೆದುಕೊಳ್ಳುವ ವೃತ್ತಿಯು ತರುಣ ತರುಣಿಯರಲ್ಲಿ ಬೆಳೆದುಬಿಟ್ಟದೆ. "Too little liberty is stagnation. Too much liberty is nuisense" ಅತಿನಿಯಂತ್ರಣದಿಂದ ಪ್ರಗತಿಯು ಕುಂಠಿತವಾಗುವದು; ಅನಿಯಂತ್ರಣದ ಅತಿರೇಕದಿಂದ ಸಮಾಜಸ್ವಾಸ್ಥ್ಯದ ಮೂಲಕ್ಕೆ ಕೊಡಲಿ ಬೀಳುವದು. ಉನ್ಮೂಲನವಿಲ್ಲದ ನಮ್ರತೆಯು ಬೇಕು. ಆ ನಮ್ರತೆಯೇ ಉನ್ನತಿಯು. ಅಜರಾಜನ "ಮಧ್ಯಮ ಕ್ರಮ" ದ ಅವಶ್ಯಕತೆಯು ಬಹಳವಿರುವದು. ಪ್ರಾಚೀನ ಭಾರತದಲ್ಲಿ ಸಮಾಜದ ಕಟ್ಟು ಜ್ಞಾನ ಪ್ರೇಮಗಳ ಮೇಲೆ ನಿಂತಿದ್ದಿತು. ಗುರುಶಿಷ್ಯ ವೃತ್ತಿಯು ಜ್ಞಾನ ಮೂಲಕವಾದುದೂ ಪ್ರೇಮಮೂಲಕವಾದುದೂ ಇದ್ದಿತು. ''यान्यस्माकं सुचरितानि तानि सेवितव्यानि नो इतराणि'' ಎಂಬುದು ಗುರುಗಳು ಶಿಷ್ಯರಿಗೆ ಮಾಡಿದ ಉಪದೇಶವು. ನಮ್ಮಲ್ಲಿಯ ಒಳ್ಳೆಯದನ್ನು ಸ್ವೀಕರಿಸಬೇಕು. ಕೆಡಕಾದುದನ್ನು ಬಿಟ್ಟುಬಿಡಬೇಕು. "एष: आदेश: एष उपदेश:" ಇದರಲ್ಲಿ ಅಧಿಕಾರವಾಣಿಯಿದೆ, ಸ್ನೇಹವಿದೆ, ಸಲಿಗೆಯಿದೆ, ಸತ್ಯವಿದೆ, ಸೌಂದರ್ಯವಿದೆ. ಗುರುಗಳು ಮಾನವಸುಲಭವಾದ ದೋಷಗಳನ್ನರಿತವರಾಗಿದ್ದರು. ಅದುದರಿಂದ ತಮ್ಮಲ್ಲಿಯ ದೋಷಗಳು ಕಂಡುಬಂದಿದ್ದರೆ ಅವುಗಳನ್ನು ಬಿಡಬೇಕು. ಇದ್ದಂಥ ಒಳ್ಳೆಯ ಗುಣಗಳನ್ನು ಸ್ವೀಕರಿಸಬೇಕು. ಎಷ್ಟೊಂದು ನಲ್ಮೆಯ ಮಾತು; ಸಲಿಗೆಯ ಮಾತು; ನೆಟ್ಟಗೆ ಹೃದಯವನ್ನು ಸೇರುವ ಮಾತು.

### ನಿಜವಾದ ಸ್ವಾತಂತ್ರ್ಯದ ಗಾಳಿಯಿಲ್ಲ.

ಈಗಿನ ಯುಗಕ್ಕೆ ಸ್ವತಂತ್ರವಿಚಾರದ ಯುಗ

ವೆಂದೆನ್ನುತ್ತಾರೆ. ಆ ಸ್ವತಂತ್ರ ವಿಚಾರದ ಗಾಳಿಯು ಪ್ರಚಂಡವಾಗಿ ಬೀಸುತ್ತಿದೆ. ಆದರೆ ಅದು ನಿಜವಾಗಿ ಸ್ವಾತಂತ್ರ್ಯದ ಗಾಳಿಯಲ್ಲ. ಸ್ವೈರವೃತ್ತಿಯ ಬಿರುಗಾಳಿಯಾಗಿದೆ. ಪ್ರಾಚೀನ ಕಾಲದಲ್ಲಿ ಅನೀತಿಗೆ, ಅಸತ್ಯಕ್ಕೆ ವಿರೋಧವಿದ್ದೇ ಇದ್ದಿತು. ನಚಿಕೇತನ ಉದಾಹರಣೆಯೇ ಇದಕ್ಕೆ ಸಾಕ್ಷಿಯು. ತಂದೆಯಾದ ವಾಜಸ್ರವಸನ ಅಹಂಕಾರಕ್ಕೆ ತನ್ನ ಪ್ರೇಮವಿರೋಧದಿಂದ ತಡೆ ಹಾಕಿದನು. ಅವನಲ್ಲಿಯ ವಿನಯವೆಷ್ಟು! ಕನಿಕರವೆಷ್ಟು! ವಿನಯವು ಅಪ್ರತಿಹತವಾದ ಶಕ್ತಿಯು ಅದರಲ್ಲಿ ಕಲಹದ ಬೇರನ್ನೇ ಕಿತ್ತೊಗೆಯುವ ಸಾಮರ್ಥ್ಯವಿದೆ. ವಿದ್ಯಾರ್ಥಿಗಳಿಗೆ ನಚಿಕೇತನು ಉದಾಹರಣೆಯಾಗಬೇಕು. ಅವನ ದಾರಿಯು ಮುಕ್ತಿಯ ದಾರಿಯು. ಉದ್ಧಟ ವೃತ್ತಿಯು ಅಧೋಗತಿಯ ದಾರಿಯು. ಹಿರಿಯರು ಮೊದಲಿನಂತೆ ಕಿರಿಯರೊಡನೆ ನಯದಿಂದ ನಡೆಯಬೇಕು. ಕಿರಿಯರು ಹಿರಿಯರ ವಿಷಯದಲ್ಲಿ ಆದರಭಾವವನ್ನು ತಾಳಬೇಕು. ಗುರುಶಿಷ್ಯರಿಬ್ಬರೂ ಮೊದಲಿನ ಸಂಸ್ಕೃತಿಯನ್ನು ನೆನೆದುಕೊಂಡು ಪರಸ್ಪರ ಸೌಹಾರ್ದ ಸಹಕಾರದಿಂದ ನಡೆದು ಸಮಾಜಸುಧಾರಣೆಯ ಕೆಲಸದಲ್ಲಿ ನೆರವಾಗಬೇಕು. ಉಚ್ಚ ಸಂಸ್ಕೃತಿಯಲ್ಲಿ ಸತ್ಯವಿದೆ, ಸೌಂದರ್ಯವಿದೆ, ಕಲ್ಯಾಣವಿದೆ. ದೃಷ್ಟಿಯನ್ನು ಬದಲಿಸಿದರೆ ಸೃಷ್ಟಿಯಾದರೂ ಒಲಿಯುವದು. ಇದು ತ್ರಿಕಾಲಾಬಾಧಿತವಾದ ಸತ್ಯ.

### ರಾಜಕೀಯ ಪಂಗಡಗಳ ಪ್ರಭಾವ

ಇನ್ನು ಮೂರನೆಯ ಕಾರಣವು ರಾಜಕೀಯವಾದುದು. ರಾಷ್ಟ್ರದಲ್ಲಿ ಎಲ್ಲೆಲ್ಲಿಯೂ ರಾಜಕೀಯ ಪಂಗಡಗಳಾಗಿವೆ. ಈ ಪಂಗಡಗಳು ತಮ್ಮ ಸ್ವಾರ್ಥಕ್ಕಾಗಿ ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಾರೆ. ಆದರಿಂದ ವಿದ್ಯಾರ್ಥಿಗಳಲ್ಲಿ ಸಂಯಮನವು ಉಳಿಯುವದಿಲ್ಲ. ಉಳಿದ ವಿಚಾರವನ್ನು ಬಿಟ್ಟು ತಮ್ಮ ತಲೆಯಲ್ಲಿ ತುಂಬಿದ ವಿಚಾರಗಳನ್ನೇ ಸಮಾಜದ ಮೇಲೆ ಹೇರಲು ಪ್ರಯತ್ನ ಮಾಡುತ್ತವೆ. ಅದರಿಂದ ಪಕ್ಷಪಕ್ಷಗಳಲ್ಲಿ ವೈಮನಸ್ಸು ಹುಟ್ಟುವದು. ವಿದ್ಯಾರ್ಥಿಗಳು ಎಲ್ಲ ನಿಯಂತ್ರಣಗಳನ್ನು ಧಿಕ್ಕರಿಸಿ ಮನಬಂದಂತೆ ನಡೆಯಲು ಪ್ರಾರಂಭಿಸುತ್ತಾರೆ. ಸಾರ್ವಜನಿಕ ಸಭೆಗಳಲ್ಲಿ ಗಲಾಟೆಗಳನ್ನು ಎಬ್ಬಿಸುವವರು ಹುಡುಗರೇ. ತಮ್ಮ ಮುಖ್ಯ ಕರ್ತವ್ಯವನ್ನು ಬಿಟ್ಟು ಅತ್ಯಾಚಾರದಲ್ಲಿ ಪ್ರವೃತ್ತರಾಗುತ್ತಾರೆ. ಹುಡುಗರು ರಾಜಕಾರಣದಲ್ಲಿ ಭಾಗ ವಹಿಸಲು ಏನೂ ಅಡ್ಡಿ ಇಲ್ಲ. ಆದರೆ ತಲೆತಿರುಕರಾಗಿ ರಭಸದಿಂದ ರಾಜಕೀಯ ರಂಗಕ್ಕೆ ಇಳಿಯುವದು ಸರ್ವಥಾ ಅಯೋಗ್ಯವು.

सहसा विदधीत न क्रियामविवेकः
परमापदां पदम् ।
वृणुते हि विमृश्यकारिणं गुणलुब्धा :
स्वयमेव संपदः ॥

ಒಮ್ಮೆಲೆ ಸಾರಾಸಾರ ವಿಚಾರವಿಲ್ಲದೆ ದುಡುಕುವದು ಅವಿವೇಕವು. ಅವಿವೇಕವು ಆಪತ್ತುಗಳ ತವರು. ನೋಡಿ ಕೆಲಸ ಮಾಡುವವನಿಗೆ ಸಂಪತ್ತು ತಾನೇ ಒಲಿದುಬರುವದು. ಆದ್ದರಿಂದ ಲೋಕನಾಯಕರು ದೇಶಹಿತವನ್ನು ನೆನೆದು ಮೊದಲು ಆತ್ಮಸಂಯಮನ ವೃತ್ತಿಯನ್ನು ಬೆಳೆಯಿಸಿಕೊಳ್ಳಬೇಕು. ಆ ಮೇಲೆ ವಿದ್ಯಾರ್ಥಿಗಳು ತಮ್ಮಷ್ಟಕ್ಕೆ ತಾವೇ ಹಾದಿಗೆ ಬರುವರು. ಇಲ್ಲವೆ ತಾವು ಎಬ್ಬಿಸಿದ ಭೂತವು ತಮ್ಮನ್ನೇ ತಿನ್ನಲು ಬರುವದು ಎಂಬುವದನ್ನು ಲೋಕನಾಯಕರು ಮರೆಯಬಾರದು. ಹೈದರಾಬಾದದಲ್ಲಿ ಮುಲ್ಕೀವಾದವು ತಲೆಯೆತ್ತಿ ಕೆಲವು ವಿದ್ಯಾರ್ಥಿಗಳ ಪ್ರಾಣವನ್ನು ನುಂಗಿಬಿಟ್ಟಿತು. 'ಮುಲ್ಕೀ' ವಾದದ ಪ್ರೇರಕರು ಸೂತ್ರ ಜಗ್ಗಿ ಹಿಂದೆ ಮರೆಗೆ ನಿಂತರು. ಭಾರತದಲ್ಲಿ ಇಂಥ ಅನರ್ಥಗಳು ಎಷ್ಟೋ ಆಗಿವೆ. ಇನ್ನೂ ಆಗುತ್ತಲಿವೆ. ಸಂಯುಕ್ತ ಮಹಾರಾಷ್ಟ್ರ, ಮಹಾಗುಜರಾಥ ಈ ಚಳವಳಿಗಳಲ್ಲಿ ವಿದ್ಯಾರ್ಥಿಗಳ ಅಂಗವೇ ಹೆಚ್ಚಾಗಿದೆ. 'ಸತ್ಯಾಗ್ರಹ' ವಾದರೂ ವಿದ್ಯಾರ್ಥಿಗಳ ಬೇಶಿಸ್ತಿಗೆ ಪ್ರಚಂಡವಾದ ಕಾರಣವಾಗಿದೆ; ಸತ್ಯಾಗ್ರಹದ ಅರ್ಥವೇ ಅವರಿಗಾಗಿಲ್ಲ. ಸತ್ಯವಿದ್ದರೆ ಆಗ್ರಹಕ್ಕೆ ಬೆಲೆಯಿದೆ; ಅಸತ್ಯವಿದ್ದಲ್ಲಿ ಆಗ್ರಹಕ್ಕೆ ಸ್ಥಾನವೂ ಇಲ್ಲ; ಮಾನವೂ ಇಲ್ಲ. ಸತ್ಯಾಗ್ರಹ ಸಂಪು ಮಾಡಲಿಕ್ಕೆ ಕಲಿಸಿದವರು ಲೋಕನಾಯಕರೆಂದೆನಿಸಿಕೊಂಡವರೇ! ಅನ್ಯಾಯವಿರಲಿ, ಇಲ್ಲದಿರಲಿ, ಸತ್ಯವಿರಲಿ ಅಸತ್ಯವಿರಲಿ ಸಂಪು ಹೂಡಲು ವಿದ್ಯಾರ್ಥಿಗಳಿಗೆ ಉಪದೇಶ ಮಾಡುವರು. ಇದರ ಪರಿಣಾಮವು ಬಹಳ ಘಾತಕವಾಗುವದು. ಸಮಾಜವು ಉಧ್ವಸ್ತವಾಗುವದು. ದೇಶವು ಹಾಳಾಗಿ ಹುಡಿಗೂಡುವ ಪ್ರಸಂಗವು ಬರುವದು.

### ಮಾತಿನಲ್ಲೂ ಮಿತಿ ಬೇಕು

ವಿದ್ಯಾರ್ಥಿಗಳ ಉಚ್ಛೃಂಖಲವೃತ್ತಿಯು ನಿಲ್ಲಬೇಕಾದರೆ ಲೋಕನಾಯಕರೂ ತಾಯಿತಂದೆಗಳೂ ಶಿಕ್ಷಕರೂ ಪ್ರಾಧ್ಯಾಪಕರೂ ಮಾತಿನಲ್ಲಿ ಮಿತಿಯುಳ್ಳವರಾಗಬೇಕು. ಕೃತಿಯಲ್ಲಿ ದಕ್ಷರಾಗಬೇಕು. ಮಾತು ಒಂದು ಅದ್ಭುತ ಶಕ್ತಿ. ಮಾತಿನ ತಿರುಳು ತಿಳಿದರೆ ಗೊತ್ತುಗುರಿಗಳ ಅರಿಕೆಯಾದರೆ, ಮೂರು ಜಗತ್ತನ್ನು ಗೆಲ್ಲಬಹುದು; ಶಾಂತಿಯ ಸಾಮ್ರಾಜ್ಯವನ್ನು ನಿಲ್ಲಿಸಬಹುದು. ಮಾತಿನಲ್ಲಿ ಇಹಪರಗಳು ನೆಲೆಸಿರುವವು. ಮಾತಿನ ಕಡಲನ್ನು ಮಥಿಸಿದಲ್ಲಿ ಅಮೃತವೂ ಹುಟ್ಟಬಹುದು. ಹಾಲಾಹಲವೂ ಏಳಬಹುದು. ಆದರೆ ಅದರ ಮುಖ್ಯ ಶಕ್ತಿಯು ಅಮೃತದಲ್ಲಿರುವದು. 'ಸತ್ಯದಾ ನುಡಿ ತೀರ್ಥ। ನಿತ್ಯದಾ ನಡೆ ತೀರ್ಥ। ಉತ್ತಮರ ಸಂಗವದು ತೀರ್ಥ ಹರಿವ ನೀ। ರೆತ್ತಣದ ತೀರ್ಥ ಸರ್ವಜ್ಞ' ಎಂದು ಸರ್ವಜ್ಞನು ಸತ್ಯದ ನುಡಿಯ ಮೇಲ್ಮೆಯನ್ನು ಮನಸೋಕ್ತ ಹೊಗಳಿದ್ದಾನೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. "ಮಾತು ಬಲ್ಲವನಿಗೆ ಕೈಲಾಸ ನೆರೆಮನೆಯಕ್ಕು" ಭಗವದ್ಗೀತೆಯಲ್ಲಿ ವಾಙ್ಮಯ ತಪವು ಎದ್ದಾಗಿ ಮುದ್ದಾಗಿ ನಿರೂಪಿಸಲ್ಪಟ್ಟಿದೆ.

अनुद्वेग करं वाक्यं सत्यं प्रियहितं च यत् ।
स्वाध्यायाभ्यसनं चैव वाङ्मयं तप उच्यते ॥

ಮಾತು ಮನಸ್ಸನ್ನು ನೋಯಿಸಬಾರದು; ಮಾತಿನಲ್ಲಿ ಸತ್ಯವಿರಬೇಕು; ಮಾತು ಪ್ರಿಯವಾದುದೂ ಹಿತವಾದುದೂ ಇರಬೇಕು; ಜ್ಞಾನಸಂಪಾದನೆಯ ಕಾರ್ಯವು ಅವ್ಯಾಹತವಾಗಿ ನಡೆಯಬೇಕು. ಅಂದರೆ ವಾಙ್ಮಯ ತಪವಾಗುವದು. ಮಾತಿನಂತೆ ಕೃತಿ ಇರಬೇಕು. ಇದರ ವಿಷಯದಲ್ಲಿಯೂ ಸರ್ವಜ್ಞನು ಸೀಮಾವಾಕ್ಯವನ್ನೆ ಬರೆದಿರುವನು.

### ಸರ್ವಜ್ಞನ ಎಚ್ಚರಿಕೆ

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ।
ಹಿಡಿದಿದ್ದ ಲಿಂಗ ಹೊಡಮರಳಿ ಕಚ್ಚುವ।
ಹೆಡೆನಾಗ ನೋಡ ಸರ್ವಜ್ಞ॥

ಇದು ಎಲ್ಲ ಲೋಕನಾಯಕರಿಗೂ ಸಮಾಜದಲ್ಲಿಯ ಪ್ರತಿಷ್ಠಿತರಿಗೂ ಅನ್ವಯಿಸುವದು. ಇನ್ನೊಂದು ಬೇಶಿಸ್ತಿನ ಕಾರಣವೆಂದರೆ ವಿದ್ಯಾರ್ಥಿಗಳ ಮುಂದೆ ಭವಿತವ್ಯದ ಭೂತವು ನಿಂತಿದೆ. ಮುಂದೆ ಅವರಿಗೆ ಅಂಧಃಕಾರವೇ ತೋರುತ್ತಿದೆ. ಹೊಟ್ಟೆಯ ಚಿಂತೆ, ಬಟ್ಟೆಯ ಚಿಂತೆ, ಆಸರದ ಚಿಂತೆ. ಜ್ಯೋತಿಯೇ ಕಾಣುವದಿಲ್ಲ. ಆದ್ದರಿಂದ ನಿರಾಶರಾಗಿ ತರುಣ ವಿದ್ಯಾರ್ಥಿಗಳು ದಾರಿ ಸಿಕ್ಕತ್ತ ಯಾತರ ಪರಿವೆಯಿಲ್ಲದೆ ಓಡುವರು. ಎಲ್ಲೆಲ್ಲಿಯೂ ಭಯಾನಕ ದೃಶ್ಯವೇ ದೃಶ್ಯ. ಆದ್ದರಿಂದ ನಮಗೆ ಬೇಕಾದ ಲೋಕನಾಯಕರು "ದಿಲೀಪನಂಥ" ರಾಜ್ಯಾಶ್ರಮ ಮುನಿಗಳು. ಆದರೆ ಈಗಿನಂಥ ಸಮಾಜದಲ್ಲಿ ವಿತುಷ್ಟಿಯನ್ನೂ ಅಧರ್ಮವನ್ನೂ ಜಾತಿದ್ವೇಷವನ್ನೂ ವರ್ಗಕಲಹವನ್ನೂ ಹುಟ್ಟಿಸಿ ಹಬ್ಬಿಸುವ ಸ್ವಾರ್ಥಸಾಧುಗಳೂ ಪ್ರಜಾಭಕ್ಷಕರೂ ಡಾಂಭಿಕರೂ ಆದ ಲೋಕನಾಯಕರು ಬೇಡ. "यथा राजा तथा प्रजा" ಆಳುವವರಲ್ಲಿ ತಾಳವಿಲ್ಲ; ವಿದ್ಯಾರ್ಥಿಗಳಲ್ಲಿ ಬರುವದೆಂತು?

---

### ಶೀಲ ಸೂತ್ರಗಳು

(೧) ನನ್ನ ನಡತೆ ಮಾನವಸಹಜವಾದುದೋ ಅಥವಾ ಪಶುಗಳಿಗೆ ತಕ್ಕ ಹಾದಿ ಹಿಡಿದಿದೆಯೋ ಎಂದು ಪ್ರತಿಯೊಬ್ಬನೂ ಪ್ರತಿದಿನವೂ ತನ್ನ ನಡತೆಯನ್ನು ವಿಮರ್ಶಿಸಿಕೊಳ್ಳಬೇಕು.

(೨) ಸಜ್ಜನರೊಡನೆ ಕುಳಿತುಕೊ; ಸಜ್ಜನರೊಡನೆ ಮಾತುಕತೆ ನಡೆಸು; ಸಜ್ಜನರ ಗೆಳೆತನ ಬೆಳೆಸು; ದುರ್ಜನರ ಸಂಬಂಧವನ್ನೇ ಇಟ್ಟುಕೊಳ್ಳಬೇಡ.




## ಆಧುನಿಕ ವಿಶ್ವಾಮಿತ್ರ

ಪುರಾಣಕಾಲದ ಕತೆಯೊಂದಿದೆ. ಭಯಾನಕ ಬರಗಾಲ ಬಂದೊದಗಿದಾಗ ಗಾಯತ್ರೀಮಂತ್ರದ ದೃಷ್ಟಾರ ವಿಶ್ವಾಮಿತ್ರ ಹಸಿವೆಯಿಂದ ಬಳಲಿ ಬೆಂಡಾಗಿ ಕಂಗಾಲನಾಗಿ ಸತ್ತುಬಿದ್ದ ನಾಯಿಯ ಮಾಂಸವನ್ನು ತಿಂದನೆಂಬ ಕತೆಯನ್ನು ಕೇಳಿದ್ದೇವೆ. ಎಷ್ಟೋಜನ ಸುಧಾರಕರು ನಂಬದಿದ್ದರೂ ಅಂಥ ಪರಿಸ್ಥಿತಿ ಬಂದಾಗ ಇಂಥ ಘಟನೆಗಳು ಅವಾಸ್ತವವೆನಿಸಲಾರವು. ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಇಂಥದೇ ಒಂದು ಘಟನೆ ನಡೆಯಿತು.

೧೯೪೩ರ ಜೂನ ಜುಲೈ ತಿಂಗಳ ಸುಮಾರಿನ ಕಾಲ. ಬರ್ಮಾದೇಶ ಆಗಲೇ ಜಪಾನಿಗಳ ವಶವಾಗಿ ಹೋಗಿತ್ತು. ಅದನ್ನು ಮರಳಿ ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಮಿತ್ರರಾಷ್ಟ್ರಗಳು ಹಂಬಲಿಸುತ್ತಲಿದ್ದವು. ಶತ್ರುಆಕ್ರಮಿತ ಪ್ರದೇಶದಲ್ಲಿ ಗೌಪ್ಯವಾಗಿ ಪ್ರವೇಶಿಸಿ ಕೆಲವು ಆಯಕಟ್ಟಿನ ಸ್ಥಳಗಳನ್ನು (ರೈಲು ಸೇತುವೆ ಮುಂ.) ಹಾಳುಗೆಡವಿ ಶತ್ರುಗಳ ಶಕ್ತಿಯನ್ನು ಕ್ಷೀಣಗೊಳಿಸಿ ನಂತರ ಸೈನಿಕ ದಾಳಿಯನ್ನು ಪ್ರಾರಂಭಿಸುವದು ಆಧುನಿಕ ಯುದ್ಧದ ರೀತಿಯಾಗಿದೆ. ಬ್ರಿಗೇಡಿಯರ ವಿಂಗೈಟ ಇವರು ಮೇಜರ ಫರ್ಗ್ಯುಸನ್ ಇವರ ನೇತೃತ್ವದಲ್ಲಿ ಒಂದು ಸೈನ್ಯಪಡೆಯನ್ನು ಇಂಥ ಕೆಲಸಕ್ಕಾಗಿ ನಿರ್ಮಿಸಿದರು. ಈ ಪಡೆಯಲ್ಲಿ ೯ ಜನ ಬಿಳಿಯ ಅಧಿಕಾರಿಗಳು ೮೦-೯೦ ಭಾರತೀಯ ಸೈನಿಕರು (ಹೆಚ್ಚಾಗಿ ಗುರ್ಖಾ ಸೈನಿಕರೇ) ಮತ್ತು ೩೦-೪೦ ಬಿಳಿಯ ಸೈನಿಕರು ಇದ್ದರು. ಈ ಪಡೆ ತನ್ನ ಜತೆಯಲ್ಲಿ ವಾಯರ್ಲೆಸ್ ಸೆಟ್, ಗ್ರೇನೇಡ್ಸ ಗುಂಡು, ಮದ್ದು, ನಕಾಶೆಗಳು ಮತ್ತು ಔಷಧಿಯನೆಮಾ ಮುಂತಾದವುಗಳನ್ನು ತೆಗೆದುಕೊಂಡು "ಇಂಫಾಲ"ನ್ನು ಬಿಟ್ಟು ಬರ್ಮಾ ಗಡಿಯನ್ನು ಪ್ರವೇಶಿಸಿತು. ತಮ್ಮ ಜತೆಯಲ್ಲಿ ಕೆಲವು ಹೇಸರುಗತ್ತೆಗಳನ್ನೂ ಕರೆದೊಯ್ದರು. ಹೇಸರುಗತ್ತೆಗಳ ಸಹಾಯ ಅನಿವಾರ್ಯವಾಗಿತ್ತು. ಏಕೆಂದರೆ ಈ ಪಡೆಗೆ ಸರಿಯಾದ ದಾರಿಯಿಂದ ಮಾರ್ಗ ಕ್ರಮಿಸುವದು ಸಾಧ್ಯವಿರಲಿಲ್ಲ. ಏಕೆಂದರೆ ಅಂಥ ದಾರಿಗಳಲ್ಲೆಲ್ಲ ಶತ್ರುದಳದ ಸೈನಿಕರು ಸರ್ಪಕಾವಲವನ್ನಿರಿಸಿದ್ದರು. ಅಂದಮೇಲೆ ಅಡ್ಡಹಾದಿಯಿಂದಲೇ, ಅದಷ್ಟು ಅಡವಿಯೊಳಗಿಂದ ಅದೂ ಕತ್ತಲಾದ ಮೇಲೆಯೇ ಮುನ್ನಡೆಯಬೇಕು. ಜತೆಯಲ್ಲಿ ಸಾಕಷ್ಟು ಸಾಮಾನುಗಳನ್ನು ಒಯ್ಯಬೇಕಾಗಿರುವದರಿಂದ ಹೇಸರುಗತ್ತೆಗಳ ಸಹಾಯ ಬೇಕೇ ಬೇಕಾಗುತ್ತದೆ. ಹೀಗೆ ಸಕಲ ಸನ್ನದ್ಧವಾಗಿ ಈ ಪಡೆ ಇಂಫಾಲ ಊರನ್ನು ಬಿಟ್ಟು ಬರ್ಮಾ ಗಡಿಯನ್ನು ಪ್ರವೇಶಿಸಿತು.

ಬರ್ಮಾದಲ್ಲಿ ಕೆಲವು ಅಂತರವನ್ನು ಕ್ರಮಿಸಿದ ನಂತರ ಚಿಂದ್ವಿನ್ ಹೊಳೆಯನ್ನು ಬಹುಪ್ರಯಾಸದಿಂದ ದಾಟಿ ಅಡವಿಯೊಳಗಿಂದಲೇ ಕತ್ತಲಲ್ಲಿಯೇ ನಡೆದು ತಾಂಗ್ಮಾವ್-ಪಿನಲೆಬು, ತಾತ್ತಾವಿನ್ ಮೊದಲಾದ ಊರನ್ನು ಜಪಾನಿಸೈನಿಕರಿಲ್ಲದ ವೇಳೆ ಸಾಧಿಸಿ, ಸಂದರ್ಶಿಸಿತು. ನಂತರ ತಿಗ್ಯಾಂಗ್ ಹತ್ತಿರ ಇರಾವತಿ ಮಹಾಹೊಳೆಯನ್ನು ಸಾಹಸದಿಂದ ದಾಟ, ನಿರ್ದಿಷ್ಟ ಪಡಿಸಿದ ರೈಲು ಸೇತುವೆಯನ್ನು ಹಾಳುಗೆಡವಿದರು. ಈ ವರೆಗೆ ಇವರ ಆಹಾರದ ವಿಷಯವಾಗಿ ಏನು ಎಂಬ ಪ್ರಶ್ನೆ? ಗಡಿಪ್ರವೇಶದ ಮುಂಚೆ ೫-೬ ದಿನಗಳ ರೇಶನ್ ತೆಗೆದುಕೊಂಡೇ ಪಡೆಯು ಹೊರಟಿತ್ತು. ಆ ಆಹಾರ ಮುಗಿದಾಕ್ಷಣ ಇಂಫಾಲದ ಹೆಡ್ ಕ್ವಾರ್ಟರಿಗೆ ಇಂಥಿಂಥ ಸ್ಥಳದಲ್ಲಿ ಮ್ಯಾಪ್ ರೆಫರನ್ಸ ನಂಬರ ಕೊಟ್ಟು ಅಲ್ಲಿ ರೇಶನ್ ಒಗೆಯಲು ವಿನಂತಿಸಿಕೊಳ್ಳಲಾಗುತ್ತಿತ್ತು. ಕತ್ತಲಲ್ಲಿ ಸರಿಯಾದ ಸ್ಥಳದಲ್ಲಿ ಆರ್. ಎ. ಎಫ್. ಅಥವಾ ಐ. ಎ. ಎಫ್. ವಿಮಾನಗಳು ಪ್ಯಾರಾಚೂಟಗಳಿಗೆ ರೇಶನ್ ಡಬ್ಬಿಗಳನ್ನು ಕಟ್ಟಿ ಚೆಲ್ಲಿಬಿಡುತ್ತಿದ್ದರು. ಆ ಡಬ್ಬಿಗಳಲ್ಲಿರುವದು ಡ್ರಾಯ್ ರೇಶನ್. ಅಂದರೆ ಹಣ್ಣಿನ ರಸದ ಡಬ್ಬಿಗಳು. ಚಾಕಲೇಟ, ಬಿಸ್ಕಿಟ್ಟುಗಳು, ಹಜಾಮತಿ ಸೆಟ್ಟು, ಟೀಜರವ್ ಬಾಟಲಿಗಳು, ವ್ಹಿಟಾಮಿನ್ ಗುಳಿಗೆಗಳು, ಕೆಲವೊಂದು ಕಾದಂಬರಿಗಳು, ಮಾಸಪತ್ರಿಕೆಗಳು ಇತ್ಯಾದಿ. ಒಂದೊಂದು ಸಲ ಬೆಳ್ಳೀರೂಪಾಯಿಗಳ ಚೀಲ (ಏಕೆಂದರೆ ಹಳ್ಳಿಯಲ್ಲಿ ಏನಾದರೂ ಖರೀದಿ ಮಾಡುವ ಪ್ರಸಂಗ ಬಿದ್ದರೆ ಇರಲೆಂದು. ನೋಟುಗಳಿಗೆ ಯಾರೂ ಬೆಲೆಯನ್ನೇ ಕೊಡುತ್ತಿರಲಿಲ್ಲ) ರೇಶನ್ ಡಬ್ಬಿಗಳು ಬಿದ್ದ ಸ್ಥಳಕ್ಕೆ ಹೋಗಿ ಅವುಗಳನ್ನು ಕೂಡಿಸಿಕೊಂಡು ಮುಂದಕ್ಕೆ ಪ್ರಯಾಣ ಬೆಳೆಸುತ್ತಿದ್ದರು. ಒಂದು ಸಲ ವೈಮಾನಿಕನ ತಪ್ಪಿನಿಂದ ಈ ಡಬ್ಬಿಗಳು ಶತ್ರುಸೈನಿಕರಿದ್ದ ಸ್ಥಳದ ಹತ್ತಿರವೇ ಬಿದ್ದು ಬಿಟ್ಟಿದ್ದವು. ಅವುಗಳನ್ನು ಆರಿಸಿಕೊಂಡು ಬರಲು ನಿಯುಕ್ತನಾದ ಅಧಿಕಾರಿಯೂ ಕೊಂಚ ಬೇಜವಾಬುದಾರನಾಗಿ ವರ್ತಿಸುದುದರ ಮೂಲಕ ಅವು ಶತ್ರುಸೈನಿಕರ ವಶವಾಗಿ ಹೋದವು. ಇದರಿಂದ ಗೌಪ್ಯಸ್ಫೋಟವಾಗಿ ಶತ್ರುಗಳು ಈ ದಳದ ಬೆನ್ನುಹತ್ತುವಂತಾಯಿತು.

ಅವರು ಅವನ್ನು ಚೆನ್ನಾಗಿ ಪರಿಶೀಲಿಸಿ ಅದರಲ್ಲಿದ್ದ ಮಾಸಪತ್ರಿಕೆಗಳ ಭಾಷೆಯಿಂದ ಈ ಗೌಪ್ಯದಳದಲ್ಲಿ ಅಂಗ್ಲರೂ ಭಾರತೀಯ ಸೈನಿಕರೂ ಇರಲೇಬೇಕೆಂದು ಖಚಿತಪಡಿಸಿಕೊಂಡರು. ಇದರ ಮೇಲಿಂದ, ಒಂದು ಪಡೆ, ಕಳ್ಳತನದಿಂದ ಒಳಗೆ ಪ್ರವೇಶ ಮಾಡಿದೆ ಎಂಬ ಮಾತಂತೂ ಅವರಿಗೆ ಖಾತ್ರಿಯಾಯಿತು. ಆದರೆ ಅಡವಿಯಲ್ಲಿ ಹುಡುಕುವ ಬಗೆ ಹೇಗೆ? ಅಂತೂ ಮರುದಿನ ಜಪಾನೀ ವಿಮಾನ ಆ ಅಡವಿಯಲ್ಲಿ ೮—೧೦ ಕಡೆ ಕರಪತ್ರಗಳನ್ನು ಚೆಲ್ಲಿ ಹೋಯಿತು. ಆ ಕರಪತ್ರ ಇಂಗ್ಲೀಷ

ಮತ್ತು ಉರ್ದುವಿನಲ್ಲಿ ಛಾಪಿಸಲಾಗಿತ್ತು. ಆ ಇಂಗ್ಲೀಷ ಕರಪತ್ರದ ನಮೂನೆಯನ್ನು ಅವಗಾಹನೆಗಾಗಿ ಕೆಳಗೆ ಕೊಡಲಾಗಿದೆ.

"To

The pitiable Anglo-Indian Soldiery,

"Your forces have been utterly destroyed in the battle of 3rd March 1943 and not a man has been able to recross the Chindwin. The powerful Imperial Army of Nippon* is all around you, and you cannot possibly escape. Do not again trust your brutal and selfish British officers, who will leave you to starve in the jungles as they did last year. Come to the nearest Nippon Soldier with this leaflet in your hand and he will treat you well."

(ಕರುಣಾಜನಕ ಸ್ಥಿತಿಯಲ್ಲಿದ್ದ ಆಂಗ್ಲ ಹಾಗೂ ಭಾರತೀಯ ಸೈನಿಕರೇ!

೧೯೪೩ ರ ಮಾರ್ಚ ಮೂರನೇ ದಿನಾಂಕ ನಡೆದ ಕಾಳಗದಲ್ಲಿ ನಿಮ್ಮ ಸೈನ್ಯಪಡೆಗಳು ಸೋತು ನುಚ್ಚುನೂರಾಗಿ ಹೋಗಿವೆ. ಒಬ್ಬನಾದರೂ ಸೈನಿಕ ಚಿಂದ್ವಿನ ನದಿಯನ್ನು ಮರಳಿ ದಾಟಲು ಸಮರ್ಥನಾಗಿಲ್ಲ. ನಿಪ್ಪೋನ ದೇಶದ ಬಲಾಢ್ಯ ಸೈನಿಕರು ನಿಮ್ಮ ಸುತ್ತಲೂ ಪಸರಿಸಿದ್ದಾರೆ. ನೀವು ಇಲ್ಲಿಂದ ಪಾರಾಗಿ ಹೋಗುವದು ಬಹುಶಃ ಸಾಧ್ಯವಿಲ್ಲ. ಕ್ರೂರ ಮತ್ತು ಸ್ವಾರ್ಥಿಗಳಾದಂಥ ಇಂಗ್ಲೀಷ ಅಧಿಕಾರಿಗಳನ್ನು ಈಗಲಾದರೂ ನಂಬಬೇಡಿರಿ. ಆದಕಾರಣ ಈ ಕರಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಹೊರಗೆ ಬಂದು ಹತ್ತಿರವಿದ್ದ ಯಾವುದೇ ಜಪಾನೀ ಸೈನಿಕನಿಗೆ ಶರಣು ಬರಬೇಕು. ಆತನು ನಿಮ್ಮನ್ನು ಒಳ್ಳೆಯ ರೀತಿಯಿಂದ ನಡೆಸಿಕೊಳ್ಳುವನು.)

ಕೆಲ ದಿನಗಳ ನಂತರ ರೈಲು ಸೇತುವೆ ಹಾಳುಗೆಡವಿದ ಸುದ್ದಿಯಿಂದ ಜಪಾನಿ ಸೈನಿಕರು ಕಿಡಿಕಿಡಿಯಾದರು. ಈ ಕೆಲಸ ಮುಗಿಸಿ ಈ ಪಡೆ ಪುನಃ ಮರಳಿ ಹೋಗುವದು ಖಂಡಿತ ಎಂದು, ಜಪಾನೀ ಸೈನಿಕರು ಇರಾವತಿ ದಂಡೆಯಲ್ಲೆಲ್ಲ ಭದ್ರವಾದ ಕಾವಲನ್ನಿರಿಸಿತು. ಮೇಜರ ಫರ್ಗ್ಯುಸನ್ ಪಡೆಗೆ ಇದರ ಸುಳಿವು ಹತ್ತದೆ ಹೋಗಲಿಲ್ಲ. ಅದಕ್ಕಾಗಿ ಬಂದ ದಾರಿಯಿಂದ ಮರಳದೆ (ಅಂದರೆ ಸೀದಾ ಪಶ್ಚಿಮಕ್ಕೆ ಹೋಗದೆ) ಉತ್ತರ ದಿಕ್ಕಿನಲ್ಲಿ ಕೆಲವು ಅಂತರವನ್ನು ಕ್ರಮಿಸಿ ನಂತರ ಪಶ್ಚಿಮದ ಕಡೆಗೆ ಹೊರಳುವದೆಂದು ನಿರ್ಧರಿಸಿತು. ಈಗಾಗಲೇ ಪಡೆ ಶೋಚನೀಯ ಸ್ಥಿತಿಗೆ ಬಂದಿತ್ತು. ಉಡುಪು ಹೊಲಸಾಗಿತ್ತು. ಬೂಟ್ಸು ರಿಪೇರಿ ಮಾಡಿಸಿಕೊಳ್ಳುವ ಸ್ಥಿತಿಗೆ ಬಂದಿದ್ದವು. ಸೈನಿಕರೂ ಡ್ರಾಯರೇಶನಕ್ಕೆ ಬೇಸತ್ತಿದ್ದರು. ಹಾಕಲು ಬಟ್ಟೆ ಇಲ್ಲ. ಸೈನಿಕರ ಮೈಯಲ್ಲೆಲ್ಲ ಹೇನುಗಳು ತುಂಬಿದ್ದವು. ರಾತ್ರಿಯಲ್ಲಿ ಅಡವಿಯಲ್ಲಿಯೇ ಮಲಗಿಕೊಳ್ಳಬೇಕು: ಹೊದೆದುಕೊಂಡು ಮಲಗದಿದ್ದರೆ ಸೊಳ್ಳೆಗಳ ಕಾಟ, ಹೊದೆದುಕೊಂಡು ಮಲಗಿದರೆ ಒಳಗೆ ಹೇನುಗಳ ಕಾಟ. ಮರಳುವ ದಾರಿಯನ್ನು ಬದಲಿಸಿದುದರ ಮೂಲಕ ಈ ಪಡೆಗೆ ಮತ್ತೊಂದು ಹೊಳೆಯನ್ನು ದಾಟಬೇಕಾಯಿತು. ಆ ಹೊಳೆಯ ಹೆಸರು 'ಶೆವಲಿ'. ಆದರೆ ಅಲ್ಲಿಯೂ ಶತ್ರುಗಳ ಕಾವಲಿತ್ತು. ತಮ್ಮ ಜತೆಯಲ್ಲಿ ಒಯ್ದ ಹೇಸರುಗತ್ತೆಗಳನ್ನು ಮರಳಿ ಒಯ್ಯುವದೂ ತೊಂದರೆದಾಯಕವಾಗತೊಡಗಿತ್ತು. ಈ ಬಗ್ಗೆ ವಾಯರ್ಲೆಸ್ ಸೆಟನಿಂದ ಮಾರ್ಗದರ್ಶನಕ್ಕಾಗಿ ಕೇಳಲು ಬ್ರಿಗೇಡ ಹೆಡ್‌ಕ್ವಾರ್ಟರಿನಿಂದ ಸೂಚನೆ ಬಂದಿತು– "ಹೇಸರುಗತ್ತೆಗಳನ್ನೆಲ್ಲ ಏನೇನೂ ಸಪ್ಪಳವಿಲ್ಲದೆ ಕೊಂದುಬರಬೇಕು" ಎಂದು ಆದೇಶ ಬಂದಿತು. ತಾವು ಹಿಮ್ಮೆಟ್ಟಿ ಹೋಗುವಾಗ, ಒಯ್ಯಲು ಆಗದ ಸಾಮಾನುಗಳನ್ನು ಸರಿಯಾದ ಸ್ಥಿತಿಯಲ್ಲಿ ಬಿಟ್ಟು ಹೋಗಬಾರದೆಂಬುದು ಆಧುನಿಕ ಯುದ್ಧದ ಪದ್ಧತಿ. ಅವು ಶತ್ರುಗಳ ಕೈಗೆ ಸಿಲುಕಿ ಅದರಿಂದ ಶತ್ರುಶಕ್ತಿ ದ್ವಿಗುಣಿತವಾಗಬಾರದೆಂದು ಬ್ರಿಗೇಡ್ ಹೆಡ್ ಕ್ವಾರ್ಟರದ ಆದೇಶದ ಮೇರೆಗೆ ಹೇಸರುಗತ್ತೆಗಳನ್ನು ಒಂದೊಂದಾಗಿ ಕೊಲ್ಲುವ ಉಪಕ್ರಮ ನಡೆಯಿತು. ಅವುಗಳನ್ನು ರಾಯಫಲ್ಲಿನಿಂದ ಕೊಲ್ಲುವಂತಿರಲಿಲ್ಲ. ಸಪ್ಪಳವಾಗಬಾರದು, ರಾಯಫಲದ ಸಪ್ಪಳದಿಂದ ಶತ್ರುಗಳಿಗೆ ಇವರ ಸ್ಥಾನ ಪರಿಚಯವಾಗುತ್ತದೆ. ಇನ್ನು ಒಂದೇ ಉಪಾಯ. ಅವುಗಳ ಕುತ್ತಿಗೆಯನ್ನು ಕೊಯ್ಯುವದು. ಒಂದೆರಡು ಹೇಸರುಗತ್ತೆಗಳನ್ನು ಹಾಗೆಯೇ ಕೊಲ್ಲಲಾಯಿತು. ಆದರೆ ಅವುಗಳನ್ನು ಪ್ರೀತಿಯಿಂದ ಸಲುಹಿದ ಅಧಿಕಾರಿಯೊಬ್ಬ ಅತ್ತು ಹಾಗೆ ಕೊಲ್ಲಬಾರದೆಂದು ಪ್ರಾರ್ಥಿಸಿಕೊಂಡಾಗ ಹೊಸ ವಿಧಾನವನ್ನು ಕಂಡು ಹಿಡಿದರು. ಒಂದು ತಗ್ಗಿನಲ್ಲಿ ಒಂದೊಂದೇ ಹೇಸರುಗತ್ತೆಯನ್ನು ಕರೆದುಕೊಂಡು ಹೋಗಿ ಅಲ್ಲಿ ಪಿಸ್ತೂಲಿನಿಂದ ಕೊಲ್ಲತೊಡಗಿದರು. ಅಂತೂ ಎಲ್ಲವನ್ನೂ ಮುಗಿಸಿ ಶೇವಲಿ ನದಿಯನ್ನು ದಾಟದರು. ಶೇವಲಿ ನದಿಯನ್ನು ದಾಟಿದ ನಂತರ ಹೆಚ್ಚಿನ ಗಂಡಾಂತರ ಕಾದಿತ್ತು. ಆಹಾರದ ಪೂರಯಿಕೆ ನಿಂತಿತು. ಪೂರಯಿಕೆ ಮಾಡಬಲ್ಲಷ್ಟು ಅಂತರದ ಹೊರಗೆ ಬಂದಿತ್ತು ಈ ಪಡೆ. ಇದ್ದ ಡ್ರಾಯರೇಶನ್ ತೀರುತ್ತ ಬಂದಿತ್ತು. ಇಂಥ ಸ್ಥಿತಿಯಲ್ಲಿಯೇ ದಾಟಲು ಅಯೋಗ್ಯವಾದ ಸ್ಥಳದಲ್ಲಿ ಇರಾವತಿ ನದಿಯನ್ನು ದಾಟಬಯಸಿದರು. ಭರ್ತಿ ಮಧ್ಯರಾತ್ರಿಯ ಸಮಯದಲ್ಲಿ ಕೆಲವು ಹಳ್ಳಿಗರ ಡೋಣಿಗಳ ಆಧಾರದಿಂದ ಅರ್ಧ ಪ್ರವಾಹವನ್ನು ದಾಟಿ ಒಂದು ನಡುಗಡ್ಡೆಗೆ ಬಂದು ಮುಟ್ಟಿದರು. ಅದರ ಮುಂದಿನ ಪ್ರವಾಹ ಒಳ್ಳೆ ರಭಸದ್ದಾಗಿತ್ತು. ಹಳ್ಳಿಗರು ಅಲ್ಲಿ ಬರಲೊಪ್ಪಲಿಲ್ಲ. ಅಷ್ಟೇ ಅಲ್ಲ ತಮ್ಮ ಡೋಣಿಗಳೊಂದಿಗೆ ಕತ್ತಲಲ್ಲಿ ಮಾಯವಾದರು. ಈ ನಡುಗಡ್ಡೆಯಿಂದ ಆಚೆಯ ದಂಡೆಯು ಹತ್ತಿರವೇ ಇದ್ದಿತು. ಆದರೆ ಪ್ರವಾಹದ ಸೆಳೆತ ಬಹಳವಿದ್ದಿತು. ಆ ನೀರಿನ ಆಳ ಹೇಳಿಕೊಳ್ಳುವಷ್ಟಿರಲಿಲ್ಲ. ಎಲ್ಲರೂ ಡೋಣಿಗಳ ಸಹಾಯವಿಲ್ಲದೇ ದಾಟುವದು ಎಂದು ನಿರ್ಧರಿಸಿದರು. ದಾಟುವಾಗ ೮–೧೦ ಜನ ಸೆಳೆತಕ್ಕೆ ಕೊಚ್ಚಿಕೊಂಡು ನಡೆದರು. ಅವರೆಲ್ಲ

* ಜಪಾನಿಗಳು ತಮ್ಮ ದೇಶವನ್ನು "ನಿಪ್ಪೋನ" ಎಂತಲೇ ಕರೆಯುತ್ತಾರೆ. ನಿಪ್ಪೋನ ಎಂದರೆ ಪೂರ್ವದೇಶದ ರಾಷ್ಟ್ರ ಅಥವಾ ಸೂರ್ಯ ಮೂಡುವ ಸ್ಥಾನದಲ್ಲಿದ್ದ ದೇಶ ಎಂದು.

ಗೂರ್ಖಾರೇ ಆಗಿದ್ದರು. ಅವರನ್ನು ಉಳಿಸುವ ಗೋಜಿಗೆ ಯಾವನೂ ಹೋಗಲಿಲ್ಲ. ಹೋಗುವಂತೆಯೂ ಇರಲಿಲ್ಲ. ಅದನ್ನು ನೋಡಿ ಕೆಲ ಸೈನಿಕರು ಆ ನಡುಗಡ್ಡೆಯಲ್ಲಿಯೇ ಉಳಿದರು.* ಅಂತೂ ೭ ಜನ ಆಫೀಸರರು ೬೦-೬೫ ಜನ ಸೈನಿಕರು ಪಾರಾಗಿ ಆ ದಂಡೆಯನ್ನು ಹತ್ತಿ ಮುನ್ನಡೆದರು. ಹಿಂದೆ ಉಳಿದವರನ್ನೂ ಕೊಚ್ಚಿಕೊಂಡು ಹೋದವರನ್ನೂ ಅವರ ಪಾಡಿಗೆ ಬಿಟ್ಟು ಈ ಪಡೆ ಅಡವಿಯಲ್ಲಿಂದಲೇ ಪಶ್ಚಿಮಾಭಿಮುಖವಾಗಿ ಅಂದರೆ ಭಾರತಾಭಿಮುಖವಾಗಿ ಮಾರ್ಗ ಕ್ರಮಿಸ ತೊಡಗಿತು.

ಈ ಪಡೆ ತೀರ ಕ್ಷೀಣವಾಗಿತ್ತು. ಹಸಿವೆಯಿಂದ ಕಂಗಾಲಾಗಿದ್ದಿತು. ತಿನ್ನಲು ಆಹಾರವೇ ಇಲ್ಲ. ನಡೆಯಲು ಕಾಲುಗಳೇ ಏಳದಂತಾದವು. ಅಧಿಕಾರಿಗಳಲ್ಲಿ ಲೆಫ್ಟನಂಟ ಡಂಕನ್ ಎಂಬವರು ಒಂದು ನಾಯಿಯನ್ನು ಸಾಕಿದ್ದರು. ಆ ನಾಯಿಯ ಹೆಸರು "ಜ್ಯೂಡಿ". ಒಬ್ಬ ಅಧಿಕಾರಿಯ ಕಣ್ಣು ಈ ನಾಯಿಯ ಮೇಲೆ ಬಿದ್ದಿತು. "ಈ ನಾಯಿಯನ್ನು ಕೊಂದು ಅದರ ಮಾಂಸ ಬೇಯಿಸಿ ತಿನ್ನುವಾ" ಎಂದು ಸೂಚಿಸಿದ. ಡಂಕನ್ ಒಪ್ಪಲಿಲ್ಲ. ಮೇಲಾಗಿ ಆ ನಾಯಿಯ ಸುದೈವದಿಂದ ಅಲ್ಲಿಯೇ ಒಂದು ಕಾಡೆಮ್ಮೆ ನೀರು ಕುಡಿಯಲು ಕೊಳದ ಹತ್ತಿರ ಬಂದಿತ್ತು. ಆ ಎಮ್ಮೆಯನ್ನು ಕೊಂದು ಅದರ ಮಾಂಸ ಬೇಯಿಸಿ ತಿಂದರು. ಯುದ್ಧದ ಕಾಲದಲ್ಲಿ ನಡೆದ ಈ ಘಟನೆ ವಿಶ್ವಾಮಿತ್ರನ ಆಪದ್ಧರ್ಮದ ನೆನಪು ಮಾಡಿಕೊಡುತ್ತದೆ. ಆ ನಾಯಿಯ ಒಡೆಯ ಡಂಕನ ಮಾತ್ರ ಭಾರತದ ಗಡಿಯನ್ನು ಮುಟ್ಟುವ ಮೊದಲೇ ಶತ್ರುಗಳ ಗುಂಡಿಗಾಹುತಿಯಾದನು.

## ಜಪಾನೀ ಕವಿತೆ

ಬರ್ಮಾದಲ್ಲಿ ಕೊಲ್ಲಲ್ಪಟ್ಟ ಜಪಾನೀ ಸೈನಿಕನ ಕಿಸೆಯಲ್ಲಿ ಹಸ್ತಲಿಖಿತ (ಇಂಗ್ಲೀಷಿನಲ್ಲಿ ಬರೆದ) ಕವಿತೆಯೊಂದು ಸಿಕ್ಕಿತಂತೆ. ಅದರಲ್ಲಿ ಜಪಾನೀ ಸೈನಿಕನ ಮಹತ್ವಾಕಾಂಕ್ಷೆ ಹೇಗೆ ಮೇರೆ ಮೀರಿತ್ತೆಂಬುದು ವ್ಯಕ್ತವಾಗುತ್ತದೆ. ಆ ಕವಿತೆಯನ್ನು ನೋಡಿರಿ.

### "The Unity of the World"

With the rising sun died in
the flood of red blood,
Would that I could
unite the world.
In the Ganges river flowing
from the Himalayas
The sons of Japan are fishing
for crocodiles.
The London town swept
clear of fog
The carp are flying high,
The tower of London
and the Eiffel tower,
Are look-out towers for the
Japanese police.
Berlin today and Moscow
tomorrow
Then snowy Syberia in the
Emperor's hand
In the city of Chicago, free
from gangs
Our grandsons raise monuments
to the loyal dead.
When making waters from the
great wall of China
A rainbow appears on the
Gobi desert.
If I should die I shall gather
the devils
At the river Styx and have a
wrestling match.

## ದೇವರಿದ್ದಾನೆಯೇ ?

ಇದೂ ಒಂದು ಬರ್ಮಾ ಗಡಿಯಲ್ಲಿ ನಡೆದ ಕಾಳಗದಲ್ಲಿಯ ಘಟನೆಯೇ. ಒಬ್ಬ ಸೈನಿಕ ತುಂಬಾ ದೇವಭಕ್ತನಾಗಿದ್ದ. ವೇಳೆ ಸಿಕ್ಕಾಗಲೆಲ್ಲ ಗೀತಾಪಾರಾಯಣ ಮಾಡುತ್ತಲಿದ್ದ. ಆ ಗೀತಾ ಸಂಸ್ಕೃತದಲ್ಲಿದ್ದು ಹಿಂದೀ ಭಾಷೆಯಲ್ಲಿ ಅನುವಾದ ಮಾಡಿದ್ದಿದ್ದಿತು. ಸಟೀಕ ಗೀತಾ ಇದ್ದುದರ ಮೂಲಕ ಅದು ಬಹಳೇ ದಪ್ಪವಿದ್ದಿತು. ಈ ಸೈನಿಕ ಯಾವಾಗಲೂ ಅದನ್ನು ತನ್ನ ಎದೆಯ ಮೇಲಿದ್ದ ಜೋಬಿನಲ್ಲಿಟ್ಟುಕೊಳ್ಳುತ್ತಿದ್ದ. ಆತನ ಈ ಪಾರಾಯಣ ದಳದಲ್ಲಿಯ ಇನ್ನಿತರ ಸೈನಿಕರ ಚೇಷ್ಟೆಯ ವಿಷಯವಾಗಿತ್ತು. ಒಂದು ರಾತ್ರಿ ಸೈನಿಕರೆಲ್ಲ ಹರಟೆಯಲ್ಲಿ ಕುಳಿತಾಗ ಒಬ್ಬ ಸೈನಿಕ ಈತನನ್ನು ಚೇಷ್ಟೆಮಾಡಬೇಕೆಂದ. "ದೇವರನ್ನು ಈ ಪ್ರಕಾರವಾಗಿ ನೀನು ಭಜಿಸುತ್ತಿರುತ್ತಿ. ಎಂದಾದರೂ ನಿನಗೆ ಆತ ಕಾಣಿಸಿಕೊಂಡಿರುವನೇ ?" ಆದರೆ ಈ ಸೈನಿಕ ಅದಕ್ಕೆ ಉತ್ತರವನ್ನೇ ಕೊಡಲಿಲ್ಲ ಎಲ್ಲರೂ ನಕ್ಕರು.

ಮರುದಿನ ಈ ದಳ ಮುನ್ನಡೆಯಿತು. ೩-೪ ಮೈಲು ಹೋಗುವದರಲ್ಲಿ ಎದುರಿನಿಂದ ರಾಯಫಲ ಗುಂಡುಗಳು ಬರತೊಡಗಿದವು. ಕೆಲವರು ಮಡಿದರು, ಕೆಲವರು ಸಂರಕ್ಷಣೆಗಾಗಿ ಧಾವಿಸಿದರು. ಈ ದೇವಭಕ್ತ ಸೈನಿಕನಿಗೂ ದೂರಿನಿಂದ ಬಂದ ಒಂದು ಗುಂಡು ಎದೆಗೆ ಬಡಿಯಿತು. ಅದರಿಂದ ಆತ ನೆಲಕ್ಕೆ ಕುಸಿದುಬಿದ್ದ. ಮುಂದೆ ಮೂರು ನಾಲ್ಕು ತಾಸುಗಳನಂತರ ಎಲ್ಲವೂ "ಕ್ಲಿಅರ್" ಆದ ನಂತರ ಒಂದುಗೂಡಿಸುವ ಪರೇಡ ನಡೆಯಿತು. ಈ ಸೈನಿಕನನ್ನೂ ಸ್ಟ್ರೆಚರನಲ್ಲಿ ಹಾಕಿ ತರಲಾಯಿತು. ಆದರೆ ಎಲ್ಲರಿಗೂ ಆಶ್ಚರ್ಯವಾದುದೆಂದರೆ ಈ ಸೈನಿಕನಿಗೆ ಎಲ್ಲಿಯೂ ಘಾಯವಾಗಿರಲಿಲ್ಲ. ದೂರಿನಿಂದ ಬಂದ ಗುಂಡು ಎದೆಯಲ್ಲಿ ನಟ್ಟಿತ್ತಾದರೂ ಅಲ್ಲಿದ್ದ ಗೀತಾ ಪುಸ್ತಕದ ಕೊನೆಯ ರಟ್ಟಿನವರೆಗೆ ಆ ಗುಂಡು ಹೋಗಿತ್ತು. ಆದರೆ ಸೈನಿಕನ ದೇಹಕ್ಕೆ ಯಾವದೇ ಬಗೆಯ ಅಪಾಯವಾಗಿರಲಿಲ್ಲ. ಎಲ್ಲರೂ ದಂಗುಬಡಿದರು.

ದೇವರು ತನ್ನ ಅಸ್ತಿತ್ವವನ್ನು ಇಂಥ ಆಶ್ಚರ್ಯಕರ ಘಟನೆಗಳಿಂದ ತೋರಿಸುತ್ತಾನೆಯೇ ವಿನಾ ಸಾಕಾರ ರೂಪವನ್ನು ಪ್ರಕಟಿಸಿ ಅಲ್ಲ.

ಮುಂದೆ ಬ್ರಿಗೇಡ್ ಹೆಡ್‌ಕ್ವಾರ್ಟರಿನವರು ಒಂದು ಸರ್ಕ್ಯೂಲರ ಹೊರಡಿಸಿ ( Geeta saved

* ಉಳಿದ ಜನ ಮರುದಿನ ಬೆಳಿಗ್ಗೆ ಶತ್ರುಗಳ ಕೈಗೆ ಸಿಕ್ಕಿದ್ದು ಸೆರೆಯಾಳುಗಳಾದರಂತೆ.

the soldier ಶಿರೋನಾಮೆಯನ್ನಿರಿಸಿ)ಎಲ್ಲರಿಗೂ ಈ ಆಶ್ಚರ್ಯಕರ ಸಂಗತಿಯನ್ನು ಅರುಹಿದರು.

### ಯಶಸ್ವಿ ಸತ್ಯಾಗ್ರಹ

ಮಲಾಯಾದ ರಾಜಧಾನಿ ಕೋಲಾಲಂಪೂರಿನಲ್ಲಿ ನಡೆದ ಘಟನೆ ಇದು. ಯುದ್ಧ ಮುಗಿದು ಆದೇ ಶಾಂತಿ ನೆಲಿಸಿತ್ತು. ಯುದ್ಧೋತ್ತರ ಪುನರ್ರಚನೆಗಾಗಿ ೭ ನೇ ಇಂಡಿಯನ್ ಡಿವ್ಹಿಜನ್ ಮಲಾಯಾದ ತುಂಬೆಲ್ಲ ತಳವೂರಿತ್ತು. ನಾನು ಆಗ ೩೩ನೇ ಇಂಡಿಯನ್ ಮೊಬಾಯಿಲ ವರ್ಕಶಾಪ ಕಂಪನಿಯಲ್ಲಿದ್ದೆ. ಕೋಲಾಲಂಪೂರಿನಲ್ಲಿಯೂ ಒಂದು ವರ್ಕಶಾಪ ಕಂಪನಿಯಿದ್ದಿತು. ಅದರ ಹೆಸರು "560 Indian infantry workshop company" ಎಂದು. ಈ ವರ್ಕಶಾಪಗಳಲ್ಲಿ ದುಡಿಯುವವರೆಲ್ಲರೂ ಸೈನಿಕರೇ. ಆದರೆ ಅವರು ಕೆಲವೊಂದು ತಾಂತ್ರಿಕ ವಿದ್ಯೆಗಳಲ್ಲಿ ತರಬೇತಿ ಹೊಂದಿದವರಿರುತ್ತಾರೆ. ಈ ವರ್ಕಶಾಪ ಕೋಲಾಲಂಪೂರಿನಿಂದ ಸುಮಾರು ೨—೨॥ ಮೈಲು ದೂರ ಊರಹೊರಗೆ ಇದ್ದಿತು. ಮಲಾಯಾದ ಕಮಾಂಡರ ಇನ್ ಚೀಫರವರ ಆಫೀಸೂ ಕೋಲಾಲಂಪೂರ ಸೆಕ್ರೆಟರಿಯೇಟ ಬಿಲ್ಡಿಂಗದಲ್ಲಿ ಇದ್ದಿತು. ಆದೇ ಯುದ್ಧ ಮುಗಿದುದರಿಂದ ಮಲಾಯದಲ್ಲಿ ಇನ್ನೂ ಸಿವ್ಹಿಲ್ ಸರಕಾರ ಅಸ್ತಿತ್ವದಲ್ಲಿ ಬಂದಿರಲಿಲ್ಲ. ದೇಶದ ತುಂಬೆಲ್ಲ ಸೈನಿಕರ ಆಳಿಕೆಯೇ ಇದ್ದಿತು. ಜನರಲ್ ಮ್ಯಾರ್ಕರಾಯರು ಮಲಾಯಾದ ಮುಖ್ಯ ಸೇನಾಪತಿ ಇದ್ದರು ( ಇವರೇ ಮುಂದೆ ಪಾಕಿಸ್ತಾನದ ಮುಖ್ಯ ಸೇನಾಪತಿ ಆದರು ) ಮತ್ತು ಮೇಜರ ಜನರಲ್ ಚೌಧರಿಯವರು, ಕ್ವಾರ್ಟರ ಮಾಸ್ಟರ ಜನರಲರಾಗಿದ್ದರು. ೫೬೦ ಇನಫಂಟ್ರಿ ವರ್ಕಶಾಪಿನಲ್ಲಿ ಬಹಳಷ್ಟು ಸೈನಿಕರು ದುಡಿಯುತ್ತಿದ್ದರು. ಅದರಲ್ಲಿ ೩೫-೪೦ ಬಿಳಿಯರು ಉಳಿದವರೆಲ್ಲರೂ ಭಾರತೀಯ ಸೈನಿಕರೇ. ಒಂದು ಸಲ ವರ್ಕಶಾಪಿನಲ್ಲಿಯ ಒಂದು ಕೋಣೆಯೊಳಗಿಂದ ೨ ವಾಚುಗಳು ಕಳವಾದವು. ಆಫೀಸರ ಕಮಾಂಡಿಂಗ ಇದರಿಂದ ಸಿಟ್ಟಾಗಿ ಎಲ್ಲ ಭಾರತೀಯ ಸೈನಿಕರಿಗೆ ಸಾಮೂಹಿಕ ಶಿಕ್ಷೆಯನ್ನಿತ್ತರು C. L. ಅಂದರೆ Contfined to Lines. ಯಾವ ಸೈನಿಕನೂ ೧೫ ದಿನಗಳವರೆಗೂ ತಮ್ಮ ಠಾಣ್ಯ ಬಿಟ್ಟು ಕದಲುವಂತಿಲ್ಲ. ಆದರೆ ಈ ಪ್ರತಿಬಂಧ ಇಂಗ್ಲೀಷ ಸೈನಿಕರಿಗಾಗಿ ಇರಲಿಲ್ಲ. ಕೆಲವು ಇಂಗ್ಲೀಷ ಸೈನಿಕರೂ ಆ ಕೋಣೆಯಲ್ಲಿ ಕೆಲಸಮಾಡುತ್ತಿದ್ದರು. ಕೇವಲ ಭಾರತೀಯ ಸೈನಿಕರ ಮೇಲೆಯೇ ಸಂದೇಹವಿದೆ ಎಂದು ಈ ಶಿಕ್ಷೆಯಿಂದ ವ್ಯಕ್ತವಾಗುತ್ತಿತ್ತು. ಇದರಿಂದಾಗಿ ಭಾರತೀಯ ಸೈನಿಕರಲ್ಲಿ ಅಸಂತೋಷ ವ್ಯಾಪಿಸತೊಡಗಿತು. ಮೇಲಾಗಿ ಮಲಯಾದಲ್ಲಿಯೂ ನೇತಾಜಿ ಸುಭಾಷರ ಸಾಹಸಕಾರ್ಯದ ಕತೆಗಳನ್ನು ಕೇಳಿ ಕೇಳಿ ಈ ಭಾರತೀಯ ಸೈನಿಕರಲ್ಲಿಯೂ ಒಂದು ಹೊಸಜಾಗ್ರತಿ ಮೂಡಿತ್ತು. ಮೂರು ದಿನಗಳವರೆಗೂ ಶಿಕ್ಷೆಯನ್ನನುಭೋಗಿಸಿ ಮೂರನೇ ದಿನ ರಾತ್ರಿ ಒಂದುತಂಬೂವಿನಿಂದ ಇನ್ನೊಂದು ತಂಬೂವಿಗೆ ಗೌಪ್ಯ ಸಂದೇಶ ಸಂಚರಿಸಿತು.

ಮರುದಿನ ಮುಂಜಾನೆ ಪರೇಡ ಗ್ರಾಂಡಿನಲ್ಲಿ ನಿತ್ಯದಂತೆ ಪರೇಡಿಗಾಗಿ ಇಡೀ ಪ್ಲಾಟೂನು ಬಂದು ನಿಂತಿತು. ಹವಾಲ್ದಾರ್ ಮೇಜರ ಪರೇಡಿಗಾಗಿ ಅಜ್ಞೆಯನ್ನು ಕೊಟ್ಟ. ಎಲ್ಲರೂ ನಿಂತ ಸ್ಥಳದಲ್ಲಿಯೇ ಕುಳಿತುಬಿಟ್ಟರು. ಹವಾಲ್ದಾರ ಮೇಜರ ದಂಗುಬಡೆದು ಆಫೀಸರ ಕಮಾಂಡರವರಿಗೆ ಈ ಸುದ್ದಿಯನ್ನು ಮುಟ್ಟಿಸಿದ. ಆತ ಸಾಮ ದಾನ ಭೇದ ದಂಡಗಳ ಬಗೆಬಗೆಯ ಉಪಾಯಗಳನ್ನು ಹೂಡಿದ. ಆದರೆ ಈ ಪಡೆ ಮುಂಜಾನೆ ೭॥ ಘಂಟೆಗೆ ಕುಳಿತದ್ದು ಸಂಜೆ ೭ ಘಂಟೆಯಾದರೂ ಕದಲಲಿಲ್ಲ. ಚಹವಿಲ್ಲ—ಊಟವಿಲ್ಲ— ಬಿದ್ದ ಮಳೆಯನ್ನೂ ಸಹಿಸಿತು. ಹಾಗೆಯೇ ಶಾಂತಿ ಸತ್ಯಾಗ್ರಹವು ನಡೆಯಿತು. ಊರಲ್ಲಿಯೇ ಇರುವ ಮುಖ್ಯಸೇನಾಪತಿಗೆ ಸುದ್ದಿ ಮುಟ್ಟದರೆ ತನ್ನ ಕಾರ್ಯಕ್ಷಮತೆಗೆ ಕುಂದು ಎಂದು ಬಗೆದು ಆಫೀಸರ ಕಮಾಂಡಿಂಗ ಮೆತ್ತಗಾಗಿ ಬಂದು "I am ready to hear your grievances" ಎಂದನು.

ಅವನು ಹೀಗಂದದ್ದೇ ತಡ ಎಲ್ಲರೂ "ಜಯ ಹಿಂದ" ಎಂದು ಕೂಗಿ—ತಮಗಾದ ಅವಮಾನವನ್ನು ವಿವರಿಸಿದರು. ಆಫೀಸರ ಆ ಶಿಕ್ಷೆಯನ್ನು ಹಿಂತೆಗೆದುಕೊಂಡಿರುವದಾಗಿ ಅಲ್ಲಿಯೇ ಸಾರಿದನು.

ಸತ್ಯಾಗ್ರಹ ಯಶಸ್ವಿಯಾಯಿತು. ಎಲ್ಲರೂ ರಾತ್ರಿಯ ಊಟವನ್ನು ಮಾಡಿದರು. ನಾನು ಆ ಕಾಲಕ್ಕೆ ಮಲಾಯಾದಲ್ಲಿಯೇ ಇದ್ದೆನು. ಈ ಪ್ಲಾಟೂನಿನಲ್ಲಿ ನನ್ನೊಬ್ಬ ಗೆಳೆಯ ಇದ್ದುದರಿಂದ ಮೇಲಿಂದಮೇಲೆ ಅಲ್ಲಿಗೆ ಹೋಗುತ್ತಿದ್ದೆ. ಈ ಪ್ಲಾಟೂನಿನ ಸತ್ಯಾಗ್ರಹದಲ್ಲಿ ಧಾರವಾಡದ ಕನ್ನಡ ತರುಣ ಶ್ರೀ. ಧುಮ್ಮವಾಡ ಎಂಬವರೂ ಇದ್ದರು. ( ಅವರು ಈಗ ಗದಗು ಅಥವಾ ಮುಂಡರಗಿಯಲ್ಲಿ ವ್ಹೆಟರ್ನರಿ ಡಿಪಾರ್ಟಮೆಂಟನಲ್ಲಿದ್ದಾರೆ ಎಂದು ಕೇಳಿದ್ದೇನೆ. )

### ಭಾರತ ಸ್ವತಂತ್ರವಾಯಿತು.

ಇದು ಕೋಲಾಲಂಪೂರಿನಲ್ಲಿಯೇ ನಡೆದದ್ದು ೧೯೪೭ ರ ಎಪ್ರಿಲ ತಿಂಗಳ ಸುಮಾರು. R. I. A. S.C. (Royal and Indian Army Supply Corpse) ದ ಒಂದು M. T. Company (Mechanical Transport Company) ಇದ್ದಿತು. ಆ ಕಂಪನಿಯಲ್ಲಿ ಸುಮಾರು ೪೦—೪೫ ಟ್ರಕ್ಕುಗಳಿದ್ದವು. ಈ ಕಂಪನಿಯ ಇನ್ ಚಾರ್ಜ ಒಬ್ಬ ಸುಬೇದಾರ 'ಪವಾರ' ಎಂಬುವವರಿದ್ದರು. ಅವರೂ ಮೂಲ ಸಾತಾರೆಯವರಿದ್ದು- ಮಿಲ್ಟ್ರಿ ಸೇರಿ ೨೦ ವರುಷಗಳಾಗಿದ್ದವು. ನಾವಿಬ್ಬರೂ ಒಂದೇ ಹಡಗದೊಳಗಿಂದ ಮಲಾಯಾಕ್ಕೆ ಹೋಗಿದ್ದೆವು. ಮದ್ರಾಸದಲ್ಲಿಯೇ ನಮ್ಮಿಬ್ಬರ ಪರಿಚಯವಾಗಿತ್ತು ಮಲಾಯಾದಲ್ಲಿ ಬಂದಿಳಿದ ನಂತರ ನಾವಿಬ್ಬರೂ ಬೇರೆ ಬೇರೆ ಪ್ಲಾಟೂನಿಗೆ ಬೇರೆ ಬೇರೆ ಊರುಗಳಿಗೆ ಹೋದೆವು. ನಾನು ಒಂದು ಸಲ ಆಕಸ್ಮಾತ್ತಾಗಿ ಕ್ವೆಂಟನದಿಂದ ಕೋಲಾಲಂಪೂರಿಗೆ ಹೋಗಿದ್ದೆ. ಆಗ ಅವರು

ಅಲ್ಲಿಯೇ ಇದ್ದಾರೆಂದು ಭೆಟ್ಟಿಯಾಗಲುಹೋಗಿದ್ದೆ ಆದರೆ ಆಶ್ಚರ್ಯವೆಂದರೆ ಸುಭೇದಾರ ಪವಾರ ರನ್ನು ನಜರ-ಕೈದಿನಲ್ಲಿರಿಸಲಾಗಿತ್ತು. ಅವರ ಕೈ ಕೆಳಗಿನ ಹವಾಲ್ದಾರರನ್ನು ಪ್ರತ್ಯೇಕವಾಗಿ ಭೇಟಿ ಯಾಗಿ ಈ ಓಪನ್ ಅರೆಸ್ಟದ ಕಾರಣವನ್ನು ಕೇಳಿದೆ. ಆತ ವಿವರಿಸಿದ ಸಂಗತಿಯಿಂದ ಸಖೇದಾಶ್ಚರ್ಯ ವಾಯಿತು. ಒಂದು ರೀತಿಯಲ್ಲಿ ಹೆಮ್ಮೆಯೂ ಎನಿಸಿತು. ಊರಲ್ಲಿ ನೇತಾಜಿಯವರ ಸಾಹಸಪ್ರಸಂಗ ಗಳನ್ನು ಕೇಳಿ ಆತನಲ್ಲಿ ಒಂದು ಬಗೆಯ ಜಾಗ್ರತಿ ಯಾಗಿತ್ತು. ಭಾರತದಲ್ಲಿ ಅಧಿಕಾರ ಹಸ್ತಾಂತರದ ಬಗೆಗೆ ಬಗೆಬಗೆಯ ಸುದ್ದಿಗಳು ಅಲ್ಲಿಯ ಪತ್ರಿಕೆ ಗಳಲ್ಲಿ ಅಚ್ಚಾಗುತ್ತಿದ್ದವು. ಅಚ್ಚಾದ ವಿವರಗಳನ್ನೂ ಓದುವಷ್ಟು ಪವಾರ ಬುದ್ಧಿವಂತನಾಗಿರಲಿಲ್ಲ. ಆತನಿಗೆ ಇಂಗ್ಲೀಷ ಬರುತ್ತಿರಲಿಲ್ಲ. ಸುತ್ತುಮುತ್ತಲಿನ ಪರಿವಾರದ ಜನರ ಮಾತು, ರಾಜಕಾರಣದ ಬದಲಾವಣೆ ಇತ್ಯಾದಿಯಿಂದ ಆತನು ಭಾರತ ಸ್ವತಂತ್ರವಾಯಿತು ಎಂದೇತಿಳಿದುಕೊಂಡು, ಒಂದುದಿನ ೧೫—೨೦ ಕಾಂಗ್ರೇಸ್ ಧ್ವಜಗಳನ್ನು ತರಿಸಿ ಅವುಗಳನ್ನು ಮೋಟಾರುಗಳ ಮೇಲೇರಿಸಿ ಹಾರಿಸುತ್ತ ಮೆರವಣಿಗೆಯನ್ನು ತೆಗೆದನು. ಈ ಮೋಟಾರು ಮೆರವಣಿಗೆ ಇನ್ನೂ ಊರನ್ನು ಪ್ರವೇಶಿಸಿರಲಿಲ್ಲ. ಅಷ್ಟಕ್ಕೆ ಸುದ್ದಿ ಹತ್ತಿ ಅದನ್ನೂ ಹಿಂದಿರುಗಿಸಲಾಯಿತು. ಮತ್ತು ಸುಭೇದಾರ ಪವಾರರನ್ನು ಸೆರೆ ಹಿಡಿಯಲಾಯಿತು. ಈ ಸಂಗತಿಯನ್ನು ಕೇಳಿಕೊಂಡು ನಾನು ಪವಾರರನ್ನು ಭೇಟಿಯಾಗಲು ಪರವಾನಿಗೆಯನ್ನು ಪಡೆದುಕೊಂಡು ಅವರ ಖೋಲಿಯನ್ನು ಪ್ರವೇಶಿಸಿದೆ.

ಪವಾರ ಮಂಚದ ಮೇಲೆ ಮಲಗಿದ್ದರು. ನಾನು ಒಳಗೆ ಬಂದುದನ್ನು ನೋಡಿ ಎದ್ದು ಕುಳಿತು ಶಾಂತ ರೀತಿಯಿಂದ ಹರಟೆ ಹೊಡೆದರು. ಬೀರನ್ನು ಕುಡಿದ ನಂತರ ಪವಾರ ನನ್ನನ್ನು ಕೇಳಿದರು. "ಅಜೂನ ಹಿಂದುಸ್ತಾನ ಸ್ವತಂತ್ರ ಝಾಲಾ ನಾಹಿ ಕಾಹೋ?" ನಾನು ಅವರನ್ನು ಸಮಾಧಾನಗೊಳಿಸಿ "ಸ್ವಲ್ಪೆ ದಿನದಲ್ಲಿ ಭಾರತ ಸ್ವತಂತ್ರ ವಾಗುವದೆಂದು" ಹೇಳಿದೆ.





# ಪ್ರಾಗ್ಭಾರತೀಯ ಸಂಸ್ಕೃತಿಯ ವ್ಯಾಪ್ತಿ

ಲೇಖಕರು: ಡಾ. ಎಸ್. ಶ್ರೀಕಂಠಶಾಸ್ತ್ರಿ, ಎಂ. ಎ. ಡಿ. ಲಿಟ್.

**ಸಿಂಧು ಕೊಳ್ಳದ ಸಂಸ್ಕೃತಿಯನ್ನು ಪ್ರಾಗ್ಭಾರತೀಯ ಸಂಸ್ಕೃತಿ ಎಂದು ಕರೆಯುವದು ಸಮಂಜಸವಾದುದೆಂದು ಈಗ ಕಂಡುಬಂದಿರುವದು. ಸೌರಾಷ್ಟ್ರದ ರಂಗಪುರದ ಶೋಧನೆಯಿಂದ ಈ ಪ್ರಶ್ನೆಯ ಮೇಲೆ ಇನ್ನೂ ಹೆಚ್ಚು ಬೆಳಕು ಬಿದ್ದಿರುವದು. ಈ ಸಂಸ್ಕೃತಿ ಎಲ್ಲಿಯ ವರೆಗೆ ಹಬ್ಬಿತೆಂಬುದನ್ನು ಲೇಖಕರು ಇಲ್ಲಿ ತಿಳಿಯಪಡಿಸಿದ್ದಾರೆ.**

ಹರಪ್ಪ ಅಥವಾ ಸಿಂಧುನದಿ ಕಣಿವೆಯ ಸಂಸ್ಕೃತಿ ಎಂದು ಕರೆಯುತ್ತಿದ್ದ ಸಂಸ್ಕೃತಿಯನ್ನು ಪ್ರಾಗ್ಭಾರತೀಯ - ( ಪ್ರೋಟೋ-ಇಂಡಿಕ್ ) ಎಂದು ಕರೆಯುವದು ಸಮಂಜಸವಾಗಿದೆ ಎಂದು ಈಚೆಗೆ ನಡೆದ ಶೋಧನೆಗಳಿಂದ ವಿದಿತವಾಗಿದೆ. ಈ ಸಂಸ್ಕೃತಿಯು ಹಿಂದೆ ಊಹಿಸಿದ್ದಂತೆ ಕೇವಲ ಸಿಂಧುನದಿಯ ಪಾತ್ರದಲ್ಲಿ ಮಾತ್ರವೆ ಅಲ್ಲದೆ ಹಿಮಾಚಲದಿಂದ ವಿಂಧ್ಯದವರೆಗೂ ಪರ್ಶಿಯ ಪೂರ್ವಸರಹದ್ದಿನಿಂದ ಅಸಾಂ ವರೆಗೂ ವಿಸ್ತರಿಸಿದ್ದಿತೆಂದು ಕಂಡು ಬಂದಿದೆ. ಸುಮಾರು ಹತ್ತು ವರ್ಷಗಳಿಂದ ಈಚೆಗೆ ನಡೆದಿರುವ ಭೂಶೋಧನೆಗಳು ಈ "ಹರಪ್ಪ" ಸಂಸ್ಕೃತಿಯು ನಾಶವಾದ ಮೇಲೆ "ಆರ್ಯ"ರು ಭಾರತಕ್ಕೆ ಬರುವ ವರೆಗೂ ಇರುವ ಅಂತರದಲ್ಲಿ ಏನಾಯಿತು ಎಂಬುದನ್ನು ನಿಶ್ಚಯಿಸಲು ಪ್ರಯತ್ನಿಸಿದವು- ಹಿಮಾಲಯ ಪರ್ವತಶ್ರೇಣಿಗಳ ತಪ್ಪಲಿನ ರೂಪಾರ್, ಬಿಕಾನೇರ್, ಭೂಪಾಲ್ ಸರಹದ್ದುಗಳಲ್ಲಿರುವ ಅನೇಕ ನಿವೇಶನಗಳು, ಸೌರಾಷ್ಟ್ರದಲ್ಲಿರುವ ಸ್ಥಳಗಳು ಸಂಶೋಧಿಸಲ್ಪಟ್ಟವೆ. ಇವುಗಳ ವಿಮರ್ಶೆಯಿಂದ ಹರಪ್ಪ ಸಂಸ್ಕೃತಿಯ ವಿಷಯವಾಗಿ ಹೊಸ ಬೆಳಕು ಬಂದಿದೆಯೇ ಎಂಬುದನ್ನು ವಿವೇಚಿಸಬೇಕು.

ಭಾರತವು ಸ್ವತಂತ್ರವಾದಮೇಲೆ ಸುಮಾರು ಹತ್ತು ವರ್ಷಗಳಿಂದ ಹರಪ್ಪ ಸಂಸ್ಕೃತಿಯ ವ್ಯಾಪ್ತಿಯನ್ನು ಕಂಡುಹಿಡಿಯಲು ಭಾರತದಲ್ಲು ಪಾಕಿಸ್ತಾನದಲ್ಲು ಶೋಧನೆಗಳು ನಡೆದಿವೆ. ಭಾರತದ ಪ್ರಾಚ್ಯಶೋಧನೆ ಇಲಾಖೆಯ ಅಧಿಕಾರಿಯಾಗಿದ್ದ ಮಾರ್ಟಿಮರ್ ವ್ಹೀಲರನು ಪಾಕಿಸ್ತಾನಕ್ಕೆ ಹೋಗಿ ಮೊಹೆಂಜೊದಾರೋ ನಿವೇಶನದಲ್ಲಿ ಶೋಧನೆ ನಡಿಸಿ "ಪಾಕಿಸ್ತಾನದ ಐದುಸಾವಿರ ವರ್ಷ ಚರಿತೆ" ಎಂಬುದನ್ನು ಬರೆದನು. ಕೆಂಬ್ರಿಜ್ಜ ವಿಶ್ವವಿದ್ಯಾಲಯದ ಭಾರತದ ಚರಿತ್ರೆಯ ಪ್ರಥಮ ಸಂಪುಟಕ್ಕೆ ಅನುಬಂಧವಾಗಿ ಸಿಂಧು ಸಂಸ್ಕೃತಿಯ ಮೇಲೆ ಒಂದು ಗ್ರಂಥವನ್ನು ಪ್ರಕಟಿಸಿರುವನು. ಮಾರ್ಶಲ್ ಮುಂತಾದ ಹಿಂದಿನ ಸಂಶೋಧಕರು ಮೊಹೆಂಜೋದಾರೋ ನಿವೇಶನದಲ್ಲಿ ಮಾಡಿದ ಶೋಧನೆಗಳು ಕಾಲನಿರ್ಣಯ ಮುಂತಾದವು ತಪ್ಪೆಂದು, ನಿವೇಶನದ ಪದರಗಳ ಕಾಲವನ್ನು ಕರಾಚಿಯ ಹತ್ತರ ಇರುವ ಸಮುದ್ರಮಟ್ಟದಿಂದ ಅಳೆಯಬೇಕಾದ್ದಿತೆಂದು, ಆದುದರಿಂದ ಹರಪ್ಪ ಸಂಸ್ಕೃತಿಯನ್ನು ಕ್ರಿ. ಪೂ. ೩೫೦೦ಕ್ಕೆ ತರಬೇಕೆಂದು, ಹರಪ್ಪಸಂಸ್ಕೃತಿಯು ಸುಮೇರಿಯನ್ ಸಂಸ್ಕೃತಿಯಂತೆಯೇ ಪುರೋಹಿತ ರಾಜನನ್ನು ಹೊಂದಿದ್ದು ಪಟ್ಟಣದ ಮಧ್ಯದಲ್ಲಿದ್ದ ದಿಬ್ಬಗಳ ಮೇಲೆ ಈ ಪುರೋಹಿತರಾಜನ ಅರಮನೆ, ಮುಖ್ಯ ದೇವಾಲಯಗಳಿದ್ದವೆಂದು ಸುಮೇರಿಯನ್ನರ ಪ್ರಭಾವ ಕಂಡುಬರುವದೆಂದು ಆರ್ಯರು "ಪುರಂದರ"ರಾದುದರಿಂದ ಹರಪ್ಪ ಸಂಸ್ಕೃತಿಯನ್ನು ನಾಶಪಡಿಸಿದರೆಂದು ಸಿದ್ಧಾಂತಗಳನ್ನು ಮಾಡಿರುವನು. ೧೯೫೦ ರಲ್ಲಿ ಮೊಹೆಂಜೋದಾರೊವನ್ನು ಪುನಃ ಶೋಧಿಸಿದಾಗ ವ್ಹೀಲರ್ ಹರಪ್ಪದಲ್ಲಿ ವತ್ಸ ಅವರು ಕಂಡು ಹಿಡಿದಿದ್ದ "ಧಾನ್ಯಸಂಗ್ರಹಶಾಲೆ"ಯಂತಿದ್ದ ಕಟ್ಟಡವನ್ನು ಕಂಡು ಹಿಡಿದನು. ಮೊಹೆಂಜೋದಾರೋ ಕಟ್ಟಡವು ಎತ್ತರವಾದ ತಲವಿನ್ಯಾಸದಮೇಲೆ ಅಗಲವಾದ ಜಗಲಿ ಮಧ್ಯೇ ಸುಟ್ಟ ಇಟ್ಟಿಗೆಗಳಿಂದ ನಿರ್ಮಿತವಾಗಿದ್ದಿತು. ಧಾನ್ಯವು ಕೆಡದಂತೆ ಗಾಳಿಸಂಚಾರ ಸುಗಮವಾಗಿರಲು ನೆಲಕ್ಕೆ ಹಾಸಿದ ಮರದ ಹಲಗೆಗಳ ಮಧ್ಯೇರಂಧ್ರಗಳನ್ನು ಮಾಡಿ ಧಾನ್ಯವನ್ನು ಒಂದೆರಡು ವರ್ಷಗಳವರೆಗೂ ಕೆಡದಂತೆ ಇಟ್ಟಿರಲು ಅನುಕೂಲ ಮಾಡಲಾಗಿದ್ದಿತು. ಹರಪ್ಪ ಪಟ್ಟಣದಲ್ಲಿ ಇಂತಹ ಧಾನ್ಯಶಾಲೆ ಸುಮಾರು ೧೫೦ ಅಡಿ ಉದ್ದ ೧೦೦ ಅಡಿ ಅಗಲ ವಿಸ್ತಾರವಾಗಿದೆ. ಇದರಿಂದ ವ್ಹೀಲರ್ ಹರಪ್ಪಸಂಸ್ಕೃತಿಯಲ್ಲಿ ನಾಣ್ಯಗಳಿಲ್ಲದಿದ್ದುದರಿಂದ ಕಂದಾಯವನ್ನು ಧಾನ್ಯರೂಪವಾಗಿ ವಸೂಲಿ ಮಾಡಿ ಸಂಗ್ರಹಿಸಿ, ಗುಲಾಮರಿಂದ ಹಿಟ್ಟು ಮಾಡಿಸಿ ನಗರದ ಜನಗಳಿಗೆಲ್ಲ ಒದಗಿಸುತ್ತಿದ್ದರೆಂದು, ಶತ್ರುಗಳಿಂದ ಪಟ್ಟಣಕ್ಕೆ ಮುತ್ತಿಗೆಯಾದರೆ ಬಹಳಕಾಲದವರೆಗೂ ಶತ್ರುಗಳನ್ನು ಎದುರಿಸಲು ಆಹಾರಪದಾರ್ಥಗಳನ್ನು ಶೇಖರಿಸುತ್ತಿದ್ದರೆಂದು ಊಹಿಸಿರುವನು. ಆದುದರಿಂದ ಹರಪ್ಪಸಂಸ್ಕೃತಿಯು ಕೂಡ ಗುಲಾಮರ ಶ್ರಮದಿಂದಲೇ ಬೆಳೆಯಿತು

## ರೂಪಾರಿನ ಸಂಶೋಧನೆಗಳು

ಹಿಂದೆ ಯೋಚಿಸಿದಂತೆ ಹರಪ್ಪಸಂಸ್ಕೃತಿಗೆ ವೈಶಿಷ್ಟ್ಯವೇನೂ ಇಲ್ಲ. ಇತರ ಮೆಸೊಪೊಟೆಮಿಯನ್ ಇಜಿಪ್ಸಿಯನ್ ಸಂಸ್ಕೃತಿಗಳಂತೆಯೇ ಪುರೋಹಿತರಾಜನ ಆಳಿಕೆ ಹೊಂದಿದ್ದಿತು. ಮತ್ತು ಸುಮೇರಿಯನ್ ಈಜಿಪ್ಸಿಯನ್ ಸಂಸ್ಕೃತಿಗಳಷ್ಟು ಪ್ರಾಚೀನವೂ ಅಲ್ಲ. ಈ ಸಂಸ್ಕೃತಿಯನ್ನು ಸುಮಾರು ಕ್ರಿ, ಪೂ. ೨೦೦೦ ಅಥವಾ ೧೫೦೦ರಲ್ಲಿ ಬಂದ "ಆರ್ಯ"ರು ನಾಶಮಾಡಿದರು— ಎಂಬುದೇ ವ್ಹೀಲರನ ಅಭಿಪ್ರಾಯ. ಹರಪ್ಪಸಂಸ್ಕೃತಿಯು ಉತ್ತರದಲ್ಲಿ ರೂಪಾರ್ ದಕ್ಷಿಣದಲ್ಲಿ ಮೊಹೆಂಜೋದಾರೋ ಸೌರಾಷ್ಟ್ರಗಳ ವರೆಗೆ ವ್ಯಾಪಿಸಿದ್ದಿತೆಂದು ಮುವ್ವತ್ತು ವರ್ಷಗಳ ಹಿಂದೆಯೇ ತಿಳಿದಿದ್ದಿತು. ಈಚೆಗೆ ರೂಪಾರಿನಲ್ಲಿ ನಡೆದ ಸಂಶೋಧನೆಗಳಿಂದ ಹರಪ್ಪ ಸಂಸ್ಕೃತಿಯ ಅಂತ್ಯ ಹೇಗಾಯಿತೆಂದು ತಿಳಿಯಲು ಪ್ರಯತ್ನ ಮಾಡಲಾಯಿತು. ಅಂಭಾಲ ಜಿಲ್ಲೆಯಲ್ಲಿರುವ ರೂಪಾರಿನಲ್ಲಿ ಸುಮಾರು ಕ್ರಿಸ್ತಶಕ ಪೂರ್ವ ೨೦೦೦ ದಿಂಧ ಮಧ್ಯಕಾಲದವರೆಗೂ ಅವಿಚ್ಛಿನ್ನವಾಗಿ ಪಟ್ಟಣವು ಇದ್ದುದರಿಂದ ಹರಪ್ಪಸಂಸ್ಕೃತಿಗೂ ಅನಂತರ ಬಂದ ಸಂಸ್ಕೃತಿಗಳಿಗೂ ಇದ್ದ ಸಂಬಂಧವನ್ನು ನಿಶ್ಚಯಿಸಬಹುದೆಂಬ ಆಶೆಯಿದ್ದಿತು. ಆದರೆ ಈಗಿನ ಪ್ರಾಚ್ಯಶೋಧನೆಯ ಇಲಾಖಾ ಅಧಿಕಾರಿಗಳ ಅಭಿಪ್ರಾಯಗಳಲ್ಲಿ ಐಕಮತ್ಯವಿಲ್ಲದಿರುವದರಿಂದ ಹರಪ್ಪಸಂಸ್ಕೃತಿಯನಂತರ ಬುದ್ಧನ ವರೆಗೂ ಇದ್ದ "ಅಂಧಕಾರಯುಗ" ದ ಮೇಲೆ ಯಾವ ಸ್ಪಷ್ಟವಾದ ಬೆಳಕು ಕಂಡು ಬಂದಿಲ್ಲ.

ರೂಪಾರದಲ್ಲಿ ಮೊದಲು ನೆಲಸಿದ ನಾಗರಿಕರು ಹರಪ್ಪದವರು. ಹರಪ್ಪದಿಂದ ಶತದ್ರು ನದಿಯನ್ನನುಸರಿಸಿ ಉತ್ತರಕ್ಕೆ ಹೊರಟು ಬಹುಶಃ ಕ್ರಿ. ಪೂ. ೨೦೦೦ದಲ್ಲಿ ರೂಪಾರನ್ನು ಅಕ್ರಮಿಸಿಕೊಂಡರು. ಹಾಗೆಯೇ ಬಿಕಾನೇರಿನ ಮರುಭೂಮಿಯಲ್ಲು ಸರಸ್ವತಿ ಮತ್ತು ದೃಷದ್ವತಿ ನದೀ ಪಾತ್ರಗಳಲ್ಲು ಹರಪ್ಪ ಸಂಸ್ಕೃತಿ ಕೇಂದ್ರಗಳು ಕಂಡು ಬಂದಿವೆ. ಇವುಗಳನ್ನು ಸ್ವೀಡಿಶ್ ಮತ್ತು ಡಚ್ ಸಂಶೋಧಕರು ಗುರ್ತಿಸಿರುವರು. ಶತದ್ರುನದಿ ಪರ್ವತ ಶ್ರೇಣಿಯನ್ನು ಭೇದಿಸಿಕೊಂಡು ಬಯಲು ಭೂಮಿಗೆ ಪ್ರವೇಶಿಸುವಸ್ಥಳದಲ್ಲಿ ರೂಪಾರ ಮತ್ತು ಅದರ ಸುತ್ತುಮುತ್ತು ಇರುವ ಹರಪ್ಪ ಸಂಸ್ಕೃತಿಯ ಕುರುಹುಗಳು ಕಂಡುಬಂದಿವೆ. ಶಿವಾಲಿಕ ಪರ್ವತಗಳ ರಕ್ಷಣೆ ಇರುವದರಿಂದ ರೂಪಾರ್ ಹರಪ್ಪ ಕಾಲದಿಂದ ಭಗ್ನವಾಗದೆ ಬೆಳೆದುಕೊಂಡು ಬಂದಿತು. ಇಲ್ಲಿ ಹರಪ್ಪ ಸಂಸ್ಕೃತಿಯ ಅವಶೇಷಗಳು ಈಗ ೭೦ ಅಡಿ ಎತ್ತರವಿರುವ ದಿಬ್ಬೆಯ ಮೇಲ್ಪಟ್ಟದಿಂದ ೩೦–೫೦ ಅಡಿ ಕೆಳಗೆ ಕಂಡು

ಬಂದಿದೆ. ಹರಪ್ಪ ಸಂಸ್ಕೃತಿಗಿಂತ ಕೆಳಗೆ ಶುದ್ಧವಾದ ಮಣ್ಣು ಸಿಕ್ಕಿರುವದರಿಂದ ಇಲ್ಲಿ ಹರಪ್ಪ ಸಂಸ್ಕೃತಿಯೇ ಮೊದಲನೆಯದೆಂದು ಭಾವಿಸಬಹುದು. ಹರಪ್ಪ ಸಂಸ್ಕೃತಿಗೆ ವಿಶಿಷ್ಟವಾದ ಕುಂಭಗಳು ಕಂಚುಪಾತ್ರೆಗಳು ಮಣಿಬಳೆಗಳು, ಒಂದೇ ಒಂದು ಹರಪ್ಪ ಅಕ್ಷರಗಳನ್ನುಳ್ಳ ಮುದ್ರಿಕೆಯು ಸಿಕ್ಕಿವೆ. ಹರಪ್ಪ ಜನರು ರೂಪಾರಿಗೆ ಬಂದ ಕೂಡಲೆ ಒಣಗಿಸಿದ ಇಟ್ಟಿಗೆ ನದಿಯ ಕಂಕರಕಲ್ಲುಗಳಿಂದ ಮನೆಗಳನ್ನು ಕಟ್ಟಿಕೊಂಡರು. ಅನಂತರ ಸುಟ್ಟ ಇಟ್ಟಿಗೆಗಳನ್ನು ಉಪಯೋಗಿಸಿದರು. ಸುಮಾರು ನಾಲ್ಕು ಪದರಗಳಾದರೂ ಹರಪ್ಪ ಸಂಸ್ಕೃತಿಗೆ ಸೇರಿವೆ. ನಾಲ್ಕು ಸಲವಾದರೂ ಹರಪ್ಪ ಜನರು ಈ ಪಟ್ಟಣವನ್ನು ಪುನಃ ಪುನಃ ನಿರ್ಮಿಸಿದಂತೆ ಕಂಡು ಬರುತ್ತದೆ. ಈ ಪಟ್ಟಣವನ್ನು ಹರಪ್ಪ ಜನರು ಕ್ರಿ. ಪೂ. ೧೫೦೦ ರಲ್ಲಿ ತ್ಯಜಿಸಿದರು. ಏಕೆ ಎಂಬುದನ್ನು ಹೇಳಲು ಕಷ್ಟ. ಬಹಳ ಕಾಲದವರೆಗೂ ಈ ನಿವೇಶನ ಖಾಲಿಯಾಗಿದ್ದಿತು. ಅನಂತರ ಬಂದ ಜನರು ಬೇರೆ ಜಾತಿಯವರಾಗಿದ್ದರು. ಇವರು ಬೂದು ಬಣ್ಣದ ಕಪ್ಪು ಚಿತ್ರಗಳನ್ನು ಬರೆದ ಕುಂಭಗಳನ್ನು ಉಪಯೋಗಿಸುತ್ತಿದ್ದರು. ಮತ್ತಾವ ಆಧಾರವಿಲ್ಲದಿದ್ದರೂ ಇವರು ಆರ್ಯರೆಂದು ಊಹಿಸಲಾಗಿದೆ. ಆದರೆ ಇವರು ನಿರ್ಮಿಸಿದ ಕಟ್ಟಡಗಳ ಅವಶೇಷಗಳೇ ಸಿಕ್ಕಿಲ್ಲವಾದ್ದರಿಂದ ಎಂತಹ ಮನೆಗಳನು ಕಟ್ಟಿದರು ಎಂದು ಹೇಳುವದು ಕಷ್ಟ. ಈ ಜನರೇ ಕ್ರಿ. ಪೂ. ೭೦೦ ವರೆಗೂ ಎಂದರೆ "ಅಂಧಕಾರ ಯುಗ"ದಲ್ಲಿ ಇದ್ದರು. ಅನಂತರ ಸ್ವಲ್ಪ ಕಾಲ ರೂಪಾರ ತ್ಯಜಿಸಲ್ಪಟ್ಟಿತು. ಸು ಕ್ರಿ.ಪೂ. ೬೦೦ ರಲ್ಲಿ ರೂಪಾರನ್ನು ಪುನಃ ಯಾರೋ ಆಕ್ರಮಿಸಿಕೊಂಡರು. ಉತ್ತರದ ಹೊಳಪು ಕೊಟ್ಟ ಕಪ್ಪು ಕುಂಭಗಳನ್ನು ಉಪಯೋಗಿಸುತ್ತಿದ್ದರು. ಕಂಚು ಮತ್ತು ಕಬ್ಬಿಣವನ್ನು ಉಪಯೋಗಿಸುತ್ತಿದ್ದರು. ರೂಪಾರದಲ್ಲಿ ಅವಿಚ್ಛಿನ್ನವಾದ ಸಂಸ್ಕೃತಿ ಪರಂಪರೆ ಸಿಕ್ಕಿದೆ ಎಂಬುದು ತಪ್ಪು. ಇದರಿಂದ 'ಆರ್ಯ' ಸಮಸ್ಯೆಗೆ ಯಾವ ಸಹಾಯವೂ ದೊರೆಯುವದಿಲ್ಲ.

## ಹರಪ್ಪ ಸಂಸ್ಕೃತಿ ನಾಶವಾದುದೆಂತು ?

ಸೌರಾಷ್ಟ್ರದಲ್ಲಿ ರಂಗಪುರ ಶೋಧನೆಯಿಂದ ಹರಪ್ಪ ಸಂಸ್ಕೃತಿ ಹಟಾತ್ತಾಗಿ "ಆರ್ಯ" ರಿಂದ ನಾಶವಾಯಿತೆ? ಅಥವಾ ಕಾಲಕ್ರಮೇಣ ತಾನೇ ನಶಿಸಿತೇ ಎಂಬುದಕ್ಕೆ ಉತ್ತರ ದೊರೆಯುತ್ತದೆ. ಅನಾಗರಿಕರಾದ ಆರ್ಯರು ಯೋಧರಾಗಿದ್ದು ಪುರದ್ವೇಷಿಗರಾಗಿದ್ದುದರಿಂದ ಅವರ ದೇವತೆಯಾದ ಇಂದ್ರನಿಗೆ ಪುರಂದರನೆಂಬ ಹೆಸರು ಬಂದಿತೆಂದು ಹರಪ್ಪ ಮೊಹೆಂಜೋದಾರೊ ಮುಂತಾದ ವಿಶಾಲವಾದ ನಗರಗಳನ್ನು ಆರ್ಯರೇ ನಾಶಮಾಡಿದರೆಂದು ಮಾರ್ಶಲ್, ವ್ಹೀಲರ್ ಇತ್ಯಾದಿಗಳು ಹೇಳುವದು ಹಾಸ್ಯಾಸ್ಪದವಾಗಿ ಕಂಡುಬರುತ್ತದೆ. ರಂಗಪುರದ ಕೆಳಗಿನ ಭಾಗಗಳಲ್ಲಿ ಹರಪ್ಪ ಸಂಸ್ಕೃತಿಯು ಕಂಡುಬರುತ್ತದೆ. ಮೇಲಿನ ಪದರಗಳಲ್ಲಿ ಹರಪ್ಪ ಕುಂಭಗಳೊಡನೆ ಮತ್ತೊಂದು ಸಂಸ್ಕೃತಿಯ ಕುಂಭಗಳೂ ಕಾಣಿಸಿಕೊಂಡು ಬರುತ್ತ ಬರುತ್ತ ಹರಪ್ಪ ಕುಂಭಗಳು ಅದೃಶ್ಯವಾಗುತ್ತವೆ. ೧೯೫೩ ರಿಂದ ೧೯೫೬ ರ ವರೆಗೂ ರಂಗಪುರದಲ್ಲಿ ಶೋಧನೆಗಳು ನಡೆದು ಈಗ ಹರಪ್ಪ ಸಂಸ್ಕೃತಿ ಒಂದೇ ಸಲ ಪೂರ್ತಿಯಾಗಿ ಆರ್ಯರಿಂದ ಕೊನೆಗಾಣಿಸಲ್ಪಟ್ಟಿತೆಂಬ ಅಭಿಪ್ರಾಯ ತಪ್ಪೆಂದು ರುಜುವಾತಾಗಿದೆ. ರಂಗಪುರವನ್ನು ಕ್ಷುದ್ರ ಶಿಲಾಯುಗದಲ್ಲಿ ಮೊದಲು ಆಕ್ರಮಿಸಿಕೊಂಡಂತೆ ಕಂಡುಬರುತ್ತದೆ. ಅನಂತರ ಸ್ವಲ್ಪ ಕಾಲ ತ್ಯಜಿಸಲ್ಪಟ್ಟಿತು. ಹರಪ್ಪ ಸಂಸ್ಕೃತಿಯವರು ಆಮೇಲೆ ನೆಲಸಿ ಬಹಳ ಕಾಲ ಇದ್ದರು. ಹರಪ್ಪ ಸಂಸ್ಕೃತಿ ಕಾಲಕ್ರಮೇಣ ಕ್ಷೀಣಿಸುತ್ತ ಬಂದಿತು. ಸೌರಾಷ್ಟ್ರದಲ್ಲಿ ರಂಗಪುರದ ಹತ್ತಿರವೇ ಹರಪ್ಪ ಸಂಸ್ಕೃತಿಯ ಇತರ ಅನೇಕ ನಿವೇಶನಗಳು ಸಿಕ್ಕಿವೆ.

ಅಹಮ್ಮದಾಬಾದ ಜಿಲ್ಲೆ ಢೋಲಕ ತಾಲ್ಲೋಕು ಸರಗ್ವಾಲ ಎಂಬ ಹಳ್ಳಿಯ ಹತ್ತಿರ ಇರುವ ಲೋಥಾಲ್ ದಿಬ್ಬೆಯ ಶೋಧನೆ ನಡೆದು ಹರಪ್ಪ ಸಂಸ್ಕೃತಿ ಕಂಡುಬಂದಿದೆ. ಲೋಥಾಲಿನಲ್ಲಿ ಬಳಪದ ಕಲ್ಲಿನ ಮಣಿ, ಚೆರ್ಟ್‌ಕಲ್ಲಿನ ಚೂರಿಗಳು, ಕಾರ್ನಿಲಿಯನ್ ಇತ್ಯಾದಿ ಕಲ್ಲುಗಳ ಆಭರಣಗಳು ಮಣ್ಣಿನ ತ್ರಿಕೋಣಾಕಾರದ ತಟ್ಟೆಗಳು ಎಲ್ಲಕ್ಕಿಂತಲೂ ಮುಖ್ಯವಾಗಿ ಹರಪ್ಪ ಮುದ್ರಿಕೆ ಸಿಕ್ಕಿರುವದರಿಂದ ಹರಪ್ಪ ಸಂಸ್ಕೃತಿ ನರ್ಮದಾ ನದಿವರೆಗೂ ಹರಡಿದ್ದಿತೆಂಬುದರಲ್ಲಿ ಸಂಶಯವೇ ಇಲ್ಲ. ಲೋಥಾಲ್ ರಂಗಪುರಕ್ಕಿಂತ ಮುಂಚೆಯೇ ನಾಶವಾಯಿತು. ರಂಗಪುರದ ಹರಪ್ಪ ಸಂಸ್ಕೃತಿಯ ಅನಂತರದ ಎರಡು ಸಂಸ್ಕೃತಿಗಳಲ್ಲಿ ಹೊಳಪುಳ್ಳ ಕೆಂಪು ಕುಂಭಗಳು ಅನಂತರ ಹೊಳಪು ಕೊಟ್ಟ ಕರಿ ಕುಂಭಗಳು ಕಾಣಿಸಿಕೊಂಡಿವೆ. ಇಂತಹ ಹೊಳಪುಕರೀಕುಂಭಗಳೇ ನರ್ಮದಾ ತೀರದಲ್ಲಿರುವ ಮಹೇಶ್ವರ (ಮಾಹಿಷ್ಮತೀ) ನಿವೇಶನದಲ್ಲಾ ಸಿಕ್ಕಿರುವದರಿಂದ ಕ್ರಿ. ಪೂ. ೬ನೇ ಶತಮಾನದಿಂದ ಎರಡನೆ ಶತಾಬ್ದದ ವರೆಗೂ ರಂಗಪುರ ಸಂಸ್ಕೃತಿ ಕೇಂದ್ರವಾಗಿದ್ದಿತೆಂದು ನಿರ್ಧರಿಸಬಹುದು.

ಚಾನ್ಹುದಾರೋದಲ್ಲಿ ನಡೆದ ಶೋಧನೆಗಳಿಂದ ಹರಪ್ಪ ಸಂಸ್ಕೃತಿಯ ಅನಂತರ ಝುಕಾರ್ ಸಂಸ್ಕೃತಿ ಬಹಳಕಾಲ ಇದ್ದಿತೆಂದು ಈ ಸಂಸ್ಕೃತಿಯ ಮುದ್ರಿಕೆಗಳು ಟ್ರಾಯ್, ಪ್ರಾಚೀನ ಕ್ರೀಟ್, ಇಟಲಿ ಅನಟೋಲಿಯ ಮುದ್ರಿಕೆಗಳನ್ನು ಹೋಲುವವೆಂದು ನಿರ್ಧಾರವಾಗಿದ್ದಿತು. ಈ ಝುಕಾರ್ ಸಂಸ್ಕೃತಿಯನಂತರ ಅನಾಗರಿಕ ಜನರ ಝಾಂಗಾರ್ ಸಂಸ್ಕೃತಿ ಇದ್ದು ಅನಂತರ ಆರ್ಯರು ಬಂದರೆಂದು ಹೇಳುತ್ತಿದ್ದರು. ಆದರೆ ಇವು ಕೇವಲ ಪ್ರಾಂತಿಕ ಸಂಸ್ಕೃತಿಗಳಾಗಿದ್ದವು. ಇವುಗಳಲ್ಲಿ ಬರೆವಣಿಗೆ ಇರಲಿಲ್ಲ. ಝುಕಾರ ಮುದ್ರಿಕೆಗಳಮೇಲೆ ಪ್ರಾಣಿಗಳು, ಸಸ್ಯಗಳು, ರೇಖಾಚಿತ್ರಗಳು ಮಾತ್ರ ಕಂಡುಬರುತ್ತವೆ. ಝುಕಾರ್ ಸಂಸ್ಕೃತಿಯವರು ಆರ್ಯರೆ? ಇವರು ಹರಪ್ಪ ಸಂಸ್ಕೃತಿಯನ್ನು ನಾಶಮಾಡಿದರೆ? ಅಥವಾ ಅನಂತರ ಬಂದ ಝಾಂಗಾರ್ ಸಂಸ್ಕೃತಿಯವರು ಆರ್ಯರೇ ಎಂಬ ಪ್ರಶ್ನೆಗಳಿಗೆ ವ್ಹೀಲರ್ ಮುಂತಾದವರು ಉತ್ತರ ಕೊಡಲಾರರು. ವೈದಿಕ ಆರ್ಯಸಂಸ್ಕೃತಿಗೂ ಝುಕಾರ್ ಝಾಂಗರ್ ಸಂಸ್ಕೃತಿಗಳೂ ಯಾವ ಸಂಬಂಧವು ಕಂಡುಬಂದಿಲ್ಲ.

## ಬೇರೆ ಬೇರೆ ಜಾತಿಗಳಿದ್ದಿಲ್ಲ

ಮಾನವ ಶಾಸ್ತ್ರ (anthropology) ದೃಷ್ಟಿಯಿಂದ ಆರ್ಯ ದ್ರಾವಿಡರೆಂಬ ಬೇರೆಬೇರೆ ಜಾತಿಗಳಿದ್ದವೆಂಬುದಕ್ಕೆ ಯಾವ ಆಧಾರವಿಲ್ಲ. ಭಾಷಾಪರವಾದ ಆರ್ಯ-ದ್ರಾವಿಡ ಎಂಬ ಹೆಸರುಗಳನ್ನು ಜಾತಿಗಳಿಗೂ ಸಂಸ್ಕೃತಿಗಳಿಗೂ ಅನ್ವಯಿಸುವದು ತಪ್ಪೆಂದು ಈಗ ಎಲ್ಲರಿಂದಲೂ ಅಂಗೀಕೃತವಾಗಿದೆ ಹಾಗೆಯೇ ಮುಂಡ-ಮಾನ್ ಖ್ಮೇರ್ ಅಥವಾ ಆಸ್ಟ್ರೋ ಏಶಿಯಾಟಿಕ್ ಭಾಷಾವರ್ಗದ ಜನರನ್ನು ದ್ರಾವಿಡರಿಂದ ಪ್ರತ್ಯೇಕಿಸುವದಕ್ಕು ಮಾನವಶಾಸ್ತ್ರದಿಂದ ಆಧಾರಗಳು ಸಿಕ್ಕುವದಿಲ್ಲ. ದ್ರಾವಿಡಭಾಷೆಗಳು ಎಲ್ಲಿ ಹುಟ್ಟಿದವು, ಯಾವಾಗ ಭಾರತಕ್ಕೆ ಬಂದವು ಎಂಬ ವಿಷಯದಲ್ಲಿ ಆಧುನಿಕ ಶೋಧನೆಗಳಿಂದ ಯಾವ ಆಧಾರಗಳೂ ಸಿಕ್ಕಿಲ್ಲ. ದ್ರಾವಿಡ ಭಾಷೆಗಳು ಅಂಟುಭಾಷೆ (agglutinative) ಗಳಾಗಿದ್ದುದರಿಂದ ಆರ್ಯಭಾಷೆಗಳಿಂದ ಪ್ರತ್ಯೇಕವೆಂಬುದಾಗಿ ಭಾವಿಸುವದಕ್ಕೆ ಪ್ರಬಲ ಪ್ರತಿಬಂಧಗಳಿವೆ. ಅಂಟುಭಾಷೆಗಳು ಸ್ವಾಹಿಲಿ, ತುರ್ಕಿ, ಜಪಾನ್ ಮುಂತಾದ ವಿವಿಧದೇಶಗಳ ವಿವಿಧಜಾತಿಗಳಲ್ಲಿ ಕಂಡುಬರುವದರಿಂದ ದ್ರಾವಿಡರ ನೆಲೆ ಕಂಡುಬರುವಹಾಗಿಲ್ಲ. ಸಂಸ್ಕೃತದಲ್ಲು ಅಂಟು (agglutination) ಕಂಡುಬರುತ್ತದೆ. ಅಲ್ಲದೆ ಪ್ರಾಚೀನ ಸುಮೇರಿಯನ್ ಭಾಷೆ ಅಂಟುಭಾಷೆಯಾಗಿದ್ದರೂ ಅದಕ್ಕು ದ್ರಾವಿಡಭಾಷೆಗಳಿಗೆ ಕೆಲವು ಸಾಮ್ಯಗಳು ವಿನಾ ಮತ್ತಾವ ಸಂಬಂಧವೂ ಇಲ್ಲ. ಹಾಗೆಯೇ ಇತರ ಸೆಮಿಟಿಕ್ ಭಾಷೆಗಳ ಪದಗಳು ವ್ಯಾಪಾರ ಅಥವಾ ರಾಜಕೀಯ ಸಂಬಂಧದಿಂದ ದ್ರಾವಿಡ ಮತ್ತು ಸಂಸ್ಕೃತಗಳೆರಡರಲ್ಲು ಕಂಡುಬರುವದರಿಂದ ದ್ರಾವಿಡರಿಗೂ ಸೆಮಿಟಿಕ್ ಜನರಿಗೂ ನಿಕಟಸಂಬಂಧವಿದ್ದಿರಬೇಕೆಂಬ ಕಾಲ್ಡ್ವೆಲ್ಲನ ಅಭಿಪ್ರಾಯ ನಿರಾಧಾರವಾದುದು. ಸುಮೇರಿಯನ್ನಿನಲ್ಲಿ ತಾಮ್ರಕ್ಕೆ ಮತ್ತು ಗೊಡ್ಡಲಿಗೆ ಉಪಯೋಗಿಸಿರುವ ಪದಗಳು ಆರ್ಯ ಪದಗಳೆಂದು ಈಗ ಅಂಗೀಕೃತವಾಗಿದೆ. ದ್ರಾವಿಡಭಾಷೆಗಳ ಪ್ರತ್ಯೇಕತೆ ಪ್ರಾಚೀನತೆಗಳಿಗೆ ನಿರ್ದುಷ್ಟವಾದ ಆಧಾರಗಳು ಸಿಕ್ಕಿಲ್ಲ. ದಕ್ಷಿಣಭಾರತದಲ್ಲಿ, ತಮಿಳುದೇಶದಲ್ಲಿ ಇದುವರೆಗೆ ಸಿಕ್ಕಿರುವ ಅತ್ಯಂತ ಪ್ರಾಚೀನ ಶಾಸನಗಳೆಲ್ಲ ಪ್ರಾಕೃತ ಭಾಷೆಯುಲ್ಲಿ ಬ್ರಾಹ್ಮೀ ಅಕ್ಷರಗಳಲ್ಲಿ ಬರೆಯಲ್ಪಟ್ಟಿವೆ. ತಮಿಳು ಸಂಘಸಾಹಿತ್ಯವು ಕ್ರಿಸ್ತಶಕ ಮೂರನೆ ಶತಾಬ್ದಕ್ಕೆ ಹಿಂದಣದಲ್ಲವೆಂದು ಮುಖ್ಯ ಗ್ರಂಥಗಳೆಲ್ಲ ಕ್ರಿಸ್ತಶಕ ಆರನೇ ಶತಮಾನದಲ್ಲಿ ಬರೆಯಲ್ಪಟ್ಟವೆಂದು ಈಗ ನಿರ್ಧರಿಸಲ್ಪಟ್ಟಿದೆ. ಆದುದರಿಂದ ಕ್ರಿಸ್ತಪೂರ್ವ ೩೦೦೦ ದಲ್ಲಿ ದ್ರಾವಿಡರು ಭರತಖಂಡವನ್ನೆಲ್ಲ ಆಕ್ರಮಿಸಿಕೊಂಡಿದ್ದರು. ಹರಪ್ಪ ಸಂಸ್ಕೃತಿಗೆ ಇವರೇ ಕಾರಣರು. ಹರಪ್ಪ ಮುದ್ರಿಕೆಗಳ ಮೇಲೆ

ತಮಿಳು ಕನ್ನಡ ಕಂಡುಬರುತ್ತದೆ. ಆನ್ ಅದು ಕಡವುಳ್ ಇತ್ಯಾದಿ ದ್ರಾವಿಡ ದೇವತೆಗಳೇ ಹರಪ್ಪ ಸಂಸ್ಕೃತಿಯಲ್ಲಿ ಕಂಡುಬರುತ್ತವೆ. ಇತ್ಯಾದಿ ಹೇರಾಸ್ ಅವರ ಅಭಿಪ್ರಾಯಗಳು ಕೇವಲ ಊಹೆಗಳೇ ಹೊರತು ಯಾವ ಆಧಾರದ ಮೇಲೂ ನಿಂತಿಲ್ಲ. ದಕ್ಷಿಣಭಾರತದಲ್ಲಿ ಇದುವರೆಗು ಹರಪ್ಪ ಸಂಸ್ಕೃತಿ ಸಿಕ್ಕಿಲ್ಲ.

## ಹರಪ್ಪ ಸಂಸ್ಕೃತಿಯ ಉಗಮ

ಹರಪ್ಪಸಂಸ್ಕೃತಿಯು ಭಾರತದದ್ರಾವಿಡ ಅಥವಾ ಮುಂಡಮಾನ್ ಖ್ಮೇರ್ ಭಾಷೆಗಳನ್ನು ಹೊಂದಿದ್ದ ಜನರಿಂದ ಹುಟ್ಟಲಿಲ್ಲವೆಂಬುದು ಸ್ಪಷ್ಟವಾಗಿದೆ. ಅಂತೆಯೇ ಸುಮೇರಿಯನ್ ಇತ್ಯಾದಿ ಪಾಶ್ಚಾತ್ಯ ಸಂಸ್ಕೃತಿಗಳಿಂದ ಹರಪ್ಪ ಸಂಸ್ಕೃತಿ ಹುಟ್ಟಿತೆಂಬ ವಾದವನ್ನು ಈಗ ಬಿಡಬೇಕಾಗಿದೆ. ಭಾರತೀಯ ಸಂಸ್ಕೃತಿಯ ಪ್ರಭಾವವೇ ಮೆಸೊಪೊಟೆಮಿಯ ಸಂಸ್ಕೃತಿಗಳಲ್ಲಿ ಹೆಚ್ಚಾಗಿ ಕಂಡುಬರುವದೇ ಹೊರತು ಪಾಶ್ಚಾತ್ಯ ಸಂಸ್ಕೃತಿಗಳ ಪ್ರಭಾವವು ಇಲ್ಲಿ ಹೆಚ್ಚಾಗಿ ಕಂಡುಬರುವದಿಲ್ಲ. ವ್ಯಾಪಾರ ಸಂಬಂಧವಿದ್ದುದರಿಂದ ಕೆಲವರು ಸುಮೇರಿಯನ್ನರು ವಿಶ್ವಕೇಂದ್ರಗಳಾದ ಹರಪ್ಪ ಮೊಹೆಂಜೋದಾರೊ ಪಟ್ಟಣಗಳಲ್ಲಿ ಇದ್ದಮಾತ್ರಕ್ಕೆ "ಇಂಡೋ ಸುಮೇರಿಯನ್" ಎಂದು ವ್ಹೀಲರ್ ಮುಂತಾದವರು ಹೇಳುವದು ಅಪಹಾಸ್ಯಕ್ಕೆ ಗುರಿಯಾಗುವದು. ಹರಪ್ಪ ಸಂಸ್ಕೃತಿಯಲ್ಲಿ ಆರ್ಯ ಮತಗಳ ಮುಖ್ಯ ಲಕ್ಷಣವಾದ ಶವದಹನ ಪದ್ಧತಿಯೇ ಸಾರ್ವತ್ರಿಕವಾಗಿದ್ದಿತು. ವಿದೇಶೀಯರು ಕೆಲವರು ಮಾತ್ರ ತಮ್ಮ ಮತಕ್ಕನುಸಾರವಾಗಿ ಖನನ ಮಾಡುತ್ತಿದ್ದರು. ಋಗ್ವೇದದಲ್ಲಿ ಎಲ್ಲ ಶವಸಂಸ್ಕಾರ ಪದ್ಧತಿಗಳನ್ನು ಹೇಳಿದ್ದರೂ ದಹನಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ. ವಿಶಾಲವಾದ ಹರಪ್ಪ ಸಂಸ್ಕೃತಿಯ ಸಾಮ್ರಾಜ್ಯಕ್ಕೆ ಹರಪ್ಪ ಮತ್ತು ಮೊಹೆಂಜೋದಾರೋ ಎರಡು ರಾಜಧಾನಿಗಳಾಗಿದ್ದವು. ನೂರಾರುವರ್ಷ ಬೆಳೆದು ಬಂದ ಈ ಪಟ್ಟಣಗಳಲ್ಲಿ ಮತ್ತು ಇತರ ಹರಪ್ಪ ಸಂಸ್ಕೃತಿ ಸ್ಥಳಗಳಲ್ಲಿ ಖನನವೇ ಆಚರಿಸಲ್ಪಟ್ಟಿದ್ದರೆ ಸಾವಿರಾರು ಅಸ್ಥಿಗಳು ಸಿಕ್ಕಬೇಕಾಗಿದ್ದಿತು. ಆದರೆ ಸಿಕ್ಕಿರುವ ಅಸ್ಥಿಪಂಜರಗಳು ಕೇವಲ ೨೦, ೨೫ ಮಾತ್ರ. ಇವುಗಳನ್ನು ಪರೀಕ್ಷಿಸಿದರೆ ಮಂಗೋಲಿಯನ್, ನೀಗ್ರೋ-ಆಸ್ಟ್ರ-ಲಾಯ್ಡ್, ಮೆಡಿಟರೇನಿಯನ್, ಆಲ್ಪೈನ್ ಮಾನವ ಜಾತಿಗಳೆಲ್ಲ ಕಂಡುಬರುವದರಿಂದ ಯಾವೊಂದು ಜನಾಂಗ ಆಡಳಿತ ವರ್ಗವಾಗಿದ್ದಿತೆಂದು ನಿಶ್ಚಯಿಸುವದು ಕಷ್ಟ. ಹೀಗಿರುವಲ್ಲಿ ಹರಪ್ಪ ಸಂಸ್ಕೃತಿ ಅನಾರ್ಯರದೆಂದು ಹೇಳುವದು ಕೇವಲ ಊಹೆ. ಹರಪ್ಪ ಸಂಸ್ಕೃತಿಯಲ್ಲಿ, ವೈದಿಕ ಸಂಸ್ಕೃತಿಯಲ್ಲಿ ಕಂಡುಬರುವ ಮೂರ್ತ ಅಮೂರ್ತ ಪೂಜೆಗಳು ಎರಡೂ ಇದ್ದವು. ಪುರೋಹಿತರು, ರಕ್ಷಕರು, ವ್ಯಾಪಾರಗಾರರು, ಸಾಮಾನ್ಯ ವ್ಯವಸಾಯಗಾರರು, ಅಸ್ಪೃಶ್ಯರು ಹರಪ್ಪ ಸಂಸ್ಕೃತಿಯಲ್ಲಿ ಕಂಡುಬರುವರು.

ಆರ್ಯರ ಜನ್ಮಸ್ಥಳ, ವಲಸೆಗಳು, ಆರ್ಯ ಭಾಷಾ ಪ್ರಭೇದಗಳು, ಪ್ರಾಚೀನತೆ ಇತ್ಯಾದಿ ವಿಷಯಗಳಲ್ಲಿ ಪಾಶ್ಚಾತ್ಯ ವಿದ್ವಾಂಸರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ಹಿಂದೆ ಆರ್ಯರು ಹಂಗೆರಿ, ಕ್ರಿಮಿಯ, ದಕ್ಷಿಣ ರಸಿಯ ಯಾವುದೋ ಒಂದು ಭಾಗದಲ್ಲಿ ಮೊದಲು ಕಾಣಿಸಿಕೊಂಡು ಮಧ್ಯಪ್ರಾಚ್ಯ ದೇಶಗಳಲ್ಲಿ ಹರಡಿ ಪುರಾತನವಾದ ಸಂಸ್ಕೃತಿಗಳನ್ನು ನಾಶಪಡಿಸಿದರೆಂದು ಹೇಳುತ್ತಿದ್ದರು. ಆದರೆ ಈಚೆಗೆ ನಡೆದಿರುವ ಶೋಧನೆಗಳಿಂದ ಈ ಅಭಿಪ್ರಾಯಗಳನ್ನು ಬಿಡಬೇಕಾಯಿತು. ಆರ್ಯ ಭಾಷಾ ಪದಗಳು ಕ್ರಿಸ್ತಪೂರ್ವ ಮೂರುಸಾವಿರದಲ್ಲೆ ಸುಮೇರಿಯನ್ ಸುಸಂಸ್ಕೃತಿಯಲ್ಲಿ ಕಂಡುಬರುತ್ತವೆ. ಕ್ರಿಸ್ತಪೂರ್ವ ಎರಡುಸಾವಿರದ ಆನಟೋಲಿಯ ಸಂಸ್ಕೃತಿಯು ಆರ್ಯರದೆಂದು ಅದಕ್ಕೆ ಮುಂಚೆಯೇ ನೂರಾರು ವರ್ಷ ಬೆಳೆದುಬಂದಿರಬೇಕೆಂದು ಈಗ ನಿರ್ಧರಿಸಲ್ಪಟ್ಟಿದೆ. ಕ್ರಿಸ್ತಪೂರ್ವ ೧೮೦೦ ರಿಂದ ೧೫೦೦ ವರೆಗೆ ಇದ್ದ ಮೈಕೇನಿಯನ್ ಲಿಪಿಯನ್ನು ಓದಲು ಈಗ ಪ್ರಯತ್ನ ನಡೆದಿದೆ. ಮೈಕೇನಿಯನ್‌ರು ಕ್ರೀಟನ್ ಲಿಪಿಯನ್ನೆ ಉಪಯೋಗಿಸುತ್ತಿದ್ದರು. ಮೈಕೇನಿಯನ್ ಲಿಪಿಯಲ್ಲಿ ಎ ಮತ್ತು ಬಿ ಎಂಬ ಎರಡು ವಿಧಗಳಿವೆ. ಇವೆರಡು ಒಂದೇ ಮೂಲ ಲಿಪಿಯಿಂದ ಹುಟ್ಟಿದವು. ವೆಂಟ್ರಿಸ್ ಮತು ಚೌಡ್ವಿಕ್ ಎಂಬವರು "ಬಿ" ಲಿಪಿಯು ಇಂಡೊಯುರೋಪಿಯನ್ ಭಾಷೆಗೂ ಅದರಲ್ಲು ಪುರಾತನ ಗ್ರೀಕ್ ಭಾಷೆಗು ಅನ್ವಯಿಸುವದೆಂದು ಬಹಳ ಪ್ರಯತ್ನಪಟ್ಟು ನಿರ್ಧರಿಸಿರುವರು. ಈಭಾಷೆಯನು "ಓಲ್ಡ್ ಏಶಿಯನ್" ಎಂದು ಕರೆಯಲಾಗಿದೆ.

## ಇತರ ಸಂಸ್ಕೃತಿಗಳ ಕೂಡ ಸಂಬಂಧ

ಕ್ರೀಟ್ ದ್ವೀಪಕ್ಕು ಆನಟೋಲಿಯ (ಟರ್ಕಿ) ಕ್ಕು ಹತ್ತಿರ ಸಂಬಂಧವಿದ್ದು ಟ್ರಾಯ್ ಪಟ್ಟಣ ಕ್ರೀಟನ್ ಸಂಸ್ಕೃತಿಗೆ ಸೇರಿದ್ದಿತೆಂದು ಹೇಳಲಾಗಿದೆ. ಅನಟೋಲಿಯದಲ್ಲಿ ಈಚೆಗೆ ಸಿಕ್ಕಿರುವ ಚಿತ್ರಲಿಪಿಯ ಹಿಟ್ಟೈಟ್ ಶಾಸನಗಳನ್ನು ಹ್ರಾಸ್ನಿ ಓದಿರುವನು. ಮತ್ತು ೧೯೪೭ ರಲ್ಲಿ ಟರ್ಕಿಯಲ್ಲಿರುವ ಕಾರಾಟೆಪೆ ಎಂಬ ಸ್ಥಳದಲ್ಲಿ ಚಿತ್ರಲಿಪಿ ಹಿಟ್ಟೈಟ್ ಮತ್ತು ಪ್ರಾಚೀನ ಫೀನಿಷಿಯನ್ನಲ್ಲಿ ಬರೆದ ದ್ವಿಭಾಷಾ ಶಾಸನಗಳು ಸಿಕ್ಕಿ ಚಿತ್ರಲಿಪಿ ಹಿಟ್ಟೈಟ್ ಭಾಷೆ ಆರ್ಯ ಭಾಷೆಯೆಂದು ನಿರ್ಧಾರವಾಗಿವೆ. ಈ ಶಾಸನಗಳಲ್ಲಿ ಆರ್ಯ ಭಾಷೆಯ ಜನರೇ ಅಧಿಕಾರ ವರ್ಗದಲ್ಲಿದ್ದು ಹುರಿ, ಹಿಟ್ಟೈಟ್ ಇತ್ಯಾದಿ ಪ್ರಜೆಗಳನ್ನು ಆಳುತ್ತಿದ್ದು ತಮ್ಮ ದೇವತೆಗಳಿಗೆ ಹಿಟ್ಟೈಟ್ ಹೆಸರುಗಳನ್ನು ಕೊಡುತ್ತಿದ್ದರೆಂದು ವ್ಯಕ್ತವಾಗಿವೆ. ಟೆಲ್ ಅಲ್ ಆಯಾರ್ನ ಬೊಘಾಸ್ ಕಾಯಲೇಖನೆಗಳಲ್ಲಿ ಇಂದ್ರ ವರುಣ ನಾಸತ್ಯ ಇತ್ಯಾದಿ ವೈದಿಕ ದೇವತೆಗಳು, ಕಿಕುಲಿ ಎಂಬವನು ರಚಿಸಿರುವ ಅಶ್ವಶಾಸನದೊಳಗಿನ ಸಂಸ್ಕೃತ ಪದಗಳು, ಇಂದ್ರ-ವೃತ್ರ ಕಥೆ ಹಿಟ್ಟೈಟ್ ಶಿಲ್ಪಗಳಲ್ಲಿ ಕಂಡುಬರುವದು—ಇವೆಲ್ಲ ಕ್ರಿಸ್ತಪೂರ್ವ ೧೪೦೦ ರಲ್ಲಿಯೇ ವೈದಿಕ ಮತದ ಪ್ರಭಾವವನ್ನು ತೋರಿಸಿಯೇ ಇದ್ದವು. ಈಚೆಗೆ ಕಾರಾಟೆಪೆಯ ದ್ವಿಭಾಷಾ ಶಾಸನಗಳಿಂದ ದನಿಯನ (ಡಾನೋ, ದಾನವ, ಡೇನ್) ಎಂಬ ಜನಗಳಿಗೆ ರಾಜನಾದ ಅಸಿತ ಮಂದಸ್ ಎಂಬುವನು ಹಿಟ್ಟೈಟ್ ಸಾಮ್ರಾಜ್ಯದ ಅಂತ್ಯದಶೆಯಲ್ಲಿ ಆಳುತ್ತಿದ್ದನೆಂದು, ಕ್ರಿ. ಪೂ. ಆರನೆಯ ಶತಮಾನದ ವರೆಗೂ ಹಿಟ್ಟೈಟ್ ಸಂಸ್ಕೃತಿ ನಡೆದು ಬಂದಿತೆಂದು ತಿಳಿದು ಬಂದಿದೆ. ಆರ್ಯರ ಮೂಲ ಭಾಷೆಯಾದ ಇಂಡೋ ಹಟ್ಟಿಯನ್ನು ಪುರಾತನ ಹಿಟ್ಟೈಟ್ ಮತ್ತು ಇಂಡೋಯುರೋಪಿಯನ್ ಎಂದು ವಿಭಾಗಿಸಿ ಇಂಡೋಯುರೋಪಿಯನ್ನಿನಿಂದ ಸಂಸ್ಕೃತ ಗ್ರೀಕ ಇತ್ಯಾದಿ ಭಾಷೆಗಳು ಹುಟ್ಟಿರುವವೆಂದು ಭಾಷಾಶಾಸ್ತ್ರಜ್ಞರು ಅಭಿಪ್ರಾಯಪಟ್ಟಿರುವರು. ಈ ಮೂಲ ಇಂಡೋಹಟ್ಟಿ ಜನರೇ ಹೈರೋಗ್ಲಿಫಿಕ್ ಹಿಟ್ಟೈಟ್ ಅಥವಾ ಪ್ರಾಗ್ಭಾರತೀಯರೆಂದು (Proto-Indic) ಹ್ರಾಸ್ನಿ ಹೇಳುವನು. ಆರ್ಯರನ್ನೊಳಗೊಂಡ ಈ ಹೈರೋಗ್ಲಿಫಿಕ್ ಹಿಟ್ಟೈಟ್‌ರು ಸುಮಾರು ಕ್ರಿಸ್ತಪೂರ್ವ ೨೪೦೦ನಲ್ಲಿ ಭಾರತದಲ್ಲಿ ಹರಪ್ಪ ಮೋಹಂಜೊದಾರೊ ಸಂಸ್ಕೃತಿಗಳನ್ನೂ ಸ್ಥಾಪಿಸಿದ್ದರು. ಹರಪ್ಪ ಮುದ್ರಿಕೆಗಳ ಮೇಲೆ 'ಯುನಿ' (ವಿಷ್ಣು) ಕುಯುಷ್ (ಶಿವ); ಶಂತಷ್ (ಇಂದ್ರ), ಷಿತಿಯುಷ್ (ಸ್ಯೂಸ್) ಇತ್ಯಾದಿ ಆರ್ಯದೇವತೆಗಳ ಹೆಸರುಗಳೇ ಕಂಡು ಬರುತ್ತವೆ. ಈ ಆರ್ಯ ಸಂಸ್ಕೃತಿಯನ್ನು ಅನಾಗರಿಕರಾದ ದ್ರಾವಿಡರು ನಾಶಪಡಿಸಿದರು. ಆದರೆ ಪುನಃ ಮತ್ತೊಂದು ಆರ್ಯಪಂಗಡ ಮಧ್ಯಏಶಿಯದಿಂದಬಂದು ದ್ರಾವಿಡರನ್ನು ಓಡಿಸಿ ಆರ್ಯಸಂಸ್ಕೃತಿಯನ್ನು ಸ್ಥಾಪಿಸಿತು. ಈ ಆರ್ಯರೇ ವೈದಿಕ ಆರ್ಯರು. ಹೀಗೆ ಹರಪ್ಪ ಸಂಸ್ಕೃತಿಗೆ ಅವೈದಿಕ ಆರ್ಯರು ಕಾರಣರಾಗಿದ್ದರು ಅನಾಗರಿಕರಾದ ದ್ರಾವಿಡರು ಅನಂತರ ಬಂದು ನಾಶಪಡಿಸಲು ಯತ್ನಿಸಿದರೂ ಸಫಲರಾಗಲಿಲ್ಲ. ವೇದಗಳನ್ನು ರಚಿಸಿದ ಆರ್ಯರು ಮತ್ತೊಂದು ಅಲೆಯಾಗಿ ಬಂದು ಆರ್ಯಮತವನ್ನು ಪುನರುದ್ಧಾರಮಾಡಿದುದರಿಂದ ಹರಪ್ಪ ಸಂಸ್ಕೃತಿಯಲಕ್ಷಣಗಳೆಲ್ಲ ವೇದಗಳಲ್ಲು ಈಗಿನ ಹಿಂದೂ ಮತದಲ್ಲೂ ಉಳಿದುಕೊಂಡಿವೆ ಎಂದು ಹ್ರಾಸ್ನಿ ಅಭಿಪ್ರಾಯಪಟ್ಟಿದ್ದನು.

ಆದರೆ ಹಿಟ್ಟೈಟ್ ಸಂಸ್ಕೃತಿ ಕ್ರಿಸ್ತಪೂರ್ವ ೨೦೦೦ಕ್ಕೆ ಹಿಂದೆ ಇದ್ದಿತೆಂಬುದಕ್ಕೆ ಆಧಾರಗಳಿಲ್ಲ. ಅಲ್ಲದೆ ಹಿಟ್ಟೈಟ್ ಶಾಸನಗಳಲ್ಲಿ ದ್ರುಪದ, ದಶರಥ, ವೇನ, ಅಸಮಂಜ ಮುಂತಾದ ಭಾರತೀಯ ಪೌರಾಣಿಕ ವ್ಯಕ್ತಿಗಳ ಹೆಸರುಗಳು ಕಂಡು ಬಂದಿರುವದರಿಂದ ಭಾರತೀಯರ ಐತಿಹಾಸಿಕ ಯುಗದ ಸಂಸ್ಕೃತಿಯೇ ಪಶ್ಚಿಮದೇಶಗಳಿಗೆ ಹೋಗಿ ಹೆಟ್ಟೈಟ್, ಹುರಿಯನ್, ಮಿಟಾನ್ನೆ ಇತ್ಯಾದಿ ಆರ್ಯ ಪ್ರಭೇದಗಳಿಗೆ ಕಾರಣವಾಗಿದ್ದಿರಬೇಕು. ಋಗ್ವೇದದ ಸಂಸ್ಕೃತಿ ಶಿಲಾಯುಗದ್ದಾದುದರಿಂದ ಹರಪ್ಪ ಸಂಸ್ಕೃತಿಗಿಂತ ಬಹಳ ಪ್ರಾಚೀನ. ಹರಪ್ಪ ಸಂಸ್ಕೃತಿ ಅಥರ್ವವೇದಕ್ಕೆ ಸಂಬಂಧಪಟ್ಟ ಕಲಿಯುಗ ಆರಂಭಕಾಲದ ಸಂಸ್ಕೃತಿಯಾಗಿದ್ದು ಪಾಶ್ಚಾತ್ಯದೇಶಗಳಿಗೆಹೋಗಿ ಮಧ್ಯಪ್ರಾಚ್ಯ ದೇಶಗಳಲ್ಲೆಲ್ಲ ಕ್ರಿಸ್ತಪೂರ್ವ ೨೫೦೦ ರಲ್ಲೆ ಪ್ರಭಾವಶಾಲಿಯಾಗಿದ್ದಿತೆಂದೂ ಇದು ಕೇವಲ ಭಾರತೀಯ ಸಂಸ್ಕೃತಿಯೇ ಎಂದು ನಿರ್ಧರಿಸಬಹುದು.

# ಭಾವಾರ್ಥ ರತ್ನಾಕರ

ಲೇಖಕರು: ಪಂಡಿತ ಕೇಶವ ಶರ್ಮಾ ಗಲಗಲಿ, ಧಾರವಾಡ

**ಬೆಂಗಳೂರಿನ ಶ್ರೀ ಬಿ. ವಿ. ಶರ್ಮರು ಇತ್ತೀಚೆಗೆ ಪ್ರಕಟಿಸಿದ ಗ್ರಂಥ ಭಾವಾರ್ಥ ರತ್ನಾಕರ. ಇದು ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದ್ದಾಗಿರುವದು. ರಾಮಾನುಜಾಚಾರ್ಯರು ಬರೆದಿರುವರೆಂದು ಹೇಳಲಾಗುವ ಈ ಗ್ರಂಥದಲ್ಲಿ ಜ್ಯೋತಿಷ ತತ್ವಗಳನ್ನು ಸುಲಭವಾಗಿ ಅರ್ಥವಾಗುವಂತೆ ವಿವರಿಸಲಾಗಿದೆ. ಸುಪ್ರಸಿದ್ಧ ಜ್ಯೋತಿಷಿಗಳಾದ ಪಂಡಿತ ಕೇಶವಶರ್ಮಾ ಗಲಗಲಿಯವರು ಈ ಗ್ರಂಥದ ಸಾಮಾನ್ಯ ಪರಿಚಯವನ್ನು ಇಲ್ಲಿ ಲೇಖಕರಿಗೆ ಒದಗಿಸಿರುವರು.**

ಸಂಸ್ಕೃತಿಯ ಅಭಿಮಾನಿಗಳಿಗೆ ಜ್ಞಾನ ಪಿಪಾಸೆಯುಳ್ಳವರಿಗೆ ಹಿಂದಿನ ಕಾಲದ ಒಂದು ಗ್ರಂಥ ದೊರೆತರೆ ಅದರಿಂದ ನಷ್ಟಧನ ಲಾಭವಾದಷ್ಟೇ ಆನಂದವಾಗುವುದೇನೋ ನಿಜ. ತನಗೆ ದೊರೆತ ಇಂಥ ಪುರಾತನ ಗ್ರಂಥಗಳನ್ನವರು ಕಷ್ಟಪಟ್ಟು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲಿಸಿ ಪ್ರಕಾಶಪಡಿಸುವರು. ರಾಜಾಶ್ರಯವಿಲ್ಲದ ಹಾಗೂ ನ್ಯೂನ್ಯ ಜನರಲ್ಲಿ ಸಾಹಿತ್ಯ ಜ್ಞಾನಾಭಿರುಚಿ ಕ್ಷಿಣವುಯಾಗಿರುವ ಈ ಕಾಲದಲ್ಲಿ ಪುರಾತನ ಪುಸ್ತಕಗಳ ಪ್ರಕಟನೆ ತೊಂದರೆದಾಯಕವಾದುದು.

ಆದರೂ ಬೆಂಗಳೂರಿನ ಶ್ರೀ ಬಿ. ವಿ. ಶರ್ಮರಂತಹ ಕೆಲವರು ವಿದ್ವಾಂಸರು ಹಳೆಯ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸುತ್ತಿರುವುದು ಸ್ತುತ್ಯ ಕಾರ್ಯವಲ್ಲವೆ? ಅವರಿಂದ ಇತ್ತೀಚೆಗೆ ಪ್ರಕಟಿಸಲ್ಪಟ್ಟ ಒಂದು ಗ್ರಂಥ ಭಾವಾರ್ಥ ರತ್ನಾಕರ. ಇದು ಜ್ಯೋತಿಷ ಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕ. ಜ್ಯೋತಿಷ್ಯದ ಬಗ್ಗೆ ತಿರಸ್ಕಾರ ತಳೆವವರು ನಮ್ಮಲ್ಲಿ ಇನ್ನೂ ಇದ್ದಾರೆ. ತಾನು ಕಲಿತದ್ದು ವಿದ್ಯೆ, ಇತರರು ಕಲಿತದ್ದು ಅಲ್ಲ ಎಂಬ ಭಾವನೆ ಇಂಥ ತಿರಸ್ಕಾರಗಳಿಗೆ ಪ್ರೇರಕವಾಗಿದೆ. ಹಿಂದೆ ಸಂಸ್ಕೃತ ಮಾತ್ರ ದೇವವಾಣಿಯೆನ್ನಿಸಿಕೊಂಡಿತ್ತು. ಇಂದು ದೇಶೀ ಭಾಷೆಗಳೂ ದೈವೀ ಅಂಶವನ್ನು ಪಡೆಯುತ್ತಿವೆ. ಯವನ ಭಾಷೆಯೆಂದು ತಿರಸ್ಕೃತವಾಗಿದ್ದ ಆಂಗ್ಲಭಾಷೆಯೀಗ ಮೆರೆಯಹತ್ತಿದೆ. ಆದ್ದರಿಂದ ಅಪೂರ್ವ ಜ್ಞಾನವಿರುವಲ್ಲೆಲ್ಲ ದೇವಾಂಶವುಂಟೆಂದು ತಿಳಿಯಬೇಕು. ಗೀತೆಯ ಹೇಳಿಕೆಯೂ ಅದೇ "ಯದ್ಯದ್ ವಿಭೂತಿಮತ್ ಸತ್ವಂ ಶ್ರೀಮದ್ ಊರ್ಜಿತಂ ಏವ ವಾ ॥ ತತ್ತದ್ ಏವ ಅವಗಚ್ಛತ್ವಂ ಮಮ ತೇಜೋಂಶ ಸಂಭವಂ" ಎಂದು.

ಜ್ಯೋತಿಷ್ಯವನ್ನು ಬರೆದವರು ಸ್ವಾರ್ಥವಿಲ್ಲದ ಋಷಿಗಳು. ಈ ಶಾಸ್ತ್ರದಲ್ಲಿ ಬೃಹಜ್ಜಾತಕ, ಸಾರಾವಲಿ, ಫಲದೀಪಿಕೆ, ಕಾಲಾಮೃತ ಮಹದೇವನ ಸೂತ್ರಗಳು ಮುಂತಾದ ಪ್ರಾಚೀನವಾದ ಆದರ್ಶ ಗ್ರಂಥಗಳಿವೆ. 'ಭಾವಾರ್ಥರತ್ನಾಕರ' ಅವುಗಳ ಸಾಲಿಗೆ ಸೇರಿದ ಒಂದು ಗ್ರಂಥ.

ಭಾವಾರ್ಥ ರತ್ನಾಕರದ ಪ್ರತಿ ತರಂಗದ ಕೊನೆಯಲ್ಲಿ "ಶ್ರೀ ರಾಮಾನುಜಾಚಾರ್ಯ ಕೃತಿಃ ಭಾವಾರ್ಥ ವಾರಿಧಿಃ" ಎಂದಿರುವುದರಿಂದ ವಿಶಿಷ್ಟಾದ್ವೈತ ಮತಸ್ಥಾಪನಾಚಾರ್ಯರಾದ ರಾಮಾನುಜಾಚಾರ್ಯರು ಇದನ್ನು ಬರೆದವರೆನ್ನಲಾಗಿದೆ. ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಜ್ಯೋತಿಷ ತತ್ವಗಳನ್ನು ಬಹಳ ಸುಲಭ ರೀತಿಯಲ್ಲಿ ವಿವರಿಸುತ್ತದೆ. ಈ ಪುಸ್ತಕ ಹದಿನಾಲ್ಕು ತರಂಗಗಳೆಂಬ ಅಧ್ಯಾಯಗಳಲ್ಲಿ ವಿಂಗಡಿಸಲ್ಪಟ್ಟಿದೆ.

ಮೊದಲನೆಯದು ಲಗ್ನತರಂಗ. ಮೇಷಾದಿ ದ್ವಾದಶ ಲಗ್ನಗಳ ಯೋಗಕಾರಕ ಗ್ರಹಗಳ ವಿಚಾರ ಇದರಲ್ಲಿದೆ. ಯೋಗಕಾರಕ ಗ್ರಹವೆಂದರೆ ಜಾತನಿಗೆ ಉನ್ನತಿಯನ್ನುಂಟುಮಾಡುವ ಗ್ರಹವು. ಆಯಾ ಲಗ್ನಗಳಲ್ಲಿ ಜನಿಸಿದವರಿಗೆ ಕೆಲವು ಗ್ರಹಗಳು ಯೋಗಕಾರಕಗಳು. ಕೆಲವು ಅಲ್ಲ ಎಂದು ಶಾಸ್ತ್ರ ವಿಂಗಡಿಸಿದೆ. ಇದಕ್ಕೆ ಜ್ಯೋತಿಷಶಾಸ್ತ್ರ ಕೆಲವು ತತ್ವಗಳನ್ನು ಅನುಸರಿಸಿದೆ. ಆದರೆ ಭಾವಾರ್ಥರತ್ನಾಕರದಲ್ಲಿ ಅವುಗಳಿಗೆ ವಿರುದ್ಧ ತತ್ವಗಳನ್ನುಹೇಳಿದಂತೆ ಕಾಣುತ್ತದೆ. ಆದ್ದರಿಂದ ಈ ಅಭಿಪ್ರಾಯಭೇದಪ್ರಸಂಗದಲ್ಲಿ ಒಂದು ನಿರ್ಣಯಕ್ಕೆ ಬರಲು ಜ್ಯೋತಿಷಶಾಸ್ತ್ರದಲ್ಲಿ ಅಧಿಕಾರ ಸಂಪನ್ನರಾದ ಪರಾಶರ ಮಹರ್ಷಿಯನ್ನು ಮರೆಹೊಗಬೇಕು. ಶ್ರೀರಾಮಾನುಜಾಚಾರ್ಯರ ಈ 'ಭಾವಾರ್ಥರತ್ನಾಕರದಲ್ಲಿ' ವೃಷಭಲಗ್ನಕ್ಕೆ ಶನಿ ಯೋಗಕಾರಕನಲ್ಲವೆನ್ನಲಾಗಿದೆ. ಆದರೆ ಶನಿ ಯೋಗಕಾರಕನೆಂದು ಇತರರು ತಿಳಿದಿದ್ದಾರೆ. ಆದುದರಿಂದ ಇದನ್ನು ಸಹಸಾ ಎಲ್ಲರೂ ಒಪ್ಪಲಾರರು. "ಮೇಷೇಷು ಜಾತಸ್ಯ ರಾಜಯೋಗೋಪಿ ಲಕ್ಷ್ಯತೇ ಚತುರ್ಥ ಪಂಚಮಾಧೀಶ ಸಂಬಂಧೇನ ನ ಸಂಶಯಃ' ಎಂದರೆ ಮೇಷಲಗ್ನಕ್ಕೆ ಚತುರ್ಥಾಧಿಪ ಚಂದ್ರ, ಪಂಚಮಾಧಿಪತಿ ರವಿ. ಇವರಿಬ್ಬರ ಸಂಬಂಧವು ರಾಜಯೋಗವನ್ನು ಉಂಟುಮಾಡುವದು. ಇಲ್ಲವೆ ಚಂದ್ರ ಸಿಂಹದಲ್ಲಿ, ರವಿ ಕರ್ಕಟಕದಲ್ಲಿ ಅಥವಾ ಇಬ್ಬರೂ ಸಿಂಹರಾಶಿಯಲ್ಲಿಯಾಗಲಿ ಕರ್ಕಟಕರಾಶಿಯಲ್ಲಾಗಲಿ ಇದ್ದರೂ ಸಂಬಂಧವುಂಟಾಗಿ ರಾಜಯೋಗ ಬರುವದು. ಒಂದೇ ರಾಶಿಯ ಒಂದೇ ಅಂಶದಲ್ಲಿ ಅಥವಾ ರವಿಯ ಹಿಂದೆ ಚಂದ್ರನು ೧೦-೧೨ ಅಂಶದ ಒಳಗಿದ್ದರೆ ಅಮಾವಾಸ್ಯೆ ಇರುವುದಲ್ಲಎಂಬ ಶಂಕೆಬರುವದು ಸಹಜ ಅಮಾವಾಸ್ಯ ಯೋಗವಿದ್ದರೂ ಮೇಷಲಗ್ನದವರಿಗೆ ಮಾತ್ರ ಅದು ರಾಜಯೋಗವೇ. ರವಿ ಚಂದ್ರರಿಗೆ ಕೇಂದ್ರ ತ್ರಿಕೋಣಾಧಿಪತಿತ್ವ ಬರುವುದೇ ಅದಕ್ಕೆ ಕಾರಣ.

ಭಾವಾರ್ಥ ರತ್ನಾಕರ ಈ ವಿಷಯಗಳನು ಹೀಗೆ ವಿವರಿಸುತ್ತದೆ. "ಮೇಷೇ ಜಾತಸ್ಯ ಧನ್ಯ ಸಪ್ತಮ ನಾಯಕಃ ಶುಕ್ರಃಕರೋತಿ ನಿಧನಂ ಇತಿ ಜ್ಯೋತಿಷ್ಕಕಾಃವಿದುಃ ॥ ೨-೭ ನೇ ಸ್ಥಾನಗಳು ಕುಂಡಲಿಯಲ್ಲಿ ಮಾರಕ ಸ್ಥಾನಗಳು. ಮೇಷ ಲಗ್ನಕ್ಕೆ ದ್ವಿತೀಯ ಹಾಗೂ ಸಪ್ತಮಾಧಿಪತಿ ಶುಕ್ರನೇ ಆಗುವನು. ಹೀಗೆ ಮಾರಕ ಗ್ರಹವನ್ನು ಕಂಡು ಹಿಡಿಯುವುದು ಗ್ರಂಥಪರಿಶೀಲನೆ ಮತ್ತು ಅನುಭವದಿಂದ ಸಾಧ್ಯ.

"ಮೇಷೇ ಜಾತಸ್ಯ ಭೌಮುಸ್ತು ಗುರು ಶುಕ್ರ ಸಮನ್ವಿತಃ। ದ್ವಿತೀಯೇ ಯದಿ ವಿದ್ಯೇತ ಯೋಗದೋ ಭವತಿ ಧ್ರುವಂ॥ ಧನದಲ್ಲಿ ಶುಕ್ರನು ಸ್ವಗೃಹದಲ್ಲಿದ್ದಂತಾಯಿತು. ಮಂಗಳ ಲಗ್ನಾಧಿಪತಿ, ಗುರು ಭಾಗ್ಯಾಧಿಪತಿ, ಇವರಿಬ್ಬರ ಸಂಯೋಗ ಮತ್ತು ಶುಕ್ರಯೋಗದಿಂದ ಕೇಂದ್ರ ಕೋನಗಳ ಸಂಬಂಧವಾಗುವುದು.

"ಮೇಷೇ ಜಾತಸ್ಯ ಭೌಮುಸ್ತು ಗುರುಣಾ ಚ ಸಮನ್ವಿತಃ । ಚತುರ್ಥಸ್ತೋ ಯದಿ ಭವೇತ್ ಯೋಗದೋ ಭವತಿಧ್ರುವಂ ॥" ಮೇಷಲಗ್ನ ನಾಲ್ಕನೆಯ ಮನೆಯಲ್ಲಿ ಮಂಗಳನಿದ್ದಾನೆ. ನಾಲ್ಕನೆಯ ಮನೆಯಾದ ಕರ್ಕಟಕ ರಾಶಿ ಮಂಗಳನಿಗೆ ನೀಚವಾದುದು. ಆದರೆ ಅಲ್ಲಿ ಗುರು ಉಚ್ಚನಾಗಿರುವುದರಿಂದ ಮಂಗಳನ ನೈಚ್ಯಭಂಗವಾಗುವುದು. ಆದ್ದರಿಂದ ಯೋಗಕಾರಕನಾಗುವನು.

"ಮೇಷೇ ಜಾತಸ್ಯ ಲಗ್ನಸ್ಥೋ ಭಾನುಃ ಕರ್ಕಟಕೇ ಯದಿ॥ ಚಂದ್ರೋ ಯದಿ ಭವೇಜ್ಜಾತಃ ರಾಜಯೋಗಂ ಸಮಶ್ನುತೇ"॥ ಮೇಷದಲ್ಲಿ ಜನಿಸಿದವನ ಲಗ್ನದಲ್ಲಿ ಸೂರ್ಯನು ಕರ್ಕಟಕದಲ್ಲಿ ಎಂದರೆ ಚತುರ್ಥದಲ್ಲಿ ಅರ್ಥಾತ್ ಸ್ವಭವನದಲ್ಲಿ ಚಂದ್ರನಿದ್ದರೆ ರಾಜಯೋಗ ಫಲವಿದೆ. ಮೇಷ ಲಗ್ನದವರಿಗೆ ಶುಕ್ರ ಗುರು ಸೂರ್ಯರು ದಶಮದಲ್ಲಿದ್ದರೆ ಗಂಗಾಸ್ನಾನ ಘಟಿಸುತ್ತದೆಂದ ರಾಮಾನುಜರೆನ್ನುತ್ತಾರೆ.

"ವೃಷಭೇ ಜಾಯಮಾನಸ್ಯ ಕುಜಃ ಸಪ್ತಮಗಃ ಶುಭಃ ಲಾಭಸ್ಥೌ ಭಾನುಭಾಗ್ಯೇಶೌ ದೀರ್ಘಾಯುರ್ಯೋಗವಾನ್ ಭವೇತ್"॥ ವೃಷಭ ಲಗ್ನದವರಿಗೆ ಸಪ್ತಮದಲ್ಲಿ ಮಂಗಳನಿದ್ದರೆ ಶುಭ. ಲಾಭದಲ್ಲಿ ಸೂರ್ಯ ಮತ್ತು ಭಾಗ್ಯಾಧಿ-

ಹತಿಗಳಿದ್ದರೆ ದೀರ್ಘಾಯುಯೋಗವುಂಟು. ವೃಷಭಲಗ್ನ ಗುರು ಬುಧ ಸಂಬಂಧವೆಂದರೆ ಧನಯೋಗವಿದೆಯೆಂದರ್ಥ. ಹೀಗೆ ಅವರಿಬ್ಬರ ಸಂಬಂಧವುಂಟಾದಾಗ ಬುಧ ಧನಾಧಿಪತಿಯಾಗುವನು. ಗುರು ಧನಕಾರಕನೆನಿಸುವನು.

"ಮಂದ ಸೌಮ್ಯ ಕುಜಾ ಭಾಗ್ಯೇ ರಾಹುಃ ಕುಂಭಗತೋ ಯದಿ ॥ ಕುಜರಾಹುದಶಾ ಗಂಗಾಸ್ನಾನದಾ ವೃಷಜನ್ಮದಾ ಭೃಗುಭೌಮೇಂದವಃ ಖೇಚಾಃ ಧನಸ್ಥಾನೇ ಸ್ಥಿತಾ ಯದಿ॥ ಶುಕ್ರದಾಯೇ ಧನಪ್ರಾಪ್ತಿಂ ಯುಗ್ಮಜಾತಃ ಸಮಶ್ನುತೇ" ಮಿಥುನ ಲಗ್ನಕ್ಕೆ ಲಾಭಾಧಿಪತಿ ಮಂಗಳನೂ ಕೋಣಾಧಿಪತಿ ಶುಕ್ರನೂ ಧನಪತಿ ಚಂದ್ರನೂ ಇದ್ದು ಇವರ ಯೋಗ ಧನಸ್ಥಾನದಲ್ಲಿದ್ದರೆ ಉತ್ತಮ ಧನಯೋಗವುಂಟು. ಇದು ಶುಕ್ರನ ಮಹಾದಶೆಯಲ್ಲಾಗಲಿ ಅಂತರ್ದಶೆಯಲ್ಲಾಗಲಿ ಸಿಗುವದು. ಆದ್ದರಿಂದ ಮಂಗಳ ನೀಚನಾಗಿದ್ದರೂ ನೈಚ್ಯಭಂಗವಾಗುವದು.

"ಕರ್ಕಟೇ ಜಾಯಮಾನಸ್ಯ ಲಗ್ನೇ ಚಂದ್ರಜೀವೌ ತು ಲಗ್ನಗೌ ॥ ರಾಜಯೋಗ ಇತಿ ಪ್ರೋಕ್ತಃ ಭಾಗ್ಯವಾನ್ ಕೀರ್ತಿವಾನ್ ಭವೇತ್" ಕರ್ಕಟಕ ಲಗ್ನದಲ್ಲಿ ಗುರುಚಂದ್ರರಿದ್ದರೆ ಭಾಗ್ಯವಂತನಾಗುವನು.

"ಕರ್ಕಟೇ ಜಾಯಮಾನಸ್ಯ ಲಗ್ನೆ ಚಂದ್ರೇ ಸ್ಥಿತೋ ಯದಿ ॥ ತುಲಾಯಾಂ ಯದಿ ಮಂದಸ್ತು ರಾಜಯೋಗ ಉದೀರಿತಃ" ಕರ್ಕಟಕ ಲಗ್ನದಲ್ಲಿ ಹುಟ್ಟಿದವರ ಲಗ್ನದಲ್ಲಿ ಚಂದ್ರನೂ ತುಲಾ ರಾಶಿಯಲ್ಲಿ ಶನಿಯೂ ಇದ್ದರೆ ರಾಜಯೋಗವುಂಟೆನ್ನುವರು.

ಸಿಂಹಜಾತರಿಗೆ ಹೀಗೆ ಫಲಗಳಿವೆಯಂತೆ:—
"ಶನಿ ಮಂದೌ ವ್ಯಯಸ್ಥಾಚೇತ್ ಶನಿದಾಯೇ ಸಮಾಗಮೇ। ಶನಿರ್ಯುಗ್ಮಪ್ರದಃ ಸತ್ಯಂ ಸಿಂಹಜಾತಸ್ಯ ನೈ ಧ್ರುವಂ॥ ಚಂದ್ರಶುಕ್ರೌ ಸಪ್ತಮಸ್ಥೌ ಲಾಭಸ್ತ್ರೋ ಯದಿ ವಾ ಗುರುಃ ॥ ಮೇಷೇ ರವಿರ್ಗುರುರ್ದಾಯೇ ಶುಕ್ರದಾಯೇ ಸಮಾಗಮೇ॥ ಚತಸ್ರಃ ಪಂಚ ವಾ ಜೀವತ್ ಕಲತ್ರಾಣಿ ನ ಸಂಶಯಃ ॥ ಕನ್ಯಾಯಾಂ ಜಾಯಮಾನಸ್ಯ ರಾಜತುಲ್ಯಸ್ಯ ಕಾಮಿನಃ" ಎಂಬೀ ಪದ್ಯದಲ್ಲಿ ವ್ಯಾಕರಣ ದೋಷಗಳಿರುವವು.

ಕನ್ಯಾ ಲಗ್ನಕ್ಕೆ ಸಪ್ತಮದಲ್ಲಿ ಚಂದ್ರ ಶುಕ್ರರಿದ್ದರೆ ಶುಕ್ರನು ಉಚ್ಚರಾಶಿಯಲ್ಲಿರುವನು. ಚಂದ್ರನು ಗುರುವಿನ ದೃಷ್ಟಿಯಲ್ಲಿರುವನು. ಇವರಿಗೆ ಏಕಭಾರ್ಯಾಯೋಗವುಂಟೆಂದು ರಾಮಾನುಜಾಚಾರ್ಯರ ಹೇಳಿಕೆ.

"ಕನ್ಯಾಯಾಂ ಜಾಯಮಾನಸ್ಯ ಗುರುಶುಕ್ರೌ ಚತುರ್ಥಗೌ ॥ ಗುರುಶುಕ್ರದಶಾಕಾಲೇ ಯೋಗದೋಭವತಿ ಧ್ರುವಂ ॥ ತುಲಾಲಗ್ನೇತು ಜಾತಸ್ಯ ಶನಿರ್ಯೋಗಪ್ರದೋ ಭವೇತ್ । ತೃತೀಯ ಷಷ್ಠನಾಥೋಪಿ ಗುರುರ್ಯೋಗಪ್ರದೋ ಭವೇತ್ ॥ ತುಲಾಯಾಂ ಜಾಯಮಾನಸ್ಯ ಶುಕ್ರಸೂರ್ಯಬುಧಾ ಯದಿ ॥ ಲಗ್ನಸ್ಥಾ ಭಾಗ್ಯವಾನ್ ಜಾತಃ ಧನವಾಂಶ್ಚಾ ಭವೇದ್ಧ್ರುವಂ ॥ ತುಲಾಯಾಂ ಜಾಯಮಾನಸ್ಯ ಲಗ್ನೇ ಮಂದೇ ಸ್ಥಿತೇ ಯದಿ ॥ ಕರ್ಕಟೇ ಯದಿ ಚಂದ್ರಸ್ತು ರಾಜಯೋಗ ಉದೀರಿತಃ ॥ ವೃಶ್ಚಿಕೇ ಜಾಯಮಾನಸ್ಯ ಗುರು ಸೌಮ್ಯ ಪರಸ್ಪರಂ ಸಂಬಂಧಿನೋ ಯದಿ ಭವೇತ್ ವಿಶೇಷ ಧನಯೋಗಃ" ಇಲ್ಲಿಯು ಕೂಡ ವ್ಯಾಕರಣ ದೋಷಗಳಿರುವವು. ಮುಂದಿನ ಆವೃತ್ತಿಯಲ್ಲಿ ಇವನ್ನು ಸರಿಪಡಿಸಿಕೊಳ್ಳುವರೆಂದು ಆಶಿಸಬಹುದಾಗಿದೆ.

"ಗುರುಸೌಮ್ಯೌ ಪಂಚಮಸ್ಥೌ ಲಾಭೇ ಚಂದ್ರೋಭವೇದ್ಯದಿ ॥ ಬಹುಭಾಗ್ಯಧನೋಪೇತಃ ಕೋಟಿಜನ್ಮಾನಸಂಶಯಃ ಮಕರೇ ಜಾಯಮಾನಸ್ಯ ಚಂದ್ರಕರ್ಕಟಕೇಸ್ಥಿತಃ ॥ ಮಕರಸ್ಥಧರಾಸೂಯಃ ರಾಜಯೋಗಪ್ರದೋ ಭವೇತ್."

ಕುಂಭಲಗ್ನದಲ್ಲಿ ಹುಟ್ಟಿದವರಿಗೆ ನವಮದಶಮಾಧಿಪತಿಗಳ ಸಂಬಂಧ, ಮಂಗಳಶುಕ್ರಯೋಗ

ಇವು ಯೋಗಕಾರಕವಾಗುವುದಿಲ್ಲವೆಂದು ಭಾವಾರ್ಥರತ್ನಾಕರದಲ್ಲಿ ಹೇಳಿದೆ. ಇದು ಚರ್ಚಾಸ್ಪದ. ಮೀನಲಗ್ನದಲ್ಲಿ ಗುರು ಇದ್ದರೆ ಸ್ತ್ರೀ ಸಂತಾನವನ್ನು ಕೊಡುವನು. ದ್ವಿತೀಯದಲ್ಲಿ ಚಂದ್ರನೂ ಪಂಚಮದಲ್ಲಿ ಮಂಗಳನೂ ಇದ್ದರೆ ಬುಧದಶೆಯಲ್ಲಿ ಧನಾಗಮ. ಇಲ್ಲಿ ಚಂದ್ರ ಮಂಗಳನಿಗೆ ಪರಸ್ಪರ ಪರಿವರ್ತನ ಯೋಗವಾಗುವದು ಗುರು ದಶಮದಲ್ಲಿದ್ದರೆ ಒಳ್ಳೆಯ ಯೋಗಕಾರಿಯಾಗುವನು.

ಎರಡನೆಯ ಅಧ್ಯಾಯದ ಹೆಸರು ಧನಯೋಗ ತರಂಗವೆಂದು. ಇಲ್ಲಿ ಮಹತ್ವದ ಧನಯೋಗಗಳನ್ನು ಸಂಗ್ರಹವಾಗಿ ಹೇಳಲಾಗಿದೆ. ‘‘ ಗುರೋಶ್ಚ ಧನಕಾರಸ್ಯ ಧನಾಧಿಪತಿನಾಸಹ। ಸಂಬಂಧಶ್ಚ ಬುಧೇನಾಪಿ ಧನಯೋಗ ಉದೀರಿತಃ॥ ಗುರು ಧನಕಾರಕ. ಧನಾಧಿಪತಿಯೊಡನೆ ಅವನಿಗೆ ಸಂಬಂಧವಿದ್ದರೆ ಧನಾಗಮವಾಗುವುದು. ಲಗ್ನ, ಧನ, ಲಾಭ, ಪಂಚಮ ನವಮಾಧಿಪರ ಪರಸ್ಪರ ಸಂಬಂಧವು ಧನಾರ್ಜನೆ ಮಾಡುವುದು.

“ಸಪ್ತಮಾಧಿಪತಿಶ್ಚಂದ್ರೋ ಧನಸ್ಥಾನೇ ಸ್ಥಿತೋ ಯದಿ। ಕೇವಲೇಂದುಶ್ಚ ಧನಶೋ ನಷ್ಟದ್ರವ್ಯಾಗಮೋ ಭವೇತ್.’’ ಮಕರ ಲಗ್ನಕ್ಕೆ ಈ ಯೋಗ ಬರುವುದು.

ವಿದ್ಯಾತರಂಗವು ಇನ್ನೊಂದು ಅಧ್ಯಾಯದ ಹೆಸರು. ಅದರಲ್ಲಿ ಜಾತನ ವಿದ್ಯಾಭವಿಷ್ಯ ಭಾವವನ್ನು ಹೇಳಿದೆ.

“ ಶುಕ್ರಶ್ಚತುರ್ಥಗೋಯಸ್ಯ ಗಾನವಿದ್ಯಾವಿಶಾರದಃ। ಚತುರ್ಥಶ್ಚೇತ್ ಸೋಮಸುತೋ ಜ್ಯೋತಿಶ್ಶಾಸ್ತ್ರ ವಿಶಾರದಃ ” ಚತುರ್ಥ ದ್ವಿತೀಯ ಭಾವಗಳನ್ನು ವಿದ್ಯೆಗಾಗಿ ವಿಚಾರಿಸುವರು. ಶುಕ್ರಬುಧರು ವಿದ್ಯೆಗಳನ್ನು ಕೊಡುವವರು. ಅದರಂತೆ ರವಿಯಾಗಲಿ, ಬುಧರಾಹುಗಳಾಗಲಿ ಪಂಚಮದಲ್ಲಿದ್ದರೆ ಜ್ಯೋತಿಶ್ಶಾಸ್ತ್ರ ಪಾರಂಗತರಾಗುವರೆಂದು ಭಾವಾರ್ಥರತ್ನಾಕರಕಾರರ ಮತ.

“ ದ್ವಿತೀಯಸ್ಥೌ ರವಿಕುಜೌ ತರ್ಕಶಾಸ್ತ್ರವಿಶಾರದಃ ಪಂಚಮಸ್ಥೌ ಮಂದಭಾನುಬುಧಾವೇದಾಂತಪಾರಗಃ ದ್ವಿತೀಯಸ್ಥೋ ಯದಿ ಭೃಗುಃ ಕವಿತಾಧರ್ಮಮಶ್ನುತೇ ದ್ವಿತೀಯಸ್ಥೋ ಯದಿ ಗುರುಃವೇದವೇದಾಂಗ ಪಾರಗಃ॥ ಸ್ವೋಚ್ಚ ಸ್ವಕ್ಷೇತ್ರಯುಕ್ತಶ್ಚೇತ್ ಭವೇದೇವಂ ನ ಸಂಶಯಃ ಸಭಾಪೂಜ್ಯಶ್ಚ ಸಂಪೂರ್ಣ ವಿದ್ಯಾವಾನ್ ಭವತಿ ಧ್ರುವಂ। ವಾಕ್‌ಸ್ಥೌ ನಾಥೋ ವಾಕ್ಪತಿಶ್ಚ ಕೇಂದ್ರ ಕೋಣೇಷು ಸಂಸ್ಥಿತೌ ಸರ್ವವಿದ್ಯಾ ಪ್ರವೀಣಸ್ಯಾತ್ ಸಭಾಪೂಜ್ಯೋ ನ ಸಂಶಯಃ ದ್ವಿತೀಯಸ್ಥೋ ಯದಿಭೃಗುಃ ಕಾವ್ಯಾಲಂಕಾರ ಶಾಸ್ತ್ರವಾನ್। ಸುಖಸ್ಥಾನಂಗತೋವಾಪಿ ಪಶ್ಯನ್ನಪಿಗುರುರ್ಯದಿ। ಬಹುಸಖ್ಯಮವಾಪ್ನೋತಿ ಜಾತಸ್ತತ್ರ ನ ಸಂಶಯಃ ಅಪ್ರಮಸ್ಥೇ ಶನೌ ಜಾತೋ ದೀರ್ಘಾಯುಷ್ಯಮವಾಪ್ನುಯಾತ್ । ಯದ್ಭಾವ ಕಾರಕೋ ಲಗ್ನಾತ್ ವ್ಯಯೇತಿಷ್ಠತಿಚೇದ್ಯದಿ ತಸ್ಯಭಾವಸ್ಯ ಸರ್ವಸ್ಯ ಭಾಗ್ಯಯೋಗ ಇತೀರಿತಃ ಪೂರ್ಣಚಂದ್ರೋವಿಲಗ್ನಸ್ಥೋ ಧನವಾನ್ ಗುಣವಾನ್ ಭವೇತ್ ಚತುರ್ಥೇಶಯುತೋ ಭೌಮೋ ಕ್ಷೇತ್ರವಾನ್ ಭವತಿ ಧ್ರುವಂ. ಸಪ್ತಮಸ್ಥಃಸ್ಯೆಂಹಿಶೇಯೋ ಯೋದದೋ ಭವತಿ ದ್ರುವಂ ತೃತೀಯ ಭಾಗ್ಯಗೋಮಂದೋ ಯೋಗಪ್ರದ ಇತಿಸ್ಮೃತಿಃ ತೃತಿಯಾಷ್ಟಮಭಾಗ್ಯಸ್ಥೋ ಗುರುರ್ಯೋಗಪ್ರದೋ ಭವೇತ್ ದ್ವಾದಶಸ್ಥೋ ಯದಿಗುರುಃ ದೇವಲೋಕಂ ಸಮಶ್ನುತೆ.’’

ಹತ್ತನೆಯ ತರಂಗವು ಮಾರಕದಶಾಫಲಗಳನ್ನು ವಿವರಿಸುತ್ತದೆ. ಜಾತಕಚಂದ್ರಿಕೆಯಲ್ಲಿ ಕೂಡ ಮಾರಕದಶೆಯ ವಿವೇಚನೆಯಿದೆ. ಮಾರಕದಶೆಯನ್ನು ಭಾವಾದಿಗಳಿಂದ ಕಂಡುಹಿಡಿಯುವುದು ಕಷ್ಟದ ಮಾತು. ಅದಕ್ಕೆ ಯೋಗ್ಯ ಅಧಿಕಾರ ಬೇಕು. ಜಾತನಿಗೆ ಪಾಪಗ್ರಹಗಳ ದಶೆಯಲ್ಲಿ ಪಾಪಗ್ರಹದ ಅಂತರ್ದಶೆ ಬಂದಾಗ ಮಾರಕ ಯೋಗವಾಗುವುದು. ಮೊದಲು ಜಾತನು ಅಲ್ಪಾಯುವೊ ?, ಮಧ್ಯಾಯುವೊ ? ದೀರ್ಘಾಯುವೊ ? ಎಂದು ನೋಡಿ ಅನಂತರವೇ ಮಾರಕದಶೆಯ ಅನ್ವೇಷಣೆ ಮಾಡಬೇಕು. ಎರಡನೆಯದು ಏಳನೆಯದು ಇವೆರಡು ಮಾರಕಭಾವಗಳು. ಇವುಗಳ ಅಧಿಪತಿಗಳ ದಶಾಂತರ್ದಶೆಯಲ್ಲಿ ೩-೬-೧೧ ಭಾವಾಧಿಪತಿಗಳ ದಶೆಯಲ್ಲಿ ಮತ್ತು ಅಂತರ್ದಶೆಯಲ್ಲಿ ಅಲ್ಲದೆ ಕೊನೆಯದಾಗಿ ೮-೧೨ ಭಾವಗಳ ಅಧಿಪತಿಗಳ ದಶೆಯಲ್ಲಿ ಯಾವ ಗ್ರಹವೂ ಮಾರಕವಾಗಿರದಿದ್ದಾಗ ಕೆಲವು ವೇಳೆ ಶನಿ ಮುಂದೆ ಮಾರಕನಾಗಿ ಬರುವುದುಂಟು. “ ಸರ್ವಾನತಿ-





















ಕ್ರಮ್ಯ ವರ್ತತೇ ಪಾಪಕೃತ್ ಶನಿಃ'' ಎಂದು ಜಾತಕ ಚಂದ್ರಿಕೆ ಹೇಳುವುದರ ಅರ್ಥ ಇದೇ. ಕೊನೆಯ ಹೊಡೆತ ಶನಿಯದೇ ಎಂದು ಲೀಪ್ಲೊರವರ ಅಭಿಪ್ರಾಯ. ರವಿ ಶನಿ ಕೇಂದ್ರ ಪ್ರತಿಯೋಗವಾದಲ್ಲಿ ಮರಣಸಂಭವವೆಂದು ರಾಫೇಲರ ಹೇಳಿಕೆಯುಂಟು. ಮಾರಕದಶೆಗಳನ್ನು ಕಂಡುಹಿಡಿಯಲು ಭಾವಾರ್ಥ ರತ್ನಾಕರದಲ್ಲಿಯೂ ತುಂಬ ಉಪಯುಕ್ತವಾದ ಸೂಚನೆಗಳಿವೆ.

"ಷಷ್ಠನಾಥ ದಶಾಕಾಲೇ ಅಷ್ಟಮಸ್ಥಾ ಖಗಸ್ಯಚ ಹೃತಾಜಾತಸ್ಯ ನಿಧನಂ ವದಂತಿ ವಿಬುಧೋತ್ತಮಾಃ''

ಷಷ್ಠಾಧಿಪತಿಯ ಮಹಾದಶೆಯಲ್ಲಿ ಅಷ್ಟಮಸ್ಥಾನ ಗ್ರಹದ ಅಂತರ್ದಶೆ ಬಂದಾಗ ಮೃತ್ಯು ಸಂಭವವುಂಟು. ಸುರಪುರದ ವೆಂಕಟಪ್ಪನಾಯಕನಿಗೆ ೨೪ ನೇ ವರ್ಷದಲ್ಲಿ ಮರಣವೆಂದು ಟೇಲರ ಸಾಹೇಬನ ಮುಂದೆಯೇ ಒಬ್ಬ ಜ್ಯೋತಿಷಿ ಹೇಳಿದ್ದನೆನ್ನಲಾಗುತ್ತಿದೆ. ಅದಕ್ಕೆ ಮೇಲಿನ ಶ್ಲೋಕಾಧಾರವನ್ನು ಆತ ಕೊಟ್ಟಿದ್ದನಂತೆ. ಭಾವಾರ್ಥ ರತ್ನಾಕರದಿಂದ ಇಂತಹ ಅನೇಕ ರಹಸ್ಯಗಳನ್ನು ಶೋಧಿಸಲು ಅವಕಾಶವುಂಟು.

ಅಷ್ಟಮಸ್ಥಾನ ಪಾಪಗ್ರಹದ ದಶೆಯಲ್ಲಿ ಷಷ್ಠಾಧಿಪತಿಯ ಅಂತರ್ದಶೆ ಕೂಡ ಮಾರಕವಾಗುವುದು. ರವಿ ಶುಕ್ರರು ಪಿತೃ ಮಾರಕರು ಅವರ ಶೂಲದಶೆಯಲ್ಲಿ ತಂದೆಯ ಮರಣ. ಚಂದ್ರ ಮಂಗಳರಲ್ಲಿ ಯಾರು ಬಲಿಷ್ಠರೋ ಅವರ ಶೂಲದಶೆಯಲ್ಲಿ ಮಾತೃಮರಣ "ಗುರು ಶೂಲೇ ಕಲತ್ರಂ'' ಎಂದು ಹೇಳಿರುವರು.

೧೩ನೇ ತರಂಗದಲ್ಲಿ ಗ್ರಹ ಮಾಲಿಕಾಯೋಗಗಳ ಬಗ್ಗೆ ಸಾಕಷ್ಟು ವಿವರಣೆಯಿದೆ. ಹದಿನಾಲ್ಕನೆಯ ಅಧ್ಯಾಯ ಗ್ರಹ ಸ್ವಕ್ಷೇತ್ರ ಮುಂತಾದ ವಿಚಾರವರ್ಗ ವಿಸ್ತಾರ ವಿವರಣೆ ದೊರೆಯುವುದು. ಹೀಗೆ ಭಾವಾರ್ಥರತ್ನಾಕರವು ಜ್ಯೋತಿಷ್ಯ ಶಾಸ್ತ್ರದಲ್ಲಿ ಅಭಿರುಚಿಯುಳ್ಳವರಿಗೆ ಉಪಯುಕ್ತವಾದ ಹಾಗೂ ಅವರು ಓದಬೇಕಾದಂಥ ಒಂದು ಉತ್ತಮ ಗ್ರಂಥವಾಗಿದೆ ಎಂದಿಷ್ಟೇ ಹೇಳಬಹುದು.

---

ಈ ಜಗತ್ತು ಒಂದು ಹುಚ್ಚರ ಆಸ್ಪತ್ರೆಯಂತಿರುವದು. ಜಗತ್ತಿನಲ್ಲಿರುವ ಮಾನವರೆಲ್ಲರೂ ಹುಚ್ಚರೇ. ಕೆಲವರಿಗೆ ಹಣದ ಹುಚ್ಚು; ಇನ್ನು ಹಲವರಿಗೆ ಹೆಣ್ಣಿನ ಹುಚ್ಚು; ಇನ್ನೂ ಕೆಲವರು ಖ್ಯಾತಿಯ ಹುಚ್ಚಿನವರು. ಕೀರ್ತಿಕನ್ಯೆಗಾಗಿ ಹುಚ್ಚರಾದವರೂ ಇದ್ದಾರೆ. ಆದರೆ ಕೆಲವರು ಮಾತ್ರ ದೇವರ ಹುಚ್ಚಿನವರು ಇರುವರು. ನಾನು ದೇವರ ಹುಚ್ಚಿನವನಾಗಬಯಸುವೆ. ಕ್ಷಣಮಾತ್ರದಲ್ಲಿ ಪುಟಕ್ಕಿಟ್ಟ ಚಿನ್ನವು ಶುದ್ಧವಾಗುವಂತೆ ನಮ್ಮ ಮನದ ಮಾಲೀನ್ಯವನ್ನು ಈ ದೇವರ ಹುಚ್ಚು ಕಳೆಯುವದು. ದೇವರ ಬಗೆಗೆ ವಿಚಾರಿಸುವಾಗ ಕೆಲವರು ಪಶ್ಚಾತ್ತಾಪದಗ್ಧರಾಗಿ ಕಣ್ಣೀರು ತೆಗೆಯುತ್ತಾರೆ: ಕೆಲವರು ಆನಂದದಿಂದ ಹಾಡುತ್ತಾರೆ. ಕೆಲವರು ಮುಕ್ತರಾದೆವೆಂದು ನಗುತ್ತಾರೆ. ಕೆಲವರು ಆಶ್ಚರ್ಯಕರವಾದ ಸಂಗತಿಗಳನ್ನು ಹೇಳುತ್ತಾರೆ. ಆದರೆ ಇವರೆಲ್ಲರೂ ಹೇಳುವದು-ಮಾಡುವದು ಆ ಪರಮಾತ್ಮನನ್ನು ಕುರಿತು ಮಾತ್ರ.

—ಶ್ರೀರಾಮಕೃಷ್ಣಪರಮಹಂಸರು

# ಯಕ್ಷಗಾನ



ಯಕ್ಷಗಾನದ ಬಗೆಗೆ ಈಗಾಗಲೇ ಹಲವರು ಬರೆದಿದ್ದಾರೆ. ಇನ್ನೂ ಬರೆಯಲಿದ್ದಾರೆ. ಆದರೆ ಈ ವಿಷಯ ಬರೆದಷ್ಟೂ ಮುಗಿಯದಂತಹದಾಗಿದೆ. ಹೊಸ ಹೊಸ ಅಂಶಗಳು ಬೆಳಕಿಗೆ ಬರುತ್ತಿವೆ. ಈ ಪದ್ಧತಿಯಲ್ಲಿ ಈಗೀಗ ಅನೇಕ ಬದಲಾವಣೆಗಳೂ ಸಂಭವಿಸುತ್ತಿವೆ. ಆದರೆ ಅದರಿಂದ ಕಲೆಯ ಮೂಲಸ್ವರೂಪಕ್ಕೆ ಧಕ್ಕೆ ಬರುವಂತಾಗತೊಡಗಿದೆ. ಇದು ಕಲೆಗೆ ಅಪಚಾರ ಬಗೆದಂತೆಂದು ಲೇಖಕರು ಅಭಿಪ್ರಾಯಪಟ್ಟು ಯಕ್ಷಗಾನದ ಬಗೆಗೆ ವೈಶಿಷ್ಟ್ಯಪೂರ್ಣವಾದ ಚಿತ್ರವನ್ನಿಲ್ಲಿ ಕೊಟ್ಟಿರುವರು.

ಲೇಖಕರು : ಶ್ರೀ ಕೆ. ಗೋಪಾಲಕೃಷ್ಣ ಭಟ್ಟ, ಮಂಗಳೂರ.

ಯಕ್ಷಗಾನದ ಕುರಿತು ಲೇಖನ, ಭಾಷಣ, ವಿವೇಚನೆ, ಪುಸ್ತಕಗಳು ಬೇಕಾದಷ್ಟಾಗಿವೆ; ಆಗುತ್ತಲೂ ಇವೆ. ಇದರಿಂದ ಯಕ್ಷಗಾನದ ಜನಪ್ರಿಯತೆಯೂ ಜನಾಸಕ್ತಿಯೂ ವಿದಿತವಾಗುತ್ತದೆ. ಯಾರು ಏನು ಹೇಳಿದರೂ ಬರೆದರೂ ಇದರ ಕುರಿತು ಚರ್ವಿತಚರ್ವಣವಾಯಿತೆಂದಾಗಲಿ ಪೂರ್ಣ ಪರಿಜ್ಞಾನವಾಯಿತೆಂದಾಗಲಿ ಎನಿಸುವುದಿಲ್ಲ. ಏಕೆಂದರೆ ಇದರ ಹುಟ್ಟಿನಿಂದ ಇಂದಿನ ವರೆಗಿನ ಸರಿಯಾದ ಚರಿತ್ರೆಯಾಗಲಿ, ಬಳವಿಯ ವಿವರವಾಗಲಿ ಗ್ರಂಥಸ್ಥವಾಗಿಲ್ಲ. ಇದಕ್ಕೆ ಅನೇಕ ಕಾರಣಗಳನ್ನು ಕೊಡಬಹುದು. ಆದರೆ ಮುಂದೆ ಈ ವಿಷಯವಾಗಿ ಅಧಿಕೃತ ಚರಿತ್ರೆ, ಲಕ್ಷಣಶಾಸ್ತ್ರ ಮುಂತಾದವುಗಳು ಪ್ರಕಟವಾಗಲಿ ಎಂಬ ಹಾರೈಕೆ ವಿಫಲವಾಗದು.

"ಯಕ್ಷಗಾನ', ಎಂಬುದರ ಕುರಿತು ಅನೇಕ ರೀತಿಯ ಅರ್ಥ-ವಿವರಣೆಗಳು ಬಂದಿವೆ. ಇದು ಯಕ್ಷರ ಗಾನವೆಂದೂ ಯಕ್ಷೇಶ್ವರನಾದ ಕುಬೇರನಿಂದ ಮೊದಲಾಯಿತೆಂದೂ ಹೇಳುತ್ತಾರೆ. ಹಾಗೆಯೇ ದೇವಗಾನ, ಗಂಧರ್ವಗಾನ, ಯಕ್ಷಗಾನ ಎಂಬ ಮೂರು ಕವಲು ಮೊದಲಿನಿಂದಲೂ ಇದ್ದಿರಬೇಕೆಂಬ ವಾದವೂ ಇದೆ. ಯಕ್ಷ ಎಂಬುದಕ್ಕೆ ಯಜ್ಞ, ಪೂಜೆ ಎಂಬರ್ಥಗಳಿರುವದರಿಂದ ಇದು ಪೂಜಾಗಾನ (ದೇಶ್ಯಪದ್ಧತಿಯದು) ಎಂದೂ ವಿವರಿಸಲ್ಪಡುತ್ತದೆ. ಕೆಲವರು ಯಕ್ಷಗಾನವೆಂಬ ಹೆಸರನ್ನೇ ಅಲ್ಲಗಳೆದು, ಇದಕ್ಕೆ ಯಕ್ಷನಾಟಕವೆಂಬ ಹೆಸರನ್ನು ಕೊಡುತ್ತಾರೆ. ಈ ಎಲ್ಲ ವಾದಗಳನ್ನು ಇದಮಿತ್ಥಂ ಎಂದು ನಿರ್ಧರಿಸಿ ಹೇಳುವವರು ಇಲ್ಲವೊ ಏನೊ!

ಯಕ್ಷಗಾನದ ಹುಟ್ಟಿನ ವಿಷಯವಾಗಿ ಅನೇಕ ಊಹೆಗಳಿವೆ. ಕೆಲವರು ಕೇರಳದ ಕಥಕ್ಕಳಿಯೇ ಇದಕ್ಕೆ ಮೂಲವೆಂದೂ ಕೆಲವರು ದೆವ್ವಗಳ ಕುಣಿತಗಳಿಂದ ಇದು ರೂಪಾಂತರಗೊಂಡಿತೆಂದೂ ಇನ್ನೂ ಕೆಲವರು 'ನಕ್ತ ಮೆಟ್ಟು'ವ ಕ್ರಮದಿಂದ ಇದು ಹುಟ್ಟಿಕೊಂಡಿತೆಂದೂ ಊಹಿಸುವುದಿದೆ. ಈ ವಿಷಯದಲ್ಲಿ ಒಂದು ಸಿದ್ಧಾಂತಕ್ಕೆ ಬರುವುದು ಅಸಾಧ್ಯವಾಗಿದೆ. ಆದರೂ ಈಗ ಇದು ಕನ್ನಡ ನಾಡಿನ ವಿಶಿಷ್ಟ ಕಲೆಯಾಗಿದೆ.

## ಪ್ರಾಚೀನತೆ

ಯಕ್ಷಗಾನದ ಪ್ರಾಚೀನತೆಯನ್ನು ಸಾಧಿಸುತಾ ಹಲವರು ಹಲವು ಆಧಾರಗಳನ್ನು ಕೊಡುತ್ತಾರೆ. ಇವೆಲ್ಲ ಪೂರ್ಣ ಸತ್ಯಗಳೆಂದು ಹೇಳುವಂತಿಲ್ಲ. ಏಕೆಂದರೆ, ರತ್ನಾಕರವರ್ಣಿಯ ಭರತೇಶ ವೈಭವದಲ್ಲಿ ಬರುವ ಎಕ್ಕಲಗಾಣ, ಎಕ್ಕಡಿಗ ಮುಂತಾದ ಪದಗಳು ಯಕ್ಷಗಾನವನ್ನೂ ಯಕ್ಷಗಾನದ ಪಾತ್ರಧಾರಿಗಳನ್ನೂ ನಿರ್ದೇಶಿಸುತ್ತವೆ ಎನ್ನುವ ವಾದವು, ಆಂಧ್ರ ಪ್ರದೇಶದಲ್ಲಿ ಒಕ್ಕುಲರೆಂಬ ಪಂಗಡದವರಿರುವರೆಂದೂ ಅವರಲ್ಲಿ ವೇಷಹಾಕಿ, ಹಾಡಿ, ಕುಣಿವ ವೃತ್ತಿ ಮೊದಲಿನಿಂದ ಇಂದಿನ ವರೆಗೂ ಇದೆಯೆನ್ನುವಾಗ, ತರ್ಕಶುದ್ಧವೆನ್ನಿಸೀತೆ? ಹೀಗೆಯೇ ಇತರ ವಾದಗಳೂ ನೆಲೆಗಾಣದಂತಾಗುತ್ತವೆ. ಆದರೂ ಬಹಳ ಪ್ರಗತಿಯನ್ನು ಪಡೆದ ಕಲೆ ಬಹಳ ಹಿಂದಿನಿಂದಲೇ ತೊಡಗಿರಬಹುದೆಂದು ಊಹಿಸಬಹುದಾಗಿದೆ.

ಯಕ್ಷಗಾನ ಪದ್ಯಗಳು ಬಗೆಬಗೆಯ ರಾಗಗಳನ್ನೊಳಗೊಂಡಿದ್ದರೂ ಹಾಡುವ ಪದ್ಧತಿಯಲ್ಲಿ ವ್ಯತ್ಯಾಸವಿದೆ. ಆದರೆ ಈಗೀಗ ಇವುಗಳನ್ನು ಸಂಗೀತಶಾಸ್ತ್ರ ಪದ್ಧತಿಯನ್ನವಲಂಬಿಸಿ ಹಾಡುತ್ತಾರೆ! ಹೀಗೆಯೇ ಯಕ್ಷಗಾನದ ಪ್ರಧಾನವಿಭಾಗವಾದ 'ಬಯಲಾಟ' ಮತ್ತು 'ತಾಳಮದ್ದಳೆ' ಎಂಬವುಗಳಲ್ಲಿ ಅನೇಕ ಬಗೆಯ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಈ ರೀತಿಯ ಸುಧಾರಣೆಗಳನ್ನು ಮೆಚ್ಚದವರೂ ಹೊಗಳುವವರೂ ಇದ್ದಾರೆ. ಅನೇಕರು ಇಂತಹ ಸುಧಾರಣೆ ಕಲೆಯ ಕೊಲೆಮಾಡುತ್ತದೆ ಎನ್ನುತ್ತಾರೆ.

ಈಗ ಬಯಲಾಟದ ಹಿಂದಣ ಕ್ರಮ ಹೇಗಿತ್ತೆಂಬುದನ್ನು ನೋಡೋಣ: (ಈ ಯಕ್ಷಗಾನದ ಹಾಡು, ಹಿಮ್ಮೇಳದ ಸಾಧನಗಳು, ವೇಷಭೂಷಣಗಳು ಇತ್ಯಾದಿಗಳಲ್ಲಿ ತೆಂಕುತಿಟ್ಟು ಮತ್ತು ಬಡಗುತಿಟ್ಟು ಎಂಬ ಎರಡು ಪದ್ಧತಿಗಳಿವೆ).

ಮಳೆಗಾಲವು ಕಳೆದ ಕೂಡಲೇ ದೀಪಾವಳಿ ಹಬ್ಬ (ಬಲಿಪಾಡ್ಯಮಿ ಎನ್ನುವುದೂ ಇದೆ) ದಂದು ಬಯಲಾಟಗಳಲ್ಲಿ ವೇಷಹಾಕಿ, ಕುಣಿದು, ಅರ್ಥ ಮಾಡುವ "ವೇಷಧಾರಿ" (ಪಾತ್ರಧಾರಿ) ಗಳೂ "ಭಾಗವತ' 'ಮದ್ದಳೆಗಾರ' 'ಚೆಂಡೆಯವ' ಮುಂತಾದ 'ಹಿಮ್ಮೇಳ' ದವರೂ ಅವುದಾದರೊಂದು ವಿಶಿಷ್ಟ ದೇವಾಲಯದಲ್ಲಿ ಒಟ್ಟುಕೂಡುವರು. ಆ ದೇವಸ್ಥಾನದ ಹೆಸರು, ಊರುಗಳ ಹೆಸರಿರಿಸಿಕೊಂಡು ಊರೂರುಹೋಗಿ ಆಟಗಳನ್ನು ತೋರಿಸುವ ಈ ಕೂಟದವರೇ 'ದಶಾವತಾರ ಆಟದ ಮೇಳ' ವೆನ್ನಿಸುವರು. ಇವರು ಆಡುವ ಆಟಗಳಿಗೆ 'ದಶಾವತಾರ ಆಟ' 'ಭಾಗವತರಾಟ' 'ಬಯಲಾಟ' ಮುಂತಾದ ಹೆಸರುಗಳೂ ಇವೆ. ಈ ಮೇಳದವರು ದೀಪಾವಳಿಯಂದು ದೇವಾಲಯದೆದುರು 'ಸೇವೆಯಾಟ' ವನ್ನಾಡುತ್ತಾರೆ. ಅವರಿಗೆ ಅಂದು 'ಪಡಿ' ಮಾತ್ರ ದೊರೆಯುತ್ತದೆ.

## ಆಟದ ಕ್ರಮ

ಆಟದ ಮೇಳವು (ಇದನ್ನು 'ಆಟದ ಪೆಟ್ಟಿಗೆ' ಎನ್ನುವದೂ ಇದೆ) ಒಂದು ಹಳ್ಳಿಗೆ ಹೋದಲ್ಲಿ, ಆ ಊರ ದೇವಸ್ಥಾನಕ್ಕಾಗಲಿ ಮುಖಂಡರ ಮನೆಗಾಗಲಿ ಹೋಗಿ ಭಾಗವತ ಮುಂತಾದ ಹಿಮ್ಮೇಳದವರು ಕೆಲವು 'ತುಂಡು ಪದ' ಹಾಡಿ ಆಟ ಆಡಿಸುವಂತೆ ವ್ಯವಸ್ಥೆ ಮಾಡಿಕೊಳ್ಳುವರು.

ಆಟವಿರುವ ದಿನ ಸಂಜೆ ಹಿಮ್ಮೇಳದವರು 'ಚೆರಿಗೆ ಅನ್ನ' ವನ್ನುಂಡು (ದೊರೆತ 'ಪಡಿಯಕ್ಕಿ' ಯನ್ನು ಒಂದು ಚೆರಿಗೆಯಲ್ಲಿ ಬೇಯಿಸುವುದು ರೂಢಿ) 'ರಂಗಸ್ಥಳ' ವಿರುವಲ್ಲಿಗೆ ಹೋಗುವರು. ರಂಗಸ್ಥಳವು ೧೮ ಮೆಟ್ಟು (ಪಾದ) ಉದ್ದ ೧೮ ಮೆಟ್ಟು ಅಗಲ ೩॥ ಕೋಲು ಎತ್ತರವಿದ್ದು ದಕ್ಷಿಣಕ್ಕೆ ಎಂದಿಗೂ ಮುಖವಾಗಿರಬಾರದು. ಇದರಿಂದ ಎಡಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ವೇಷ ಹಾಕುವ ಸ್ಥಳವಾದ 'ಚೌಕಿ' ಯಿರುತ್ತದೆ.

ಹಿಮ್ಮೇಳದವರು ಚೌಕಿಯಿಂದ ತಮ್ಮ ಸಾಮುಗ್ರಿಗಳನ್ನು ತೆಗೆದುಕೊಂಡು ಸ್ವಲ್ಪ ಎತ್ತರದ ಸ್ಥಳದಲ್ಲಿ ನಿಂತು 'ಕೇಳಿಬಡಿ' ಯುವರು. (ಕೇಳಿಬಡಿ ಎಂದರೆ ಕೇಳಿ (=ಆಟ) ಇದೆಯೆಂದು ನೆರೆಕರೆಯವರಿಗೆ ತಿಳಿಯುವಂತೆ ಬಾರಿಸುವುದು. ಶ್ರೀ. ಮಂ. ಗೋವಿಂದ ಪೈಗಳು 'ಕೇಳಿಬಡಿ' ಎಂದಾಗಬೇಕೆಂದೂ ಊರವರು ಕೇಳುವಂತೆ ಬಡಿಯುವ ಪದ್ಧತಿಯಾದುದರಿಂದ ಅದೇ ಒಪ್ಪುವುದೆಂದೂ ಸೂಚಿಸಿದ್ದಾರೆ. ಆದರೆ ಮಲೆಯಾಳದಲ್ಲಿ 'ಕೇಳಿ ಕೊಟ್ಟ್' ಎಂದು ಹೇಳುತ್ತಾರೆ) ಏಕತಾಳದಿಂದ ತೊಡಗಿ, ಇತರ ತಾಳಗಳು ನಡುವೆ ಬಂದು ಏಕತಾಳದಲ್ಲೇ ಇದು ಕೊನೆಗೊಳ್ಳುವುದು.

ಬಳಿಕ ಹಿಮ್ಮೇಳದವರು ಚೌಕಿಗೆ ಬಂದು 'ಪೆಟ್ಟಿಗೆ ಹೊರುವವ'ರ ಸಹಾಯದಿಂದ ವೇಷದ ಸಾಮುಗ್ರಿಗಳನ್ನೆಲ್ಲಾ ಬಿಡಿಸಿಟ್ಟು, 'ಸ್ವಸ್ತಿಕ'ವನ್ನಿರಿಸಿ ಗಣಪತಿ ಪೂಜೆಯನ್ನು ನೆರವೇರಿಸುವರು. ಆರತಿ ಬೆಳಗುವಾಗ 'ಸಂಗೀತಗಾರ' (ಪ್ರಧಾನ ಕಥಾಭಾಗ ತೊಡಗುವ ವರೆಗೆ ಪದ್ಯಹೇಳುವವನು) ಅಥವಾ ಭಾಗವತನು 'ಗಜಮುಖದವಗೆ ಗಣಪಗೆ . . .' ಎಂಬ ಪದ್ಯವನ್ನು ನಾತಿರಾಗ, ತ್ರಿವುಡೆ ತಾಳದಲ್ಲಿ ಹಾಡುವನು. ಈ ರಾಗವು ಕಂಠವನ್ನು ಸಡಿಲಿಸಲು ಅನುಕೂಲವಾದುದಂತೆ. ಹಿಮ್ಮೇಳದ ಚೆಂಡೆ, ಮದ್ದಳೆ, ಚಕ್ರತಾಳಗಳು ತಾಳಕ್ಕನುಸಾರವಾಗಿ ಬಾರಿಸಲ್ಪಡುತ್ತವೆ. ಬೆಳಗಿದ ಆರತಿಯನ್ನು ಅಲ್ಲಿದ್ದವರೆಲ್ಲಾ ತೆಗೆದುಕೊಂಡ ಬಳಿಕ 'ಎಲೆಪಟ್ಟ' ಹಂಚಲ್ಪಡುವುದು. ಅಷ್ಟರಲ್ಲಿ 'ಕೋಡಂಗಿ' ಗಳ (ಹಾಸ್ಯಗಾರ ಎಂಬರ್ಥ ಕೋಶಗಳಲ್ಲಿದೆ) ವೇಷ ತಯಾರಾಗುವದು. ಇಬ್ಬರು 'ದೀವಟಗೆ'ಯವರೂ ಅವರ ಹಿಂದೆ ಕೋಡಂಗಿಗಳೂ ಅನಂತರ ಹಿಮ್ಮೇಳದವರೂ ಇದ್ದು ಮೂರು ಸಾಲಾಗಿ ರಂಗಸ್ಥಳಕ್ಕೆ ಹೋಗುವರು. ಆಗ ಕೋಡಂಗಿಗಳು ಕುಣಿಯುತ್ತಲೂ ಸಂಗೀತಗಾರನು ಪದ್ಯಹಾಡುತ್ತಲೂ ಮುಂಬರಿಯುವರು. ರಂಗಸ್ಥಳದಲ್ಲಿ ಸಂಗೀತಗಾರನು ತುಂಡು ಪದಗಳನ್ನು ಹಾಡುತ್ತಾ ಕೋಡಂಗಿಗಳನ್ನು ಕುಣಿಸುವನು. ಇವರು ಮಾವಿನ ಸೊಪ್ಪನ್ನು ಕಟ್ಟಿಕೊಳ್ಳುವ ವಾಡಿಕೆಯಿರುವುದರಿಂದ ಇವರಿಗೆ 'ಮಾವಿನ ಸೊಪ್ಪಿನ ವೇಷ' ವೆಂದೂ ಹೆಸರಿದೆ. ಇವರು 'ಡೌರಂಗಿ' (ನಿಲುವಂಗಿ) ಯನ್ನು ತೊಟ್ಟು ಮುಖಕ್ಕೆ ಕೆಲವು ಬಿಳಿಯ ಗೆರೆಗಳನ್ನೆಳೆದುಕೊಂಡು, ವಿಚಿತ್ರವಾಗಿ ಕಾಣುವರು. ಇವರ ಕುಣಿತವೂ ಎಷ್ಟೋ ವೇಳೆ ವಿಚಿತ್ರ !

ಕೋಡಂಗಿಗಳ ಕುಣಿತವು ಮುಂಬರಿವಾಗಲೇ ಸಂಗೀತಗಾರನು ತನ್ನ ತಲೆಯನ್ನು ಸ್ವಲ್ಪ ಎಡಕ್ಕೆ ಬಾಗಿಸಿ, ಚೌಕಿಯಲ್ಲಿ 'ನಿತ್ಯವೇಷ'ವು ತಯಾರಾಯಿತೇ ಎಂದು ನೋಡುವನು. ಭಾಗವತನಾಗಲಿ ಇತರ ಹಿಮ್ಮೇಳದವರಾಗಲಿ ರಂಗಸ್ಥಳದ 'ಸಭಾಲಕ್ಷ್ಮಿ'ಗೆ ಬೆನ್ನುಹಾಕಬಾರದೆಂದೂ ವಿಮುಖರಾಗಿರಬಾರದೆಂದೂ ನಿಯಮವಿರುವದರಿಂದ ಈ ಆಚರಣೆಯಿದೆ. ರಂಗಸ್ಥಳದ ಎದುರುಗಡೆ ಇರಿಸುವ ಕಾಲ್ದೀಪವನ್ನು 'ಸಭಾಲಕ್ಷ್ಮಿ'ಯೆನ್ನುವರು. ಚೌಕಿಯಲ್ಲಿ ಗಣಪತಿ ಪೂಜೆಯಾಗುವುದರೊಳಗೆ, "ಗಜಮುಖ . . . ." ವನ್ನು ಹಾಡುವುದರೊಳಗೆ ಈ ದೀಪವನ್ನು ಉರಿಸಿಬಿಡುವರು. ರಂಗಸ್ಥಳಕ್ಕೆ ಬಂದೊಡನೆ ಹಿಮ್ಮೇಳದವರೂ ವೇಷಧಾರಿಗಳೂ ಈ ಸಭಾಲಕ್ಷ್ಮಿಯನ್ನು ವಂದಿಸಬೇಕು. ರಂಗಸ್ಥಳವು ದೇವಾಲಯದಂತೆ ಪವಿತ್ರವಾದುದೆಂದೇ ನಡೆದುಕೊಳ್ಳುತ್ತಿದ್ದರು. ಈ ದೀಪವು ಬೆಳಗಿನ ವರೆಗೂ ಉರಿಯುತ್ತಿದ್ದು, ಎಲ್ಲರೂ ಚೌಕಿಗೆ ಹೋಗುವಾಗ ಮುಂದಿನಿಂದ ಒಯ್ಯಲ್ಪಡುವುದು.

## ವಿವಿಧ ವೇಷಗಳು

ಚೌಕಿಯಲ್ಲಿ ನಿತ್ಯವೇಷ (ಬಾಲಗೋಪಾಲ ವೇಷ, ಕಟ್ಟುವೇಷ ಎಂದೂ ಹೆಸರಿದೆ) ವು ತಯಾರಾದೊಡನೆಯೇ ಕೋಡಂಗಿಗಳನ್ನು ಕಳುಹಿಸುವ ಎತ್ತಗಡೆಯಾಗುವುದು. ಆಗ ಎರಡು ನಿತ್ಯವೇಷಗಳು ರಂಗಸ್ಥಳದ ಹಿಂದೆ ಬಂದು ನಿಲ್ಲುವವು. ಕೋಡಂಗಿಗಳು ಹೋದೊಡನೆಯೇ ಅವು ಸಂಗೀತಗಾರನ ಇಕ್ಕಡೆಗಳಿಂದ ರಂಗಪ್ರವೇಶ ಮಾಡುವವು. ಕೋಡಂಗಿಗಳಿರುವಾಗಲೇ ಈ ವೇಷಗಳು ಬರುವುದೂ ಇದೆ. ಇವರೆಲ್ಲರೂ ಸ್ವಲ್ಪ ಹೊತ್ತು ಕುಣಿದ ಬಳಿಕ ಒಂದು ಕಿರೀಟವನ್ನು ತಂದು ಎತ್ತರವಾದ ಪೀಠ (ಇದು ರಾಜರ ಸಿಂಹಾಸನವೂ ರಥಿಕರ ರಥವೂ ಆಗುವುದು) ದ ಮೇಲಿಟ್ಟು ಗಣಪತಿಪೂಜೆಯನ್ನು ಮಾಡುವರು.

ನಿತ್ಯವೇಷದ ಅನಂತರ "ಅರೆಪಾವು" ಎಂಬ ವೇಷವು ಬರುವುದು. ಇದರ ಕ್ರಮವು ಹೀಗಿದೆ: ಸ್ತ್ರೀವೇಷವೊಂದು ತನ್ನ ಕುತ್ತಿಗೆಗೆ ತಾಗಿ ನಿಲ್ಲುವಂತೆ ಒಂದು ತಲೆಯನ್ನು ಕಟ್ಟಿಕೊಂಡು ಬರುವುದು. ಒಂದೇ ವ್ಯಕ್ತಿಗೆ ಎರಡು ತಲೆಗಳಿದ್ದಂತೆಯೂ ಮಾತಾಡುವಾಗ ಯಾವ ತಲೆ ಮಾತಾಡುವುದೆಂಬ ಅರಿವು ಥಕ್ಕನೆ ಆಗದಿರುವುದೂ ಇದರ ವೈಶಿಷ್ಟ್ಯ. ಈ ವೇಷದ ಬಳಿಕ ಷಣ್ಮುಖವೇಷವು ಬರುವುದು. ನಿತ್ಯವೇಷವು ಮಯೂರವಾಹನವ

### ನನ್ನ ಬಾಳಿನ ದಿವಾಳಿ






































ದೀಪಾವಳಿಯ ಆನಂದ ಬೇರೆಯೇ ತರದ್ದು. ಆದುದರಿಂದಲೇ ಈ ಆನಂದ ಮಯ ಶುಭಸಂದರ್ಭದಲ್ಲಿ, ನಮ್ಮ ಎಲ್ಲ ಗಿರಾಕಿಗಳಿಗೆ ಹೊಸ ವರ್ಷ ಸಮೃದ್ಧಿ ಮತ್ತು ಅಭಿವೃದ್ಧಿಯನ್ನುಂಟುಮಾಡಲಿ ಎಂದೂ, ವಿಶೇಷತ: ಆರೋಗ್ಯದ ದೃಷ್ಟಿಯಿಂದಲೂ ಸುಖಶಾಂತಿಗಳನ್ನು ಕೊಡಲಿ ಎಂದೂ ಬಯಸುತ್ತೇವೆ. ಜೀವನದ ನಿಜವಾದ ಸುಖಾನುಭವಕ್ಕೆ ಆರೋಗ್ಯ ಒಳ್ಳೆಯದಾಗಿರಬೇಕು. ರೋಗಗಳಿಂದ ರಕ್ಷಣೆ ಪಡೆಯಲು ಮತ್ತು ವಿಶೇಷವಾಗಿ ಅಂಟುರೋಗಗಳನ್ನು ಎದುರಿಸಲು ನಮ್ಮಿಂದ ತಯಾರಿಸಲ್ಪಟ್ಟ ಪ್ರಸಿದ್ಧ ಆಯುರ್ವೇದೀಯ ಔಷಧಗಳಮೇಲೆ ವಿಶ್ವಾಸವಿಡಿರಿ, ಮತ್ತು ಅವನ್ನು ಉಪಯೋಗಿಸಿರಿ.

**ಆಯುರ್ವೇದಾಶ್ರಮ ಫಾರ್ಮಸಿ ಲಿಮಿಟೆಡ್**

**ಅಹಮದ್‌ನಗರ**



ನ್ನೇರಿದಂತೆ ಆಳವಡಿಸಿಕೊಂಡು ರಂಗವನ್ನು ಹೊಕ್ಕು ಕುಣಿಯುವುದು. ಮುಂದೆ "ಮರಕ್ಕಾಲಿನವೇಷ" ಬರುತ್ತದೆ. ನಿತ್ಯವೇಷವು ಉದ್ದವಾದ ಎರಡು ಬಿದಿರುಗಳ ಗಿಣ್ಣುಗಳಲ್ಲಿ ಕಾಲಿರಿಸಿಕೊಂಡು ಕೈಯಲ್ಲಿ ಅವುಗಳ ತುದಿಯನ್ನು ಹಿಡಿದುಕೊಂಡು ಕುಣಿಯುವುದೇ ಇದರ ಕೆಲಸ. ಅನಂತರ ಎಳೆಯ ಪ್ರಾಯದ ನಾಲ್ಕು ಸ್ತ್ರೀವೇಷಗಳು ಬರುತ್ತವೆ. ಆಗ "ಇಂದುವದನೆ . . .''ಎಂದಾರಂಭವಾಗುವ ಪದ್ಯವನ್ನು ಹಾಡುವುದರಿಂದ ಇವುಗಳಿಗೆ "ಇಂದುವದನೆ ಸ್ತ್ರೀವೇಷ'' ಎಂಬ ಹೆಸರೇ ಬಂದಿದೆ. ಇದಾದ ಬಳಿಕ 'ಅರ್ಧನಾರಿ' ವೇಷವು ಬರುವುದು. ಸ್ತ್ರೀವೇಷವು ಅರ್ಧಮುಖಕ್ಕೆ ಸೆರಗು ಮುಚ್ಚಿ, ಬಂದು ಕುಣಿದು, ಇನ್ನೊಮ್ಮೆ ಬರುವಾಗ ಸೆರಗನ್ನು ಇನ್ನೊಂದು ಪಕ್ಕಕ್ಕೆ ತಿರುಗಿಸಿ ಮೀಸೆಯಿದ್ದ ಗಂಡಸಿನಂತೆ ಕಾಣುವುದು. ಈ ವೇಷವು ಬಹಳಹೊತ್ತು ಕುಣಿಯಲಿದೆ.

ಆ ಮೇಲೆ ಬರುವುದೇ 'ಚಪ್ಪರಮಂಚದಾಟ' ಇದಕ್ಕೆ 'ಅಟ್ಟಳಿಗಿಯಾಟ-ಅರೆಪಾವಿನಾಟ-ಮರಕಾಲಿನಾಟ' ಎಂಬ ನಾಮಾಂತರಗಳೂ ಇವೆಯೆಂದು ದಿ. ಶ್ರೀ. ಮುಳಿಯ ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ' ದಲ್ಲಿದೆ. ಇವುಗಳಲ್ಲಿ ಚಪ್ಪರಮಂಚದಾಟವೂ ಅಟ್ಟಳಿಗೆಯಾಟವೂ ಒಂದೇ ಆಗಬಹುದೆಂದೂ ಅರೆಪಾವಿನಾಟ ಮತ್ತು ಮರಕಾಲಿನಾಟಗಳು ಬೇರೆಯೇ ಆಗಿವೆಯೆಂದೂ ಇತ್ತೀಚೆಗೆ ದಿವಂಗತರಾದ ಇರಕುಞ್ಞಣ್ಣಯಾನೆ ಈಶ್ವರಪ್ಪಯ್ಯ ಎಂಬವರು—ಚಿಕ್ಕಂದಿನಿಂದಲೂ ಭಾಗವತರಾಗಿದ್ದವರು-ತಿಳಿಸಿದ್ದರು. ಸೊಂಟಕ್ಕೆ ಹಗುರವಾದ ಮಂಚವೊಂದನ್ನು ಕಟ್ಟಿಕೊಂಡು, ಕೆಳಭಾಗವು ಕಾಣದಂತೆ ಸುತ್ತಲೂ ವಸ್ತ್ರವನ್ನು ಇಳಿಯಬಿಟ್ಟು, ಸ್ತ್ರೀ ವೇಷವು ರಂಗವನ್ನು ಪ್ರವೇಶಿಸಿ ಒಮ್ಮೊಮ್ಮೆ ಮಂಚದಲ್ಲಿ ಮಲಗಿದಂತೆಯೂ ಒಮ್ಮೊಮ್ಮೆ ಎದ್ದು ಅಭಿನಯಿಸಿದಂತೆಯೂ ಕಾಣಿಸುವ ಆಟವೇ ಚಪ್ಪರಮಂಚದಾಟವಾಗಿದೆ.

ಈ ರೀತಿ ಉಪವೇಷಗಳು ಬಂದು ಹೋದ ಮೇಲೆ ಮುಖ್ಯ ಸ್ತ್ರೀವೇಷವು ರಂಗಸ್ಥಳಕ್ಕೆ ಬರುವುದು. ರಂಗಸ್ಥಳದಲ್ಲಿ 'ಸಭಾವಂದನೆ'ಯನ್ನು ಮಾಡಿ, ಅನಂತರ ಅಲ್ಲಿ ಕೂಡಿದ ಗಣ್ಯರ ಹೆಸರೆತ್ತಿ ವಂದಿಸುವುದೂ ಬಳಕೆಯಲ್ಲಿತ್ತು. ಇದಕ್ಕೆ 'ಸಲಾಮು ಹಾಕು'ವುದು ಎಂದು ಹೆಸರು. ಹೀಗೆ ವಂದನೆಯನ್ನು ಸ್ವೀಕರಿಸಿದ ವ್ಯಕ್ತಿ ನಿಯಮಿತವಾದ ಹಣವನ್ನು ತೆರಬೇಕು. ಸ್ತ್ರೀ ವೇಷವು ಬರುವಾಗ 'ಚಿಕ್ಕಪ್ರಾಯದ ಬಾಲೆ......' ಎಂಬ ಪದ್ಯವನ್ನು ಹಾಡುವರು. ಭಾಗವತನು ತ್ರಿವುಡೆ ತಾಳದ 'ಮುಕ್ತಾಯ' ವನ್ನು ಬಾರಿಸುವಾಗ ಸ್ತ್ರೀವೇಷವು ರಂಗಸ್ಥಳವನ್ನು ಬಿಟ್ಟುಹೋಗುವುದು.

ಅನಂತರ ಪ್ರಸಂಗಪೀಠಿಕೆ. ಭಾಗವತನು ವಿಶಿಷ್ಟ ಪದ್ಯವೊಂದನ್ನು ಹಾಡಿ ಏಕತಾಳದಿಂದ ಪೀಠಿಕೆಯನ್ನು ತೊಡಗುವನು; ಚೆಂಡೆ ಮದ್ದಳೆ ಚಕ್ರತಾಳಗಳು ಜತೆಗೆ ಬಾರಿಸಲ್ಪಡುವುವು. ಆಗ "ಬಂಟು ಪಡಿ''ಎಂಬ ಎರಡು ವೇಷಗಳು ಬಂದು ಕುಣಿಯುತ್ತವೆ. ಮುಂದೆ ಬರಲಿರುವ ಪೀಠಿಕೆ ವೇಷದ ದೂತರೇ ಇವರು. ಪೀಠಿಕೆಯನ್ನು 'ಕೇಳಿಬಡಿ' ದಂತೆ ಬಹಳಹೊತ್ತು ಬಡಿಯುವಾಗ ಈ ವೇಷಗಳು ಕುಣಿಯುತ್ತಲೇ ಇರುತ್ತವೆ. ಪೀಠಿಕೆ ಬಡಿದ ಬಳಿಕ ಭಾಗವತನ ಪ್ರಶ್ನೆಗಳಿಗೆ ಉತ್ತರವಾಗಿ ತಾವು ಇಂಥವರ ದೂತರು; ಸಭಾಸ್ಥಾನವನ್ನು ಸಜ್ಜುಗೊಳಿಸಬಂದವರು ಎಂದು ತಿಳಿಸಿ ಹೊರಟುಹೋಗುತ್ತಾರೆ.

## ಬದಲಾವಣೆಗಳು

ಇಷ್ಟರ ವರೆಗಿನ ವಿಷಯಗಳಿಂದ ಯಕ್ಷಗಾನ ಕಲೆಯು ನಾಟಕ ಕಲೆಯನ್ನು ಹೆಚ್ಚಿನಂಶ ಹೋಲುತ್ತದೆ ಎಂಬುದನ್ನರಿಯಬಹುದು. ಈ 'ನಿತ್ಯ' ಗಳಲ್ಲಿ ಎಷ್ಟೋ ಬದಲಾವಣೆಗಳಾಗಿ, ಈ ಪೂರ್ವರಂಗ ವಿಭಾಗದ ಅನೇಕಾಂಶಗಳು ನಷ್ಟವಾಗಿವೆ.

ಬಡಗುತಿಟ್ಟಿನವರಲ್ಲಿ 'ಕೇಳಿಬಡಿ' ಯುವ ಬದಲು 'ಅಬ್ಬರ ತಾಳ' ಬಾರಿಸುವುದೆಂಬ ಹೆಸರಿದೆ. ತೆಂಕುತಿಟ್ಟಿನ ಭಾಗವತನು 'ಜಾಗಟೆ ಕೋಲು' ಹಿಡಿದುಕೊಳ್ಳುವನಾದರೆ, ಬಡಗುತಿಟ್ಟಿನವನು ಸಣ್ಣ ತಾಳಗಳನ್ನು ಹಿಡಿದುಕೊಳ್ಳುವನು. ಎರಡೂ ತಿಟ್ಟಿನವರ ಚೆಂಡೆ ಮದ್ದಳೆಗಳ ಆಕಾರಗಳೂ ಧ್ವನಿಗಳೂ ಒಂದೇ ಬಗೆಯಾಗಿಲ್ಲ. ಹಾಡುವ ಪದ್ಧತಿ, ತಾಳದ 'ಬಿಡ್ತಿಗೆ, ಮುಕ್ತಾಯ' ಗಳಲ್ಲೂ ವ್ಯತ್ಯಾಸವಿದೆ.

ಬಡಗುತಿಟ್ಟಿನಲ್ಲಿ ಚೌಕಿಯಲ್ಲಿ ಗಣಪತಿ ಪೂಜೆಯಾಗುವಾಗ ವೇಷಧಾರಿಗಳೆಲ್ಲ ಅಲ್ಲಿದ್ದು, ಪೂಜೆಯ ಬಳಿಕ ಗೆಜ್ಜೆಕಟ್ಟಿಕೊಂಡು, ವೇಷಹಾಕುವ ಹೊತ್ತಿನ ವರೆಗೆ ಎಲ್ಲಿಯೂ ಹೋಗಬಹುದು. ಈ ಕ್ರಮವು ಈಗ ಇಲ್ಲ. ಆಟ ಆಡಿಸುವವನು ಪೂಜೆಯ ಕಾಲಕ್ಕೆ ಅಲ್ಲಿದ್ದು, ಎಲ್ಲರ ಪರಿಚಯ ಮಾಡಿಕೊಂಡು, ಎಲ್ಲರಿಗೂ 'ಎಲೆ ಪಟ್ಟಿ' ಕೊಡಬೇಕು.

ಪೂರ್ವರಂಗ ಭಾಗದಲ್ಲಿ ಕೋಡಂಗಿಗಳು, ಬಾಲಗೋಪಾಲ ವೇಷಗಳು, ಸ್ತ್ರೀ ವೇಷಗಳು ಎಂಬ ಅನುಕ್ರಮತೆಯಿದೆ. ರಂಗಸ್ಥಳಕ್ಕೆ ಎರಡು ಸ್ತ್ರೀ ವೇಷಗಳು ಬರುವುದೇ ಇಲ್ಲಿನ ಪದ್ಧತಿ. ಒಂದಕ್ಕೆ ಮುಖ್ಯ ಸ್ತ್ರೀ ವೇಷವೆಂದೂ ಒಂದನೆಯ ವೇಷವೆಂದೂ ಹೆಸರಿದ್ದರೆ ಇನ್ನೊಂದಕ್ಕೆ ಎಡ ವೇಷವೆಂದೂ ಹೆಸರಿದೆ. ಎಡವೇಷವು ನಾಟ್ಯವನ್ನು ಅಭ್ಯಾಸಮಾಡುವದಕ್ಕೆ ರಂಗಪ್ರವೇಶ ಮಾಡುತ್ತದೆ ಎನ್ನಬಹುದು.

ಎರಡು ತಿಟ್ಟಿನಲ್ಲಿಯೂ ವೇಷಗಳು ಜಂಟಿಯಾಗಿ ಬರುವುದಿದ್ದರೆ ಭಾಗವತನ ಎಡಗಡೆಯಿಂದಲೇ ರಂಗವನ್ನು ಪ್ರವೇಶಿಸಬೇಕು. ಎಲ್ಲ ವೇಷಗಳೂ ಭಾಗವತ ಮುಂತಾದ ಹಿಮ್ಮೇಳದವರನ್ನು ವಂದಿಸಬೇಕು. ಮೊದಲನೆಯ ಸಲ ರಂಗಸ್ಥಳಕ್ಕೆ ಬರುವ ಪ್ರತಿಯೊಂದು ವೇಷಕ್ಕೂ ತೆರೆಹಿಡಿದು ಅನಂತರವೇ ಪ್ರವೇಶಿಸಬಹುದೆಂಬ ಕ್ರಮವಿದೆ.

### ಕಥಕ್ಕಳಿಯ ಪ್ರಭಾವ

ತೆಂಕುತಿಟ್ಟಿನವರ ಮೇಲೆ ಮಲೆಯಾಳದ ಕಥಕ್ಕಳಿಯ ಪ್ರಭಾವವು ಚೆನ್ನಾಗಿ ಬಿದ್ದಿದೆ. ಇದನ್ನು ವೇಷಭೂಷಣ, ನಾಟ್ಯ ಮುಂತಾದವುಗಳಲ್ಲೆಲ್ಲಾ ಕಾಣಬಹುದು. ಬಡಗುತಿಟ್ಟಿನವರ ಕುಣಿತದಲ್ಲಿ ಮಾರ್ದವವೂ ತೆಂಕುತಿಟ್ಟಿನವರದಲ್ಲಿ ಬಿರುಸೂ ಹೆಚ್ಚು. ತೆಂಕುತಿಟ್ಟಿನವರ ಎಲ್ಲ ವೇಷಗಳಿಗೂ ಹೆಚ್ಚಾಗಿ ಕಿರೀಟವಿದೆ; ಬಡಗುತಿಟ್ಟಿನವರಲ್ಲಿ ಮುಂಡಾಸೇ ಹೆಚ್ಚಾಗಿ ಬಳಕೆಯಲ್ಲಿದೆ. ಬಡಗುತಿಟ್ಟಿನವರಲ್ಲಿ ಪೀಠಿಕೆವೇಷಕ್ಕೆ ಕಿರೀಟವಿರುತ್ತದೆ.

ಬಡಗುತಿಟ್ಟಿನಲ್ಲಿ ನಾಯಕಪಾತ್ರಕ್ಕೆ ಎರಡನೆಯ ವೇಷವೆಂದೂ ಪ್ರತಿ ನಾಯಕಪಾತ್ರಕ್ಕೆ ಪುರುಷವೇಷ ಅಥವಾ ಮೂರನೆಯ ವೇಷವೆಂದೂ ಸಂಕೇತವಿದೆ. ಉದಾಹರಣೆಗೆ ಕರ್ಣಪರ್ವದಲ್ಲಿ ಕರ್ಣ ಎರಡನೆಯ ವೇಷ ಮತ್ತು ಅರ್ಜುನ ಪುರುಷವೇಷ; ವಾಲಿಸಂಹಾರದಲ್ಲಿ ವಾಲಿ ಎರಡನೆಯ ವೇಷವಾದರೆ, ರಾಮ ಪುರುಷವೇಷ ಹೊರತು, ಸುಗ್ರೀವನಲ್ಲ. ಏಕೆಂದರೆ ಎರಡನೆಯ ವೇಷಕ್ಕೂ ಪುರುಷವೇಷಕ್ಕೂ ಪ್ರಧಾನ ಸಂವಾದವೋ ಯುದ್ಧವೋ ನಡೆಯಬೇಕು.

ಇಂತಹ ಇನ್ನೆಷ್ಟೋ ಕ್ರಮಗಳು ಎರಡು ತಿಟ್ಟಿನವರಲ್ಲಿಯೂ ಪರಂಪರಾಗತವಾಗಿ ಇದ್ದವು. ಇವುಗಳಲ್ಲಿ ಅನೇಕ ಕ್ರಮಗಳು ಸುಧಾರಣೆಯ ಹೆಸರಿನಿಂದ ಮಾಯವಾಗಿ, ಇಂದು ಈ ಕಲೆಯ ಪೂರ್ಣಸ್ವರೂಪದ ಪರಿಚಯವಾಗದಂತಾಗಿದೆ. ಇಂದು ವೇಷಭೂಷಣಗಳೂ ನಾಟ್ಯವೂ ಹೆಚ್ಚಾಗಿ ನಾಟಕೀಯವಾಗಿ, ಇತ್ತ ನಾಟಕವೂ ಅಲ್ಲ; ಅತ್ತ ಬಯಲಾಟವೂ ಅಲ್ಲ ಎಂಬ ರೂಪಗಳನ್ನು ಪಡೆದಿವೆ.

### ತಾಳ ಮದ್ದಳೆ

ಯಕ್ಷಗಾನದ ಇನ್ನೊಂದು ವಿಭೇದಕ್ಕೆ 'ತಾಳ ಮದ್ದಳೆ' ಎಂಬ ಹೆಸರಿದೆ. ಇದರಲ್ಲಿ ಬಯಲಾಟದಲ್ಲಿರುವಂತೆ ಪೂರ್ವರಂಗ ಪದ್ಧತಿಯಿಲ್ಲ. ಹಿಮ್ಮೇಳವಿದ್ದರೂ ಪಾತ್ರಧಾರಿಗಳು ವೇಷ ಹಾಕಿ ಕುಣಿಯುವುದಿಲ್ಲ. ಪಾತ್ರಧಾರಿಗಳು ಎರಡು ಸಾಲಾಗಿ ಕುಳಿತು ಆಯಾ ಪಾತ್ರಗಳನ್ನು ವಾಚನಾಭಿನಯಗಳಿಂದ ನಿರ್ವಹಿಸುತ್ತಾರೆ. ಮೊದಮೊದಲು ತಾಳಮದ್ದಳೆಗಳಲ್ಲಿಯೂ ಹಾಸ್ಯದ ಪಾತ್ರಗಳನ್ನು ವೇಷ ಹಾಕಿ ನಿರ್ವಹಿಸುತ್ತಿದ್ದರು; ಯುದ್ಧಪ್ರಸಂಗಗಳಲ್ಲಿ ಕೈಯಲ್ಲಿ ಸೊಪ್ಪುಹಿಡಿದು ಹೊಡೆದುಕೊಳ್ಳುತ್ತಿದ್ದರು. ಈಗೀಗ ಬಯಲಾಟಗಳಲ್ಲಿಯೂ ತಾಳಮದ್ದಳೆಗಳಲ್ಲಿಯೂ ಹೆಚ್ಚುಹೆಚ್ಚು ವಿದ್ಯಾವಂತರು ಭಾಗ ವಹಿಸುತ್ತಿರುವುದರಿಂದ, ಹಲವು 'ಪ್ರಾಕೃತ' ವೆನ್ನಿಸುವ ಕ್ರಮಗಳು ಕಾಣುವುದಿಲ್ಲ.

ಕಲೆಗಳಲ್ಲಿ ಯಕ್ಷಗಾನಕ್ಕಿರುವ ಸ್ಥಾನದ ಕುರಿತು ನಾಲ್ಕು ಮಾತುಗಳನ್ನು ಹೇಳಬಹುದು. ಬಯಲಾಟ ಮತ್ತು ತಾಳಮದ್ದಳೆಗಳಲ್ಲಿ ಸುಧಾರಣೆಯೆಂಬ ಹೆಸರಿನಿಂದ ಅನೇಕ ದೋಷಗಳೂ ತಲೆದೋರಿವೆ. ಹಿಂದೆ ಇವೆರಡೂ ಜಾನಪದ ಕಲೆಗಳಾಗಿಯೇ ಇದ್ದು, ಜನರಿಗೆ ಎಷ್ಟೋ ವಿಷಯಗಳನ್ನು ಕಲಿಸಿದ್ದುವು. ರಾಮಾಯಣ ಭಾರತಾದಿಗಳ ಕಥೆಗಳನ್ನು ಬಯಲಾಟಗಳು ತಿಳಿಸಿದಂತೆ ಉಳಿದ ನಾಟಕ ಕಾವ್ಯಗಳು ತಿಳಿಸಿಲ್ಲ. ಸುಧಾರಿತ ಕ್ರಮದ ಯಕ್ಷಗಾನಕಲೆಯೂ ಜನಪ್ರಿಯತೆಯನ್ನು ಪಡೆದಿದೆಯೆನ್ನಬಹುದಾದರೂ ಕನ್ನಡಿಗರ ಮೂಲಕಲೆಗೆ ಆಘಾತವಾಗುವುದನ್ನು ಕಲಾಭಿಜ್ಞರು ಮೆಚ್ಚುವುದಿಲ್ಲ. ಜನಪ್ರಿಯತೆಯೆಂಬುದೇ ಕಲೆಯ ಯೋಗ್ಯತೆಯನ್ನಳೆಯುವ ಮಾನವೆಂದು ಗ್ರಹಿಸಿದರೆ, ಅದು ಕಲೆಗೆ ಅಪಚಾರವೆಸಗಿದಂತಾದೀತು. ಆದುದರಿಂದ ಈ ಯಕ್ಷಗಾನ ಕಲೆಯ ಸುಸ್ವರೂಪವನ್ನುಳಿಸಿಕೊಳ್ಳುವುದು ಕನ್ನಡಿಗರ ಹೊಣೆ. ಇದಕ್ಕಾಗಿ ಈ ಕಲೆಯ ಕುರಿತಾದ ಹೆಚ್ಚಿನ ಸಂಶೋಧನೆ ನಡೆದು, ಇದರ ಚರಿತ್ರೆ, ಲಕ್ಷಣ, ಶಾಸ್ತ್ರ ಮುಂತಾದವುಗಳ ರಚನೆಯಾಗಿ ಇದು ಇನ್ನಷ್ಟು ಉಜ್ವಲವಾಗಿ, ಚಿರಂತನವಾಗಿ ಬಾಳಲಿ ಎಂಬುದೇ ಕಲಾಭಿಮಾನಿಗಳ ಆಕಾಂಕ್ಷೆ.

---

# ಕೋಮಲಾದೇವಿಯ ಕೊನೆ ...?

ಪಾಪಕ್ಕೆ ತಕ್ಕ ಪ್ರತಿಫಲ ದೊರೆತೇ ದೊರೆಯುವದು. ಅಂತೆಯೇ ಬೆಟ್ಟದ ರಾಜ್ಯದ ರಾಣಿ ಸ್ವಚ್ಛಂದ ರೀತಿಯಲ್ಲಿ ನಡೆದು ಪತಿಯನ್ನು ದೇವಾಲಯದ ಗರ್ಭಗೃಹದಲ್ಲಿ ವಧೆ ಮಾಡಿ ತನ್ನ ಚೆಲ್ಲಾಟಕ್ಕೆ ಅಡ್ಡಿಯಾಗಿದ್ದ ಮುಳ್ಳನ್ನು ಕಿತ್ತೊಗೆದುದಾಗಿ ಭಾವಿಸಿದಳು. ಆದರೆ ಕೊನೆಗೆ ಅವಳಿಗೆ ಕಾದಿತ್ತು ಬೆಟ್ಟದ ಮೇಲಿಂದ ಉರುಳಿ ಬೀಳುವದು.

ಕತೆಗಾರರು : ಶ್ರೀ ಗೋವಿಂದಮೂರ್ತಿ ದೇಸಾಯಿ, ಬಿ. ಎ. (ಆನರ್ಸ) ಧಾರವಾಡ

'ಅಹಿಂಸೆಗಾಗಿ ಮನಸ್ಸುಮಾಡಿದ ದೊರೆ. ಬೆರಳಿದ್ದರೆ ಹಿಂಸೆಯಾಗುವದೆಂದು ಅಂಜಿ ತನ್ನ ಬಲಗೈಯನ್ನೇ ಕೊಯ್ದು ದೇವಿಗೆ ಕುಂಕುಮ ಹಚ್ಚಿ ಹಿಂಸೆಮಾಡಲಾರೆನೆಂದು ಪ್ರತಿಜ್ಞೆ ಮಾಡಿದ ನಂತೆ. ಅಂಥ ದೊರೆ ಒಮ್ಮೆ ಸಂಗ್ರಾಮ ನಡೆದಾಗ ಕುಲದೇವತೆಯೆದುರು ಕುಳಿತು ರಾಜ್ಯಕ್ಕೆ ಜಯ ದೊರೆಯಲೆಂದು ಪ್ರಾರ್ಥಿಸುವಾಗ, ಜಾರೆಯಾದ ಹೆಂಡತಿ ಕ್ಷಣಿಕ ಸುಖಕ್ಕಾಗಿ ಪತಿಯ ಬೆನ್ನಲ್ಲಿ ಕಠಾರಿಯನ್ನಿರಿದಾಗ ಗರ್ಭಗೃಹವೆಲ್ಲ ರಕ್ತರಂಜಿತ ವಾಯಿತು . . .' ಬೆಟ್ಟದ ಕಥೆ ಹೇಳುವಾಗ ತಂಗಿ ಪದ್ಮಳಿಗೆ ಅಂಥ ಬೆಟ್ಟವನ್ನು ನೋಡಬೇಕೆಂಬಾಶೆ ಯಾಯಿತಂತೆ. ಅವಳ ಒತ್ತಾಶೆಯಿಂದ ಅವ ಳನ್ನು ಕರೆದುಕೊಂಡು ಒಮ್ಮೆ ಭಾಗ್ಯದಲಕ್ಷ್ಮಿ ಬೆಟ್ಟಕ್ಕೆ ಬಂದೆನು.

ಬೆಟ್ಟದ ಉತ್ತಮಾಂಗದಲ್ಲಿದ್ದ ಭಾಗ್ಯದಲಕ್ಷ್ಮೀ ದೇವಾಲಯವು ಭಗ್ನಾವಸ್ಥೆಯಲ್ಲಿ ನಿಂತಿದ್ದರೂ ಸಹಸ್ರಾರು ಯಾತ್ರಿಕರನ್ನು ಸೆಳೆಯುತ್ತದೆ. ನಿಸರ್ಗ ದೇವತೆಯ ಸೌಂದರ್ಯದುಡಿಯಲ್ಲಿ ಬಂಡೆಯಿಂದ ಬಂಡೆಗೆ ಜಾರುವ ಜೋಗುಳದುಲುವಿನಲ್ಲಿ ಹಾಯಾಗಿ ನಿದ್ರಿಸುತ್ತಿರುವ ಬೆಟ್ಟದ ಸೌಂದರ್ಯ ವನ್ನು ಕಂಡು ಪದ್ಮಳಿಗೆ ಬ್ರಹ್ಮಾನಂದವಾಗಿರ ಬೇಕು. ಅಂತಲೇ ಮೂರು ಮೈಲಿನ ಬೆಟ್ಟವನ್ನೇ ರಲು ಅವಳಿಗೆ ಮೂರು ತಾಸು ಹಿಡಿದವು.

ನಾನು ಅವಳಿಗೆ ದೇವಾಲಯವನ್ನೆಲ್ಲಾ ತೋರಿಸಿ ಮಹಾದ್ವಾರದ ಹೊರಗೆ ಬಂದಾಗ ನವಿಲುಗಳ ತಂಡವೇ ಕೇಕೆ ಹಾಕುತ್ತ ಕುಣಿಯುತ್ತಿತ್ತು. ವೃಕ್ಷ ಗಳಿಂದ ವೃಕ್ಷಗಳಿಗೆ ಹಾರಾಡುವ ಪಕ್ಷಿಗಳು ನಿಸ ರ್ಗದ ಭಾಷೆಯಲ್ಲಿ ಮಾತನಾಡಿ ಬೆಟ್ಟದ ಶಾಂತ ತೆಗೆ ಭಗ್ನವನ್ನು ತಂದೊಡ್ಡಿ ತಾವು ಆನಂದಪಡು ತ್ತಿದ್ದವು. ಬೆಟ್ಟದ ನಿಮ್ನೋನ್ನತ ಪ್ರದೇಶದಲ್ಲಿ ಮುಗಿಲೆತ್ತರದ ಚೊಗಚೆಗೆ ಬೆಳೆಯಿಸಿದ ಎಲೆಬಳ್ಳಿ ಗಳು ಆಗಂತುಕರಿಗಾಗಿ ನಿರ್ಮಿಸಿದ ಸ್ವಾಗತ ಮಂಟಪಗಳಂತೆ ರಮಣೀಯವಾಗಿ ಕಂಗೊಳಿಸು ತ್ತಿದ್ದವು. ರವಿರಾಜನು ತನ್ನ ಕುಂಟ ಸಾರಥಿಯೊ ಡನೆ ಬೆಟ್ಟವನ್ನೇರಿ ದೇವಿಯ ದರ್ಶನಕ್ಕೆ ಧಾವಿಸಿ ಬರುತ್ತಿದ್ದನು.

" ಇದೇನಣ್ಣ, ಈ ಬದಿಯ ಕೊಳದ ಜಲವೆಲ್ಲ ರಕ್ತದಂತೆ ಕೆಂಪಾಗಿದೆ ?'' ಎಂದು ಆಶ್ಚರ್ಯ ದಿಂದ ತಂಗಿ ಪದ್ಮಾ ನನ್ನನ್ನು ಕೇಳಿದಳು.

" ದೇವಿಗೆ ಹೆಬ್ಬೆರಳನ್ನು ಮುಡಿಪಿಟ್ಟು ವಿಷ್ಣು ದೇವರು ಇಲ್ಲಿ ಕೈತೊಳೆದರಂತೆ. ಅಂದಿನಿಂದಲೂ ಈ ಕೊಳವು ಕೆಂಪಾಗಿದೆ'' ಎಂದು ಹೇಳಿದೆ. ಅಷ್ಟರಲ್ಲಿ ಅರ್ಚಕರು ಸ್ನಾನ ಮುಗಿಸಿ, ದೇವಿಯ ಪೂಜೆಗೆ ಬಂದರು. ಅರ್ಚಕರು ಪೂಜೆ ಮುಗಿಸಿ ದೇವಿಯ ಹೆಳಲನ್ನು ನಯವಾಗಿ ಹಿಕ್ಕಿ ಕೇದಿಗೆ ಯನ್ನು ಸೇರಿಸಿ, ಇರುವಂತಿಗೆಯನ್ನು ಮುಡಿಸಿ, ಗುಲಾಬಿಯಿಂದ ಪಾದಗಳನ್ನು ಶೃಂಗರಿಸಿ ನೈವೇದ್ಯ ವನ್ನಿಟ್ಟರು. ಭಾಗ್ಯದಲಕ್ಷ್ಮಿಗೆ ಮಂಗಳಾರತಿಯನ್ನೆ ತ್ತಿದ್ದಾಗ ಪದ್ಮಳು ಒಂದು ಮಂಗಳವನ್ನು ಹಾಡಿ ದಳು. ದೇವಿಯ ಮುಖಕ್ಕೆ ಆರತಿಯನ್ನೆತ್ತಿ ವಿಷ್ಣು ದೇವರು ಕುಂಕುಮ ಹಚ್ಚಿರುವರೆಂದು ಪ್ರತೀತಿ ಯಿದ್ದ ಕೆಂಪುಕಲೆಯ ದೇವಿಯ ಹಣೆಯನ್ನು ತೋರಿಸಿದರು. ದೇವಿಯೆದುರಿದ್ದ ವಿಷ್ಣುದೇವರ ಬೆನ್ನಿಂದ ಬಿದ್ದ ರಕ್ತದ ಕಲೆಗಳನ್ನೂ ತೋರಿಸಿದರು. ಪದ್ಮಳಿಗೆ ಬೆಟ್ಟದ ಕಥೆ ಕೇಳಬೇಕೆಂಬ ಆಶೆ. ನನಗೆ ಬೆಟ್ಟದ ಸೌಂದರ್ಯವನ್ನು ಹೀರಬೇಕೆಂಬ ಉತ್ಸಾಹ. ಆದರೆ ನಮ್ಮನ್ನು ಊಟಕ್ಕೆ ಕರೆದ ಅರ್ಚಕರಿಗೆ ಊಟಕ್ಕೆ ಹಾಕಬೇಕೆಂಬ ಅತುರ. ಹೀಗೆ ಆಶೆ ಆತುರಗಳ ತೆರೆಗಳಲ್ಲಿ ಹೊಯ್ದಾಡುತ್ತ ಅರ್ಚಕರ ಆತಿಥ್ಯವನ್ನು ಸ್ವೀಕರಿಸಿದೆವು.

" ಅಣ್ಣಾ, ಬೆಟ್ಟಾ ತೋರಿಸಿದಿ ; ಬೆಟ್ಟದ ಕಥೆ ಯನ್ನೇ ಹೇಳಲಿಲ್ಲವಲ್ಲ? ಇದರ ಇತಿಹಾಸವೆ ಲ್ಲಿದೆ ?'' ಎಂದು ಕೇಳಿದಳು ತಂಗಿ.

" ಸ್ವಲ್ಪ ತಾಳು ಪದ್ಮಾ. ಈ ಬೆಟ್ಟದ ಇತಿಹಾಸ ಬೆಟ್ಟದಷ್ಟೇ ಹಿರಿಯದಾಗಿದೆ. ಇದರ ಇತಿಹಾಸ ಎಲ್ಲಿಯೂ ದೊರೆಯುವದಿಲ್ಲ. ಆದರೆ ನಾನು ಎಷ್ಟೋ ಸಲ ಈ ಬೆಟ್ಟದ ಕೆಳಕ್ಕಿರುವ ದೇವಿಹಾಳ ಗ್ರಾಮದವರಿಂದ ಕೇಳಿದ್ದೇನೆ. ಹಳ್ಳಿಗರಿಗೆ ಸ್ಮೃತಿಯು ಒಂದು ದೊಡ್ಡ ಸ್ವತ್ತು. ನಿನ್ನಾತು ರಕ್ಕೆ ನಾನೇಕೆ ತಡೆಹಾಕಬೇಕು. ಕಥೆ ಹೇಳು ತ್ತೇನೆ ಕೇಳು.

ನಾಲ್ಕಾರು ತಲೆಮಾರುಗಳಾಚೆಯ ಇತಿಹಾಸ ಇದ್ದಿರಬೇಕು. ಬಾಯಿಂದ ಬಾಯಿಗೆ ಜಾರಿಬಂದ ಕಥೆಯಿದು ; ಸಂಸ್ಕೃತಿ ಹೊತ್ತು ತಂದ ಇತಿಹಾ ಸದ ಮಥನವಿದು !

ವಿಷ್ಣುದೇವದೊರೆಗಳು ಈ ಬೆಟ್ಟದ ರಾಜ್ಯವನ್ನು ಆಳುತ್ತಿದ್ದರು. ಅವರು ಆಳುತ್ತಿದ್ದರೆಂಬುವದಕ್ಕಿಂತ ಅವರ ಧರ್ಮಪತ್ನಿ ಕೋಮಲಾದೇವಿಯರೇ ಆಳು ತ್ತಿದ್ದರು. ರಾಜ್ಯವು ಕೋಮಲಾದೇವಿಯರ ತಂದೆ ಯವರಿಗೆ ಸೇರಿದ್ದು. ಕೋಮಲಾದೇವಿಯರ ತಂದೆಯವರಾದ ದೇವದತ್ತರು ರಾಜ್ಯಕ್ಕೆ ಗಂಡು ಸಂತಾನವಿಲ್ಲದುದರಿಂದ ಕುಲದೇವತೆಯಾದ ಭಾಗ್ಯದಲಕ್ಷ್ಮಿಯ ಸೇವೆ ಮಾಡಿ ಅವಳ ವರಪ್ರಸಾ ದದಿಂದ ಬಹುದಿವಸಗಳ ಮೇಲೆ ಒಂದು ಹೆಣ್ಣು ಕೂಸನ್ನು ಹೆತ್ತರು. ಅಂತಲೇ ಕೋಮಲಾದೇವಿ ಯರು ತಂದೆತಾಯಿಗಳಿಗೆ ಮಗನಾಗಿಯೂ ಮಗ ಳಾಗಿಯೂ ಪ್ರೀತಿಯನ್ನುಂಟುಮಾಡಿದರು. ದೇವ ದತ್ತರು ರಾಜಕುಮಾರಿಗೆ ಪುರುಷವೇಷವನ್ನು ಹಾಕಿ ಗಂಡುಮಗುವಿನಂತೆಯೇ ಬೆಳೆಯಿಸಿದರು. ತಮ್ಮ ಜೊತೆ ಯುದ್ಧದ ಕಲೆಯನ್ನೂ ಕಲಿಸಿದರು. ರಾಜ್ಯಭಾರದ ಅಂಗಾಂಗಗಳ ಸೂಕ್ಷ್ಮ ಪರಿಚಯ ವನ್ನು ಮಾಡಿಕೊಟ್ಟರು. ಕೋಮಲಾದೇವಿಯರು ಪ್ರಾಪ್ತವಯಸ್ಕರಾದೊಡನೆಯೆ ದೇವದತ್ತರು ಅವರ ವಿವಾಹದ ಸನ್ನದ್ಧತೆ ಮಾಡತೊಡಗಿದರು. ಕೋಮಲಾದೇವಿಯರನ್ನು ಮದುವೆಗೆ ಒಪ್ಪಿಸು ವದು ಒಂದು ಸಮಸ್ಯೆಯಾಯಿತು. ತಂದೆಯ ನಂತರ ತಾವೇ ಉತ್ತರಾಧಿಕಾರಿಗಳಾಗುವದರಿಂದ ಸಿಂಹಾಸನವನ್ನೇರಿ ಬೆಟ್ಟದರಾಜ್ಯವನ್ನು ಆಳಬೇ ಕೆಂದು ಮನಸ್ಸಿನಲ್ಲಿ ಮಾಡಿಕೊಂಡ ತಮ್ಮ ಪ್ರಬಲ ಇಚ್ಛೆಯನ್ನು ತಂದೆಯವರೆದುರು ವ್ಯಕ್ತಪಡಿಸಿದಾಗ ಅವರ ಮನಸ್ಸು ನೊಂದಿತು. ತಾವಿತ್ತ ಶಿಕ್ಷಣವೇ ರಾಜಕುಮಾರಿಯ ಈ ಮನಃಪ್ರವೃತ್ತಿಗೆ ಕಾರಣ ವೆಂದು ಭಾವಿಸಿದರು. ಕೊನೆಗೆ ಮಗಳ ಮನಸ್ಸನ್ನು ಒಲಿಸಿ ತಮ್ಮ ದೂರದ ಸಂಬಂಧದ ಮತ್ತು ಕ್ಕೆ ಳಗಿನ ಪಾಳೆಯದ ಗಾದೆಯೊಡೆಯರಾದ ವಿ ದೇವರನ್ನು ಕರೆತಂದು ರಾಜಕುಮಾರಿಯೊಡನೆ ಮದುವೆಮಾಡಿ, ಅರಮನೆಯ ಅಳಿಯನನ್ನಾಗಿ ಮಾಡಿಕೊಂಡರು.

ಮದುವೆ ಮುಗಿದು ಕೆಲವೇ ದಿವಸಗಳಲ್ಲಿ ದೇವದತ್ತರು ತಮ್ಮ ನಂತರ ವಿಷ್ಣುದೇವರು ಸಿಂಹಾ ಸನವನ್ನೇರಬೇಕೆಂದು ತಮ್ಮ ಕೊನೆಯುಸಿರೊಡನೆ ಹೇಳಿ ಕಣ್ಣುಮುಚ್ಚಿದರು.

ವಿಷ್ಣುದೇವರು ಮಾವನವರ ಉತ್ತರಕ್ರಿಯೆ ಗಳನ್ನು ತೀರಿಸಿ ಬೆಟ್ಟದ ಸಿಂಹಾಸನವನ್ನೇರಿದರು. ವಿಷ್ಣುದೇವರು ದೇವರಂಥ ವ್ಯಕ್ತಿಗಳು. ಸಾತ್ವಿಕತೆ ಯೊಂದೇ ಅವರ ಪ್ರಕೃತಿಯಲ್ಲಿ ಪ್ರಧಾನಗುಣ ವಾಗಿತ್ತು. ಒಂದು ಕೆನ್ನೆಗೆ ಹೊಡೆದರೆ ಅವರಿಗೆ ಇನ್ನೊಂದನ್ನು, ಯಾವ ಪ್ರತಿಕ್ರಿಯೆಯನ್ನೂ ತೋರಿಸದೆ ಒಡ್ಡುವ ಸ್ವಭಾವದವರು. ಹೀಗೆಂದರೆ ಅವರು ವೀರರಲ್ಲವೆಂದಲ್ಲ ; ಸಿಂಹಾಸನವನ್ನೇರಿದ ಕೆಲವೇ ದಿವಸಗಳಲ್ಲಿ ಹೆಂಡತಿಯ ಚಿತ್ರಹಿಂಸೆ ಪ್ರಾರಂಭವಾಯಿತು. ತಮ್ಮ ತಂದೆಯ ರಾಜ್ಯ ದಾಶೆಗೆ ಬಂದವರೆಂದು ದೇವಿಯರು ಆಡುವ ಮಾತು ವಿಷ್ಣುದೇವರ ಕಿವಿಗೆ ಬಿದ್ದಾಗ ಅವರು ಅಧಿಕಾರದ ವ್ಯಾಮೋಹವನ್ನೇ ಬಿಟ್ಟರು. ಹೆಣ್ಣು ಸಿಂಹಾಸನವನ್ನೇರಬಾರದೆಂಬ ಒಂದೇ ಒಂದು ಕುಂದಿನಿಂದ ಹಿಂದಿದ್ದ ಕೋಮಲಾದೇವಿಯರು ಪ್ರಬಲರಾಗಿ ರಾಜ್ಯಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳಲು ಪ್ರಯತ್ನ ಮಾಡಿದಂತೆ ವಿಷ್ಣು

ದೇವರು ಹಿಂದೆ ಸರಿಯಹತ್ತಿದರು. ಪ್ರತಿನಿತ್ಯವೂ ಬೆಟ್ಟದ ಕುಲದೇವತೆಯಾದ ಭಾಗ್ಯದಲಕ್ಷ್ಮಿಗೆ ವಿಷ್ಣು ದೇವರು ನಡೆದುಕೊಳ್ಳುತ್ತಿದ್ದರು. ಇತ್ತೀಚೆಗಂತೂ ಹೆಚ್ಚಾಗಿ ಅವರಿಗೆ ದೇವಾಲಯವೇ ಅಂತಃಪುರವಾಗಿ ಪರಿಣಮಿಸಿತು. ಕೋಮಲಾದೇವಿಯರು ತಂದೆ ತೀರಿದ ನಾಲ್ಕೇ ನಾಲ್ಕು ವರುಷಗಳಲ್ಲಿ ರಾಜ್ಯಸೂತ್ರವನ್ನು ಕೈಗೆ ತೆಗೆದುಕೊಂಡು ವಿಷ್ಣುದೇವರನ್ನು ಹಿಂದಕ್ಕೆ ಸರಿಸಿದರು. ದೇವಿಯರ ಮೂರು ವರುಷಗಳಾಳಿಕೆಯಲ್ಲಿ ರಾಜ್ಯದ ಕಳೆಯು ಸೆಳೆತುಹೋಯಿತು. ರಾಜ್ಯಭಾಂಡಾರವು ದೇವಿಯರ ದುಂದುಗಾರಿಕೆಗೆ ವ್ಯಯವಾದಂತೆ ತೆರಿಗೆಗಳು ಏರಹತ್ತಿದವು. ದೇವಿಯರ ಚಾರಿತ್ರ್ಯದ ಬಗ್ಗೆ ಅರಮನೆಯ ತುಂಬಾ ನೂರೆಂಟು ಕಥೆಗಳು ಹರಡಿಕೊಂಡವು. ವಿಷ್ಣುದೇವರು ಅರಮನೆಯಿಂದ ದೂರದಲ್ಲಿದ್ದ ಬೇರೊಂದು ಭವನದಲ್ಲಿ ವಾಸಿಸಹತ್ತಿದರು. ರಾಜ್ಯದಲ್ಲಿ ಬರಗಾಲವು ತಲೆಯೆತ್ತಿ ತನ್ನ ವಿರಾಟರೂಪದಿಂದ ತಾಂಡವನೃತ್ಯ ಮಾಡುತ್ತಿದ್ದರೂ ಕೋಮಲಾದೇವಿಯರು ತಮ್ಮ ಚಿನ್ನಾಟದಲ್ಲಿ ಸಮಯವನ್ನು ವ್ಯಯಿಸಹತ್ತಿದರು. ಪ್ರಜೆಗಳಿಗೆ ತೊಂದರೆಯಾಗಲು ಅವರು ಒಂದು ದಿವಸ ವಿಷ್ಣುದೇವರನ್ನು ಸಂಧಿಸಿ ತಮ್ಮ ಸಂಕಟಗಳನ್ನು ನಿವೇದಿಸಿಕೊಂಡರು. ವಿಷ್ಣುದೇವರು ಭಾಗ್ಯದಲಕ್ಷ್ಮಿಯ ಕಡೆ ಬೆರಳು ಮಾಡಿ ಅವಳೇ ರಕ್ಷಿಸುವಳೆಂದು ಮೌನವಾಗಿ ಸೂಚಿಸಿದರು. ಪ್ರಜೆಗಳು ವಿಷ್ಣುದೇವರ ಈ ಮಾತಿಗೆ ತುಂಬಾ ನೊಂದರು; ಮನಬಂದಂತೆ ಮಾತನಾಡಿದರು. ರಾಣಿಯ ಚಾರಿತ್ರ್ಯದಿಂದ ರಾಜ್ಯದಲ್ಲಿ ಬರಗಾಲವು ತಲೆಯೆತ್ತಿದೆಯೆಂದು ದೊರೆಗಳಿಗೆ ಕೇಳುವಂತೆ ಮಾತನಾಡಿದರು. ಧರ್ಮಪತ್ನಿಯ ಬಗ್ಗೆ ಪ್ರಜೆಗಳಾಡಿದ ಮಾತನ್ನು ಕೇಳಿ ದೊರೆಗಳು ಕಿವಿಯ ಮೇಲೆ ಕೈಯಿಟ್ಟುಕೊಂಡರು. ದೊರೆಗಳ ಮೇಲೆ ಪ್ರಜೆಗಳ ಹಗೆತನವಿರಲಿಲ್ಲ; ಅವರು ದೇವರಂಥವರೆಂಬುದುಅವರಿಗೆಗೊತ್ತು. ಅಂತಲೇ ಎಲ್ಲರೂ ನಿರಾಶರಾಗಿ ಮರಳಿ ಬಂದರು.

ಬಹು ದಿವಸಗಳಿಂದಲೂ ಅಂತಃಪುರದ ಮುಖವನ್ನು ಕಾಣದ ವಿಷ್ಣುದೇವರು ಅಂದೇ ರಾತ್ರಿ ಬಂದುದರಿಂದ ದಾಸಿಯರಿಗೆಲ್ಲ ಆಶ್ಚರ್ಯವಾಯಿತು. ಪರಿವಾರದ ಅನೇಕರು ಅಂಜಿದರು. ವಿಷ್ಣುದೇವರು ನೇರವಾಗಿ ಕೋಮಲಾದೇವಿಯರ ಬಳಿ ಹೋದರು. ಆಕಸ್ಮಿಕವಾಗಿ ವಿಷ್ಣುದೇವರು ಅಂತಃಪುರಕ್ಕೆ ಬಂದುದರಿಂದ ದೇವಿಯರ ಮುಖವೂ ವಿಕಾರವಾಯಿತು. ವಿಷ್ಣುದೇವರು ಪ್ರಜೆಗಳಾಡಿದ ಮಾತಿನ ಒಂದೊಂದೇ ಎಳೆಯನ್ನು ತೆರೆದರು. ಸೂಕ್ಷ್ಮವಾಗಿ ತಾವು ಅದನ್ನು ಸಹಿಸುವದಿಲ್ಲೆಂದು ಸೂಚಿಸಿದರು. 'ದೇವದತ್ತರ ರಾಜಕುಮಾರಿಯಾಗಿ, ವಿಷ್ಣುದೇವರ ಪತ್ನಿಯಾಗಿ ಇಂಥ ಹೀನಕೃತಿ ಮಾಡಿದಿರೆಂದರೆ ದೇವರಾದರೂ ಮೆಚ್ಚುವನೆ?' ಎಂದು ಕೇಳಿದರು.

ದೇವಿಯರು ವಿಷ್ಣುದೇವರ ಮಾತಿನರ್ಥವನ್ನು ಗ್ರಹಿಸಿಕೊಂಡು 'ದೊರೆಯೆ, ನಿಮಗಾರೋ ತಪ್ಪು ಹೇಳಿದ್ದಾರೆ' ಎಂದರು.

'ಒಬ್ಬರಲ್ಲ, ಕೂಡಿದವರೆಲ್ಲರೂ ನಿನ್ನ ಚಾರಿತ್ರ್ಯದ ಬಗ್ಗೆ ಕೂಗಿಕೊಂಡರು. ಪ್ರಜೆಗಳ ಮಾತಿನಲ್ಲಿ ತಥ್ಯವಿದೆ' ಎಂದು ನಿರ್ಧಾರದ ಧ್ವನಿಯಲ್ಲಿ ಹೇಳಿದರು.

ರಾಣಿಯರು ಬಹು ಕೋಪದಿಂದ 'ಸುಮ್ಮನೆ ನನ್ನ ಮೇಲೆ ಅಪಾದನೆ ಹೊರಿಸಬೇಡಿ. ನನ್ನ ಮರ್ಯಾದೆ ನನಗೆ ಗೊತ್ತು. ರಾಜ್ಯ ನನ್ನದು, ಆಳುವವಳು ನಾನು, ನೀವು ಹೇ...ಳ . ಲಿ...ಕ್ಕೆ ....ಯಾ....ರು?' ಎಂದು ಮಾತನಾಡಿದರು.

ದೇವಿಯರ ಮಾತನ್ನು ಕೇಳಿ ದೊರೆಗಳು ಸಿಟ್ಟು ಬೆಂಕಿಯಾಗಿ ಕೈಯಲ್ಲಿಯ ಕತ್ತಿಯನ್ನು ಹಿರಿದು ಕೋಮಲಾದೇವಿಯರ ಮೇಲೆ ಏರಿಹೋದರು. ಅವರ ಕುತ್ತಿಗೆಗೆ ಕೈಹಾಕಿದರು. ದೇವಿಯರಿಗೆ ಪರಿಸ್ಥಿತಿಯ ಅರಿವಾಯಿತು. ತಾವು ಕತ್ತಿಗೆ ಬಲಿಯಾಗುವದು ಖಚಿತವೆನಿಸಿದೊಡನೆಯೆ ತಮ್ಮ ಧ್ವನಿಯನ್ನೇ ಬದಲಿಸಿದರು. ಕಣ್ಣುತುಂಬಾ ನೀರನ್ನು ತಂದುಕೊಂಡು 'ದೇವಾ ನಿಮಗೆ ಯಾರೋ ಕುಹಕಿಗಳು ತಪ್ಪುಹೇಳಿದ್ದಾರೆ. ಭಾಗ್ಯದಲಕ್ಷ್ಮಿಯ ಆಣೆಯಾಗಿ ನಾನು ಅಂಥ ಅಧರ್ಮದ ಕೃತಿ ಮಾಡಿಲ್ಲ. ನಾನು ಪವಿತ್ರಳು, ಪರಿಶುದ್ಧಳು. ವೃಥಾ ನನ್ನನ್ನು ಕೊಂದು ಹಿಂಸೆಗೆ ಗುರಿಯಾಗಬೇಡಿಂ'' ಎಂದು ಪರಿಪರಿಯಾಗಿ ಬೇಡಿಕೊಂಡರು. ವಿಷ್ಣುದೇವರ ದೇಹವನ್ನು ಸುತ್ತಿ ಎಂದೂ ಇಲ್ಲದ ಪ್ರೀತಿಯಿಂದ ಪ್ರಾರ್ಥಿಸಿದರು. ವಿಷ್ಣುದೇವರ ಮನಸ್ಸು ತುಂಬಾ ಕರಗಿತು. ತಾವೇ ಬಹುಶಃ ತಪ್ಪುಗಾರರಿರಬೇಕೆಂದು ಅವರು ಭಾವಿಸಿದರು. ಕೋಮಲಾದೇವಿಯರ ಮಾತಿನಲ್ಲಿ ಮಿಥ್ಯವೂ ನಡತೆಯಲ್ಲಿ ನಾಟಕೀಯತೆಯೂ ಅಡಗಿರಬೇಕೆಂಬ ಕಲ್ಪನೆ ಕೂಡ ದೊರೆಗಳಿಗೆ ಬರಲಿಲ್ಲ. ಕಾಲಿನ ಮೇಲೆ ಬಿದ್ದು ಅಳುತ್ತಿದ್ದ ಕೋಮಲಾದೇವಿಯರನ್ನು ದೊರೆಗಳೆತ್ತಿ ಕಣ್ಣೀರು ಒರಸಿದರು. ಬೆನ್ನುಮೇಲೆ ಮೆಲ್ಲನೆ ಕೈಯಾಡಿಸಿ ಮುಂಗುರಳನ್ನು ತೀಡಿ ಸಮಾಧಾನ ಮಾಡಿದರು. ಕಂಭಕ್ಕಾಶ್ರಯಿಸಿದ ಬಳ್ಳಿಯಂತೆ ಕೋಮಲಾದೇವಿಯರು ವಿಷ್ಣುದೇವರ ದೇಹವನ್ನಪ್ಪಿಕೊಂಡು ಅವರ ಮುಖನೋಡಿ ಮುಗುಳ ನಗೆ ನಕ್ಕಾಗ ವಿಷ್ಣುದೇವರು ಎಲ್ಲವನ್ನೂ ಮರೆತು ಸಗ್ಗಸುಖದಲ್ಲಿ ಲೀನರಾಗಿಬಿಟ್ಟರು.

ಅಂದು ಅಂತಃಪುರದಿಂದ ಅರಮನೆಗೆ ಬಂದು ಮಲಗಿದಾಗ ನಿದ್ರೆಯೇ ಬರಲಿಲ್ಲ. ತಾನು ಯಾರದೋ ಮಾತು ಕೇಳಿ ಹೆಂಡತಿಯನ್ನು ಹಿಂಸಿಸಿದೆನಲ್ಲಾ ಎಂಬುದೇ ಅವರ ಕೊರಗಿಗೆ ಕಾರಣ. ಮನಸ್ಸಿನ ವ್ಯಾಕುಲತೆಯನ್ನು ತಡೆದುಕೊಳ್ಳಲಾರದೆ, ಸರಿರಾತ್ರಿಯಲ್ಲಿದ್ದು ಭಾಗ್ಯದಲಕ್ಷ್ಮಿಯ ದೇವಾಲಯಕ್ಕೆ ಹೋದರು. ದೇವಿಯೆದುರು ಕುಳಿತು ಅವಳಿಗೆ ಬೇಡಿಕೊಂಡರು. ಭಾಗ್ಯದಲಕ್ಷ್ಮಿಯೆದುರು ಕುಳಿತು "ತಾಯಿ, ಹಿಂಸೆಮಾಡಬಾರದಿತ್ತು, ಮಾಡಿ ಅನ್ಯಾಯ ಮಾಡಿದ್ದೇನೆ. ಹಿಂಸೆಮಾಡುವ ಕೈಯೇ ಇರದಿದ್ದರೆ ಹಿಂಸೆಗಾದರೂ ಮನಸ್ಸೆಲ್ಲಿ ಬರುತ್ತದೆ?" ಎಂದು ನುಡಿದು ದೇವಿಯೆದುರು ತಮ್ಮ ಕತ್ತಿಯನ್ನು ಹಿಡಿದು ತಮ್ಮ ಬಲಗೈ ಹೆಬ್ಬೆರಳನ್ನು ಕೊಯ್ದು "ಇದೋ ದೇವಿ, ಇಂದೇ ಹಿಂಸೆಮಾಡಲಾರೆನೆಂದು ಪ್ರತಿಜ್ಞೆಮಾಡಿ ನಿನಗೆ ರಕ್ತಕುಂಕುಮವನ್ನು ಹಚ್ಚುತ್ತೇನೆ'' ಎಂದು ರಕ್ತದ ತಿಲಕವನ್ನು ದೇವಿಯ ಹಣೆಯಮೇಲಿಟ್ಟು ನಂತರ ಸಮಗ್ರ ಬಲಗೈಯನ್ನು ಕೊಯ್ದುಕೊಂಡು ಮಗ್ಗಲದಲ್ಲಿದ್ದ ಕೊಳದಲ್ಲಿ ಕೈತೊಳೆದುಕೊಂಡು ಬೆಳಗುಜಾವದಲ್ಲಿ ಅರಮನೆ ಸೇರಿದರು.

"ಅಂದಿನಿಂದ ಈ ಕೊಳವು ಕೆಂಪಾಗಿದೆ. ಅಲ್ಲಿ ನೋಡು ಪದ್ಮಾ, ಇನ್ನೂ ಭಾಗ್ಯದಲಕ್ಷ್ಮಿಯ ಹಣೆಯ ಮೇಲೆ ಕೆಂಪು ಕುಂಕುಮದ ಕಲೆಯಿದೆ'' ಎಂದು ತೋರಿಸಿದೆ.

ವಿಷ್ಣುದೇವ ದೊರೆಯು ಮಾಡಿದ ಪ್ರತಿಜ್ಞೆಯಿಂದ ಕೋಮಲಾದೇವಿಯರಿಗೆ ಆನಂದವಾಯಿತು. ತಮ್ಮ ಹಾದಿಯಲ್ಲಿದ್ದ ಮುಳ್ಳೊಂದು ಕಿತ್ತುಹೋಯಿತೆಂದು ಆನಂದಪುಲಕಿತರಾದರು. ತಮ್ಮ ರಾಜ್ಯದ ಮೇಲೆ ದಾಳಿಯಾದರೆ ತಾವೇ ಯುದ್ಧಕ್ಕೆ ಹೋಗುವೆನಲ್ಲಾ ಎಂದು ಸಂತೋಷಭರಿತರಾದರು. ವಿಷ್ಣುದೇವರ ಪ್ರತಿಜ್ಞೆಯ ವಾರ್ತೆ ನೆರೆಯ ರಾಜ್ಯಗಳಲ್ಲಿ ಬಲಿಷ್ಠರೆಂದು ಹೆಸರುಪಡೆದ ಶಿರಹಟ್ಟಿ ಬಸಪ್ಪನಾಯಕರ ಕಿವಿಯ ವರೆಗೆ ಹೋಯಿತು. ಅವರಿಗೆ ಬೆಟ್ಟದ ರಾಜ್ಯದ ಮೇಲೆ ಒಂದು ಕಣ್ಣಾದರೆ, ಬೆಟ್ಟದ ರೂಪರಾಶಿಯಮೇಲೆ ಎರಡು ಕಣ್ಣುಗಳು. ಕೋಮಲಾದೇವಿಯರ ಸೌಂದರ್ಯವನ್ನವರು ಕೇಳಿ ತಿಳಿದುಕೊಂಡಿದ್ದರು. ಬಸಪ್ಪನಾಯಕರ ಧರ್ಮಪತ್ನಿ ಅನ್ನಲಿಂಗವ್ವ ಮಹಾ ಸಾಧ್ವಿ. ರಣಾಂಗಣದಲ್ಲಿಯೂ ಪತಿಯನ್ನು ಹಿಂಬಾಲಿಸಿ ಪತಿಯ ಬೆನ್ನನ್ನು ಕಾಯುತ್ತಿದ್ದಳು.

ಪಾಪಕೃತಿಯೆಡೆಗೆ ಹೊರಳದಂತೆ ಪತಿಯನ್ನು ಬಂಧಿಸುತ್ತಿದ್ದಳು.

ಯುದ್ಧವು ಬಂ....ದ . ರೆ ನನ್ನ ಕೈತೋರಿಸುತ್ತೇನೆ. ಹೆಣ್ಣು ಸಿಂಹಾಸನವನ್ನಾಳಲಿಕ್ಕೆ ಅನರ್ಹಳಂತೆ. ಛೀ! . ಗಂಡಸು...ಎಷ್ಟು ಸ್ವಾ...ರ್ಥಿ ! ಎಂದು ಸೆರಗನ್ನು ಬಾಯಲ್ಲಿಟ್ಟುಕೊಂಡು ಅರಮನೆಯ ಹಂಸತೂಲಿಕಾತಲ್ಪದಲ್ಲಿ ಪವಡಿಸಿ ಯಾವದೋ ಕನಸನ್ನು ಕಟ್ಟುತ್ತಿದ್ದರು ಕೋಮಲಾದೇವಿಯರು. ದಾಸಿಯು ಓಡುತ್ತ ಬಂದು ಕೋಮಲಾದೇವಿಯವರನ್ನು ಎಚ್ಚರಿಸಿ 'ಅಮ್ಮಾಜಿ ಬದಿಯ ಶಿರಹಟ್ಟಿರಾಜ್ಯದ ಬಸಪ್ಪ ನಾಯಕನು ಏರಿಬಂದು ಬೆಟ್ಟದಕೆಳಕ್ಕೆ ಬೀಡು ಬಿಟ್ಟಿದ್ದಾನಂತೆ. ಮುಂದೆ ಗತಿಯೇನು ? ' ಎಂದು ಅಂಜುತ್ತಂಜುತ್ತ ಹೇಳಿದಳು. ವಾರ್ತೆಯನ್ನು ಕೇಳಿ ಕೋಮಲಾದೇವಿಯರು ಎಲ್ಲ ಸಿದ್ಧತೆಯನ್ನೂ ತಾವೇ ಮಾಡತೊಡಗಿದರು. ಬೆಟ್ಟದ - ಕೋಟೆಯನ್ನು ಭದ್ರವಾಗಿರಿಸಿ, ಬತೇರಿಯಿಂದ ಯುದ್ಧಸನ್ನಾಹದ ಕಹಳೆಯನ್ನು ಊದಿಸಿದರು. ತಮ್ಮನ್ನು ಎದುರಿಸಲು ರಾಣಿಯರು ಸಿದ್ಧರಾಗಿರುವರೆಂದು ಬಸಪ್ಪ ನಾಯಕರು ತಮ್ಮ ಸೈನ್ಯವನ್ನು ಸಜ್ಜುಗೊಳಿಸಿದರು. ಕೋಟೆಯ ಮೇಲೆ ರಾಷ್ಟ್ರಧ್ವಜವೇರಿ ರಣವಾದ್ಯಗಳು ಮೊಳಗತೊಡಗಿದೊಡನೆಯೇ ಯುದ್ಧವು ಪ್ರಾರಂಭವಾಯಿತು. ಬಸಪ್ಪನಾಯಕರ ಸೈನ್ಯವು ಮೇಲೇರಿಬರಹತ್ತಿದೊಡನೆಯೇ ಪರಿಮಿತ ಸೈನ್ಯದೊಂದಿಗೆ ರಾಣಿಯು ಬೆಟ್ಟದಿಂದಿಳಿದು ಅರ್ಧಹಾದಿಯಲ್ಲಿ ನಾಯಕರ ಸೈನ್ಯವನ್ನೆದುರಿಸಿದರು. ಯುದ್ಧವು ಮೂರು ದಿವಸಗಳ ವರೆಗೆ ಸಾಗಿತು. ವಿಜಯದೇವತೆ ನಾಯಕರತ್ತ ಮಾಲೆ ಹಿಡಿದಿರುವಳೆಂಬುದು ರಾಣಿಗೆ ಸ್ಪಷ್ಟವಾಗಿ ಕಾಣತೊಡಗಿತು. ತಾವು ಗೆಲ್ಲುವದು ಅಸಾಧ್ಯವೆಂದೆನಿಸಿದಾಗ ವಾಮಮಾರ್ಗವನ್ನು ಹಿಡಿಯಲು ಅವರು ನಿರ್ಧರಿಸಿದರು. ರಣರಂಗದಲ್ಲಿ ಸುಳಿದಾಡುತ್ತಿದ್ದ ರಾಣಿಯರನ್ನು ಬಸಪ್ಪನಾಯಕರು ನೋಡಿದ್ದರು. ಕ್ಷಣಕಾಲ ಅವರ ಮನಸ್ಸು ವಿಕಾರವಶವಾಗಿ ರಾಣಿಯ ಸೌಂದರ್ಯವನ್ನು ಬಯಸಿತು.

ಎರಡು ದಿವಸಗಳಿಂದಲೂ ರಣರಂಗಕ್ಕೆ ಬಂದ ಅವ್ವಲಿಂಗವ್ವನವರು ಅಂದು ಮಾತ್ರ ಬಂದಿರಲಿಲ್ಲ. ಮೈಯಲ್ಲಿ ಅಸ್ವಾಸ್ಥ್ಯವಿದ್ದುದರಿಂದ ಅವರು ರಣರಂಗದಿಂದ ದೂರಿದ್ದ ಹಳ್ಳಿಯೊಂದರಲ್ಲಿ ಮಲಗಿ ವೈದ್ಯಕೀಯ ಉಪಚಾರ ಪಡೆಯುತ್ತಿದ್ದರು. ಗುಪ್ತಚಾರರ ಮುಖಾಂತರ ಈ ವಾರ್ತೆಯು ರಾಣಿಯ ಕಿವಿಗೆ ಮುಟ್ಟಿದೊಡನೆಯೇ ಅಂದೇ ರಾತ್ರಿ ನಾಯಕರ ಪಾಳಯಕ್ಕೆ ಕಾಗದವನ್ನು ಬರೆದು ವಿಶೇಷ ದೂತರನ್ನು ಕಳಿಸಿದರು. ರಾತ್ರಿಯ ಮೂರನೇ ಜಾವದಲ್ಲಿ ಆ ವಿಶೇಷದೂತರನ್ನು ಬೆಟ್ಟದ ಮೇಲೆ ಕಳಿಸಲು ನಾಯಕರ ಪಂಜಿನವರು ಮೇಲೆ ಹೋಗಿದ್ದರೆಂದು ಪಾಳೆಯದ ರಕ್ಷಾಗಾರರು ಸೈನ್ಯದವರಿಗೆ ಹೇಳಿದರು. ರಾಣಿಯರ ಕಾಗದ ಕಂಡು ನಾಯಕರ ಮನಸ್ಸು ಮತ್ತೆ ವಿಕಾರವಶವಾಯಿತು.

ಮರುದಿವಸ ಮಹಾಸಂಗ್ರಾಮವನ್ನು ನಿರೀಕ್ಷಿಸುತ್ತಿದ್ದ ನಾಯಕರ ಸೇನೆಯಲ್ಲಿ ಸಂತೋಷಕೂಟ ದೇಪಾರ್ಡು ನಡೆಯಿತು. ಯುದ್ಧವನ್ನು ನಿಲ್ಲಿಸಲಾಗಿದೆಯೆಂದು ಸೇನಾಪತಿ ಅಶ್ವವನ್ನೇರಿ ಸೈನ್ಯದಲ್ಲಿ ಸಾರಿದನಲ್ಲದೆ, ಏಕೆ ? ಎಂಬುದರ ಕಾರಣವನ್ನು ವಿವರಿಸಲಿಲ್ಲ. ಅಂದು ಸಂಜೆ ಬಸಪ್ಪನಾಯಕರು ಪರಿಮಿತ ಸೈನ್ಯದೊಂದಿಗೆ ಬೆಟ್ಟವನ್ನೇರಿದರು. ಕೋಮಲಾದೇವಿಯರೇ ನಾಯಕರ ಸ್ವಾಗತಕ್ಕೆ ಬಂದಿದ್ದರು. ರಾಣಿಯು ನಾಯಕರನ್ನು ಸ್ವಾಗತಿಸಿ ಅವರಿಗಾಗಿ ಗೊತ್ತುಪಡಿಸಿದ ಅರಮನೆಯಲ್ಲಿಳಿಸಿದರು. ಕ್ಷಣಕ್ಷಣವೂ ನಾಯಕರಿಗೆ ಯುಗಯುಗವಾಗಿ ಪರಿಣಮಿಸತೊಡಗಿತ್ತು. ರಾಣಿಯರನ್ನು ಕೂಡಲು ಮನಸ್ಸು ಮುಗಿಲೆತ್ತರದಷ್ಟು ಬಲಿತು ನಿಂತಿತ್ತು.

ಕುಲದೇವತೆಯ ಗರ್ಭಗೃಹದಲ್ಲಿ, ನಂದಾದೀಪದ ಮಂದವಾದ ಪ್ರಕಾಶದಲ್ಲಿ ರಾಜ್ಯದ ವಿಜಯಕ್ಕಾಗಿ ಪ್ರಾರ್ಥನೆ ಸಲ್ಲಿಸುತ್ತ ದೇವಿಗೆ ಅಭಿಮುಖವಾಗಿ ಕುಳಿತು ಧ್ಯಾನಸ್ಥರಾಗಿದ್ದ ವಿಷ್ಣುದೇವರಿಗೆ ಪ್ರಪಂಚವೇ ಮರೆಯಾಗಿತ್ತು. ರಾತ್ರಿ ಸರಿಯುತ್ತಿದ್ದರೂ ಪದ್ಮಾಸನಸ್ಥರಾಗಿ ಜಪವನ್ನು ಮಾಡುತ್ತಿದ್ದರವರು. ಅಂದೇ ರಾತ್ರಿ, ಅದೇ ದೇವಾಲಯದ ಹೊರ ಪ್ರಾಂಗಣದಲ್ಲಿ ರಾಣಿಯು ನಾಯಕರನ್ನು ಸಂಧಿಸುವದೆಂದು ಗೊತ್ತುಪಡಿಸಲಾಗಿತ್ತು. ಈ ವಾರ್ತೆಯನ್ನು ಬಹು ಗೌಪ್ಯದಲ್ಲಿಡಲಾಗಿತ್ತು. ಅಂದು ಸಂಜೆಯಿಂದ ದೇವಾಲಯಕ್ಕೆ ಜನ ಬರುವದನ್ನು ಪ್ರತಿಬಂಧಿಸಲಾಗಿತ್ತು. ದೇವಾಲಯದಿಂದ ಕೊಂಚ ದೂರದಲ್ಲಿ ರಕ್ಷಾಗಾರರನ್ನಿಡಲಾಗಿತ್ತು.

ರಾತ್ರಿಯ ಮೂರನೇ ಜಾವದಲ್ಲಿ ನಾಯಕರೂ ರಾಣಿಯೂ ಕೂಡಿಬಂದರು. ಅವರಿಗೆ ದೇವಾಲಯದ ಪವಿತ್ರತೆಯ ಅರಿವಿರಲಿಲ್ಲ. ಪ್ರಾಂಗಣದಲ್ಲಿ ನಿಶ್ಶಬ್ದ ನೀರವತೆಯಿತ್ತು. ರಾಣಿಯ ಹೊಲಸುತನಕ್ಕೆ ಹೇಸಿ ದೀಪಗಳೂ ನಾಚಿ ಮಂದವಾಗಿ ಉರಿಯುತ್ತಿದ್ದವು. ಸೂಜಿ ಬಿದ್ದರೆ ಕೇಳಿಸುವಷ್ಟು ಮೌನವು ತನ್ನ ಬೀಡುಬಿಟ್ಟಿತ್ತು. ರಾಣಿಯು ನಾಯಕರ ಕೊರಳಿಗೆ ಕೈಹಾಕಿ ಮುಗುಳು ನಗೆನಕ್ಕು ಏನನ್ನೋ ಮಾತನಾಡಬಯಸಿದಾಗ, ಗರ್ಭಗೃಹದಿಂದ ನಿಟ್ಟುಸಿರೊಂದು ಹೊರಬಂತು. ಕೋಮಲಾದೇವಿಯರು ಕೈಯಲ್ಲಿ ಕಠಾರಿಯನ್ನು ಹಿಡಿದು ಮೆಲ್ಲನೆ ಗರ್ಭಗುಡಿಯೆಡೆ ಹೋದರು. ಕಠಾರಿಯನ್ನು ಮುಂದೆ ಮಾಡಿ ಗುಡಿಯಲ್ಲಿ ಹಣಿಕಿಕ್ಕಿದರು. ದೇವಿಯ ಕಡೆ ಮುಖ ಮಾಡಿ ಕುಳಿತ ವಿಷ್ಣುದೇವರು ಬಿಟ್ಟ ನಿಟ್ಟುಸಿರದಾಗಿತ್ತು. ಅವರಿಗೆ ಜಗತ್ತಿನ ಕಲ್ಪನೆಯೇ ಇದ್ದಿರಲಿಲ್ಲ. ರಾಣಿಯು ಕ್ಷಣಕಾಲ ಯೋಚಿಸಿ ಒಮ್ಮೆ ಒಳಕ್ಕೆ ಹೋಗಿ ಮತ್ತೆ ಹೊರಬಂದು ನಿಂತರು. " ನನ್ನ ಹಾದಿಯಲ್ಲಿದ್ದ ಈ ಮುಳ್ಳನ್ನು ಕಿತ್ತಿಹಾಕಲು ಇಂದು ಸುಸಂಧಿ ದೊರೆತಿದೆ. ಈ ಬಂಧನವನ್ನು ತಪ್ಪಿಸಿದರೆ, ನಾನೇ ಚಕ್ರವರ್ತಿನಿ " ಎಂದು ನುಡಿದು ಧೈರ್ಯದಿಂದ ಒಳಕ್ಕೆ ಹೋಗಿ ವಿಷ್ಣುದೇವರ ಬೆನ್ನಲ್ಲಿ ಕಠಾರಿಯನ್ನಿರಿದರು. ಹಿಂಸೆಯನ್ನು ಮಾಡಬಾರದೆಂದು ಪ್ರತಿಜ್ಞೆಮಾಡಿದ ವಿಷ್ಣುದೇವರು ನೋವನ್ನು ತಾಳಲಾರದೆ ನೆಲಕ್ಕೆಬಿದ್ದು ಕಠಾರಿಯಿಂದಿರಿದವರ ಮುಖ ನೋಡಿದರು. ಕೋಮಲಾದೇವಿಯೆಂದು ತಿಳಿದಾಗ ಮುಖವನ್ನು ಮತ್ತಿಷ್ಟು ಕಿರಿಯದನ್ನಾಗಿ ಮಾಡಿಕೊಂಡು " ರಾಜ್ಯದ ವಿಜಯಕ್ಕಾಗಿ ಪ್ರಾರ್ಥನೆ ಸಲ್ಲಿಸಿದೆ. ಭಾಗ್ಯದಲಕ್ಷ್ಮಿ ರಾಜ್ಯಕ್ಕೆ ಕಲ್ಯಾಣ ಮಾ...ಡ...ಲಿ " ಎಂದು ಹೇಳುತ್ತಲೇ ಕೊನೆಯುಸಿರನ್ನೆಳೆದರು. ವಿಷ್ಣುದೇವರನ್ನು ಯಾರು ಕೊಂದರೆಂದು ಪ್ರಜೆಗಳಿಗೆ ತಿಳಿಯಲೇ ಇಲ್ಲ. ರಾತ್ರಿಯೆಲ್ಲವೂ ರಾಣಿ ಬಸಪ್ಪನಾಯಕರೊಡನೆ ಕಳೆದು ಇನ್ನೂ ಕತ್ತಲಿರುವಾಗ ಅಂತಃಪುರವನ್ನು ಸೇರಿದರು.

ರವಿ ಮೂಡುವಾಗಲೇ ಬೆಟ್ಟದರಾಜ್ಯಕ್ಕೆ ವಿಷ್ಣುದೇವರ ಕೊಲೆಯ ವಾರ್ತೆಯನ್ನು ಹರಡಿದನು. ಪ್ರಜೆಗಳು ದುಃಖಿತರಾಗಿ ತಂಡತಂಡವಾಗಿ ಬಂದು ವಿಷ್ಣುದೇವರ ಕಳೇಬರವನ್ನು ನೋಡಿ ತಮ್ಮ ಕೊನೆಯ ಪ್ರಣಾಮಗಳನ್ನರ್ಪಿಸಿ ಹೋದರು. ಬೆಟ್ಟವನ್ನೇರಿದ ಬಸಪ್ಪನಾಯಕರು ಎರಡು ದಿವಸ



" ನನ್ನ ಹಾದಿಯಲ್ಲಿದ್ದ ಮುಳ್ಳನ್ನು ಕಿತ್ತಿ ಹಾಕಿದೆ " ನೆಂದು ರಾಣಿ ಸಂತಸಗೊಂಡಳು.

ಗಳ ವರೆಗೆ ಬೆಟ್ಟದಿಂದ ಕೆಳಕ್ಕಿಳಿಯಲೇ ಇಲ್ಲ. ಎರಡು ದಿವಸಗಳಿಂದಲೂ ಕೋಮಲಾದೇವಿಯವರು ನಾಯಕರೊಡನೆ ನಡೆಸಿದ ಪ್ರಣಯವು ಅಂತಃಪುರದ ಪರಿಚಾರಿಕೆಯರಿಂದ ಬೆಟ್ಟದ ತುಂಬಾ ಹರಡಿತು. ಬೆಟ್ಟದ ಮೇಲೆ ಹರಡಿದ ವಾರ್ತೆ ಬೆಟ್ಟದ ಕೆಳಕ್ಕೂ ಬಂದಿತು. ನಾಯಕರ ಪಾಳೆಯದ ತುಂಬ ಅದೇ ಸುದ್ದಿ. ಯುದ್ಧವು ಯಾಕೆ ನಿಂತಿತೆಂಬುದರ ಕಾರಣದ ಅರಿವಾಯಿತು. ದಾಸಿಯರು ಮಾತನಾಡುತ್ತಿದ್ದ ಪಿಸುಮಾತುಗಳಿಂದ ಅವ್ವಲಿಂಗವ್ವನವರು ಎಲ್ಲವನ್ನೂ ಗ್ರಹಿಸಿಕೊಂಡು "ಅಹುದು ಕೋಮಲೆ ಜಾರೆಯಿದ್ದಿರಬೇಕು. ಆದರೆ. ನ . . ನ್ನ . . ಪ . . ತಿ . . .? ಛೀ . . . ಛೀ . . . ಇಂಥವರ ಸೆ . . ತಿ" ಎಂದು ಮಾತನಾಡಿಕೊಳ್ಳುತ್ತ ಏನನ್ನೋ ಯೋಚಿಸಿದರು.

ಅಂದೇ ರಾತ್ರಿ ಬಸಪ್ಪನಾಯಕರು ತಮ್ಮ ಬೀಡಾರಕ್ಕೆ ಬಂದರು. ತಾವು ತಮ್ಮ ಪತ್ನಿಗೆ ಒಪ್ಪಂದ ಮಾಡಿಕೊಳ್ಳುವ ಮುಂದೆ ಹೇಳದೇ ಹೋದುದಕ್ಕೆ ವಿಷಾದವಾಗಿದೆಯೆಂದು ನುಡಿದರು. ಅವ್ವಲಿಂಗವ್ವನವರು ಏನನ್ನೂ ಮಾತನಾಡಲಿಲ್ಲ.

"ನೀನು ಅನಾರೋಗ್ಯದಿಂದ ಬಳಲುತ್ತಿದ್ದುದರಿಂದ ಹೇಳದೆ ಹೋಗಬೇಕಾಯಿತು. ಕೋಮಲಾದೇವಿಯರು ಒಪ್ಪಂದ ಮಾಡಿಕೊಂಡರು." ಎಂದು ಹೇಳಿದರು.

"ಎಲ್ಲಿದೆ ಒಪ್ಪಂದದ ಕರಡು?" ಎಂದು ಮೆಲ್ಲನೆ ಅವ್ವಲಿಂಗವ್ವನವರು ಕೇಳಿದೊಡನೆಯೇ ನಾಯಕರು ಅತ್ತಿತ್ತ ಶೋಧಿಸಿ ಮರೆತು ಬಂದವರಂತೆ ನಟಿಸಿದರು. ನಿಜಕ್ಕೂ ಒಪ್ಪಂದವೇ ಆಗಿರಲಿಲ್ಲ. ಅವ್ವಲಿಂಗವ್ವನವರಿಗೆ ಪರಿಸ್ಥಿತಿಯ ಅರಿವಾಯಿತು. ಅಂದು ಭೋಜನವಾದ ಮೇಲೆ ರಾತ್ರಿ ಮಲಗಿದರು. ನಾಯಕರು ಅವ್ವಲಿಂಗವ್ವನವರ ಕೈಹಿಡಿಯಲು ಬಂದಾಗ "ನನ್ನನ್ನು ನೀವು ಮುಟ್ಟಬೇಡಿ. ಅಪವಿತ್ರ ದೇಹವನ್ನು ಸೋಂಕಿಸಿ ನನ್ನನ್ನೂ ಅಪವಿತ್ರಳನ್ನಾಗಿ ಮಾಡಬೇಡಿರಿ" ಎಂದು ಸಿಟ್ಟಿನಿಂದ ನುಡಿದರು. ನಾಯಕರು ಎಷ್ಟು ಹೇಳಿದರೂ ಅವ್ವಲಿಂಗವ್ವನವರಿಗೆ ಸಮಾಧಾನವಾಗಲಿಲ್ಲ. ನಾಯಕರು ತಮ್ಮ ಆಟವು ಸಾಗದೆಂದು ತಿಳಿದಾಗ ಅರೆ ಅರೆಯಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡರು. ನಾಯಕರ ಪಾಳೆಯದಲ್ಲಿ ಎಂದಿಗೂ ಎರಡು ಹಾಸಿಗೆಗಳನ್ನು ಕಾಣದ ಪರಿಚಾರಿಕೆಯರು ಅಂದು ಎರಡು ಬೇರೆ ಬೇರೆ ಹಾಸಿಗೆಗಳನ್ನು ಕಂಡು ಅಚ್ಚರಿಪಟ್ಟರು.

ಬಸಪ್ಪನಾಯಕರು ದಣಿದಿದ್ದರಿಂದ ಮಲಗಿ ನಿದ್ರೆಹೋದರು. ನಾಯಕರ ಬೀಡಾರವು ಬೆಳಗನ್ನು ಕಾಣುತ್ತಲೇ ಗಡಬಡಿಸಿತು. ಬೆಳಗಿನ ಜಾವದಲ್ಲಿ ಅವ್ವಲಿಂಗವ್ವನವರ ಡೇರೆಗೆ ಬಸಪ್ಪನಾಯಕರ ರುಂಡವು ತೂಗಾಡುತ್ತಿತ್ತು. ರಣಭೇರಿಯ ವಾದ್ಯಗಳು ಮೊಳಗಿದೊಡನೆಯೇ ಸೈನ್ಯವು ಒಂದೆಡೆ ಕಲೆಯಿತು. ಅವ್ವಲಿಂಗವ್ವನವರು ನಾಯಕರ ಕುಕೃತ್ಯವನ್ನು ಸೈನ್ಯಕ್ಕೆ ಸಾರಿ ಅವರನ್ನು ತಾವೇ ಕೊಂದಿರುವದಾಗಿ ಹೇಳಿದರು. ತಮ್ಮ ಸೈನ್ಯಕ್ಕೆಲ್ಲ ಬೆಟ್ಟವನ್ನೇರಲು ಅಜ್ಞಾಪಿಸಿದರು. ಕ್ಷಣಾರ್ಧದಲ್ಲಿ ಬೆಟ್ಟದ ತುಂಬಾ ನಾಯಕರ ಸೈನ್ಯವೇ ಸೈನ್ಯ! ಯುದ್ಧದ ಭೀತಿಯಿಲ್ಲದ್ದಕ್ಕೆ ಬೆಟ್ಟದಕೋಟೆಯ ಮಹಾದ್ವಾರವು ತೆರೆದಿತ್ತು. ಸೈನ್ಯವು ಬೆಟ್ಟವನ್ನೇರಿದಾಗಲೇ ಬೆಟ್ಟವು ವಶವಾಯಿತು. ಅವ್ವಲಿಂಗವ್ವನವರು ಅಂತಃಪುರವನ್ನು ಮುತ್ತಿ ಹೊಂಗನಸುಗಳ ಲೆಕ್ಕದಲ್ಲಿ ಮುಳುಗಿ ಅವ್ಯಕ್ತವಾದ ಸಂತೋಷವನ್ನು ಪಡುತ್ತಿದ್ದ ರಾಣಿ ಕೋಮಲಾದೇವಿಯರನ್ನು ಬಂಧಿಸಿದರು. ಕೋಮಲಾದೇವಿಯರು ಅದನ್ನು ನೋಡಿ ಅಂಜಿದರು. ತಮ್ಮ ಕೊನೆಯಾಯಿತೆಂದು ನಿರ್ಧರಿಸಿದರು.

ಅವ್ವಲಿಂಗವ್ವನವರು ಯಾವ ವಿಚಾರಣೆಯನ್ನೂ ಮಾಡದೆ ಕೋಮಲಾದೇವಿಯನ್ನು ಬೆಟ್ಟದ ಒಂದಂಚಿಗೆ ಕರೆತಂದು ನಿಡಿದಾದ ಕೊಳ್ಳದ ತುದಿಯಲ್ಲಿ ನಿಲ್ಲಿಸಿ "ನಿನ್ನ ಪಾಪಕ್ಕಿದು ಪ್ರಾಯಶ್ಚಿತ್ತವು ನೋಡು, ರಾಜ್ಞಿ." ಎಂದು ಅವ್ವಲಿಂಗವ್ವನವರು ಹೇಳಿ ತಾವೇ ಸಹಸ್ರಾರು ಅಡಿ ಆಳವಾದ ಆ ಕೊಳ್ಳದಲ್ಲಿ ನೂಕಿದರು. ಕೋಮಲಾದೇವಿಯರ ದೇಹವು ಮರೆಯಾಗುವ ವರೆಗೂ ನೋಡಿದರು. ಕೋಮಲಾದೇವಿಯರ ಪಾಪಮಯ ದೇಹವನ್ನು ಕೆಳಕ್ಕೆ ಹರಿಯುತ್ತಿದ್ದ ಪುಣ್ಯಮಯ ಗಂಗೆ ಹೊತ್ತುಕೊಂಡು ಎಲ್ಲಿಯೋ ಹೋದಳು.

"ಬಾ ಪದ್ಮಾ, ಆ ಕೊಳವನ್ನು ತೋರಿಸುತ್ತೇನೆ" ಎಂದು ಅವಳನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಕೊಳದಲ್ಲಿ "ಕೋಮಲಾ ಎಂದು ಕೂಗು" ಎಂದು ಹೇಳಿದೆ. ಪದ್ಮಾ ಆ ರೀತಿ ಕೂಗಿದಾಗ ಕೊಳದಿಂದ 'ಓ' ಎಂಬ ಪ್ರತಿಧ್ವನಿ ಬಂದಿತು. "ಇಂದಿಗೂ ಇಲ್ಲಿ ಕೋಮಲಾದೇವಿ ದೆವ್ವವಾಗಿ ವಾಸಿಸುವಳೆಂಬ ಪ್ರತೀತಿಯಿದೆ. ಅಂತಲೇ ಓ ಎಂಬ ಧ್ವನಿಬರುತ್ತಿದೆ" ಎಂದು ಪದ್ಮಳಿಗೆ ವಿವರಿಸಿದೆ.

ಪದ್ಮಾ, ಮುಂದೆ ಅವ್ವಲಿಂಗವ್ವನು ಅರಮನೆಗೆ ಬಂದೊಡನೆಯೇ ಬೆಟ್ಟದ ಪ್ರಜೆಗಳೆಲ್ಲರೂ ನೆರೆದು ಅವರೇ ಆಳಬೇಕೆಂದು ಬಿನ್ನವಿಸಿಕೊಂಡರಂತೆ. ಆದರೆ ಅವ್ವಲಿಂಗವ್ವನವರು ಅದಕ್ಕೊಪ್ಪದೆ ವಿಷ್ಣು ದೇವರ ಕತ್ತಿಯನ್ನು ಸಿಂಹಾಸನದಲ್ಲಿರಿಸಿ ಅವರ ಹೆಸರಿನಿಂದಲೇ ಆಳಿದರಂತೆ. ತನ್ನ ಪತಿಯಂಥ ಕಾರ್ಯಮಾಡಿದರೆ ಅವರನ್ನು ಜನರು ಕಡೆಗಣಿಸಬೇಕೆಂದು ಅವರದೊಂದು ಮೂರ್ತಿಯನ್ನು ಬೆಟ್ಟದ ಕೆಳಕ್ಕೆ ನಿಲ್ಲಿಸಿದ್ದಾರೆ. ಕಂಡವರೆಲ್ಲ.ಅದರ ಮೇಲೆ ಉಗುಳಿ ಅಂಥ ಹೇಯಕಾರ್ಯವನ್ನು ಪ್ರತಿಭಟಿಸಲೆಂದು ಅವರ ಉದ್ದೇಶವಿತ್ತಂತೆ.

ವಿಜ್ಞಾನದಲ್ಲಿ ಯಾವಾಗಲೂ ಹೊಸ ಕೃತಿಗಳಿಗೆ ಪ್ರಾಶಸ್ತ್ಯ ಕೊಟ್ಟು ಓದಬೇಕು; ಆದರೆ ಸಾಹಿತ್ಯದಲ್ಲಿ ಹಳೇ ಕೃತಿಗಳನ್ನು ಓದಬೇಕು. ಅಭಿಜಾತ ಸಾಹಿತ್ಯವು ಸದಾಕಾಲದಲ್ಲೂ ಆಧುನಿಕವಾದುದೇ ಆಗಿರುವದು. ಹೊಸ ಕೃತಿಗಳು ಹಳೇ ವಿಚಾರಗಳಿಗೆ ಒಪ್ಪಕೊಟ್ಟು ಹೊಸತನವನ್ನುಂಟುಮಾಡುವವು; ಹಳೇಕೃತಿಗಳು ಹೊಸವಿಚಾರಗಳನ್ನು ಸೂಚಿಸಿ ಚೇತನವೀಯುವವು.

—ಬುಲ್‌ವರ.

# ಸಮಾಜಸುಧಾರಣೆಯಲ್ಲಿ ಮಹಿಳೆಯರ ಪಾತ್ರ

ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯ, ಪುರುಷರ ಕೂಡ ಸಮಾನತೆ ಬೇಕೆಂದು ಹೇಳುವವರು ಅವಳ ಪರಿಸ್ಥಿತಿಯನ್ನು ಸರಿಯಾಗಿ ಅರಿತುಕೊಂಡಿಲ್ಲ. ಸ್ತ್ರೀಯು ಸ್ವಾಭಾವಿಕವಾಗಿ ಮನೆತನದ ಕೆಲ ವಿಶೇಷ ಹೊಣೆಗಳನ್ನು ನಿರ್ವಹಿಸಬೇಕಾಗುವದು. ಅಂತೆಯೇ ಪುರುಷರು ಸಹ ಅವಳಿಗೆ ಸಮಾಜದಲ್ಲಿ ತಕ್ಕ ಸ್ಥಾನ ಕೊಡಬೇಕು. ಇದು ಸಮಾಜಸ್ವಾಸ್ಥ್ಯಕ್ಕೆ ಅತ್ಯವಶ್ಯ. ಈ ರೀತಿ ಸುಧಾರಣೆ ಮಾಡುವಲ್ಲಿ ಮಹಿಳೆಯರ ಪಾತ್ರ ಮಹತ್ವದ್ದೆಂದು ಲೇಖಿಕೆಯರು ನಿರೂಪಿಸಿದ್ದಾರೆ.

ಲೇ: ಶ್ರೀಮತಿ ಲಲಿತಾ ಜೋಶಿ, ಬಿ. ಎ., ಬಿ. ಇಡಿ., ಹುಬ್ಬಳ್ಳಿ.

ಭಾರತೀಯ ಸಮಾಜದಲ್ಲಿ ಕಳೆದ ಒಂದು ಶತಮಾನದಲ್ಲಿ ಅನೇಕ ಸ್ಥಿತ್ಯಂತರಗಳಾಗಿವೆ. ಅದು ರಶಿಯದಂತಹ ಕ್ರಾಂತಿಯಲ್ಲ. ಆದರೆ ಸಾವಧಾನವಾದ ಪ್ರಗತಿ. ಯಾವದೇ ಸಮಾಜವು ನಿಂತಲ್ಲಿಯೇ ನಿಲ್ಲುವದು ಸಾಧ್ಯವಿಲ್ಲ. ಹೆಚ್ಚು ಸುಖವಾಗಿ ಬಾಳಬೇಕೆಂಬ ಬಯಕೆಯು ಪರಿಸ್ಥಿತಿಗನುಸಾರವಾಗಿ ಮನುಷ್ಯನನ್ನು ಸುಧಾರಣೆಯ ದಿಶೆಯಲ್ಲಿ ಒಯ್ಯುತ್ತದೆ. ಭಾರತವೂ ಇತರ ರಾಷ್ಟ್ರಗಳಂತೆ ವೈಜ್ಞಾನಿಕ ಪ್ರಗತಿಯನ್ನು ಸಾಧಿಸಿದೆ. ಉದ್ಯೋಗಗಳು ಭರದಿಂದ ಬೆಳೆಯಲು ಯಂತ್ರಗಳು ಸಹಾಯ ಮಾಡುತ್ತಿವೆ. ವಿಶಾಲವಾದ ಶಿಕ್ಷಣದ ಪ್ರಭಾವದಿಂದ ಮಾನಸಿಕ ವಿಕಾಸವು ಆದಂತೆಲ್ಲ ಪ್ರತಿಯೊಂದು ವ್ಯಕ್ತಿಯು ಯಾವದೇ ವಿಷಯವನ್ನು ಮೂಢತನದಿಂದ ನಂಬದೆ ತನ್ನ ವಿಚಾರದ ಒರೆಗಲ್ಲಿಗೆ ಹಚ್ಚುತ್ತಿದೆ. ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವು ಎಲ್ಲರಿಗೂ ಕೊಡಲ್ಪಟ್ಟಿರುವದರಿಂದ ಸ್ವತಂತ್ರ ಪ್ರವೃತ್ತಿಯು ಎಲ್ಲೆಡೆಯಲ್ಲಿಯೂ ಬೆಳೆಯಲಾರಂಭಿಸಿದೆ. ಇವೆಲ್ಲವುಗಳ ಪ್ರಭಾವವು ಭಾರತೀಯ ಜೀವನದ ಮೇಲೆ, ವಿಶೇಷವಾಗಿ ಮಹಿಳೆಯರ ಮತ್ತು ಮಕ್ಕಳ ಮೇಲೆ, ಕಂಡುಬರಲಾರಂಭಿಸಿದೆ.

## ಮಹಿಳೆಯರ ಸ್ಥಿತಿ — ಅಂದು, ಇಂದು

ಆಧುನಿಕ ಯುಗದ ಸುಧಾರಣೆಯ ಗಾಳಿ ಬೀಸುವ ವರೆಗೂ ಭಾರತೀಯ ಮಹಿಳೆಯು ಕೇವಲ ಮನೆಯನ್ನೇ ತನ್ನ ಕಾರ್ಯರಂಗವನ್ನಾಗಿಟ್ಟುಕೊಂಡಿದ್ದಳು. ಪತಿಗೆ ಸಹಧರ್ಮಿಣಿಯಾಗಿ ಅವನ ಸಕಲ ಧರ್ಮಕರ್ಮಗಳಲ್ಲಿ ಸಹಾಯಕಳಾಗಿದ್ದಳು. ಕಷ್ಟಸುಖಗಳಲ್ಲಿ ಸಮಭಾಗಿನಿಯಾಗಿ ಅರ್ಧಾಂಗಿಯೆನಿಸಿಕೊಂಡಿದ್ದಳು. ರಾಷ್ಟ್ರದ ಸೊತ್ತಾದ ಚಿಕ್ಕಮಕ್ಕಳ ಲಾಲನೆಪಾಲನೆಯ ಮಹತ್ತರವಾದ ಕರ್ತವ್ಯವನ್ನು ಪ್ರಕೃತಿಯು ಅವಳಿಗಾಗಿಯೇ ಮೀಸಲಾಗಿರಿಸಿದೆ. ಅವಿಭಕ್ತ ಕುಟುಂಬದಲ್ಲಿ ಜೀವನವನ್ನು ಸಾಗಿಸುವ ಅವಳು ಅನೇಕ ತ್ಯಾಗಗಳನ್ನು ಮಾಡಲೇಬೇಕಾಗುತ್ತಿತ್ತು.

ಇದೆಲ್ಲವೂ ಭಾರತಸಮಾಜದಲ್ಲಿ ಸ್ತ್ರೀಯರಿಗಿರುವ ಸುಂದರ ಸ್ಥಾನವೇನೊ ನಿಜ. ಆದರೆ ಇಷ್ಟರಿಂದಲೇ ಅವಳ ಜೀವನ ಪೂರ್ತಿ ಸಫಲವಾದಂತಾಯಿತೇ? ಅವಳಿಗೂ ತನ್ನವೇ ಆದ ಮನೋಭಿಲಾಷೆ ಮಹತ್ವಾಕಾಂಕ್ಷೆಗಳು ಇರುವದಿಲ್ಲವೇ? ಜಗತ್ತು ಎಳೆಯದಾಗಿದ್ದಾಗ, ನಿಸರ್ಗದೊಡನೆ ಹೋರಾಡುವ ಶಕ್ತಿಯ ಅವಶ್ಯಕತೆಯು ಮಾನವನಿಗಿದ್ದಾಗ, 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಮನುವು ಹೇಳಿದ್ದು ಯೋಗ್ಯವಾಗಿರಬಹುದು. ಆದರೆ ಬುದ್ಧಿಯೇ ಬಲವಂತವಾದ ಇಂದಿನ ಯುಗದಲ್ಲಿ ಪುರುಷನಿಗೆ ಸರಿಸಮಾನಳಾಗಿ ಮಹಿಳೆಯು ಜೀವನದ ಅನೇಕ ರಂಗಗಳಲ್ಲಿ ದುಡಿಯಬಲ್ಲಳು. ಇಂದು ಶಾಲೆ ಕಾಲೇಜುಗಳಲ್ಲಿಯೂ ರಾಜಕೀಯ ರಂಗದಲ್ಲಿಯೂ, ಸಾಮಾಜಿಕ ಚಟುವಟಿಕೆಗಳಲ್ಲಿಯೂ, ಅಲ್ಲದೆ ವಿವಿಧ ಜೀವನ ವೃತ್ತಿಗಳಲ್ಲಿಯೂ ಅಸಾಧಾರಣ ಪಟುತ್ವವನ್ನು ಪ್ರದರ್ಶಿಸುತ್ತಿರುವ ಮಾನ್ಯ ಮಹಿಳೆಯರ ಉದಾಹರಣೆಗಳನ್ನು ಲಕ್ಷ್ಯಕ್ಕೆ ತಂದುಕೊಂಡಾಗ, ಇಲ್ಲಿಯ ವರೆಗೆ ಇದೇ ಸ್ತ್ರೀಯನ್ನು ಮನೆಯ ನಾಲ್ಕು ಗೋಡೆಗಳ ಆವಾರದಲ್ಲಿಯೇ ಹತ್ತಿಕ್ಕಿಟ್ಟದ್ದು ಎಂಥ ಸಮಾಜಘಾತಕ ಕೆಲಸವಾಯ್ತೆಂದು ಹಳಹಳಿಸುವ ಕಾಲವೀಗ ಬಂದಿದೆ. ಭಾರತದಲ್ಲಿ ಸಮಾಜದ ಅರ್ಧಭಾಗದಷ್ಟು ನಾರಿಯರೇ ಇರುವದರಿಂದ ಅವರನ್ನು ಕಡೆಗಣಿಸುವ



ದೆಂದರೆ ಸಮಾಜ ಸುಧಾರಣೆಯ ಗತಿಯು ಬಹಳಷ್ಟು ಕುಂಠಿತವಾಗುತ್ತದೆ.

ಇವೆಲ್ಲ ವಿಚಾರಗಳನ್ನು ಗಮನಿಸಿಯೆ ಮಹಾತ್ಮಾ ಗಾಂಧೀಜಿಯವರು ೧೯೨೦ ರ ಅಸಹಕಾರ ಚಳವಳಿಯಲ್ಲಿ ಭಾಗತೆಗೆದುಕೊಳ್ಳುವಂತೆ ಸ್ತ್ರೀಯರನ್ನು ಪ್ರೇರೇಪಿಸಿದರು. ಅದೊಂದು ಸಾಮಾಜಿಕ ಕ್ರಾಂತಿಯೆಂದೇ ಹೇಳಬೇಕು. ಅಂದಿನಿಂದಲೇ ಮಹಿಳೆಯರ ಸ್ವಾತಂತ್ರ್ಯದ ದಿನಗಳು ಅರಂಭವಾದವು. ಸ್ತ್ರೀಶಿಕ್ಷಣವು ಅನೇಕ ವಾದವಿವಾದಗಳನ್ನೆದರಿಸುತ್ತ ಪ್ರಗತಿ ಹೊಂದಿದಂತೆ, ಮಹಿಳಾ ಸಮಾಜದಲ್ಲಿ ಜಾಗೃತಿಯುಂಟಾಯಿತು. ಇಂದು ಎಲ್ಲೆಡೆಯಲ್ಲಿಯೂ ಮಹಿಳಾಮಂಡಳಗಳು ಕಲ್ಯಾಣಕೇಂದ್ರಗಳು ಮಹಿಳೆಯರ ಉದ್ಧಾರಕ್ಕಾಗಿ ತಲೆಯೆತ್ತಿವೆ.

ಭಾರತಪ್ರಜಾರಾಜ್ಯವು ಸ್ವಾತಂತ್ರ್ಯಾನಂತರ ಸ್ತ್ರೀಯರ ಅಭ್ಯುದಯಕ್ಕಾಗಿ ಅನೇಕ ಕಾಯ್ದೆಗಳನ್ನು ಮಾಡಿದೆ. ತಂದೆಯ ಹಾಗೂ ಪತಿಯ ಆಸ್ತಿಯಲ್ಲಿ ವಾರಸಾ ಹಕ್ಕುಗಳು ಅವಳಿಗೆ ದೊರೆತು ತಕ್ಕಮಟ್ಟಿಗೆ ಆರ್ಥಿಕ ಸ್ಥಿರತೆಯನ್ನು ಪಡೆದಿದ್ದಾಳೆ. ವಿವಾಹ ಮತ್ತು ವಿವಾಹವಿಚ್ಛೇದ ಕಾಯ್ದೆಗಳಿಂದ ಈ ಮೊದಲು ಕೆಲವು ಪ್ರಸಂಗಗಳಲ್ಲಿ ಪುರುಷನಿಂದ ಅವಳ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳಿಗೆ ತಡೆಹಾಕಿದ್ದಾಗಿದೆ. ರಾಜಕೀಯದಲ್ಲಿಯೂ ಅವಳಿಗೆ ಮತಸ್ವಾತಂತ್ರ್ಯವಿತ್ತು. ತನ್ನ ಪ್ರತಿನಿಧಿಯನ್ನು ಅವಳು ವಿಧಾನಸಭೆಗಳಿಗೆ ಕಳುಹಿಸಬಹುದಾಗಿದೆ. ಹೀಗಾಗಿ ಅವಳಿಗೆ ಈ ಮೊದಲು ಇಲ್ಲದ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವಾತಂತ್ರ್ಯಗಳೆಲ್ಲವೂ ದೊರೆತು ಕಾಯ್ದೆಯಲ್ಲಿ ಮಹಿಳೆಯು ಪುರುಷನಿಗೆ ಸಮಾನಳಾಗಿದ್ದಾಳೆ. ಈ ಎಲ್ಲ ಹಕ್ಕುಬಾಧ್ಯತೆಗಳನ್ನು ದೊರಕಿಸಿಕೊಂಡ ಮಹಿಳೆಯು ಯಾವ ರೀತಿಯಾಗಿ ಸಮಾಜದ ಉನ್ನತಿಗೆ ತದ್ವಾರಾ ರಾಷ್ಟ್ರದ ಏಳ್ಗೆಗೆ ಸಹಾಯ ಮಾಡಬಲ್ಲಳು ಎಂಬುದನ್ನು ಈಗ ವಿಚಾರಿಸಬೇಕಾಗಿದೆ.

## ಸಮಾಜ-ಸುಧಾರಣೆಯೆಂದರೇನು ?

ಸಮಾಜಸುಧಾರಣೆಯೆಂದರೆ ಸಮಾಜಾಂತರ್ಗತ ವ್ಯಕ್ತಿಗಳ ಮತ್ತು ವಿವಿಧ ಸಂಸ್ಥೆಗಳ ಸುಧಾರಣೆ, ಸುಖ-ಶಾಂತಿಗಳಿಂದೊಡಗೂಡಿದ ಜೀವನವನ್ನು ಸಾಗಿಸುವದಕ್ಕಾಗಿ ಸಂಘಜೀವಿಯಾದ ಮನುಷ್ಯನು ತನ್ನ ಮೇಲೆ ತಾನೇ ಕೆಲವೊಂದು ರೀತಿ-ನೀತಿ,ನಿರ್ಬಂಧಗಳನ್ನು ಹಾಕಿಕೊಂಡಿದ್ದಾನೆ. ಕುಟುಂಬ, ವಿವಾಹ, ಆರ್ಥಿಕ ಸ್ಥಿತಿ, ಶಿಕ್ಷಣ, ವ್ಯಕ್ತಿಸ್ವಾತಂತ್ರ್ಯ, ಧರ್ಮ, ನೀತಿಮತ್ತೆ ಮುಂತಾದವುಗಳೆಲ್ಲವೂ ಸಾಮೂಹಿಕವಾಗಿ ಒಂದು ಸಮಾಜದ ಪರಿಸ್ಥಿತಿಯ ಅಳತೆಗೋಲಾಗುತ್ತವೆ. ಯಾವ ಸಮಾಜದ ಕುಟುಂಬಗಳಲ್ಲಿ ಶಾಂತಿ-ಸಮಾಧಾನಗಳು ನೆಲೆಸಿವೆಯೋ ಮತ್ತು ಶಿಕ್ಷಣ ಸಂಸ್ಕೃತಿಗಳ ಪ್ರಭಾವವು ತೋರಿಬರುತ್ತಿದೆಯೋ, ಎಲ್ಲಿ ತಮ್ಮ ತಮ್ಮ ಉದ್ಯೋಗಗಳಲ್ಲಿ ಪಟುತ್ವವನ್ನು ಪಡೆದಂಥ ಜನರು ಆರ್ಥಿಕಅಭಿವೃದ್ಧಿಯನ್ನು ಹೊಂದುತ್ತಿರುವರೋ ಮತ್ತು ಉಚ್ಚವಾದ ಚಾರಿತ್ರ್ಯವನ್ನು ಕಾಯ್ದುಕೊಂಡು ದೇವರಲ್ಲಿ ಧರ್ಮಗಳಲ್ಲಿ ವಿಶ್ವಾಸವಿಟ್ಟು ಜೀವನವನ್ನು ಸಾಗಿಸುತ್ತಿರುವರೋ ಅದುವೇ ಗಾಂಧೀಜಿಯವರು ಕಂಡ ಸರ್ವೋದಯ ಸಮಾಜ. ಇಂಥ ರಾಜಕೀಯ ಹಾಗೂ ಆರ್ಥಿಕ ಶೋಷಣೆಯಿಲ್ಲದ ವ್ಯಕ್ತಿಸ್ವಾತಂತ್ರ್ಯ ಮತ್ತು ಸಮಾನತೆಯ ತಳಹದಿಯ ಮೇಲೆ ಕಟ್ಟಲಾದ ಸಮಾಜದಲ್ಲಿ ಮಾತ್ರ ಪ್ರತಿಯೊಬ್ಬ ಸ್ತ್ರೀಪುರುಷನ ಕರ್ತೃತ್ವಶಕ್ತಿಯು ಅಡೆತಡೆಯಿಲ್ಲದೆ ಪ್ರವಹಿಸಬಲ್ಲದು.

ಇಂಥ ಆದರ್ಶ ಸಮಾಜದತ್ತ ಸಾಗಬೇಕಾದರೆ ನಮ್ಮ ಇಂದಿನ ಸಮಾಜದಲ್ಲಿ ಅನೇಕ ಸುಧಾರಣೆಗಳನ್ನು ಮಾಡುವದು ಅವಶ್ಯ. ಈ ಸುಧಾರಣೆಯ ಕಾರ್ಯದಲ್ಲಿ ಮಹಿಳೆಯ ಭಾಗವು ದ್ವಿಮುಖವಾಗಿದೆ. ಒಂದು, ಮನೆಯ ಯಜಮಾನಿತ್ವವನ್ನು ವಹಿಸಿ ಕುಟುಂಬದ ಸ್ವಾಸ್ಥ್ಯಕ್ಕಾಗಿ ದುಡಿಯುವುದು, ಇನ್ನೊಂದು ಮನೆಯಿಂದ ಹೊರಬಿದ್ದು ಸಂಘಜೀವನದಲ್ಲಿ ಭಾಗವಹಿಸುವದು.

## ಕುಟುಂಬ

ಸಮಾಜದ ಪ್ರಮುಖ ಸಂಸ್ಥೆಗಳಲ್ಲಿ ಕುಟುಂಬಕ್ಕೆ ವಿಶೇಷವಾದ ಪ್ರಾಧಾನ್ಯವಿದೆ. ಕುಟುಂಬವು ಸಮಾಜದ ನಾಡಿ ಇದ್ದಂತೆ. ಕೆಲವು ಸಾಮಾನ್ಯ ಕುಟುಂಬಗಳನ್ನು ನಿರೀಕ್ಷಿಸಿದರೆ ಇಡೀ ಸಮಾಜದ ಲಕ್ಷಣಗಳು ತಿಳಿದೇ ಹೋಗುತ್ತವೆ. 'ಕುಲವ ನಾಲಿಗೆಯರುಹಿತು' ಎಂಬ ಮಾತು ಎಷ್ಟು ಸತ್ಯವೋ ಅಷ್ಟೇ ಕುಟುಂಬ ಮತ್ತು ಸಮಾಜಗಳ ಸಂಬಂಧವೂ ಸತ್ಯ. ಒಂದು ವ್ಯಕ್ತಿಯ ಗುಣಗಳು ರೂಪುಗೊಳ್ಳುವದು ಮನೆಯಲ್ಲಿಯೇ ! ಮನೆಯಲ್ಲಿ ಹಿತಕರವಾದ ವಾತಾವರಣವನ್ನು ಕಾಯ್ದುಕೊಳ್ಳುವದು ಸ್ತ್ರೀಯರ ಕರ್ತವ್ಯವಾಗಿದೆ. ಗೃಹಿಣಿಯು ಸುಸಂಸ್ಕೃತಳೂ ಸುಶಿಕ್ಷಿತಳೂ ಆಗಿದ್ದಲ್ಲಿ ಮನೆಯ ವಾತಾವರಣವೂ ಅದೇ ರೀತಿಯದಾಗಿರುತ್ತದೆ. ಅಂಥ ಮನೆಯಲ್ಲಿ ಬೆಳೆದ ಮಕ್ಕಳು ಘನವಂತ ಸಮಾಜ ನಿರ್ಮಾಪಕರಾಗುವದರಲ್ಲಿ ಸಂದೇಹವಿಲ್ಲ. ಸ್ವಚ್ಛತೆ ಅಚ್ಚುಕಟ್ಟುತನ, ವಿನಯ, ವಿಧೇಯತೆ ಸೌಹಾರ್ದ ಸಹನಶೀಲತೆ, ದುಡಿತದ ಹಿರಿಮೆ ಮುಂತಾದ ಸದ್ಗುಣಗಳನ್ನು ಮಕ್ಕಳು ಮನೆಯಲ್ಲಿಯೇ ಕಲಿಯುತ್ತಾರೆ. ತದ್ವಿರುದ್ಧ ಯಾವ ಮನೆಯಲ್ಲಿ ಅಸೂಯೇ, ಅಸಂತೃಪ್ತಿ ಮತ್ತು ಕಲಹಾದಿಗಳು ತಾಂಡವವಾಡುತ್ತಿವೆಯೋ ಅಂಥ ಮನೆಯಲ್ಲಿ ಬೆಳೆದ ಹುಡುಗರು ಮುಂದೆ ಸಮಾಜಕಂಟಕರಾಗುತ್ತಾರೆ. 'ಗೃಹಿಣೀ ಗೃಹಮುಚ್ಯತೇ' ಎಂಬ ಮಾತು ತೀರ ಸತ್ಯ. ಪತ್ನಿಯ ಪ್ರಭಾವ ಪತಿಯ ಮೇಲೆಯೂ ಸಾಕಷ್ಟಿರುತ್ತದೆ. ಬಾಹ್ಯಪ್ರಪಂಚದಲ್ಲಿ ಹೋರಾಡುವ ಪುರುಷನಿಗೆ ಸ್ಫೂರ್ತಿದಾಯಕವಾದ ಶಕ್ತಿಯೇ ಸ್ತ್ರೀ. ಅವನ ಸಕಲಕಾರ್ಯಗಳಲ್ಲಿ ಆಸಕ್ತಿ ವಹಿಸಿ ತನುಮನಗಳಿಂದ, ಸಾಧ್ಯವಾದರೆ ಧನದಿಂದ ಸಹಾಯ ಸಲ್ಲಿಸುತ್ತ ಹೋದಲ್ಲಿ ಆ ಪುರುಷನು ಮಹತ್ಕಾರ್ಯಗಳನ್ನು ಎಸಗಬಹುದು. 'ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ' ಎಂದು ಕಾಲೀದಾಸನು ಹೇಳಿದುದು ಒಬ್ಬ ಇಂದುಮತಿಯ ವಿಷಯದಲ್ಲಿ ಅಲ್ಲ; ಸಮಸ್ತನಾರೀವರ್ಗಕ್ಕೇ ಅನ್ವಯಿಸುತ್ತದೆ.

## ಸುಶಿಕ್ಷಿತ ಸ್ತ್ರೀಯ ಸಮಸ್ಯೆ

ಹಾಗಾದರೆ ಸುಶಿಕ್ಷಿತ ಸ್ತ್ರೀಯು ಕೇವಲ ಮನೆಯನ್ನೇ ನೆಚ್ಚಿಕೊಂಡಿರಬೇಕೇ, ಎಂಬ ಪ್ರಶ್ನೆ ಉದ್ಭವಿಸುತ್ತದೆ. ಒಬ್ಬ ವಿದ್ಯಾವತಿಯ ಉದಾಹರಣೆಯನ್ನು ತೆಗದುಕೊಳ್ಳುವಾ. ಅವಳು ಯಾವುದಾದರೊಂದು ವೃತ್ತಿಯನ್ನು ಕೈಕೊಂಡು ಸ್ವತಂತ್ರವಾಗಿ ಜೀವನ ಸಾಧಿಸಬೇಕೇ, ಇಲ್ಲವೆ ಸ್ತ್ರೀ

## ಮಹಿಳಾಮಂಡಳಗಳು

ಎಲ್ಲ ಕ್ಷೇತ್ರಗಳಲ್ಲಿಯೂ ಸಹಕಾರೀ ಪ್ರವೃತ್ತಿಯು ಬೆಳೆದ ಇಂದಿನ ದಿನಗಳಲ್ಲಿ ಮಹಿಳೆಯರೂ ಇಂಥ ಸಂಸ್ಥೆಗಳನ್ನು ಕಟ್ಟಿಕೊಂಡಲ್ಲಿ ಅವರ ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿ ನಿಶ್ಚಿತ. ವೈಯಕ್ತಿಕವಾಗಿ ಇಂಥ ಚಟುವಟಿಕೆಗಳನ್ನು ಸಾಗಿಸುವದು ದುಸ್ತರವಾಗುವದು. ಅನೇಕ ಕಡೆಗೆ ಮಹಿಳಾಮಂಡಳಗಳಿವೆ. ಆದರೆ ಅವು ಸದ್ಯಕ್ಕೆ ಸಾಕಷ್ಟು ಕೆಲಸಗಳನ್ನು ಮಾಡುತ್ತಿಲ್ಲ. ಅವುಗಳಲ್ಲಿ ಹೆಚ್ಚಾಗಿ ಮೇಲಿನ ವರ್ಗಗಳ ಹಾಗೂ ಸುಧಾರಿಸಿದ ಜನರೇ ಭಾಗವಹಿಸುತ್ತಿದ್ದು ಅವರ ಸಂಖ್ಯೆಯೂ ಕೂಡ, ಬಹಳ ಪರಿಮಿತವಾದದ್ದಿರುತ್ತದೆ. ಸಾಮಾನ್ಯ ಜನತೆಗೆ ಅವುಗಳ ಲಾಭವು ಎಳ್ಳಷ್ಟೂ ಆಗುವದಿಲ್ಲ. ಈ ಸಂಘಗಳ ಬಗ್ಗೆ ಸ್ತ್ರೀಯರಿಗೆ ಸರಿಯಾದ ತಿಳುವಳಿಕೆ ಇಲ್ಲದಿರುವದು, ಮನೆಬಿಟ್ಟು ಹೊರಗೆ ಹೋಗಿ ದೂರದ ಈ ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸುವದು ಸಾಧ್ಯವಾಗದೆ ಇರುವದು ಮತ್ತು ಸಾಕಷ್ಟು ಸಂಖ್ಯೆಯಲ್ಲಿ ಯೋಗ್ಯ ಹಾಗೂ ದಕ್ಷ ಕಾರ್ಯಕರ್ತ್ರಿಯರ ಅಭಾವ — ಇವೇ ಇದಕ್ಕೆ ಕಾರಣ. ಅವಿವಾಹಿತರು, ಸಂಸಾರದ ವಿಶೇಷ ಹೊರೆಯಿಲ್ಲದವರೂ ಕಾರ್ಯಪ್ರವೃತ್ತರಾಗಿ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಬೇಕು. ಮತ್ತು ಅಲ್ಲಲ್ಲಿ ಶಾಖೆಗಳನ್ನು ತೆರೆಯಬೇಕು.

ಸಾಹಿತ್ಯ, ಸಂಸ್ಕೃತಿ ಮತ್ತು ಕಲಾತ್ಮಕ ವಿಷಯಗಳಲ್ಲಿ ನಮ್ಮಮಟ್ಟಿಗೆ ಚಟುವಟಿಕೆಗಳು ನಡೆಯುತ್ತವೆ. ಅವು ಇನ್ನೂ ಹೆಚ್ಚು ವಿಸ್ತಾರಗೊಳ್ಳಬೇಕು. ವಾಚನಾಲಯವನ್ನು ನಡೆಯಿಸುವದು ಸ್ತ್ರೀಯರ ಮುಂದಿರುವ ವ್ಯಾವಹಾರಿಕ ಸಮಸ್ಯೆಗಳ ಬಗೆ ಚರ್ಚಾಕೂಟಗಳನ್ನೇರ್ಪಡಿಸಿ ಮುಖ್ಯಾಂಶಗಳನ್ನು ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟಿಸುವದು, ತಮ್ಮದೇ ಆದ ನಿಯತಕಾಲಿಕವನ್ನು ಹೊರಡಿಸುವದು, ಏಕಾಂಕನಾಟಕಗಳನ್ನೇರ್ಪಡಿಸುವದು. ಹೊಲಿಗೆ, ಹೆಣಿಕೆ, ಸಂಗೀತ ಮುಂತಾದ ವರ್ಗಗಳನ್ನು ತೆರೆಯುವದು, ಉತ್ಸವಾದಿಗಳನ್ನೇರ್ಪಡಿಸುವದು, ರೇಡಿಯೋ ಕಾರ್ಯಕ್ರಮಗಳಲ್ಲಿ ಭಾಗವಹಿಸುವದು, ಶಿಶುವಿಹಾರಗಳನ್ನು ನಡೆಸುವದು ಮುಂತಾದುವೇ ಚಟುವಟಿಕೆಗಳು.

ಮಹಿಳೆಯರು ಮನೆತನದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ದುಡಿಯುವ ಅವಶ್ಯಕತೆ ಈಗ ತಲೆದೋರಿದೆ. ಗೃಹಕೈಗಾರಿಕೆಗಳಿಂದ ಹಣ ಗಳಿಸಬಹುದು. ಕೆಲವೆಡೆ ಮಾತ್ರ ಇಂಥ ಪ್ರಯೋಗಗಳು ನಡೆದಿವೆ. ಕಸೂತಿ, ಗೊಂಬೆ ತಯಾರಿಕೆ, ಕಾಗದದಿಂದ ಹೂ ಮುಂತಾದವುಗಳನ್ನು ಮಾಡುವದು, ಉಣ್ಣೆಯಿಂದ ಸ್ವೆಟರ್ ಮುಂತಾದುವನ್ನು ಹೆಣೆಯುವದು, ಅಂಬರ ಚರಖಾದಿಂದ ನೂಲು ತೆಗೆಯುವದು, ಕಡ್ಡೀಪೆಟ್ಟಿಗೆಗಳನ್ನು ಸಿದ್ಧಗೊಳಿಸುವದೇ ಮುಂತಾದ ಗೃಹೋದ್ಯಮಗಳಲ್ಲಿ ಹೆಚ್ಚು ಆಸ್ಥೆ ವಹಿಸಬೇಕು. ಈ ವಿಷಯದಲ್ಲಿ ಜಪಾನಿನ ಅನುಕರಣೆಯನ್ನು ನಾವು ಅವಶ್ಯ ಮಾಡಬೇಕು. ಸಿದ್ಧ ಸರಕುಗಳನ್ನು ಮಹಿಳಾಸ್ತ್ರೋರ್ಸಗಳ ಮುಖಾಂತರ ಮಾರಾಟ ಮಾಡಬೇಕು.

ಅಜ್ಞಾನೀ ಸ್ತ್ರೀಯರಿಗೆ ಕುಟುಂಬ ಯೋಜನೆಯ ವಿಷಯದಲ್ಲಿ ಜ್ಞಾನಮಾಡಿಕೊಡುವದು, ರಾಜಕೀಯ ವಿಷಯಗಳನ್ನು ತಿಳಿಸಿ ಹೇಳುವದು ಮತ್ತು ಹೆಣ್ಣುಮಕ್ಕಳಿಗೆ ಸಂಬಂಧಪಟ್ಟ ಕಾಯ್ದೆಗಳ ಸಂಬಂಧದಲ್ಲಿ ಚರ್ಚಿಸಿ ಅಭಿಪ್ರಾಯ ವ್ಯಕ್ತಮಾಡುವದು ಇವು ಇತರ ಚಟುವಟಿಕೆಗಳಲ್ಲಿ ಬರುವವು.

## ಸ್ತ್ರೀಶಿಕ್ಷಣ

ಮೇಲಿನ ವಿವೇಚನೆಯಿಂದ ಸ್ತ್ರೀಯರಿಗೆ ದೊರೆಯಬೇಕಾದ ಶಿಕ್ಷಣವು ಕೆಲವೊಂದು ವೈಶಿಷ್ಟ್ಯಗಳಿಂದೊಡಗೂಡಿರಬೇಕೆಂಬುದು ಸ್ಪಷ್ಟ. ಇಂದು ಅವರಿಗೆ ದೊರೆಯುತ್ತಿರುವ ಶಿಕ್ಷಣವು ಅವರ ಭಾವೀ ಜೀವನದಲ್ಲಿ ನಿರುಪಯೋಗಿಯಾಗುತ್ತಿದೆ. ಮನೋವಿಕಾಸವನ್ನೊದಗಿಸುವ ಸಾಹಿತ್ಯಾದಿಗಳ ಜ್ಞಾನವು ಅವಶ್ಯವಾದರೂ ಜೊತೆಗೆ ಗೃಹವಿಜ್ಞಾನ ಮತ್ತು ಕೈಗಾರಿಕೆಯ ವಿಷಯಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ದೊರೆತಲ್ಲಿ ಅವರ ಸಾಮಾಜಿಕ ಮತ್ತು ಆರ್ಥಿಕ ಸಿತಿಗತಿಗಳು ಸುಧರಿಸುವವು.

ಇನ್ನು ನಮ್ಮ ಸಮಾಜದ ಜೀವಾಳವಾದ ಕೆಲವೊಂದು ವಿಷಯಗಳನ್ನು ವಿವೇಚಿಸೋಣ. ವಿವಾಹ, ಕುಟುಂಬ ಮತ್ತು ಧರ್ಮಪದ್ಧತಿಗಳೆ ಅವು. ಇವುಗಳಲ್ಲಿಯ ಗುಣದೋಷಗಳಿಗೆ ಸ್ತ್ರೀ-ಪುರುಷರಿಬ್ಬರೂ ಕಾರಣರಾಗಿದ್ದಾರೆ. ಮಹಿಳೆಯರಾದ ನಾವು ನಮ್ಮ ಪಾಲಿನ ಕರ್ತವ್ಯವನ್ನು ಗಮನಿಸಬೇಕೆಂಬುದೇ ನಮ್ಮ ಉದ್ದೇಶ.

ಜಗತ್ತಿನಲ್ಲಿಯ ಬೇರೆ ಬೇರೆ ರಾಷ್ಟ್ರಗಳ ಹೆಚ್ಚಾಗಿ ಪಾಶ್ಚಿಮಾತ್ಯರ ಪ್ರಭಾವವು ಭಾರತದ ಮೇಲೆ ಈಗ ವಿಶೇಷವಾಗಿ ಕಂಡು ಬರುತ್ತದೆ. ನಮ್ಮ ಮನಸ್ಸಿಗೆ ಬರಲಿ, ಬಾರದೇ ಇರಲಿ, ಅವರ ಆಚಾರ ವಿಚಾರಗಳ ಪ್ರವಾಹದಲ್ಲಿ ನಾವು ಈಸಬೇಕಾಗಿದೆ. ಹಂಸಕ್ಷೀರನ್ಯಾಯದಂತೆ ಅವರಲ್ಲಿಯ ಸದ್ಗುಣಗಳನ್ನೆಲ್ಲ ನಾವು ಕಲಿತುಕೊಳ್ಳೋಣ. ಶಿಸ್ತು, ಸಂಘಟನೆ, ದೇಶಪ್ರೇಮ, ಉದ್ಯೋಗಪ್ರಿಯತೆ, ಸಾಹಸ, ಅಚ್ಚುಕಟ್ಟೂ ಸ್ವಾರಸ್ಯಯುಕ್ತವೂ ಆದ ಜೀವನದ ರೀತಿ ಇವೆಲ್ಲವುಗಳು ಅನುಕರಣೀಯವೇ ಆಗಿವೆ. ಆದರೆ ಅವರನ್ನು ಎಲ್ಲದರಲ್ಲಿಯೂ ನಾವು ಕುರಿಯಂತೆ ಹಿಂಬಾಲಿಸಿದುದೇ ಆದರೆ ಪರಂಪರಾಗತವಾದ ಶ್ರೇಷ್ಠ ಭಾರತೀಯ ಸಂಸ್ಕೃತಿ ಮತ್ತು ಸಾಮಾಜಿಕ ವ್ಯವಸ್ಥೆಗಳು ನುಚ್ಚುನೂರಾಗಿ ಹೋಗುವವು. ವೇದ ಉಪನಿಷತ್ತುಗಳಲ್ಲಿ ಪ್ರಣೀತವಾದ ಜೀವನ್ಮೌಲ್ಯಗಳನ್ನು ಉಳಿಸಿಕೊಳ್ಳಲೇಬೇಕು. ಆದರೆ ಸಾವಿರಾರು ವರ್ಷಗಳ ಕಾಲಾವಧಿಯಲ್ಲಿ ಅದರಲ್ಲಿ ಸೇರಿಕೊಂಡ ಕಶ್ಮಲಗಳನ್ನು ತೊಡೆದುಹಾಕಿ ಆಧುನಿಕ ಜೀವನಪದ್ಧತಿಗೆ ಒಗ್ಗುವಂತೆ, ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕು.

## ಅವಿಭಕ್ತ ಕುಟುಂಬಪದ್ಧತಿ

ಅವಿಭಕ್ತ ಕುಟುಂಬ ಪದ್ಧತಿಯು ವೇಗದಿಂದ ನಷ್ಟವಾಗಹತ್ತಿದೆ. ಅದಕ್ಕೆ ಕಾರಣಗಳು ಮೂರು. ಹಿರಿಯರು ಹಳೆಯ ಜೀವನಪದ್ಧತಿ-ಹಳೆಯ ವಿಚಾರಗಳನ್ನೇ ಆಧಾರವಾಗಿಟ್ಟುಕೊಂಡು ತಮ್ಮ ಅಧಿಕಾರವನ್ನೇ ನಡೆಯಿಸಲು ಪ್ರಯತ್ನಿಸುತ್ತಾರೆ. ಸ್ವತಂತ್ರ ಮನೋವೃತ್ತಿಯುಳ್ಳ ಆಧುನಿಕ ಕಿರಿಯರು ಇತರರ ಹಸ್ತಕ್ಷೇಪವನ್ನು ಸಹಿಸಲಾರರು. ಆರ್ಥಿಕವಾಗಿ ಇಬ್ಬರೂ ಸ್ವತಂತ್ರರಿರುವದರಿಂದ ಸ್ವಾಭಾವಿಕವಾಗಿ ಅವರು ಕೂಡಿಬಾಳುವದು ಸಾಧ್ಯವೇ ಇಲ್ಲ. ಅವಿಭಕ್ತ ಕುಟುಂಬ ಪದ್ಧತಿಯು ಇಂದು ಎಂದಿಗಿಂತಲೂ ಹೆಚ್ಚು ಅವಶ್ಯಕವಿದೆ. ಅದು ಪ್ರತಿಯೊಬ್ಬ ಸದಸ್ಯನಿಗೂ ಆರ್ಥಿಕ, ಸಾಮಾಜಿಕ ರಕ್ಷಣೆಯನ್ನೊದಗಿಸುತ್ತದೆ. ಹಿರಿಯರು ಮನೆಗೆಲಸವನ್ನು ನೋಡಿಕೊಂಡಲ್ಲಿ ತರುಣ ಸ್ತ್ರೀ-ಪುರುಷರಿಬ್ಬರೂ ದುಡಿದು ಗಳಿಸಲು ಸಾಧ್ಯವಾಗುತ್ತದೆ. ಒಂಟಿ ಜೀವನವು ಯಾವಾಗಲೂ ಕಷ್ಟದಾಯಕ. ವ್ಯಕ್ತಿಸ್ವಾತಂತ್ರ್ಯವನ್ನು ಮನ್ನಿಸಿ ತಿಳುವಳಿಕೆಯಿಂದ ನಡೆದುಕೊಂಡದ್ದೇ ಆದರೆ ಅವಿಭಕ್ತ ಕುಟುಂಬದಿಂದ ಲಾಭವೇ ಆಗುತ್ತದೆ. ಸ್ತ್ರೀಯರ ಜಗಳಗಳಿಂದ ಮನೆಮುರಿದು ಹೋಗುತ್ತದೆಂಬ ಆಪಾದನೆಗೆ ಎಳ್ಳಷ್ಟೂ ಅವಕಾಶ ಕೊಡದಂತೆ ಹಿರಿಯ ಮತ್ತು ಕಿರಿಯ ಸ್ತ್ರೀಯರು ನಡೆದುಕೊಳ್ಳಬೇಕು.

## ವಿವಾಹ

ಇನ್ನು ವಿವಾಹದ ವಿಚಾರ. ಪಾಶ್ಚಿಮಾತ್ಯ ದೇಶಗಳಲ್ಲಿ ಕ್ಷಣಕ್ಕೊಂದು ದಿನಕ್ಕೊಂದು ವಿವಾಹ ವಿಚ್ಛೇದಗಳು ನಡೆಯುತ್ತಿರುವ ಈ ದಿನಗಳಲ್ಲಿಯೂ ನಮ್ಮ ಭಾರತದಲ್ಲಿ ಜನರು ಪ್ರೇಮಪೂರ್ಣ ದಾಂಪತ್ಯಜೀವನವನ್ನು ಆಮರಣ ನಡೆಸುತ್ತಿರುವದನ್ನು ನಾವು ಗಮನಿಸಿದರೆ, ನಮ್ಮ ಪವಿತ್ರ ವಿವಾಹವಿಧಿಯಲ್ಲಿ ಒಂದು ವಿಶಿಷ್ಟ ರಕ್ಷಣೆಯಿದೆಯೆಂಬುದು ಗೋಚರಿಸದಿರದು. ಕ್ವಚಿತ್ತಾಗಿ ಅಪವಾದಗಳೂ ಇಲ್ಲದಿಲ್ಲ. ಇಂಥ ಸಂದರ್ಭದಲ್ಲಿ ಬಿಡುಗಡೆಗೆ ಹಾದಿ ಇರಲೆಂದು ವಿವಾಹ ವಿಚ್ಛೇದ ಕಾಯ್ದೆ ಈಗ ಅಮಲಿನಲ್ಲಿ ಬಂದಿದೆ. ಈ ಧಾರ್ಮಿಕ ವಿಧಿಯನ್ನು ನಾವು ಕಾಯ್ದುಕೊಳ್ಳಬೇಕು. ನೀತಿಯ ಲಗಾಮಿಲ್ಲದ ಸುಧಾರಣೆಯ ಕುದುರೆ ನಮಗೆ ಬೇಡ. ಆದರೆ ಲೌಕಿಕ ವ್ಯವಹಾರಗಳಲ್ಲಿ ಕೆಲವು ಅನಿಷ್ಟ ಪದ್ಧತಿಗಳು ಬೆಳೆದು ಬಂದಿವೆ. ಮುಖ್ಯವಾಗಿ ವರದಕ್ಷಿಣೆಯ ಭೂತವು ಕನ್ಯಾಪಿತೃವನ್ನು ಭೀತಿಯಿಂದ ಕುಣಿಸುತ್ತಿದೆ. ತನ್ಮೂಲಕವಾಗಿಯೇ ಎಷ್ಟೋ ಕನ್ಯೆಯರ ಮದುವೆಯ ವಯಸ್ಸು ಮೀರುತ್ತಲಿದೆ.

ಇಷ್ಟೆಲ್ಲ ಬರೆದದ್ದು ನಗರದಲ್ಲಿಯ ಸುಶಿಕ್ಷಿತ ಮಧ್ಯಮ ಹಾಗೂ ಮೇಲ್ಪಟ್ಟದ ಮಹಿಳೆಯರಿಗಾಗಿ. ಗ್ರಾಮಗಳಲ್ಲಿರುವ ಮತ್ತು ನಗರಗಳಲ್ಲಿಯ ಕೆಳವರ್ಗದ ಶ್ರಮಜೀವಿ ಸ್ತ್ರೀಯರ ಸ್ಥಿತಿಯೇ ಬೇರೆ ಬಗೆಯದಾಗಿದೆ. ಅವರ ಸಮಸ್ಯೆಗಳೇ ಬೇರೆ. ಹಳ್ಳಿಯ ಹೆಣ್ಣುಮಕ್ಕಳನ್ನು ಸುಧಾರಿಸುವದೆಂದರೆ ಇಡೀ ಹಳ್ಳಿಯನ್ನೇ ಸುಧಾರಿಸಬೇಕಾಗುತ್ತದೆ. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮಸುಧಾರಣೆಗಾಗಿ ಯೋಜನೆಗಳನ್ನು ಮಾಡಿದ್ದಾರೆ. ಆವಶ್ಯಕ ಶಿಕ್ಷಣವನ್ನು ಕೊಡುವದು, ಆರೋಗ್ಯ ಮತ್ತು ಸ್ವಚ್ಛತೆಗಳ ಬಗ್ಗೆ ಜ್ಞಾನಮಾಡಿಕೊಡುವದು ಉಳಿತಾಯ ಯೋಜನೆಗಳ ಮಹತ್ವವನ್ನು ಬಿಂಬಿಸುವದು, ಗೃಹಕೈಗಾರಿಕೆಗಳ ಅಭಿವೃದ್ಧಿಯ ವಿಷಯದಲ್ಲಿ ಹೆಚ್ಚು ಗಮನ ಕೊಡುವದು ಮುಂತಾದ ಕಾರ್ಯಗಳನ್ನು ತರಬೇತಿ ಹೊಂದಿದ ಗ್ರಾಮಸೇವಿಕೆಯರು ಮಾಡಬೇಕಾಗುತ್ತದೆ. ಪರಿಸ್ಥಿತಿಯ ಅನುಕೂಲವಿದ್ದ ಸುಶಿಕ್ಷಿತ ಸ್ತ್ರೀಯರು ಸಾಮಾಜಿಕ ಕಲ್ಯಾಣ ಕೇಂದ್ರಗಳ ಮುಖಾಂತರ ಈ ಸೇವೆಯನ್ನು ಸಲ್ಲಿಸಲು ಸಾಧ್ಯವಿದೆ.

## ವೇಶ್ಯಾಸಮಸ್ಯೆ

ನಮ್ಮ ಸಮಾಜವನ್ನು ಮುಳ್ಳಿನಂತೆ ಆಳುಕುತ್ತಿರುವ ಇನ್ನೊಂದು ಸ್ತ್ರೀ ವರ್ಗವೂ ಇದೆ; ಅದು ವೇಶ್ಯೆಯರದು. ಚೀನದಲ್ಲಿ ಇಂಥ ವರ್ಗವನ್ನು ಬಲವಂತವಾಗಿ ಒಂದೆಡೆಗೆ ಕಲೆಹಾಕಿ, ಅವರಿಗೆ ವೃತ್ತಿಶಿಕ್ಷಣವನ್ನು ಕೊಟ್ಟು ಹೊಟ್ಟೆಯ ಮಾರ್ಗವನ್ನು ಮಾಡಿಕೊಟ್ಟದ್ದಾರೆ. ಉಪಜೀವನದ ದಾರಿಯನ್ನು ತೋರಿಸಿಕೊಡದೆ ವೇಶ್ಯಾಸಮಸ್ಯೆಯನ್ನು ಬಿಡಿಸುವದು ಸಾಧ್ಯವೇ ಇಲ್ಲ. ಇದು ಮುಖ್ಯವಾಗಿ ಸರಕಾರದ ಕೆಲಸವೇ. ವಿದ್ಯಾವಂತ ಮಹಿಳೆಯರು ಸರಕಾರಕ್ಕೆ ಸಹಾಯ ಮಾಡಿದರೆ ಈ ಕೆಲಸ ಸುಗಮವಾದೀತು.

ಸ್ತ್ರೀಯು ಸಮಾಜದ ಪ್ರಮುಖ ಅಂಗ. ಅವಳಿಂದಲೇ ಮನೆ. ಮನೆಯಿಂದಲೇ ಮಕ್ಕಳು. ಇಂದಿನ ಮಕ್ಕಳೇ ನಾಳಿನ ನಾಗರಿಕರು. ಅದ್ದರಿಂದ ಮಹಿಳೆಯರು ಸ್ವಪ್ರಯತ್ನದಿಂದಲೂ ಇತರರ ಸಹಾಯದಿಂದಲೂ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು. ತದ್ವಾರಾ ಬಲಾಢ್ಯ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ನೆರವು ನೀಡಬೇಕು. " ತೊಟ್ಟಿಲು ತೂಗುವ ಕೈಯು ಜಗತ್ತನ್ನೇ ಆಳಬಲ್ಲದು '' ಎಂಬುದನ್ನು ನಿದರ್ಶಿಸಬೇಕು.

---

# ಕಥೆ ಹೇಳಮ್ಮಾ

ಲೇ: ಶ್ರೀ ಶಾಮರಾವ ಗಜೇಂದ್ರಗಡಕರ

ಕಥೆಯೆಂದರೆ ಮಕ್ಕಳಿಗೆ ತುಂಬ ಪ್ರೀತಿ. ಮಗು ಆಡಿ ಆಡಿ ದಣಿದು ಬಂದಿದೆ. ನಿದ್ದೆ ಮಾಡುವ ಸಮಯ. ಆಕಳಿಕೆ, ತೂಕಡಿಕೆಗಳೆರಡೂ ನಡೆಗಿವೆ. ಆದರೆ ಅಮ್ಮ, ಅಜ್ಜಿ, ಹಿರಿಯಕ್ಕ ಕಥೆ ಕೇಳತೀನೆಂದರೆ ತೀರಿತು. ಮಗು ಧಾವಿಸಿ ಬರುವದೆ. ನಿದ್ದೆ, ದಣಿವು ಹಸಿವು ಬಾಯಾರಿಕೆಗಳೆಲ್ಲ ಮರೆತು ಬಿಡುತ್ತದೆ.

ತೀರ ಚಿಕ್ಕ ಮಗುವನ್ನು ಜೋಳಿಗೆ ತೊಟ್ಟಲುಗಳಲ್ಲಿ ಹಾಕಿ, ತೂಗಿ, ಜೋಗುಳಹಾಡಿ ಮಲಗಿಸುವದುಂಟು. ತುಸು ಹೆಚ್ಚು ವಯೋಮಾನದ ಮಗುವಿಗೆ ಮಲಗುವಾಗ್ಗೆ ಕಥೆ ಬೇಕು. 'ಕಥೆ-ಹೇಳಮ್ಮಾ' ಎಂದು ಕಾಡಿ, ಬೇಡಿ ಕಥೆ ಹೇಳಿಸಿಕೊಳ್ಳುತ್ತದೆ. ತಾಯಿ ಬೆನ್ನು ತಟ್ಟುತ್ತಿರಲು, ಕೆಲ ನಿಮಿಷ 'ಹೂಂ' ಎಂದು ಹೇಳುತ್ತ ಅಲ್ಲಿಯೇ ನಿದ್ದೆ ಹೋಗುತ್ತದೆ.

ಹೊರಗಿನ ಆಟ ಮುಗಿದಿದೆ. ದೀಪ ಹಚ್ಚುವ ಕಾಲ. ಮನೆಯ ಜಗುಲಿಯ ಮೇಲೆ ಮಕ್ಕಳು ಗುಂಪುಗುಂಪಾಗಿ ಕುಳಿತಿರುವದು ಕಂಡು ಬರುವದು ಕಥೆ ಕೇಳುವದಕ್ಕಾಗಿ. ಅವರಲ್ಲಿ ಒಬ್ಬರು ಕಥೆ ಹೇಳುವವರು-ಕಥೆಗಾರ, ಉಳಿದವರೆಲ್ಲ ಶ್ರೋತೃಗಳು. ಕಥೆಯ ಪ್ರೇಮದಲ್ಲಿ ಗಂಡು ಹೆಣ್ಣೆಂಬ ವ್ಯತ್ಯಾಸವಿಲ್ಲ. ಹುಡುಗ ಹುಡುಗೆಯರಿಬ್ಬರಿಗೂ ಕಥೆ ಅಷ್ಟೇ ಅಚ್ಚು ಮೆಚ್ಚಿನದು. ಯಾರಿಂದಲೋ ಕೇಳಿಕೊಂಡಿರುವ ಪರಂಪರೆಯ ಕಥೆಯನ್ನಾಗಲಿ ತಾನು ಅದೇ ನೋಡಿ ಬಂದಿರುವ ನಾಟಕ ಚಿತ್ರಪಟಗಳ ಕಥೆಯನ್ನಾಗಲಿ ಅವಳು ಹೇಳುವವಳು. ತಾನು ಕಥೆ ಹೇಳುವವಳೆಂಬ ಅಭಿಮಾನ ಒಂದೆಡೆಗೆ. ಜೊತೆಗೆ ಕಥೆಯ ವಸ್ತು ವ್ಯಕ್ತಿಗಳೊಡನೆ ಅನನ್ಯವಾದ ತನ್ಮಯತೆ, ತನ್ನ ಸುತ್ತಲೂ ಕೇಳುತ್ತ ಕುಳಿತಿರುವ ಮಕ್ಕಳ ಗುಂಪಿನ ಮೇಲೆ ಅವಳ ಪ್ರಭಾವವನ್ನು ನಿರೀಕ್ಷಿಸಬೇಕು. ಅವರಿಗೆ ಪಿಟ್ಟೆನ್ನಗೊಡುವದಿಲ್ಲ. ಕೂಡು ಎಂದು ತೋರಿಸಿದ ಸ್ಥಳದಲ್ಲಿ ಅವರು ಕೂಡಬೇಕು. ಕೇಳುವವರ ಏಕಾಗ್ರತೆಯಾದರೂ ನೋಡುವಂತಿರುವದು. ಮೈಮನಗಳನ್ನೆಲ್ಲ ಒಂದಾಗಿ ಮಾಡಿಕೊಂಡು, ತುದಿಗಾಲಿನ ಮೇಲೆ ಕುಳಿತು ಅವರು ಕೇಳುತ್ತಿರುವರು. ಈ ಸಮಯದಲ್ಲಿ ಯಾರು ಕೂಗಿದರೂ ಸರಿ. ಅವರಿಗೆ ಕೇಳಬರುವದಿಲ್ಲ. ಅರೆ ನಿಮಿಷವಾದರೂ ಕೈಕಾಲು ಸುಮ್ಮನೆ ಕೂಡದಿರುವ 'ಕಿಡಿಗೇಡಿ' ಗಳೆಂದು ಈ ವಯೋಮಾನದ ಮಕ್ಕಳು ಹೆಸರಾದವರು. ಕಥೆಯ ವಿಷಯದಲ್ಲಿ ಮಾತ್ರ ಮಕ್ಕಳ ಈ ಏಕಾಗ್ರತೆಯನ್ನು ಕಂಡುಕೊಂಡಾಗ ಶಿಕ್ಷಣಕ್ಷೇತ್ರದಲ್ಲಿಯೂ ಈ ಸಂಯಮ ಹಾಗೂ ಈ ಏಕಾಗ್ರತೆಯನ್ನು ಪಡೆಯಬಹುದೆ? ಎಂಬ ಅಭಿಲಾಷೆಯು ಶಿಕ್ಷಣಪ್ರೇಮಿಗಳ ಮನಸ್ಸಿನಲ್ಲಿ ಬಾರದೇ ಇರದು.

> ಚಿಕ್ಕ-ಮಕ್ಕಳು ಕಥೆಯೆಂದರೆ ಹುರುಪಿನಿಂದ ಬಂದು ಕೂಡುವರು. ಹಿರಿಯರು ಕಥೆ ಓದಿ ಬೇಸರಿಕೆ ಕಳೆದುಕೊಳ್ಳುವರು. ವಿದೂಷಕರು ಪರ್ಯಾಯವಾಗಿ ನೀತಿ ಬೋಧೆ ಮಾಡುವರು. ಕಥೆ ಹೇಳುವದು, ನಿರೂಪಿಸುವದು ಇದೆಲ್ಲ ಸ್ವಾಭಾವಿಕವಾಗಿರುವ ಕಲೆಯಾಗಿರಬೇಕೆಂಬುದು ಇದರಿಂದ ವ್ಯಕ್ತವಾಗುವದು.

ಹರಿಕಥೆಗೆ ಹೋಗಿ ತಡವಾಗಿ ಮನೆಗೆ ಬಂದು ಏಟು ಬೈಗಳನ್ನು ತಿಂದರೂ ಸರಿ. ಮಕ್ಕಳು ಹರಿಕಥೆಗೆ ಹೋಗುವದನ್ನು ಬಿಡುವದಿಲ್ಲ. ಅವರಿಗೆ ಅಲ್ಲಿ ಬೇಕಾಗಿರುವದು ಪೂರ್ವಪೀಠಿಕೆಯ ವೇದಾಂತದ ವಿವರಣೆಯಲ್ಲ. ಆ ದೀರ್ಘ ವಿವರಣೆಗೆ ಬೇಸರಗೊಂಡು ಏನಾದರೂ ನೆವ ಹೇಳಿಕೊಂಡು ನರೆಗೂದಲಿನ ಹಿರಿಯರೂ ಬೇಗ ಹೊರಟು ಬರಬಹುದು. ಆದರೆ ಹರಿದಾಸರು ಹೇಳುವ ಅಡ್ಡಕಥೆಗಳ ಆಶೆಗಾಗಿ ಚಿಕ್ಕ ಮಕ್ಕಳು ಕೊನೆಯವರೆಗೂ ಕುಳಿತುಕೊಳ್ಳುವರು.

### ಕಥೆ ಕೇಳುವ ಸಹಜಪ್ರವೃತ್ತಿ

ಮಕ್ಕಳು ಬೆಳೆದು ದೊಡ್ಡವರಾದಂತೆ ಅವರಲ್ಲಿಯ ಕಥಾಪ್ರೇಮವು ಪೂರ್ಣವಾಗಿ ಕಮರಿ ಹೋಗುವದಿಲ್ಲ. ಕಥೆಯ ಬಗ್ಗೆ ಅವರ ಆಸಕ್ತಿಯ ಆಳ-ಆಧಿಕ್ಯಗಳು ಮಾತ್ರ ತುಸು ಕಡಿಮೆಯಾಗುವವು. ಕುತೂಹಲದಂತೆ ಕಥಾಪ್ರೇಮವೂ ಒಂದು ಪ್ರಬಲವಾದ ಸಹಜಪ್ರವೃತ್ತಿಯಾಗಿದೆ. ಬೆಳೆಯುವ ವಯಸ್ಸು ಈ ಕಥಾಪ್ರೇಮವನ್ನು ಅಳಿಸಲಾರದು. ವಿಶೇಷ ಧಾರ್ಮಿಕ ಸಮಾರಂಭಗಳಲ್ಲಿ 'ಹರಕೆಯ ಗೊಂದಲ'ಗಳನ್ನು ಹಾಕಿಸುವ ರೂಢಿಯುಂಟು. ಈ ಗೊಂದಲಿಗರೂ ಕೀರ್ತನಕಾರರೆ. ಅವರು ಹೇಳುವ ಕಥೆ ಹಳೆಯದು. ಪುರಾಣ ಇಲ್ಲವೆ ಇತಿಹಾಸದಲ್ಲಿಯ ಒಂದು ಚರಿತ್ರೆ 'ಆಖ್ಯಾನ'. ಎಷ್ಟೋ ಸಲ ಕೇಳಿದ ಕಥೆಯನ್ನೇ ಮತ್ತೆ ಕೇಳಲು ಆಸ್ಥೆಯಿಂದ ಜನರು ಬಂದು ಕೂತುಕೊಳ್ಳುವರು. ಇದೇ ಮೇರೆಗೆ ಸಿಂಧೂರು ಲಕ್ಷ್ಮಣ್ಣ, ಕಿತ್ತೂರ ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ ಇತ್ಯಾದಿ ವೀರರ, ಸಾಹಸಿಗಳ ಹಾಗು ಸಾಧುಪುರುಷರ ಕಥೆಗಳನ್ನು ಕಟ್ಟಿದ ಲಾವಣಿ ಪದ ಗೀಗಿ ಪದಗಳನ್ನು ಸಾರ್ವಜನಿಕವಾಗಿ ಹಚ್ಚುವದುಂಟು. ನಿದ್ದೆ ನೀರಡಿಕೆಗಳನ್ನು ಮರೆತು, ಹೊತ್ತು ಮೂಡುವ ವರೆಗೆ ಕಥೆ ಕೇಳಿ ಜನರು ತಮ್ಮ ದೂರ ದೂರದ ಮನೆಗಳಿಗೆ ಹೋಗುವರು.

ನಾಡಹಬ್ಬ, ಜ್ಞಾನಸತ್ರ ಮೊದಲಾದ ರಾಷ್ಟ್ರೀಯ ಸಾಂಸ್ಕೃತಿಕ ಸಮಾರಂಭಗಳಲ್ಲಿ ವಿವಿಧ ವಿಷಯಗಳ ಬಗ್ಗೆ ಉಪನ್ಯಾಸಗಳನ್ನೇರ್ಪಡಿಸುವದುಂಟು. ಈ ಉಪನ್ಯಾಸಗಳು ವಿದ್ವತ್-ಪೂರ್ಣವಾಗಿರಬಹುದು. ಪಂಪ ರನ್ನರ ಕಾವ್ಯ ಪ್ರತಿಭೆಯ ವಿವಿಧ ಮುಖಗಳನ್ನು ಉಪನ್ಯಾಸಕರು ಎತ್ತಿ ತೋರಿಸಬಹುದು. ಆದರೆ ಈ ಅಮೂಲ್ಯವಾದ ಸಾಹಿತ್ಯಕೃತಿಗಳಲ್ಲಿರುವ ಮಾನನೀಯತೆಯ ಪ್ರತಿಕೃತಿಗಳಾಗಿರುವ ಕಥಾಭಾಗಗಳನ್ನು ಉಪನ್ಯಾಸಕರು ಮಾರ್ಮಿಕವಾಗಿ, ಮನೋಜ್ಞವಾಗಿ ನಿರೂಪಿಸಿ ನೋಡಬೇಕು. ಅಂದರೆ ಅವರ ಉಪನ್ಯಾಸಗಳು ಜನಸಾಮಾನ್ಯದ ಮನಸ್ಸನ್ನು ಸೆರೆ ಹಿಡಿಯುವವು, ಹೆಚ್ಚು ಫಲಪ್ರದವಾಗುವವು. ವರ್ಗಗಳಲ್ಲಿ ಸಾಹಿತ್ಯಚರಿತ್ರೆಯನ್ನು ಹೇಳಿಕೊಡುವಾಗಲೂ ಇದೇ ರೀತಿಯಾಗಿ ಕತೆಯನ್ನು ಸಾಧನವಾಗಿ ಬಳಸಿಕೊಂಡರೆ, ಸಾಹಿತ್ಯಾಭಿರುಚಿಯನ್ನು ಬೆಳೆಸಲು ಅದು ಒಳ್ಳೇ ಸಾಧನವಾಗುವದು.

ಅನೇಕ ಮಹಾಪುರುಷರು ತಮ್ಮ ಉಪದೇಶವನ್ನು ಪರಿಣಾಮಕಾರಿಯನ್ನಾಗಿ ಮಾಡಲು ಕಥೆಯನ್ನು ಯಶಸ್ವಿಯಾದ ಸಾಧನವನ್ನಾಗಿ ಬಳಸಿಕೊಂಡಿರುವರು. ಬುದ್ಧನು ತನ್ನ ಶಿಷ್ಯರಿಗೆ ಹೇಳಿದ ಕಥೆಗಳು ಬುದ್ಧಜಾತಕಗಳಲ್ಲಿ ಹಾಸುಹೊಕ್ಕಾಗಿ

ಬಂದಿರುವವು. ಯೇಸು ತನ್ನ ಶಿಷ್ಯರಿಗೆ ಅನೇಕ ಕಥೆಗಳ ಮುಖಾಂತರವಾಗಿ ಬೋಧಿಸಿರುವನು. ಆತನು ಹೇಳಿರುವ 'ದುಂದುಗಾರ ಮಗ', 'ಮೂರು ಗುಲಾಬಿ ಹೂಗಳು' ಮುಂತಾದ ಕಥಾ-ರೂಪಕಗಳು ಇಂದಿಗೂ ಅಷ್ಟೇ ಲೋಕಪ್ರಿಯ ವಾಗಿ ಬಾಳಿರುವವು. ಉಪನಿಷತ್ಕಾರರು ತತ್ತ್ವ ವಿವರಣೆಗಾಗಿ ಅನೇಕ ಕಥೆಗಳನ್ನು ಹೇಳಿರುವರು. ತನ್ನ ಶತ್ರುಗಳ ಕಾಟವನ್ನು ತಪ್ಪಿಸಲು ಕುದುರೆ ಮಾನವನಿಗೆ ಮೊರೆಹೊಕ್ಕಿತು. ಮಾನವನು ಅದಕ್ಕೆ ಶತ್ರುಗಳ ಭೀತಿಯನ್ನು ತಪ್ಪಿಸಿದನು. ಆದರೆ ಆತನ ಬುದ್ಧಿಮತ್ತೆಯ ಪ್ರಭಾವದಲ್ಲಿ ಕುದುರೆಯು ಕೊನೆಯವರೆಗೂ ದಾಸ್ಯದಲ್ಲಿ ಕೊಳೆಯಬೇಕಾಯಿತು. ಭಾರತದ ಇತಿಹಾಸಕ್ಕೆ ಉಪನಿಷತ್ತಿನಲ್ಲಿ ಬಂದಿರುವ ಈ ಕಥೆ ಎಷ್ಟೊಂದು ಮಾರ್ಮಿಕವಾಗಿ ಹೊಂದಿಕೊಳ್ಳುವದೆಂಬುದು ನೋಡುವಂತಿದೆ. ಮಹಾಭಾರತವೂ ಅನೇಕ ಕಥೆಗಳಿಂದ ತುಂಬಿದೆ. ವನವಾಸದಲ್ಲಿ ಧರ್ಮರಾಜನ ಮನಸ್ಸಿನ ಉದ್ವಿಗ್ನತೆಯನ್ನು ಕಳೆದು ಆತನ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ತಂದುಕೊಡಲು ಧೌಮ್ಯ ಮೊದಲಾದ ಮಹರ್ಷಿಗಳು ಹೇಳಿದ ಕಥೆಗಳೆ ಕಾರಣವಾಗಿವೆ.

### ಜ್ಞಾನಪ್ರಸಾರ ಸಾಧ್ಯ

ಅಡ್ಡದಾರಿಯನ್ನು ಹಿಡಿದ ಅರಸುಗುವರರನ್ನು ವಿವೇಕಿಗಳನ್ನಾಗಿ ಮಾಡಲು ರಾಜನು ತನ್ನ ಅರ್ಧ ರಾಜ್ಯವನ್ನೇ ಪಂಡಿತರಿಗೆ ಆಮಿಷವಾಗಿ ಮುಂದಿಟ್ಟನು. ಯಾವ ಪಂಡಿತರಿಂದಲೂ ಸಾಧ್ಯವಾಗದ ಈ ಕೆಲಸವನ್ನು ವಿಷ್ಣುಶರ್ಮನು ಕಥೆಗಳ ಸಹಾಯದಿಂದ ಮಾಡಿದನು. ಪಂಡಿತರ ವಿದ್ವತ್ತೆಯು ಕಥೆಯ ಮುಂದೆ ಕೈಯೂರಿತು. ಇನ್ನುಳಿದ ಶಿಕ್ಷಣ ವಿಧಾನಗಳು ಕಥೆಗೆ ಶರಣುಬಂದವು. ವಿಷ್ಣುಶರ್ಮನು ಹೇಳಿದ ಕಥೆಗಳೊಡನೆ ಹೊಂದಿಕೊಂಡುಬಂದ ಜ್ಞಾನದ ಸಾರವನ್ನು ಅರಸುಗುವರರು ಅಜ್ಞಾತವಾಗಿ ಆತ್ಮಸಾತ್ ಮಾಡಿಕೊಂಡರು, ವಿವೇಕಿಗಳಾದರು. ಚತುರೋಪಾಯದ ರಾಜನೀತಿಯಲ್ಲಿ ಅವರು ಪ್ರವೀಣರಾದರು. ವಿಷ್ಣುಶರ್ಮನ ಕಥೆಗಳೆ ಇಂದು ಎಲ್ಲರಿಗೂ 'ಹಿತೋಪದೇಶ' ವಾಗಿ, ರಾಜನೀತಿಯಲ್ಲಿ 'ಪಂಚತಂತ್ರ' ವಾಗಿ, ಪರಭಾಷೆಯಲ್ಲಿ 'ಈಸಪ್‌ನ ನೀತಿ ಕಥೆ' ಗಳಾಗಿ ಪರಿಣಮಿಸಿವೆ. ವಿಕ್ರಮನ 'ಬತ್ತೀಸ ಪುತ್ತಳಿಯ ಕಥೆಗಳು' ಹೇಗೇ ಅಚ್ಚಾಗಿರಲಿ ಅವುಗಳಿಗಿರುವ ಬೇಡಿಕೆಯು ಎಂದಿಗೂ ಕಡಿಮೆಯಾಗುವಂತಿಲ್ಲ. ಶಿವಛತ್ರಪತಿಗೆ ಕ್ಷಣಿಕವಾಗಿ ಒದಗಿದ ಅಹಂಬುದ್ಧಿಯನ್ನು ಆಮೂಲವಾಗಿ ಕಿತ್ತೊಗೆಯಲು, ಕಲ್ಲುಬಂಡೆಯಲ್ಲಿರುವ ಕಪ್ಪೆಯೊಂದನ್ನು ದೇವನು ಹೇಗೆ ಕಾಪಾಡುವನೆಂಬ ಕಥೆಯನ್ನು ಶ್ರೀಸಮರ್ಥರು ಆತನಿಗೆ ಹೇಳಿದರು. ಆ ಕಥೆಯು ಇಂದಿಗೂ ಸರ್ವಶ್ರುತವಾಗಿದೆ. ಶ್ರೀ ರಾಮಕೃಷ್ಣ ಪರಮಹಂಸರ ಉಪದೇಶಾಮೃತದಲ್ಲಿ ಅನೇಕ ಮಾರ್ಮಿಕವಾದ ಕಥೆಗಳು ಅಲ್ಲಲ್ಲಿ ಹೆಣೆದುಕೊಂಡು ಬಂದಿವೆ.

ಕಥೆಯು ತತ್ವಗಳಿಗೆ ಸಕ್ಕರೆಯ ಹೊರಲೇಪವಾಗಿ ಅವುಗಳ ಕಠಿಣತೆಯನ್ನು, ಕಟುತನವನ್ನು ಕಡಿಮೆ ಮಾಡುವದು. ಕಥೆಯ ಮಾಧ್ಯಮವಾಗಿ ಬಂದ ಗಹನವಾದ ವಿಚಾರಗಳು ತಿಳಿಯಾಗುವವು, ಮನೋಜ್ಞವಾಗುವವು, ಹೃದಯಸ್ಪರ್ಶಿಯಾಗುವವು. ಕಥೆಯ ಅದ್ವಿತೀಯವಾದ ಈ ಪ್ರಭಾವವು ಏತರಲ್ಲಿ ಅಡಗಿದೆ? ಕೇಳುವವರ ಮನಸ್ಸನ್ನು ಆನಂದಪ್ರವಾಹದಲ್ಲಿ ತೇಲಿಸಿ ಕೆಲಕಾಲ ಮೈಮರೆಯುವಂತೆ ಮಾಡುವ ಯಾವ ಮಾಟಗಾರಿಕೆ ಕಥೆಯಲ್ಲಿದೆ? ಈ ಮಾತು ವಿಚಾರಣೀಯವಾಗಿದೆ. ಅದನ್ನು ತಿಳಿದುಕೊಳ್ಳುವದೂ ಅಷ್ಟೇ ಅಗತ್ಯವಾಗಿದೆ.

### ಓದುವ-ಕೇಳುವವರಲ್ಲಿರುವ ಅಂತರ

ಕಥೆಯ ಮಹತಿಯು 'ಕಥನ' ಇಲ್ಲವೆ 'ನಿರೂಪಣ' ದಲ್ಲಿದೆ. ಕಥೆಯನ್ನು ಹೇಳಬೇಕು-ಕಥೆಯನ್ನು ಕೇಳಬೇಕು. ಕಥೆ ಕೇಳುವದರಿಂದ ದೊರೆಯುವ ಆನಂದ ನಿರೂಪಣದ ನಿಪುಣತೆಯನ್ನು ಅವಲಂಬಿಸಿದೆ. ಅಂತೆಯೆ ಕಥೆಯನ್ನು 'ಓದುವದಕ್ಕೂ' ಕಥೆಯನ್ನು 'ಕೇಳುವದಕ್ಕೂ' ಬಹಳೇ ಅಂತರವಿದೆ. ಕಥೆಯನ್ನು ತಾವೇ ಓದುವದರಿಂದಾಗಲಿ, ಓದಿಸಿಕೊಳ್ಳುವದರಿಂದಾಗಲಿ ಪಡೆಯುವ ಆನಂದವು ತೀರ ಕಡಿಮೆಯೆಂತಲೆ ಹೇಳಬಹುದು. ಕುಶಲನಾದ ಕಥೆಗಾರನ ಬಾಯಿಂದ ಅದೇ ಕಥೆಯನ್ನು ಕೇಳುವದರಿಂದ ಉಂಟಾಗುವ ಆನಂದವು ಇದಕ್ಕಿಂತಲೂ ಎಷ್ಟೋ ಪಟ್ಟು ಮಿಗಿಲಾದುದು. ಮಾನಸಶಾಸ್ತ್ರವೂ ಈ ಮಾತನ್ನು ಅನುಮೋದಿಸುತ್ತದೆ. ಸ್ವಾನುಭವವೂ ಇದನ್ನೇ ಸಮರ್ಥಿಸುತ್ತಿದೆ.

ಕಥೆಹೇಳುವದರಲ್ಲಿ ಹಾಗೂ ಕಥೆ ಓದುವದರಲ್ಲಿ ಅನೇಕ ವ್ಯತ್ಯಾಸಗಳಿವೆ. ಅವುಗಳಲ್ಲಿ ಮಹತ್ವದ ವ್ಯತ್ಯಾಸವೆಂದರೆ ಕಥೆಯನ್ನು ಹೇಳುವವನು ಸ್ವತಂತ್ರ; ಕಥೆಯನ್ನು ಓದುವವನು ಪರಾಧೀನ.

ಕೈಯೊಳಗಿನ ಪುಸ್ತಕದಿಂದ ಇಲ್ಲವೆ ಮನಸ್ಸಿನಲ್ಲಿ ಉಳಿದುಕೊಂಡಿರುವ ಶಬ್ದಗಳಿಂದ ಓದುಗನು ಬಂಧಿತನಾಗಿರುವನು. ಆದರೆ ಕಥಾನಿರೂಪಕನಿಗೆ ಯಾವ ಸಂಕೋಲೆಗಳೂ ಇರುವದಿಲ್ಲ. ಅವನ ಎಲ್ಲ ಕೃತಿಗಳೂ ಅನಿರ್ಬಂಧವಾದವುಗಳು. ಸ್ವೇಚ್ಛೆಯಂತೆ ಆತನು ಕೂಡಬಹುದು, ನಿಲ್ಲಬಹುದು. ತನ್ನ ಶ್ರೋತೃವರ್ಗವನ್ನು ಸೂಕ್ಷ್ಮವಾಗಿ ನಿರೀಕ್ಷಿಸಬಹುದು. ಸಂದರ್ಭಾನುಸಾರವಾಗಿ ಭಾವಗಳನ್ನು ಬದಲಿಸಬಹುದು. ಅವುಗಳಿಗೆ ಅನುಗುಣವಾಗಿ ಅಭಿನಯದಲ್ಲಿ ಹೆಚ್ಚು ಕಡಿಮೆ ಮಾಡಬಹುದು. ಧ್ವನಿಯಲ್ಲಿ ಏರಿಳಿತಗಳನ್ನು ತರಬಹುದು. ಒಟ್ಟಿನಲ್ಲಿ ಆತನು ಅಚ್ಚಾದ ಪುಟಗಳಿಗೆ ಅಂಟಿಕೊಳ್ಳಬೇಕಿಲ್ಲ. ಅದರಲ್ಲಿಯ ಶಬ್ದಗಳಿಗೆ ಜೋತುಬೀಳಬೇಕಿಲ್ಲ. ಆತನ ಮನಸ್ಸು ...ಡ ಅಷ್ಟೇ ಅನಿರ್ಬಂಧವಾಗಿ ಕಾರ್ಯಮಾಡು...ನ್ನಬಹುದು. ಹೇಳಬೇಕಾದುದನ್ನು ತನ್ನ ಮನಸ್ಸಿನಲ್ಲಿ ತುಂಬ ತುಂಬಿಕೊಂಡಿರುವದರಿಂದ ಸಮಯ ಸಂದರ್ಭಗಳೆ ಆತನಿಗೆ ಸಮರ್ಪಕವಾದ ಶಬ್ದಸಂಪತ್ತಿಯನ್ನು ಒದಗಿಸುವವು. ಆದುದರಿಂದಲೆ, ಓದಿದ ಕಥೆಗಿಂತ ಕೇಳಿದ ಕಥೆಯಲ್ಲಿ ಹೆಚ್ಚು ಸಹಜತೆ, ಸಜೀವತೆಗಳು ಒಡೆದು ತೋರುವವು. ಇದರ ಪರಿಣಾಮವಾಗಿ ಕೇಳುವವರ ಕೂಡ ಆತನಿಗೆ ಹೆಚ್ಚು ಆತ್ಮೀಯವಾದ, ಹೃದಯಸ್ಪರ್ಶಿಯಾದ ಸಂಬಂಧವು ಉಂಟಾಗುವದು. ಆದರೆ ಎಷ್ಟು ಒಳ್ಳೇ ಆಸ್ಥೆಯಿಂದ ಕಥೆಯನ್ನು ಓದಿದರೂ ಓದಿ ತೋರಿಸಿದರೂ ಓದುವ ಪುಸ್ತಕವೂ ಅದರಲ್ಲಿಯ ಶಬ್ದಗಳೂ ನಡುವೆ ಬರುವದರಿಂದ ಈ ಬಗೆಯ ಆತ್ಮೀಯವಾದ ಸಂಬಂಧವು ಎಂದಿಗೂ ಉಂಟಾಗಲಾರದು.

ಕಥೆಗಳನ್ನು ಹೇಳುವದರಲ್ಲಿ ಇನ್ನೂ ಹೆಚ್ಚಿನ ಪ್ರಯೋಜನಗಳಿರುವವು. ಕಥಾನಿರೂಪಣದಲ್ಲಿ ಕಥೆಗಾರನ ವ್ಯಕ್ತಿತ್ವವು ಆತನಿಗೆ ತಿಳಿಯದೆಯೆ ಮೂಡಿಕೊಳ್ಳುವದು. ಕಥೆಗಾರನು ಕಥೆಯನ್ನು ...ೂದಲು ತಾನು ಆತ್ಮಸಾತ್ ಮಾಡಿಕೊಳ್ಳುವನು. ...ಮೇಲೆ ಅದನ್ನು ನಿರೂಪಿಸುವನು. ಹೀಗಾಗಿ ಆತನಿಂದ ಕಥೆ ಕೇಳುವವರಿಗೆ ಎರಡು ಬಗೆಯಾದ ಲಾಭ; ಕಥೆ ಹಾಗೂ ಕಥೆಯೊಡನೆ ಬೆರೆತುಬಂದ ಕಥೆಗಾರನ ರಸಾಸ್ವಾದ. ಈ ರಸಾಸ್ವಾದವು ಕಥೆಗಾರನ ಆನಂದದಲ್ಲಿ ಹೊರಸೂಸಿ ಬರುವದು.

ಹಾಸ್ಯಮಯವಾದ ಒಂದು ಕಥೆಯನ್ನು ರಸಿಕನಾದ ಕಥೆಗಾರನ ಬಾಯಿಂದ ಕೇಳಬೇಕು. ಅದು ಮೂರುಪಟ್ಟು ರಸವತ್ತಾಗಿ ಹೊರಹೊಮ್ಮುವದು. ಕಥೆಗಾರನ ಪೂರ್ಣ ವ್ಯಕ್ತಿತ್ವದ ಛಾಯೆ ಅದರ ಮೇಲೆ ಮೂಡಿರುವದೆ ಈ ಮಾತಿಗೆ ಕಾರಣವಾಗಿದೆ. ಆದಿಮಾನವನಲ್ಲಿದ್ದ ಕುತೂಹಲದ ಕೆಲ ಅಂಶವು ಇನ್ನೂ ನಮ್ಮಲ್ಲಿ ಉಳಿದುಕೊಂಡಿದೆ. ನೆರೆಹೊರೆಯವರ ವಿಷಯಕ್ಕೆ ತಿಳಿದುಕೊಳ್ಳಲು, ಬೇರೆಯವರ ಅನುಭವಗಳನ್ನು ಕೇಳಿಕೊಳ್ಳಲು ನಮಗಿರುವ ವಿಶೇಷವಾದ ಆತುರತೆಗೆ ಈ ಕುತೂಹಲವೆ ಕಾರಣವಾಗಿದೆ. ಎವ್ಹರೆಸ್ಟವಿಜಯ ಇಲ್ಲವೆ ನ್ಯೂಟನ್‌ನ ಮಹಾಶೋಧಗಳ ಬಗ್ಗೆ ನಾವು ಗ್ರಂಥಗಳನ್ನು ಓದಿ ಮುಗಿಸಬಹುದು. ಆದರೆ ನಮ್ಮ ಮನಸ್ಸಿನಲ್ಲಿ ಚಿರಕಾಲ ಉಳಿಯುವದು ಆ ಸಂಶೋಧಕರ ಸಾಹಸ ಸ್ವಾನುಭವದ ತುಣುಕು ಕಥೆಗಳು. ನಮ್ಮ ಮನಸ್ಸು ಅವುಗಳ ಕಡೆಗೆ ಹೆಚ್ಚಾಗಿ ಒಲಿಯುವದು. 'ಹಿಮಾಲಯದ ಹುಲಿ'—ತೇನಸಿಂಗನು ಎವ್ಹರೆಸ್ಟ ಬೆಟ್ಟದ ತುದಿಯನ್ನು ಮುಟ್ಟಿ ಅಲ್ಲಿಯ ಅದೃಶ್ಯವಾದ ದೇವತೆಗಳಿಗೆ ತನ್ನೊಡನೆ ತಂದಿದ್ದ ಮೀಸಲು ಮಿಠಾಯಿಗಳನ್ನು ಅರ್ಪಿಸಿದನಂತೆ. ಅನೇಕ ವರುಷಗಳ ಪರಿಶ್ರಮದ ಫಲವಾದ ಗಣಿತದ ಹಾಳೆಗಳನು ನ್ಯೂಟನ್‌ನ ನಾಯಿಯು ನಾಶಮಾಡಿಬಿಟ್ಟಿತು. ಆದರೆ ಆ ತಪಸ್ವಿಯ ತಾಳ್ಮೆಗೆ ಭಂಗ ಬರಲಿಲ್ಲ. 'ಡಾಯಮಂಡಾ ! ತಿಳಿಯದೆ ಎಂಥ ಹಾನಿಮಾಡಿದೆ ! '-ಎಂಬುದಾಗಿ ಮಾತ್ರ ಆತನು ನುಡಿದನಂತೆ. ಸಾಹಸಿಗಳ ಈ ಚಿಕ್ಕ ಕಥೆಗಳು ಮಾತ್ರ ಚಿರಂಜೀವಿಯಾಗಿವೆ.

### ಕಥೆಗಾರನ ಕುಶಲತೆ

ಉಳಿದವರ ಸ್ವಾನುಭವವನ್ನು ಕೇಳುವ ಈ ಕುತೂಹಲ ಹಾಗೂ ವ್ಯಕ್ತಿಪ್ರೇಮಗಳು ಮಾನವ ಸ್ವಭಾವದಲ್ಲಿಯೆ ಬೆರೆತುಕೊಂಡಿವೆ. ಈ ಸ್ವಾಭಾವಿಕ ಒಲವು ಚಿಕ್ಕಮಕ್ಕಳಲ್ಲಿಯಂತೂ ತೀರ ಹೆಚ್ಚಾಗಿ ಕಂಡುಬರುವದು. ತಮ್ಮ ತಂದೆ, ತಾಯಿ, ಅಜ್ಜ, ಅಜ್ಜಿ ಚಿಕ್ಕವರಿದ್ದಾಗ ಹೇಗೆ ಇದ್ದರು, ಏನು ತಪ್ಪುತಡಿಗಳನ್ನು ಮಾಡುತ್ತಿದ್ದರು, ತಮ್ಮಂತೆ ಹೇಗೆ ಏಟು ತಿನ್ನುತ್ತಿದ್ದರು, ಮುಂತಾದ ತಮ್ಮ ಹಿರಿಯರ ವ್ಯಕ್ತಿಗತ ವಿಷಯಗಳನ್ನು ಕೇಳುವದರಲ್ಲಿ ಚಿಕ್ಕಮಕ್ಕಳಿಗೆ ಬಹಳ ಆಸ್ಥೆ. ಇದೇ ಆಸ್ಥೆಯೆ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಹೆಚ್ಚು ವ್ಯಾಪಕವಾಗುವದು. ಕಥೆ ಹೇಳುವವರ ಕುಶಲತೆಯನ್ನು ಈ ಮಾತು ಅವಲಂಬಿಸಿದೆ. ಬೇರೆ ಕಥೆಗಳನ್ನು ಆತನು ಅಷ್ಟೇ ತನ್ಮಯವಾಗಿ ಹೇಳಬೇಕು. ಆತ್ಮೀಯತೆ ಅದರಲ್ಲಿ ಅಚ್ಚಾದಂತಿರಬೇಕು. ಮಾರ್ಮಿಕವಾದ ಮನೆಮಾತುಗಳನ್ನು ನಿರೂಪಣದಲ್ಲಿ ಬಳಸಬೇಕು. ಶೈಲಿ ಸಹಜವಾಗಿರಬೇಕು. ಅಂದರೆ ವ್ಯಕ್ತಿಗತ ವಿಷಯಗಳ ಬಗ್ಗೆ ಇರುವ ಆಸ್ಥೆ-ಅನುರಾಗಗಳನ್ನು ಉಳಿದ ಕಥೆಗಳಲ್ಲಿಯೂ ಕಥೆಗಾರನು ತನ್ನ ಕುಶಲತೆಯಿಂದ ಅನಾಯಾಸವಾಗಿ ಪಡೆಯಬಹುದು. ಈ ಬಗೆಯ ಕಥೆ ಕೇಳುವದರಲ್ಲಿ ಚಿಕ್ಕಮಕ್ಕಳು ತೋರುವ ಮೆಚ್ಚಿಗೆಯೆ ಇದಕ್ಕೆ ಪ್ರಮಾಣವಾಗಿದೆ.

ಶಿಕ್ಷಕರಿಗಂತೂ ಕಥೆ ಹೇಳುವದರಲ್ಲಿ, ಹೇಳಿಸುವದರಲ್ಲಿ ಹೆಚ್ಚಿನ ಪ್ರಯೋಜನವಿದೆ. ಶಿಕ್ಷಣದ ಜೀವಾಳವೆನಿಸಿದ ಶಿಸ್ತು-ಅವಧಾನಗಳನ್ನು ಕಥೆ ಹೇಳುವದರಿಂದ ಅವರು ಸಹಜವಾಗಿ ಪಡೆಯಬಲ್ಲರು. ಆಸ್ಥೆ-ಅವಧಾನಗಳು ಅವಳಿಜವಳಿಗಳಲ್ಲವೇ ? ಚನ್ನಾಗಿ ಹೇಳುವ ಕಥೆ ಕೇಳುವದರಲ್ಲಿ ಮಕ್ಕಳಿಗೆ ತುಂಬಾ ಆನಂದ. ಈ ಆನಂದಜನಿತವಾದ ಆಸ್ಥೆ ಮಕ್ಕಳಿಗೆ ಅನಿವಾರ್ಯವಾಗುವದು. ಮಕ್ಕಳ ಅವಧಾನವೂ ಈ ಆಸ್ಥೆಯ ಬೆನ್ನುಹತ್ತಿ ತಾನಾಗಿಯೆ ಬಂದುಬಿಡುವದು. ಆಸ್ಥೆ-ಅವಧಾನಗಳಿರುವಲ್ಲಿ ಶಿಸ್ತು ಸಂಘಟನೆಗಳಿಗಾಗಿ ಶಿಕ್ಷಕನು ವಿಶೇಷ ಶ್ರಮಪಡಬೇಕಾಗಿಲ್ಲ. ಅವು ಸ್ವಯಂಪ್ರೇರಿತವಾಗಿ ಒದಗುವವು. ಮನಸ್ಸಿನ ಏಕಾಗ್ರತೆಯೂ ಲಭಿಸುವದು. ಕಥೆ ಹೇಳುವವನ ಹಾಗೂ ಕೇಳುವವರ ದೃಷ್ಟಿಗೆ ದೃಷ್ಟಿ ಬೆರೆಯುವದು.

ಇಬ್ಬರೂ ಒಬ್ಬರೊಬ್ಬರ ಇಂಗಿತವನ್ನು, ಮನೋಗತವನ್ನು ತಿಳಿದುಕೊಳ್ಳಲು ಶಕ್ತರಾಗುವರು. ಒಬ್ಬನ ಭಾವನೆ ಹಲವರ ಭಾವನೆಯಾಗುವದು. ಅತಿ ಸುಲಭವಾಗಿಯೂ ಅತಿ ಶೀಘ್ರವಾಗಿಯೂ ಇಬ್ಬರಲ್ಲಿಯೂ ಭಾವಗಳ ಬಾಂಧವ್ಯವು ಬೆಳೆದು ಬರುವದು. ಶಿಕ್ಷಣದಲ್ಲಿ ಮಕ್ಕಳ ಸರ್ವತೋಮುಖವಾದ ವಿಕಾಸಕ್ಕೆ, ಶಿಕ್ಷಕ ಹಾಗೂ ವಿದ್ಯಾರ್ಥಿಗಳಲ್ಲಿ ಈ ಬಗೆಯ ಹಾರ್ದಿಕ ಸಂಬಂಧವು ಅಪೇಕ್ಷಿತವಾಗಿದೆ, ಅಗತ್ಯವಾಗಿದೆ. ಮಕ್ಕಳಿಗೆ ಉಂಟಾಗುವ ಆನಂದಕ್ಕಾಗಿ, ಶಿಕ್ಷಕರಿಗೆ ದೊರೆಯುವ ಸೌಲಭ್ಯಕ್ಕಾಗಿ, ಶಿಕ್ಷಣ ವಿಧಾನಗಳಲ್ಲಿ 'ಕಥೆ ಹೇಳುವದಕ್ಕೆ' ಪ್ರಾಶಸ್ತ್ಯವು ದೊರೆಯಬೇಕೆಂದು ಪ್ರತಿಪಾದಿಸಿದರೆ ತಪ್ಪಾಗದು.



## ಪ್ರಾಚೀನ ಕಲೆ

ಕಥನಕಲೆಯು ನಮಗೆ ನೂತನವಾದುದಲ್ಲ. ಅದೊಂದು ಮನೋಜ್ಞವಾದ ಪ್ರಾಚೀನ ಕಲೆ. ಈ ಕಲೆಗೆ ವೈಭವಯುತವಾದ, ಅತಿ ಪ್ರಾಚೀನವಾದ ಪರಂಪರೆಯಿದೆ. ಈ ಕಥೆಗಳನ್ನು ರಚಿಸಿದವರು ಯಾರು? ಅವು ಕಾಲನ ಪ್ರವಾಹದಲ್ಲಿ ಹೇಗೆ ಉಳಿದುಕೊಂಡು ಬಂದಿವೆ? ಇವೆಲ್ಲ ಸಂಗತಿಗಳು ಇತಿಹಾಸದ ಮಂಜಿನಲ್ಲಿ ಅಡಗಿಹೋಗಿವೆ. ಕಥನಕಲೆಗೆ ಏರಿಳಿತಗಳ ಬಾಧೆ ತಪ್ಪಿಲ್ಲವಾಗಿ ತೋರುತ್ತಿದೆ. ಒಂದು ಕಾಲ ಕಥನಕಲೆಯು ಒಳ್ಳೇ ಊರ್ಜಿತವಾಗಿದ್ದಿತು. ಅರಸು ಅರಸಿಯರ ಆನಂದಕ್ಕೆ, ವಿನೋದ ವಿಶ್ರಾಂತಿಗಳಿಗೆ ಕಥೆಯು ಒಂದು ಶ್ರೇಷ್ಠ ಸಾಧನವಾಗಿತ್ತು. ಅರಮನೆಗಳಲ್ಲಿ ಅಂತಃಪುರಗಳಲ್ಲಿ, ಒಡ್ಡೋಲಗಗಳಲ್ಲಿ ವಿದೂಷಕರು ರಾಜರುಗಳಿಗೆ ಸಹಚರರಾಗುತ್ತಿದ್ದರು. ಅರಸು ಅರಸಿಯರ ದಣಿವು ದುಮ್ಮಾನಗಳನ್ನು ಸರಸವಾದ ತಮ್ಮ ಕಥಾವಿನೋದಗಳಿಂದ ಹೋಗಲಾಡಿಸುತ್ತಿದ್ದರು. ಈ ವಿದೂಷಕರು ವಿಚಿತ್ರ ವೇಷದ, ವಿಚಿತ್ರ ಮಾತಿನ ಕೇವಲ ವಿನೋದಗಾರರಾಗಿರಲಿಲ್ಲ. ಹಾಗೆಂದು ಸಾಮಾನ್ಯ ತಿಳುವಳಿಕೆಯಾಗಿದೆ. ನಿಜವಾಗಿ ಇವರು ಒಳ್ಳೇ ವಿದ್ವಾಂಸರೂ ಮರ್ಮಜ್ಞರೂ ಆಗಿರುತ್ತಿದ್ದರು. ಕಥನಕಲೆಯಲ್ಲಿ ಇವರು ಅತ್ಯಂತ ನಿಪುಣರು. ಮನೋರಂಜನೆಯೊಡನೆ ರಾಜರಿಗೆ ಇವರು ಮಾರ್ಗದರ್ಶನವನ್ನೂ ಮಾಡುತ್ತಿದ್ದರು. ಪ್ರಭುಗಳ ಚಿತ್ತಲಹರಿಯಲ್ಲಿ ಅನೇಕ ಸಲ ಅನ್ಯಾಯ-ಅನಾಹುತಗಳು ಸಂಭವಿಸುತ್ತಿದ್ದವು. ಕಥೆಗಳ ಮುಖಾಂತರವಾಗಿ ವಿದೂಷಕರು ಇವುಗಳಿಗೆ ಪರ್ಯಾಯದಿಂದ ತಡೆಹಾಕುತ್ತಿದ್ದರು. ತನ್ನ ಕ್ರೂರ ದಬ್ಬಾಳಿಕೆಯಿಂದ ಅವಿವೇಕಿಯಾದ ಸುಲ್ತಾನನೊಬ್ಬನು ರಾಜ್ಯದಲ್ಲಿಯ ಹಳ್ಳಿಗಳನ್ನು ಹಾಳುಗೆಡವುತ್ತಿದ್ದನಂತೆ. ಸುಲ್ತಾನನಿಗೆ ನೇರವಾಗಿ ಉಪದೇಶಿಸುವ ಎದೆಗಾರಿಕೆ ವಜೀರನಿಗೂ ಇರಲಿಲ್ಲ. ವಿನೋದದ ಪ್ರಸಂಗದಲ್ಲಿ ಎರಡು ಗೂಬೆಗಳ ಕಥೆಯನ್ನು ಸುಲ್ತಾನನಿಗೆ ಆತನು ಹೇಳಿದನು. ಒಂದು ಗೂಬೆಗೆ ತನ್ನ ಮಗಳಿಗಾಗಿ ವರದಕ್ಷಿಣೆ ಕೊಡಬೇಕಾಗಿತ್ತು. ವರನ ತಂದೆಯಾದ ಗೂಬೆ ನೂರು ಹಾಳುಹಳ್ಳಿಗಳನ್ನು ವರದಕ್ಷಿಣೆಯಾಗಿ ಬೇಡಿತು. "ಸುಲ್ತಾನನ ಆಳಿಕೆಯು ಹೀಗೆಯೆ ಇನ್ನೂ ಕೆಲವು ವರುಷ ಸಾಗಲಿ. ನೂರೇಕೆ? ಸಾವಿರ ಹಾಳು ಹಳ್ಳಿಗಳನ್ನು ವರದಕ್ಷಿಣೆಯಾಗಿ ಕೊಡುವೆನು"— ಎಂದು ಹೆಣ್ಣಿನ ತಂದೆಯಾದ ಗೂಬೆಯು ವಚನ ಕೊಟ್ಟಿತಂತೆ. ಈ ಮಾತಿನ ಮರ್ಮವನ್ನು ತಿಳಿದುಕೊಂಡು ಸುಲ್ತಾನನು ತನ್ನ ಆಳಿಕೆಯ ರೀತಿಯನ್ನು ತಿದ್ದಿಕೊಂಡನಂತೆ. ತೆನ್ನಾಲಿ ರಾಮಕೃಷ್ಣ ಹಾಗೂ ಬೀರಬಲ್ಲರ ಕಥೆಗಳು ಸರ್ವಶ್ರುತವಾಗಿವೆ, ಮನೆಮಾತಾಗಿವೆ. ಪ್ರಪಂಚದ ಜ್ಞಾನಭಾಂಡಾರದಲ್ಲಿ ಅವುಗಳಿಗೆ ಅಮರವಾದ ಸ್ಥಾನವಿದೆ. ಅಕಬರ-ಬೀರಬಲ್ಲರ ಕಥಾವಿನೋದದಲ್ಲಿ ಮಾತಿಗೆ ಮಾತು ಹೊರಟಿತು. "ಚಿಕ್ಕ ಮಕ್ಕಳು ಬೇಡುವದನ್ನೆಲ್ಲ ಕೊಟ್ಟು ಪೂರೈಸುವದು ಅಸಾಧ್ಯ. ಅವರ ಬೇಡಿಕೆಗಳಿಗೆ ಸರಿಯಾದ ತಡೆಹಾಕಬೇಕು"— ಎಂದು ಬೀರಬಲ್ಲನ ವಾದ. · ಮೊಗಲ ಸಮ್ರಾಟನಾದ ತನಗೆ ಮಕ್ಕಳ ಬೇಡಿಕೆಯನ್ನು ತೃಪ್ತಿಗೊಳಿಸುವದೂ ಅಶಕ್ಯವೆ?'— ಎಂಬುದು ಅಕಬರನ ಹಟ. ಈ ಮಾತು ಒರೆಗೆ ಹಚ್ಚಬೇಕೆಂದು ಗೊತ್ತಾಯಿತು. ಒಂದು ಚಿಕ್ಕ ಮಗುವನ್ನು ಕರೆತಂದಾಯಿತು. ಸಮ್ರಾಟನು ಕೇಳಿದನು— 'ಮಗು, ಏನು ಬೇಕು ನಿನಗೆ?'— 'ಬಟ್ಟಲು?" ಬೆಳ್ಳಿ ಬಂಗಾರದ ಬಟ್ಟಲುಗಳನ್ನು ತಂದು ಸುರುವಿದರು. 'ಮತ್ತೇನು ಬೇಕು?'— 'ಆನೆ ಬೇಕು? ಸಮ್ರಾಟನ ಪಟ್ಟದ ಆನೆಯನ್ನೇ ತಂದು ಮುಂದೆ ನಿಲ್ಲಿಸಿದರು. 'ಮತ್ತೇನು ಬೇಕು?'— 'ಈ ಆನೆ ನನ್ನ ಕೈಯೊಳಗಿನ ಬಟ್ಟಲದಲ್ಲಿ ಕೂಡಬೇಕು!' ಬೀರಬಲ್ಲನ ಮಾತಿನ ಮರ್ಮವನ್ನು ಬಾದಶಹನು ಕಂಡುಕೊಂಡನು. ಬಯಕೆ ಹಾಗೂ ಅವುಗಳ ಈಡೇರಿಕೆಗಳಲ್ಲಿರುವ ಅಭ್ಯಂತರವು ಮಗುವಿಗೆ ತಿಳಿದಿರುವದಿಲ್ಲವೆಂಬುದನ್ನು ಬೀರಬಲ್ಲನು ಬಾದಶಹನಿಗೆ ಹೀಗೆ ಮನವರಿಕೆ ಮಾಡಿಕೊಟ್ಟನಂತೆ. ಮಾನವಸ್ವಭಾವದ ಪೂರ್ಣಪರಿಚಯವುಳ್ಳ ಈ ಮೇಧಾವಿಗಳು ತಮ್ಮ ದೊರೆಗಳ ಮನಸ್ಸನ್ನು ರಮಿಸುವದರ ಜೊತೆಗೆ ತಿದ್ದುವ ಕಾರ್ಯವನ್ನೂ ಮಾರ್ಮಿಕವಾದ ಇಂಥ ಕಥೆಗಳ ಸಹಾಯದಿಂದ ಮಾಡುತ್ತಿದ್ದರು.

## ಕತೆಗೆ ಮತ್ತೆ ಪ್ರಾಧಾನ್ಯ

ಮನೆಯ ಹಿರಿಯರು ತಮ್ಮ ಮಕ್ಕಳು ಮೊಮ್ಮಕ್ಕಳನ್ನು ಮುಂದೆ ಕೂಡಿಸಿಕೊಂಡು ಸಂಜೆಯ ಸಮಯಕ್ಕೆ ಕಥೆ ಹೇಳುವ ಸಂಪ್ರದಾಯವು ಮೊನ್ನೆ ಮೊನ್ನೆಯವರೆಗೂ ಸಾಗಿಬಂದಿತ್ತು. ಯಾವ ಕಾರಣದಿಂದಲೊ ಅದು ಕೆಲಕಾಲ ಲೋಪವಾಯಿತು. ಆದರೆ ಇಂದು ಕಥೆಗೆ ಮತ್ತೆ ಪ್ರಾಧಾನ್ಯ ಬರತೊಡಗಿದೆ. ಕಥೆ ಮನೆಬಿಟ್ಟು ಮಠ ಸೇರಿದಂತಾಗಿದೆ. ಶಾಲೆಯ ಅಭ್ಯಾಸಕ್ರಮದಲ್ಲಿ ಪಠ್ಯಪುಸ್ತಕದಲ್ಲಿ ಕಥೆಗೆ ಇಂದು ಹೆಚ್ಚಿನ ಸ್ಥಾನವು ದೊರೆಯಹತ್ತಿದೆ. ಚಿಕ್ಕ ಮಕ್ಕಳ ವಾಚನ ಪುಸ್ತಕಗಳಲ್ಲಿ ಮುಕ್ಕಾಲು ಭಾಗವನ್ನು ಕಥೆಗಳೆ ವ್ಯಾಪಿಸಿರುವವು. ಕಥೆಗಳ ಈ ಮಹತಿಯನ್ನು ಶಿಕ್ಷಣ ತಜ್ಞರಿಗೆ ಮನವರಿಕೆ ಮಾಡಿಕೊಡಲು ಮಕ್ಕಳ ಮಾನಸ ಶಾಸ್ತ್ರವೇ ಕಾರಣವಾಗಿದೆ. ಕಾಲ ಬದಲಿಸಿದರೇನಾಯಿತು? ಮಕ್ಕಳು ಎಂದಿಗೂ ಮಕ್ಕಳೇ

ಸರಿ! ಕಥೆಯಲ್ಲಿರುವ ಮಕ್ಕಳ ಆಸ್ಥೆ ಅಭಿರುಚಿಗಳಿಗೆ ಎಂದೂ ಕೊರತೆಯುಂಟಾಗಲಾರದು.

ಶಿಕ್ಷಣಪ್ರಪಂಚದಲ್ಲಿ ಕಥೆಯ ಮುಖಾಂತರವಾಗಿ ಮಕ್ಕಳ ಬೌದ್ಧಿಕ ಹಾಗೂ ಸಾಂಸ್ಕೃತಿಕ ವಿಕಾಸವನ್ನು ಸಾಧಿಸುವ ಈ ಪ್ರಯತ್ನವು ಸ್ತುತ್ಯವಾಗಿದೆ, ಸ್ವಾಗತಾರ್ಹವಾಗಿದೆ. ಆದರೆ ಈ ಹವ್ಯಾಸವು ತನ್ನ ಹವಣು ಮೀರದಂತೆ ಮಾತ್ರ ದಕ್ಷತೆ ವಹಿಸಬೇಕು. ಕೆಲವೊಂದು ಪಠ್ಯಪುಸ್ತಕಗಳಲ್ಲಿ ಕಥೆಯನ್ನು ಎಲ್ಲ ವಿಷಯಗಳ ಪಾಠಗಳಲ್ಲಿಯೂ ಬಳಸಿಕೊಂಡಿರುವದು ಕಂಡುಬರುವದು. ವಿದ್ಯುದ್ದೀಪದ ತಿಳುವಳಿಕೆ ಮಾಡಿಕೊಡಲೂ ಒಂದು ಕಥೆ. ಗ್ರಹಣಗಳ ಪರಿಚಯವನ್ನು ಮಾಡಿಕೊಡಲೂ ಒಂದು ಕಥೆ. ಹೀಗೆ ಮಾಡುವದರಲ್ಲಿ ಕಥೆಯ ಹಿರಿಮೆ ಹಾಗೂ ಸ್ವಾರಸ್ಯಗಳನ್ನು ಒಪ್ಪಿಕೊಂಡಂತಾಗುವದೆಂಬುದೇನೊ ನಿಜವು. ಆದರೆ ಇದರಿಂದ ಕಥೆಯ ಕಲಾಸ್ವರೂಪಕ್ಕೆ, ಬಾಧೆ ತಟ್ಟುವ ಭೀತಿಯಿದೆ. ಕಥೆಯು ಒಂದು ಅನೋಘವಾದ ಕಲೆ. ಸಹಜತೆ ಕಥೆಯ ಅಂತಃಸತ್ವ, ಜೀವಾಳವಾಗಿವೆ. ಕಥೆಯನ್ನು ಬೇಕುಬೇಕಾದಲ್ಲಿ, ಬೇಕುಬೇಕಾದ ರೀತಿಯಲ್ಲಿ ಬಳಸಿಕೊಂಡರೆ, ಅದರಲ್ಲಿ ಕೃತ್ರಿಮತೆಯು ನುಸುಳುವದು. ಅದರ ಅಂತಃಸತ್ವವು ಹದಗೆಡುವುದು. ತನ್ನ ಸಹಜತೆಗೆ ಬಾಧೆಬರದಂತೆ, ಕಥೆಯು ಯಾವಾಗಲೂ ಕಲಾಕೃತಿಯಾಗಿಯೆ ಉಳಿಯಬೇಕು. ಅದರ ನೈಜವಾದ ರೂಪವನ್ನು ಅಂದಗೆಡಿಸಬಾರದು.

ಮಕ್ಕಳ ಶಿಕ್ಷಣವನ್ನು ನೋಡಿಕೊಳ್ಳುವ ಮಾತೆಯರ ಹಾಗೂ ಶಿಕ್ಷಕರ ಕೈಯಲ್ಲಿ ಇಂದು ಕಥೆ ಪ್ರಾಪ್ತವಾಗಿದೆ. ಅದರ ವಿನಿಯೋಗವು ಅವರಿಗೆ ಅನಿವಾರ್ಯವಾಗಿದೆ; ಕಥೆಯ ಬಗ್ಗೆ ಹಿಂದೆ ಹೇಳಿದ ಮೂಲ ಮಾತನ್ನು ಅವರು ಮರೆಯುವಂತಿರಲಿಲ್ಲ. ಚಿಕ್ಕಮಕ್ಕಳಿಗೆ ಕಥೆ 'ಓದುವ' ವಿಷಯವಲ್ಲ; 'ಕೇಳುವ' ಸಂಗತಿಯಾಗಿದೆ. ಕಥೆಯನ್ನು ಅವರಿಗೆ 'ಹೇಳಬೇಕು.' ನಿರೂಪಣವೆ ಕಥೆಯ ಸರ್ವಸ್ವ. ಕಥೆಯ ಸ್ವಾರಸ್ಯವೂ ನಿರೂಪಣದಲ್ಲಿಯೆ. ಹೇಗಾದರೂ ಹೇಳಿದರೆ, ಒಳ್ಳೇ ಕಥೆಯೂ ರಸವಿಹೀನವಾಗುತ್ತದೆ. ಮಕ್ಕಳ ಅಭಿರುಚಿಯನ್ನೇ ಅದು ಕೆಡಿಸಬಹುದು. ಸಂತೋಷ ತನ್ಮಯತೆಗಳನ್ನು ತಂದುಕೊಟ್ಟು ಮಕ್ಕಳ ಆತ್ಮಶಕ್ತಿಗಳನ್ನು ಅರಳಿಸಬೇಕೆನ್ನುವ ಮಕ್ಕಳ ಹಿತೈಷಿಗಳಾದ ಮಾತೆಯರು ಹಾಗೂ ಶಿಕ್ಷಕರು ಈ ಮಾತನ್ನು ಮರೆಯಕೂಡದು. ಹೃದಯಸ್ಪರ್ಶಿಯಾಗುವಂತೆ ಕಥಾನಿರೂಪಣದ ಕಲೆಯನ್ನು ಅವರು ಪರಿಶ್ರಮದಿಂದ ಸಾಧಿಸಬೇಕು. ಯಶಸ್ವಿಯಾದ ನಿರೂಪಣಕ್ಕೆ ಹಿನ್ನೆಲೆಯಾಗಿರುವ ಮಕ್ಕಳ ಮನೋಭೂಮಿಕೆಯನ್ನೂ ಮಾನಸಶಾಸ್ತ್ರದ ತತ್ವಗಳನ್ನೂ ಅವರು ಅರಿತುಕೊಳ್ಳಬೇಕು. ನಿರೂಪಣವಿಧಾನದ ವಿವಿಧ ತಂತ್ರಗಳ ಪರಿಚಯವನ್ನೂ ಅವರು ಮಾಡಿಕೊಳ್ಳಬೇಕು.

---

ಜೀವನದಲ್ಲಿ ಪವಿತ್ರ ಹಾಗೂ ಧಾರ್ಮಿಕ ಏಂಬುದೆಲ್ಲದರ ತವರುಮನೆ ಸ್ತ್ರೀಯರಲ್ಲಿಯೇ ಇದೆ. ಹಳೆಯದನ್ನು ಬಿಡದೇ ಇರುವ ಸ್ವಭಾವ ಅವರದು. ಅಂಧಶ್ರದ್ಧೆಗಳನ್ನು ಅವರು ಬೇಗ ಬಿಡಲರಿಯರು. ಅದೇ ಕಾಲಕ್ಕೆ ಜೀವನದಲ್ಲಿ ಶುದ್ಧ ಪವಿತ್ರ ಶ್ರೇಷ್ಠ ಎಂಬುದನ್ನು ಅವರು ಬಿಡಲರಿಯರು.

—ಮಹಾತ್ಮಾ ಗಾಂಧಿ

# ಹರಟೆ

ಲೇಖಕರು: ಪ್ರೊ. ಎಲ್. ಎಸ್. ಶೇಷಗಿರಿರಾವ
ಮಡಿಕೇರಿ.

"The wind bloweth where it listeth" ಎಂದು ಇಂಗ್ಲೀಷ್‌ನಲ್ಲಿ ಒಂದು ವಾಕ್ಯವುಂಟು. ತನ್ನಿಚ್ಛೆ ಬಂದತ್ತ ಸಾಗುವ ಗಾಳಿಯಂತೆ ಹರಟೆ. ನಮ್ಮ ಸಾಮಾನ್ಯ ಹರಟೆಯಲ್ಲಿಯೂ ಹೀಗೆಯೇ; ನಾಲ್ಕು ಜನ ಗಂಡಸರು ಸೇರಿದ ಕಡೆ ಅಕ್ಕಿಯ ಬೆಲೆ, ಆಫೀಸರ ಟಿ. ಎ. ಬಿಲ್‌ನಿಂದ ಪ್ರಾರಂಭವಾಗಿ ಸಮತಾವಾದ, ಹಟ್ಟನ್ನನ ನಿವೃತ್ತಿಯವರೆಗೆ ಎಲ್ಲ ವಿಷಯಗಳನ್ನೂ ಕುರಿತು ಹರಟೆ ನಡೆಯುತ್ತದೆ. ಇಬ್ಬರು ಹೆಂಗಸರು ಸೇರಿದ ಕಡೆ ಅತ್ತೆಯ ಜಂಬ, ಆಹಾರದ ಸಮಸ್ಯೆಯಿಂದ ಸಿನಿಮಾ, ಹುರಿಗಾಳಿನ ವರೆಗೆ ಎಲ್ಲ ವಿಷಯಗಳ ಬಗೆಗೂ ಹರಟೆ ಸಾಗುತ್ತದೆ. ಸಾಹಿತ್ಯದಲ್ಲಿ 'ಹರಟೆ' ಎಂದು ಕರೆಸಿಕೊಳ್ಳುವ ವಿಭಾಗಕ್ಕೂ ಇದೇ ಸ್ವಾತಂತ್ರ್ಯ, ನಿಯಮರಾಹಿತ್ಯ ಇದ್ದಂತೆ ತೋರುತ್ತದೆ. 'ನೀಲಮ್ಮನ ನಾಲಗೆ,' 'ದಾಸರ ಗಂಟು' 'ಪಿತನಿಗೆ ನಾಪಿತ', 'ಮೊಸರಲ್ಲಿ ಕಲ್ಲು', 'ತಿಂದ ನೋವು' ಮೊದಲಾಗಿ ಗೊಂದಲದಲ್ಲಿ ಕೆಡಹುವ ವಿಷಯಗಳು. 'ಉತ್ತರ ಪತ್ರಿಕೆ', 'ನಗರೋದ್ಧಾರ', 'ನಾಗರಿಕತೆ', 'ಕಾಯಿಲೆಗಳು' 'ಸಾಹಿತ್ಯ ಸಮ್ಮೇಳನಗಳು', 'ಸ್ತ್ರೀಯರು ಪುರುಷರು' 'ಕ್ರಮಬಿಂದು' ಮೊದಲಾದ ಗಹನ ವಿಷಯಗಳು, 'ಗಂಡನ ಸೋಲು', 'ಕರಡಿಯ ಪರಾರಿ', 'ತಿರುಪತಿ ಕ್ಷೌರ', 'ಹರಿಶ್ಚಂದ್ರನ ಸೋಲು', 'ನಾಡಿಗೇರ ಕೃಷ್ಣರಾಯರ ನಿಧನ' ಮುಂತಾದ ರುದ್ರಗಭೀರ ಸನ್ನಿವೇಶಗಳು, 'ಮಾವನ ಮಗಳೇ ಮಲ್ಲಿಗೆ ಅರಳು', 'ಗಂಡಹೆಂಡಿರು', 'ವಧುಪರೀಕ್ಷೆ', 'ಹೋಟಲುಗಳು', 'ಮದುವೆ', 'ಗುಲಾಬಿ', 'ಹಗಲುಗನಸುಗಳು' 'ಪ್ರಣಯಯಾತ್ರೆ', 'ವಸಂತ ಚಂದನೋತ್ಸವ', 'ದಿವಾನಖಾನೆಯ ಅಂದ ಚೆಂದ', 'ಹೆಂಡತಿಯ ಹೆಸರು' ಇಂತಹ ರಸಿಕ ಮನೋಲ್ಲಾಸಕಾರಕ ವಿಷಯಗಳೂ, 'ನನ್ನ ಚಿನ್ನ', 'ಮನೆಯಾಕೆ', 'ಸಪ್ತಸಾಹಿತಿ', 'ಕ್ಯಾಲೆಂಡರುಗಳು' ಮೊದಲಾದ ಸಾಮಾನ್ಯ ವಿಷಯಗಳೂ ಹರಟೆಗಳ ಪ್ರಭುತ್ವಕ್ಕೆ ಒಳಗಾಗಿವೆ. 'ಅನುಕಂಪ', 'ಆಡಳಿತ ಭಾಷೆ'ಯಿಂದಹಿಡಿದು 'ಸಂಸಾರಸುಖ', 'ಹೂವುಗಳ' ವರೆಗೆ ಹರಟೆಗಾರರ ಬಾಯಿಗೆ ಅಥವಾ ಲೇಖನಿಗೆ ಸಿಕ್ಕದ ವಿಷಯವಿಲ್ಲ. 'ಮಂಕರುಚಿಪ್ಪರ'ನ್ನೂ, 'ನೆಗಡಿಯನ್ನೂ', 'ಸಪ್ತಸಾಹಿತಿ'ಯನೂ, 'ಮೈಸೂರು ರುಮಾಲ'ನ್ನೂ, 'ರಾಸಿನ ಸಂಘ'ವನ್ನೂ, 'ಬಲಕಿವಿ'ಯನ್ನೂ, ಕೊನೆಗೆ 'ಹುಚ್ಚ'ನ್ನೂ ಬಿಡದ ಈ ಹರಟೆಗಾರರು ಆರಿಸಿಕೊಳ್ಳದ ವಿಷಯ ಯಾವುದು? ಆಡು ಮುಟ್ಟದ ಸೊಪ್ಪು, ಹರಟೆಗಾರ ಮುಟ್ಟದ ವಿಷಯ ಇಲ್ಲ.

## ವಾಗ್ವೈಭವಕ್ಕೆ ಅವಕಾಶವಿಲ್ಲ

ಹರಟೆಗಾರನ ಮಾತಿನ ರೀತಿ, ಓದುಗನೊಡನೆ ಅವನು ಬೆಳೆಸುವ ಸಂಬಂಧ, ಅವನು ಕಲ್ಪಿಸುವ ವಾತಾವರಣ ಇವು ಈ ವಸ್ತುಸ್ವಾತಂತ್ರ್ಯಕ್ಕೆ ಅನುಗುಣವಾದುವೇ. ಆಪ್ತತೆಯ ವಾತಾವರಣ ಹರಟೆಯದು. ಓದುಗನೊಡನೆ ಸಂಭಾಷಣೆ ನಡೆಸುತ್ತಾನೆ ಹರಟೆಗಾರ. ಆತ್ಮೀಯವಾಗಿ ವಿಷಯವನ್ನು ಅವರ ಮುಂದಿಡುತ್ತಾನೆ. ಕವಿಗೆ ಇರುವ ಆವೇಶವಾಗಲಿ, ಕಾದಂಬರಿಕಾರನಿಗೆ ಇರುವ ಸ್ಪಷ್ಟವಾದ ಗಂಭೀರತೆಯಾಗಲಿ ಅವನದಲ್ಲ. "ಮನೆಗೆ ಬಂದವರನ್ನು ಮಾನವಾಗಿ ಹಿಂದಕ್ಕೆ ಕಳುಹಿಸಿಕೊಡುವುದು ನಮ್ಮ ಜನಕ್ಕಿನ್ನೂ ಬಾರದು. ಮೊನ್ನೆ ನಾನು ನಮ್ಮ ಆಫೀಸಿನ ಅಕೌಂಟೆಂಟರ ಮನೆಗೆ ಒಂದು ಕಾಗದ ಕೊಟ್ಟುಬರಲು ಹೋಗಿದ್ದೆ . . . .'. "ಇತ್ತೀಚೆಗೆ ನನ್ನ ಸ್ವಂತ ದಿವಾನಖಾನೆಯನ್ನು ಪ್ರವೇಶಿಸುವ ಧೈರ್ಯ ನನಗೇ ಇಲ್ಲ. . . ." "ನಾನೊಬ್ಬ ಮಂಕು. ನಾಚಿಕೆ ಇಲ್ಲದೆ ಹೇಳಿಕೊಳ್ಳುತ್ತೇನೆ. ." "ನನ್ನ ಕಣ್ಣಿಗಿಂತ ಕಿವಿ ಚುರುಕು. (ಇದನ್ನು ನಾನು ವಾಚ್ಯರೂಪವಾಗಿ ಹೇಳಬೇಕಾಗಿಯೇ ಇಲ್ಲ).." ಹೀಗೆ ಸಾಮಾನ್ಯವಾಗಿ ಅವನು ತನ್ನ ಹರಟೆಯನ್ನು ಪ್ರಾರಂಭಿಸುವುದು. ಯಾವ ವಿಷಯವನ್ನೊ ಎತ್ತಿಕೊಂಡು ಪ್ರಾರಂಭಿಸಿ ಯಾವ ವಿಷಯಕ್ಕೊ ಬಂದು ಎಲ್ಲಿಯೊ ತಲಪುತ್ತಾನೆ ಎಂದು ನಮಗೆ ಭಾಸವಾಗುವುದೂ ಉಂಟು. ಈಚಲು ಮರವನ್ನು ಕುರಿತು, ಮಾತನಾಡ—ಅಲ್ಲ, ಹರಟೆ ಹೊಡೆಯ—ಹೊರಟವನು, ಜ್ಞಾನ-ಅಜ್ಞಾನ, ಸತ್ಯ-ಮಾಯೆಗಳ ವಿಮರ್ಶೆಮಾಡಬಹುದು, ಕವಿಯ ವಿಷಯ ಬರೆಯ ಹೊರಟವನು ಪಕ್ಷಿಗಳನ್ನು ಕುರಿತು ಬರೆಯುತ್ತಾನೆ, 'ಮನೆ ಒಂದು ಪ್ರಪಂಚ ಆಫೀಸು ಒಂದು ಪ್ರಪಂಚ,' ಎಂದು ವೇದಾಂತದ ಮಾತನ್ನಾಡುತ್ತಾನೆ. ಹರಟೆಯ ವಿಷಯ 'ನಾದುರುಸ್ತ' ಎನ್ನುತ್ತಾನೆ. ಆ ಹರಟೆಯಲ್ಲಿ, "ಮನುಷ್ಯನಿಗೆ ಅಹಂಕಾರ ಹಾಗೂ ಲೌಕಿಕ ಇವು ಹೆಚ್ಚಿನವು, ಸತ್ಯವಲ್ಲ" ಎನ್ನುವ ನಿಲುವಿಗೆ ಬರುತ್ತಾನೆ. ಹೇಗೋ ಹರಿಯುವಂತೆ ತೋರುತ್ತದೆ ಅವನ ವಿಚಾರವಾಹಿನಿ. ಕಾವ್ಯದಲ್ಲಿ ನಾವು ಪಡೆಯಬಹುದಾದ ರಸಾನುಭವ, ಹೊಸ ಸೌಂದರ್ಯದರ್ಶನ ಇಲ್ಲಿ ದೊರೆಯದು; ನಾಟಕ-ಕಾದಂಬರಿಗಳಲ್ಲಿ ಕಾಣುವ ಪಾತ್ರಸೃಷ್ಟಿಯ ಪ್ರತಿಭೆ ಇಲ್ಲಿ ಸಿಕ್ಕದು; ಸಣ್ಣಕತೆಯ ಕೇಂದ್ರೀಕರಣ, ಕಲೆ ಹರಟೆಯದಲ್ಲ. ವಿಚಾರಪ್ರಬಂಧದ (Thesis) ವಿಚಾರ ವೈಖರಿ, ವಾದಗಳ ಹೆಣಿಗೆ ಇವುಗಳನ್ನು ನಾವು ಹರಟೆಯಲ್ಲಿ ನಿರೀಕ್ಷಿಸುವಂತಿಲ್ಲ. ಇತರ ಸಾಹಿತ್ಯರೂಪಗಳಲ್ಲಿರುವಷ್ಟು ಇಲ್ಲಿ ವಾಗ್ವೈಭವಕ್ಕೆ ಅವಕಾಶವಿಲ್ಲ.

> ಹರಟೆಗೆ ವಿಷಯ ಇಂಥದೇ ಇರಬೇಕೆಂಬುದಿಲ್ಲ. ಆದರೆ ಯಾವದೇ ವಿಷಯದಮೇಲಿದ್ದರೂ ವ್ಯಕ್ತಿಯ ಪ್ರಭಾವ ಅದರ ಮೇಲೆ ಕಂಡು ಬರುವದು. ಮಹಾಡಂಬರಕ್ಕೆ ಅದರಲ್ಲಿ ಅವಕಾಶವಿಲ್ಲ. ಹೀಗಿದ್ದರೂ ಅದು ಸಾಹಿತ್ಯದ ಒಂದು ಪ್ರಕಾರವಾಗಿರುವದು. ಹರಟೆಗಾರನಿಗೆ ಸ್ವತಂತ್ರ ವಿಚಾರಶಕ್ತಿ ಸಹನೆ ಹಾಸ್ಯ ಇವು ಅವಶ್ಯವಾಗಿ ಬೇಕು. ಅಂಥವನೇ ಉತ್ತಮ ಹರಟೆಯನ್ನು ನೀಡಬಲ್ಲನು.

ಹಾಗಿದ್ದರೆ ಹರಟೆ ಸಾಹಿತ್ಯವಿಭಾಗ ಎನ್ನಿಸಿಕೊಳ್ಳಬಹುದೆ? ಇದರಲ್ಲಿ ಕಲೆಯ ಅಂಶ ಏನಾದರೂ ಉಂಟೆ? ಎನ್ನುವ ಪ್ರಶ್ನೆಗಳು ಸಹಜವಾಗಿ ಉದ್ಭವವಾಗುವವು. ಹರಟೆ ಬಹು ಸುಲಭ, ಸಾಮಾನ್ಯ ಎಂದು ತೋರಬಹುದಾದ ಸಾಹಿತ್ಯರೂಪ. ಶ್ರೀ ರಾ. ಶಿ, ಶ್ರೀ ನಾಡಿಗೇರ ಕೃಷ್ಣರಾವ, ಶ್ರೀ ಕಸ್ತೂರಿ, ಶ್ರೀ ಮೂರ್ತಿರಾವ್, ಶ್ರೀ ವಿ. ಸೀ., ಶ್ರೀ ಪು. ತಿ. ನ., ಶ್ರೀ ಗದಗಕರ, ಶ್ರೀ ಕಾರಂತ, ಶ್ರೀ ಶ್ರೀರಂಗ ಮೊದಲಾದವರ ಹರಟೆಗಳನ್ನೋದುವಾಗ ಹರಟೆಯ ಸೃಷ್ಟಿ ಏನು ಕಷ್ಟ ಎಂದು ತೋರುತ್ತದೆ. ಆದರೆ ಒಂದು ದೃಷ್ಟಿಯಿಂದ ಹರಟೆಯ ರಚನೆ ಇತರ ಸಾಹಿತ್ಯರೂಪಗಳ ಕೃಷಿಗಿಂತ ಕಷ್ಟಕರ. ಇತರ ಸಾಹಿತ್ಯರೂಪಗಳಿಗಿರುವಷ್ಟು ಹೊರತತ್ವಗಳು, ನಿಯಮಗಳು ಹರಟೆಗಿಲ್ಲ. ಇದರ ಪರಿಣಾಮ ಹರಟೆಯಲ್ಲಿ ಸಾಮಾನ್ಯ ಯಶಸ್ಸು ಸಾಧ್ಯವೇ ಇಲ್ಲ. ಹಲವಾರು ನಿಯಮಗಳನ್ನುಳ್ಳ ವಿಭಾಗದಲ್ಲಿ, ಸಾಹಿತಿಗೆ ಹೇಳಿಕೊಳ್ಳುವಂತಹ ತನ್ನತನವಿಲ್ಲದಿದ್ದರೂ, ನಿಯಮಗಳ ಪಾಲನೆಯಿಂದ ಸಾಮಾನ್ಯ ಯಶಸ್ಸನ್ನು ಗಳಿಸಬಹುದು. ಛಂದಸ್ಸಿನ ನಿಯಮಗಳನ್ನು ಪರಿಪಾಲಿಸಿ ಸಾಮಾನ್ಯವಾದ ಕವನವನ್ನು ಬರೆಯಬಹುದು; ನಾಟಕದ ನಿಯಮಗಳನ್ನು ಪರಿಪಾಲಿಸಿ ಸಾಮಾನ್ಯವಾದ ನಾಟಕವನ್ನು ಬರೆಯಬಹುದು. ಇಂತಹ ಕೃತಿಗಳಲ್ಲಿ ಬೇರೇನು ಸತ್ವ ಇಲ್ಲದಿದ್ದರೂ ತಾಂತ್ರಿಕ ಯಶಸ್ಸಾದರೂ ಸ್ವಲ್ಪ ಮಟ್ಟಿಗೆ ಸಾಧ್ಯವಾದೀತು. ಆದರೆ ಹರಟೆಗೆ ಈ ಹೊರನಿಯಮಗಳು ಇಲ್ಲದಿದ್ದುದರಿಂದ, ಹರಟೆ ಉತ್ತಮ ಹರಟೆಯಾಗುತ್ತದೆ, ಇಲ್ಲವೆ ಕಳಪೆಯಾಗುತ್ತದೆ.

## ಬರೆಹಗಾರನ ವ್ಯಕ್ತಿತ್ವದ ಪ್ರಭಾವ

ಹಾಗಾದರೆ ಹರಟೆಯ ಸತ್ವದ ಆಧಾರವೇನು? ಉತ್ತಮ ಹರಟೆಗಳ ಯಶಸ್ಸಿಗೂ ಇತರ ಹರಟೆಗಳ ಸೋಲಿಗೂ ಕಾರಣವಾಗುವ ಅಂಶ ಯಾವುದು? ಇದು ಶ್ರೀಮಂತ ವ್ಯಕ್ತಿತ್ವ. ಹರಟೆಯ ಯಶಸ್ಸು, ಪರಿಣಾಮ ಎಲ್ಲ ಬರಹಗಾರನ ವ್ಯಕ್ತಿತ್ವದ ಶ್ರೀಮಂತಿಕೆಯನ್ನೇ ಅವಲಂಬಿಸಿರುತ್ತದೆ. ಸಾಹಿತ್ಯದ ಯಾವ ವಿಭಾಗದಲ್ಲಿಯೇ ಆಗಲಿ, ಬರಹಗಾರನ ವ್ಯಕ್ತಿತ್ವ ಮುಖ್ಯ, ನಿಜ. ಆದರೆ

ಹರಟೆ ಬರಹಗಾರನ ಪ್ರಜ್ಞಾಪೂರ್ವಕವಾದ (Conscious) ಉದ್ದೇಶಪೂರ್ವಕವಾದ ( Deliberate ) ಸ್ವನಿರೂಪಣೆ. ಕವನದಲ್ಲಿ ಯಾವುದೋ ಒಂದು ಅನುಭವ ಅಥವಾ ಪ್ರಭಾವ ಅವನ ವ್ಯಕ್ತಿತ್ವಕ್ಕೆ ಪ್ರಭೆಯನ್ನು ಕೊಟ್ಟಿರುವುದನ್ನು ಕಾಣುತ್ತೇವೆ; ಕಾದಂಬರಿ, ಕತೆ, ನಾಟಕಗಳಲ್ಲಿ ಅವನ ವ್ಯಕ್ತಿತ್ವ ಅವನ ಪಾತ್ರಗಳ ಮೇಲೆ, ಕಥಾವಸ್ತುವಿನ ಮೇಲೆ ಪ್ರಭಾವವನ್ನುಬೀರುತ್ತದೆ. ಆತ್ಮೀಯ ಸ್ನೇಹಿತರೊಡನಿದ್ದಾಗ ಹೇಗೆ ಮನುಷ್ಯ ಮನಸ್ಸು ಬಿಚ್ಚಿ ಮಾತನಾಡುತ್ತಾನೋ ತನ್ನ ವ್ಯಕ್ತಿತ್ವದ ಓರೆಕೋರೆಗಳು ಇತರರ ಗಮನಕ್ಕೆ ಬರುವುದೆಂಬ ಭಯವಿಲ್ಲದೆ ನಿರಾತಂಕವಾಗಿ ತನ್ನ ಮನಸ್ಸಿನ ಕಡಿವಾಣವನ್ನು ಸಡಿಲಬಿಡುತ್ತಾನೆಯೋ ಹಾಗೆ ಹರಟೆಗಾರ ತನ್ನ ಹರಟೆಯಲ್ಲಿ ಆತ್ಮೀಯತೆಯಿಂದ ತನ್ನ ವ್ಯಕ್ತಿತ್ವದ ಓರೆಕೋರೆಗಳು ಪ್ರದರ್ಶಿತವಾಗಿ ತನ್ನ ಘನತೆಗೆ ಕುಂದುಂಟಾಗುವುದೆಂಬ ಅಳುಕಿಲ್ಲದೆ ಮಾತನಾಡುತ್ತಾನೆ. ಆದುದರಿಂದ ಹರಟೆಯ ತೂಕ, ಆಸಕ್ತಿ ಅವನ ವ್ಯಕ್ತಿತ್ವವನ್ನೇ ಹೊಂದಿಕೊಂಡಿವೆ. ಅವನ ವ್ಯಕ್ತಿತ್ವ ಎಷ್ಟು ಪ್ರಭೆಯಿಂದ ಕೂಡಿದ್ದರೆ ಅಷ್ಟು ಅದರಿಂದ ಹೊರಡುವ ಕಿರಣಗಳು ಪ್ರಕಾಶಯುತವಾಗಿರುತ್ತವೆ; ಅವನ ವ್ಯಕ್ತಿತ್ವ ಎಷ್ಟು ಶ್ರೀಮಂತವಾಗಿದ್ದರೆ ಅಷ್ಟು ಸೊಗಸಾಗಿರುತ್ತವೆ ಅವನ ಹರಟೆಗಳು. ಇದರಿಂದಲೇ ಫ್ರೀಮನ್ ಹರಟೆಗಳನ್ನು ಕುರಿತು ಬರೆಯುತ್ತ, "An essayist is an intellectual spendthrift" ಎಂದೂ "your perfect egoist is your perfect essayist" ಎಂದೂ ನುಡಿದುದು.

ಹರಟೆಯಲ್ಲಿ ಬರಹಗಾರನ ವ್ಯಕ್ತಿತ್ವಕ್ಕೆ ಶ್ರೀಮಂತಿಕೆ ಬೇಕು, ಎನ್ನುವುದರ ಅರ್ಥವೇನು? ಯಾವ ಶ್ರೀಮಂತಿಕೆ ನಾವು ನಿರೀಕ್ಷಿಸುವುದು? ವಿದ್ವತ್ತಿನ ಸಂಪತ್ತೇ, ಅನುಭವದ ವೈಶಾಲ್ಯವೇ, ವಿವೇಕದ ಹಿರಿಮೆಯೇ? ಮೊಟ್ಟಮೊದಲು ನಾವು ನಿರೀಕ್ಷಿಸುವುದು ಸಹಜತೆಯ ಸಂಪತ್ತನ್ನು. ಹರಟೆಯಲ್ಲಿ ತನ್ನ ವ್ಯಕ್ತಿತ್ವ ನಿರೂಪಿತವಾಗುತ್ತದೆ ಎಂಬುದರ ಅರಿವಿರುವ ಹರಟೆಗಾರ ತನ್ನನ್ನು ತಾನೇ ಉನ್ನತ ಪೀಠದ ಮೇಲೆ ಪ್ರತಿಷ್ಠಿಸಿಕೊಳ್ಳಹೊರಟರೆ, ಅವನ ಹರಟೆಗೆ ಅದೇ ಮಾರಕವಾಗುತ್ತದೆ. ಹರಟೆಗೆ ಅಸಹಜತೆಗಿಂತ ಕ್ರೂರ ಶತ್ರುವಿಲ್ಲ. ಹರಟೆಯ ಆತ್ಮೀಯತೆ ಅಸಹಜತೆಯನ್ನು, ಅತಿ ಪ್ರಕಾಶವಾದ ಬೆಳಕು ಕಪ್ಪು ಮೋರೆಯ ಪೌಡರ್, ಸ್ನೋಗಳನ್ನು ಎತ್ತಿ ತೋರಿಸುವಂತೆ, ನಿರ್ದಯವಾಗಿ ಎತ್ತಿ ತೋರಿಸುತ್ತದೆ. ತನಗಿಲ್ಲದ ವಿವೇಕ, ಸದ್ಗುಣ, ವಿದ್ವತ್ತು, ಘನತೆಗಳನ್ನು ಮೆರೆಯಲು ಹೊರಟ ಹರಟೆಗಾರ ನಗೆಗೀಡಾಗುತ್ತಾನೆ.

ಇದಕ್ಕೆ ಕಾರಣ ಹರಟೆ ವ್ಯಕ್ತಿತ್ವದ ಪ್ರದರ್ಶನವಲ್ಲ, ಅಭ್ಯಾಸ ಎನ್ನುವುದು. ಹರಟೆಗಾರನಿಗೆ ತನ್ನ ವ್ಯಕ್ತಿತ್ವದಲ್ಲಿ ಆಸಕ್ತಿಯುಂಟು, ಆದರೆ ಹೆಮ್ಮೆಯಿಲ್ಲ. ಆಸಕ್ತಿಯಿಂದ, ತನ್ನ ವ್ಯಕ್ತಿತ್ವವನ್ನು ವಿಭಜಿಸುತ್ತಾನೆ, ಅಭ್ಯಾಸಿಸುತ್ತಾನೆ. ಆದರೆ ಆದರ ಬಗೆಗೆ ಇರುವುದು ಆಸಕ್ತಿ ( curiosity )ಯೇ ಅಲ್ಲದೆ ಒಣಜಂಭ( vanity )ವಲ್ಲ. ಮತ್ತೆ ಫ್ರೀಮನ್ನನ ಮಾತಿನಲ್ಲಿ ಹೇಳುವುದಾದರೆ "Ideas may attract, history and science may touch a faded figure with spectral incandescence, but only that which is human lives on in human affection."

ವಿದ್ವತ್ತು, ಅನುಭವ ಇವು ಹೆಚ್ಚು ಇದ್ದಷ್ಟು ಹರಟೆಗಾರನ ಕೃತಿಗೆ ಕಾಂತಿ ಹೆಚ್ಚುತ್ತದೆ. ನಮ್ಮ ಅತ್ಯುತ್ತಮ ಹರಟೆಗಾರರ ಪಂಗ್ತಿಯಲ್ಲಿ ಶ್ರೀ ಕಸ್ತೂರಿ, ಶ್ರೀ ತೀ. ನಂ. ಶ್ರೀಕಂಠಯ್ಯ, ಶ್ರೀ ಕಾರಂತ್, ಶ್ರೀ ಶ್ರೀರಂಗ ಶ್ರೀ ವಿ. ಸೀ., ಶ್ರೀ ಎ. ಎನ್. ಮೂರ್ತಿರಾವ್-ಇವರಿರುವುದೇ ಇದನ್ನು ತೋರಿಸುತ್ತದೆ. ಆದರೆ ಹರಟೆಗಾರನ ವಿದ್ವತ್ತಾಗಲಿ, ಅನುಭವವಾಗಲಿ ಬರಡಾಗಬಾರದು, ಬರಿಯ ಹೊರೆಯಾಗಬಾರದು. ಅವನ ವಿದ್ವತ್ತನ್ನೂ ಅನುಭವವನ್ನೂ ಅವನು ಅರಗಿಸಿಕೊಂಡಿದ್ದು, ಸರಿಯಾಗಿ ಜೀರ್ಣವಾದ ಆಹಾರ ಮೈಗೆ ಪುಷ್ಟಿಯನ್ನು ಕೊಟ್ಟಂತೆ ಆ ವಿದ್ವತ್ತು, ಅನುಭವ, ಅವನ ವ್ಯಕ್ತಿತ್ವಕ್ಕೆ ಪುಷ್ಟಿಯನ್ನಿತ್ತು ವ್ಯಕ್ತಿತ್ವ ವಿಕಾಸವನ್ನು ಮಾಡಿದ್ದರೆ, ಅವನ ಹರಟೆ ಸೊಗಸಾಗುತ್ತದೆ. ಗೊಬ್ಬರವನ್ನು ಬಳಸಿಕೊಂಡು ಸುವಾಸನೆಯನ್ನು ನೀಡಬಲ್ಲದು ಗುಲಾಬಿ ಗಿಡ. ಜೀವನದ ಯಾವ ಅನುಭವವನ್ನಾದರೂ ಬಳಸಿಕೊಂಡು ಉತ್ತಮ ಹರಟೆಗಳನ್ನು ಕೊಡಬಲ್ಲ ಹರಟೆಗಾರ. ನೀರನ್ನು ಸೆಳೆದುಕೊಂಡು ಕಂಪನ್ನು ಹರಡಬಲ್ಲದು ಮಲ್ಲಿಗೆಯ ಬಳ್ಳಿ; ವಿದ್ವತ್ತನ್ನು ಬಳಸಿಕೊಂಡು ಉತ್ತಮ ಹರಟೆಗಳನ್ನು ಕೊಡಬಲ್ಲ ಹರಟೆಗಾರ.

## ಹರಟೆಗಾರನಲ್ಲಿರಬೇಕಾದ ಗುಣಗಳು

ಹರಟೆಗಾರನಿಗೆ ಮುಖ್ಯವಾಗಿ ಬೇಕಾದ ಗುಣಗಳು ಮೂರು: ಸ್ವತಂತ್ರ ವಿಚಾರಶಕ್ತಿ, ಸಹನೆ, ಹಾಸ್ಯ. ಮಗುವಿಗೆ ಎಂತಹ ವಸ್ತುವಿನಲ್ಲಿಯೂ ಆಸಕ್ತಿಯುಂಟು. ಪರಿಚಯ ವಸ್ತುಗಳಲ್ಲಿ ನಮ್ಮ ಆಸಕ್ತಿಯನ್ನು ಕುಂದಿಸುವಂತೆ ಮಕ್ಕಳ ಆಸಕ್ತಿಯನ್ನು ಕುಂದಿಸುವುದಿಲ್ಲ. ಮಗು ನಮಗೆ ತೀರ ಸಾಮಾನ್ಯ, ನೀರಸ ಎಂದು ತೋರುವ ವಸ್ತುವಿನಲ್ಲಿಯೂ ಆಸಕ್ತಿಯನ್ನು ತೋರುತ್ತದೆ, ಅದರ ಸುತ್ತ ತನ್ನ ಕಲ್ಪನೆಯ ಬಲೆಯನ್ನು ನೇಯುತ್ತದೆ. ಚೆಸ್ಟರ್‌ಟನ್ ಒಂದು ಕಡೆ ಹೇಳುವಂತೆ, ರೈಲ್ವೆ ಸ್ಟೇಶನ್ನಿನ ಕೆಂಪುದೀಪ, ಹಸಿರುದೀಪ ಮಗುವಿಗೆ ಹೊಸ ಸೂರ್ಯ, ಹೊಸ ಚಂದ್ರ ಆಗುತ್ತವೆ; ಹರಟೆಗಾರನಲ್ಲಿಯೂ ನಾವು ಇದೇ ಕುತೂಹಲವನ್ನು ಕಾಣುತ್ತೇವೆ. ಇಂಗ್ಲೀಷಭಾಷೆಯಲ್ಲಿ ಒಂದು ತುಂಡು ಸೀಮೇಸುಣ್ಣದ ಮೇಲೆ, ಬೆಕ್ಕಿನ ಮೇಲೆ, ತನ್ನ ಹ್ಯಾಟನ್ನು ಅಟ್ಟಿಸಿಕೊಂಡು ಹೋಗುತ್ತಿರುವವನ ಮೇಲೆ, ಒಂದೇ ಕಾಲನ್ನು ಪಡೆದಿರುವುದರ ಅನುಕೂಲತೆಯ ಮೇಲೆ ಸೊಗಸಾದ ಹರಟೆಗಳುಂಟು. ತನ್ನ ಪೆನ್ನಿನಿಂದ ಹಿಡಿದು ನಗರೋದ್ಯಾನದ ವರೆಗೆ ಎಲ್ಲ ವಿಷಯಗಳೂ ಹರಟೆಗಾರನ ಕುತೂಹಲವನ್ನು ಕೆರಳಿಸುತ್ತವೆ. ಪ್ರತಿ ವಿಷಯದ ಮೇಲೂ ಹರಟೆಗಾರ ತನ್ನ ವಿಚಾರಧಾರೆ ಸ್ವತಂತ್ರವಾಗಿ ಹರಿಯಬಿಡುತ್ತಾನೆ. ಅವನ ತೀಕ್ಷ್ಣ, ಸ್ವತಂತ್ರ ವಿಚಾರಶಕ್ತಿ ವಿಷಯ ಎಷ್ಟೇ ಕ್ಷುಲ್ಲಕವಾದುದಿರಲಿ, ಸಾಮಾನ್ಯವಾದುದಿರಲಿ, ಸುಪರಿಚಿತವಾದುದಿರಲಿ ಅದಕ್ಕೆ ಹೊಸ ಅರ್ಥವನ್ನೂ ಮಹತ್ವವನ್ನೂ ಕೊಡುತ್ತದೆ. ತಿಂದ ನೋವಿನ ಸೊಗಸನ್ನು ನಮಗೆ ಪರಿಚಯಮಾಡಿಸಿಕೊಡುತ್ತದೆ; ನೆಗಡಿಯ ಅನುಭವವನ್ನು ವಿಭಜಿಸುತ್ತದೆ; ಕಾಯಿಲೆ ನೀಡುವ ವರವನ್ನು ತೋರಿಸಿಕೊಡುತ್ತದೆ; ನೆಲದ ಮೇಲೆ ಬಿದ್ದ ಒಡೆದ ಕನ್ನಡಿಯಿಂದ ಆಕಾಶದ ತಾರೆಗಳ ವರೆಗೆ ಎಲ್ಲ ವಸ್ತುವನ್ನೂ ಹೊಸ ಬೆಳಕಿನಲ್ಲಿ ತೋರಿಸಿ, "ಹೌದಲ್ಲವೆ? ಇದು ನಿಜ, ಆದರೆ ನನಗೆ ಇಷ್ಟು ದಿನ ಹೊಳೆಯಲಿಲ್ಲವೇಕೆ?" ಎಂದು ನಾವು ಮೂಗಿನ ಮೇಲೆ ಬೆರಳಿಡುವಂತೆ ಮಾಡುತ್ತದೆ. ವಿಚಾರಭೃಂಗದ ಬೆನ್ನೇರಿ ಹೊರಟ ಸಾಹಸಿಗ ಹರಟೆಗಾರ ಎತ್ತ ಸಾಗುತ್ತಾನೋ ಯಾರು ಬಲ್ಲರು? ಆದರೆ ಒಂದೊಂದು ನಿಮಿಷವೂ ಚಿರಪರಿಚಿತವಾದ ಜಗತ್ತು ನವೀನ ರೂಪಗಳನ್ನು ತಾಳುತ್ತದೆ. ಈ ನವೀನತೆಯೇ ಹರಟೆಯ ತಿರುಳು. ಸಾಮಾನ್ಯ ಹರಟೆಗೂ, ಸಾಹಿತ್ಯದ ಪದವಿಗೇರುವ ಹರಟೆಗೂ ಇರುವ ಮುಖ್ಯ ವ್ಯತ್ಯಾಸ ಇದೇ: ಸಾಮಾನ್ಯ ಹರಟೆ ವಿಷಯಕ್ಕೆ ಹೊಸ ಹಿರಿಮೆಯನ್ನಾಗಲಿ, ಅರ್ಥವನ್ನಾಗಲಿ ಕೊಡಲಾರದು, ಅದನ್ನು ಹೊಸ ಬೆಳಕಿನಲ್ಲಿ ತೋರಿಸಲಾರದು. ತನ್ನ ದಿವಾನಖಾನೆಯನ್ನು ಕುರಿತು ಹರಟೆ ಹೊಡೆಯುವ ಹರಟೆಗಾರ ಸಲಿಗೆಯ ಜೀವಂತ ಸೌಂದರ್ಯಕ್ಕೂ

ಪಾಷಾಣ ಹೃದಯದ ನಿಶ್ಚಲಸೌಂದರ್ಯಕ್ಕೂ ಇರುವ ವ್ಯತ್ಯಾಸವನ್ನು ಕಾಣಿಸುತ್ತಾನೆ.

ಸಿಟಿಯ ಬಸ್ಸನ್ನು ಗುಲಾಬಿಯ ಗುಡಿಯಾಗಿ ಕಾಣಬಲ್ಲ ಅವನು. ನಾವು ದಿನವೂ ಸಾವಿರ ಸಲ ಕಾಲಕೆಳಗೆ ತುಳಿಯುವ ಬೀದಿ ಜೀವನದಲ್ಲಿ ಎಂ-ತಹ ಪಾತ್ರವನ್ನೂ ವಹಿಸುತ್ತದೆ ಎನ್ನುವುದನ್ನು ಹರಟೆಗಾರ ತೋರಿಸಿಕೊಡುತ್ತಾನೆ. ಕಸ-ರಸವನ್ನು ಕುರಿತು ಮಾತನಾಡಲು ಹೊರಟವನು, "ಕೋಟ್ಯಾಧೀಶ್ವರರಾದ ಹಲವು ಪತ್ರಿಕಾಲಯ ಮಾಲೀಕರು ಹಲಕೆಲವು ರೈಲು ಅನಾಹುತಗಳನ್ನೂ, ಆತ್ಮಹತ್ಯೆಗಳನ್ನೂ, ಕನ್ಯಾಪಹರಣಗಳನ್ನೂ, ಹೇಳಿ ಮಾಡಿಸಿದರೂ ಆಶ್ಚರ್ಯ ಪಡಬೇಕಾಗಿಲ್ಲ. ವಾಚಕರ ರುಚಿಗೆ ತಕ್ಕಂತೆ ವ್ಯಾಜ್ಯಗಳನ್ನೊದಗಿಸುವುದು ತಾನೆ ಪತ್ರಿಕಾಕರ್ತರ ಕರ್ತವ್ಯ ? ಕಸವೇ ನಮಗೆ ರಸವಾದರೆ, ಅವರು ಜಗತ್ತಿನ ಕಸವನ್ನೆಲ್ಲ ಗುಡಿಸಿ ತಂದು, ನಮ್ಮ ಹೊಸಲಲ್ಲಿ ಗುಡ್ಡೆಹಾಕುವುದಕ್ಕೂ ಸಿದ್ಧ,'' ಎನ್ನುವ ಎಚ್ಚರಿಕೆಯನ್ನು ಕೊಡುತ್ತಾನೆ. ಸ್ವತಂತ್ರ ವಿಚಾರಧಾರೆಯಿದ್ದರೆ ಹರಟೆ ಬದಕುತ್ತದೆ, ಒಂದು ವಿಷಯವನ್ನು ಕುರಿತು ಎಲ್ಲರಿಗೂ ತಿಳಿದಿರುವ ಹಳೆಯ ಮಾತುಗಳನ್ನು, ವಿಚಾರ ರೀತಿಯನ್ನು ಮಾತ್ರ ಕೊಡಬಲ್ಲ ಹರಟೆ ಸತ್ತು ಹುಟ್ಟಿದ ಮಗುವಿನಂತೆ.

### ಸಹನೆ ಮತ್ತು ಹಾಸ್ಯ

ಆದರೆ ಸ್ವತಂತ್ರ ವಿಚಾರಶಕ್ತಿ ಮಾತ್ರವೇ ಹರಟೆಗಾರನಿಗೆ ಸಾಲದು. ಇದರೊಂದಿಗೆ ಅವನಿಗಿರಬೇಕಾದ ಎರಡು ಅಗತ್ಯ ಗುಣಗಳು ಸಹನೆ ಮತ್ತು ಹಾಸ್ಯ. ಸಹನೆ ಎನ್ನುವ ಪದವನ್ನು ಇಲ್ಲಿ ನಾವು ವಿಶಾಲವಾದ ರೀತಿಯಲ್ಲಿ ಅರ್ಥಮಾಡಬೇಕು. ಸಹನೆ ಎನ್ನುವುದು ಇತರರ ವಿಚಾರದೃಷ್ಟಿಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಮತ್ತು ಎಲ್ಲ ವಸ್ತುಗಳ ವಿಷಯದಲ್ಲಿ ಸಹಾನುಭೂತಿ ಇವೆರಡನ್ನೂ ಒಳಗೊಂಡಿದೆ. ಇದಿಲ್ಲದಿದ್ದರೆ ಹರಟೆಗಾರ ಸಂಕುಚಿತ ದೃಷ್ಟಿಯಿಂದ ಯಾವುದೋ ಒಂದು ದೃಷ್ಟಿಯನ್ನೇ ಒತ್ತಾಯಮಾಡುವ ವಕೀಲನಾಗುತ್ತಾನೆ, ಇಲ್ಲವೆ ದುರಹಂಕಾರಿಯಾಗುತ್ತಾನೆ. ಅದಕ್ಕಿಂತ ಮುಖ್ಯವಾಗಿ, ಸಹನೆ-ಸಹಾನುಭೂತಿಯಿಲ್ಲದೆ ಅತ ಮೇಲು-ಕೀಳು ಎನ್ನುವ ತಾರತಮ್ಯಗಳನ್ನು ಮಾಡಲು ಪ್ರಾರಂಭಿಸುತ್ತಾನೆ. ಇದಾಯಿತೆಂದರೆ ಅವನ ವಿಚಾರಶಕ್ತಿಗೆ ಶೃಂಖಲೆ ತೊಡಿಸಿದಂತೆ, ಅಲ್ಲಿಗೆ ಅವನ ಹರಟೆಗಳ ಸತ್ವ ಇಳಿದಂತೆ. ಕಲ್ಪನೆಗೂ ಸಂಕುಚಿತ ಮನೋವೃತ್ತಿಗೂ ಸ್ನೇಹ ಸಲ್ಲದು. ಕಲ್ಪನೆಯ ಬಲವಿಲ್ಲದ ಹರಟೆಗಾರ ಭೂಮಿಯಿಂದ ಬಹು ಎತ್ತರಕ್ಕೆ ಹಾರಲಾರ.

ಭಾರತೀಯರಿಗೆ ಹಾಸ್ಯದೃಷ್ಟಿ ಬಹಳ ಕಡಿಮೆ ಎನ್ನುವುದು ಹೊರಗಿನವರಾಡುವ ಮಾತು. ವೇದಾಂತಪ್ರಿಯರು, ಕರ್ಮತತ್ವದ ಅನುಯಾಯಿಗಳು ಅವರು, ಆವರಿಗೆ ಹಾಸ್ಯದ ದೃಷ್ಟಿಯಿಲ್ಲ ಎನ್ನುವುದು ಅವರ ಮತ. ಈ ಮಾತು ಸಂಪೂರ್ಣವಾಗಿ ಸುಳ್ಳು ಎಂದೂ ಎನ್ನುವಂತಿಲ್ಲ. ಆದರೆ ತಿಳಿಹಾಸ್ಯವಿಲ್ಲದೆ ಹರಟೆಗಾರ ಯಶಸ್ಸನ್ನು ಪಡೆಯಲಾರ. ಎಲ್ಲ ವಸ್ತುವಿನ ಹಾಸ್ಯಮುಖವನ್ನೂ ಕಾಣಬಲ್ಲವನೇ ಪ್ರತಿವಸ್ತುವಿನ ಬೆಲೆಯನ್ನು ಖಚಿತವಾಗಿ ಗೊತ್ತುಮಾಡಿಕೊಳ್ಳಬಲ್ಲ, ಹಾಸ್ಯಶಕ್ತಿ ಹರಟೆಯನ್ನು ಸ್ವಾರಸ್ಯಕರವಾಗಿ ಮಾಡಲು ಮಾತ್ರ ಅಗತ್ಯವಲ್ಲ; ಏಕೆಂದರೆ ಒಮ್ಮೊಮ್ಮೆ ಪ್ರತ್ಯಕ್ಷವಾಗಿ ಹಾಸ್ಯ ಹೆಜ್ಜೆ ಇಡದ ಉತ್ತಮ ಹರಟೆ ಬರಬಹುದು. ( ಇದು ಬಹಳ ವಿರಳ ಎಂದು ಒಪ್ಪಿಕೊಳ್ಳುತ್ತೇನೆ. ) ಆದರೆ ಹಾಸ್ಯಶಕ್ತಿ ಇಲ್ಲದಿದ್ದರೆ ದೃಷ್ಟಿಯ ಸಮತೂಕ ಬರಲಾರದು. ಹಾಸ್ಯಶಕ್ತಿಯ ಪರೀಕ್ಷೆ ತನ್ನ ಲೋಪದೋಷಗಳನ್ನು ತಾನೇ ಕಂಡು ನಗಬಲ್ಲ ಮನೋಧರ್ಮ. ತನ್ನ ದೊಡ್ಡ ಕೈಗಡಿಯಾರವನ್ನು ಕಂಡು ನಿವೃತ್ತ ಸರಕಾರಿ ನೌಕರರಿಂದ "ರಾಯರ ನಿಮ್ಮ ಟವರಕ್ಲಾಕಿನ ವ್ಯಾಳ್ಯಾ ಹೇಳ್ರಿ" ಎಂದು ಕೇಳಿಸಿಕೊಂಡು, ಅದನ್ನು ಹೇಳಿಕೊಂಡು ನಗುವ, "ನನ್ನ ರಜ ಮಂಜೂರಾಗಿ ಬಂದೊಡನೆ ಹೊರಡುವ ಏರ್ಪಾಡು ಮಾಡಿದೆವು. ಏನೇನು ಸಾಮಾನು ತೆಗೆದುಕೊಂಡು ಹೋಗಬೇಕೆಂದು ಯೋಚನೆ ಮಾಡಿ ನಮ್ಮ ತಾಯಿ ಅದನ್ನೆಲ್ಲ ತೆಗೆದಿಟ್ಟಿದ್ದರು. ಲಲಿತೆ ಎಲ್ಲವನ್ನೂ ಅಣಿಯಾಗಿ ಗಂಟು ಕಟ್ಟಿದಳು. ನಾನು "ಅದನ್ನು ಮರೆಯಬೇಡ, ಇದನ್ನು ಮರೆಯಬೇಡ'' ಎಂದು ಕೂಗಾಡಿದೆ, ಹೀಗೆ ಮೂವರೂ ಕಷ್ಟಪಟ್ಟು ಎಲ್ಲವನ್ನೂ ಸಿದ್ಧಪಡಿಸಿದೆವು'' ಎಂದು ಒಳನಗು ನಗುವ, "ನಾನು ಭಾರದಡಿ ಮನುಷ್ಯನಲ್ಲ, ಯಾವ ತಕ್ಕಡಿಯಲ್ಲಿ ಹಾಕಿ ತೂಗಿದರೂ ನನ್ನ ತೂಕ ಎಂಬತ್ತು ಪೌಂಡುಗಳಿಗೆ ಮೀರುವದಿಲ್ಲ. ನನಗೆ ವಯಸ್ಸು ಹೆಚ್ಚಾಗಿದ್ದರೂ ನಾನು ದೊಡ್ಡಮನುಷ್ಯನೆಂಬ ಭಾವನೆ ಯಾರಿಗೂ ಬರುವುದಿಲ್ಲ'' ಎಂದು ತನ್ನ 'ಸಣ್ಣತನ' ವನ್ನು ತಾನೇ ನಿರೂಪಿಸಿಕೊಂಡು ಹಾಸ್ಯಮಾಡಿಕೊಳ್ಳುವ, ತನ್ನ ಪ್ರಣಯಯಾತ್ರೆಯ ಇಲ್ಲವೇ ಹೆಂಡತಿಗೆ ಪಾಠ ಹೇಳಿಕೊಡುವ ಪ್ರಯತ್ನದ ವೈಖರಿಯನ್ನು ಸಂತೋಷದಿಂದ ಹೇಳಿಕೊಳ್ಳುವ ( ತಿಂದ ನೋವು ! ) ಶಕ್ತಿ ಹರಟೆಗಾರನದು ( ನಾಚಿಕೆಗೇಡಿತನ ಎಂದಾದರೂ ಬೇಕಾದರೆ ಎನ್ನಿ !! )ಹರಟೆಗಾರ ತನ್ನ ವ್ಯಕ್ತಿತ್ವವನ್ನು ನಿಸ್ಸಂಕೋಚವಾಗಿ ಇತರರ ಮುಂದಿಡುತ್ತಾನೆ. ಸಾಮಾನ್ಯವಾಗಿ ಪ್ರಪಂಚದಲ್ಲಿ ಯಾವ ಸುಸಂಸ್ಕೃತ ಮನುಷ್ಯನಿಗೇ ಆಗಲಿ ತನ್ನ ವಿಷಯವನ್ನು ಕುರಿತು ಮಾತನಾಡುವುದು ಹಿತವಲ್ಲದ ಕೆಲಸ. ಅದನ್ನು ಕೇಳುವುದು ಇತರರಿಗೂ ಕಷ್ಟ. ಆದರೆ ಹರಟೆಗಾರನ ಹರಟೆ ಪ್ರತಿಷ್ಠೆಯ, ದುರಹಂಕಾರದ ಆಪಾದನೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದು; ಈ ಹಾಸ್ಯ ಪ್ರವೃತ್ತಿಯಿಂದ. ಹಾಗೆಯೇ ವಿಷಯಕ್ಕನೆ, ಅದು ನೆಗಡಿಯಾಗಲಿ, ಕಾಯಿಲೆಯಾಗಲಿ, ಮೈಸೂರು ರುಮಾಲವಾಗಲಿ, ಪ್ರಣಯ ಯಾತ್ರೆಯಾಗಲಿ, ಕ್ರಮಬಿಂದುವಾಗಲಿ, ಆಡಳಿತ ಭಾಷೆಯಾಗಲಿ ಶಾಂತಿ ಬರುವುದು ಈ ಹಾಸ್ಯಪ್ರವೃತ್ತಿಯಿಂದ. ಹರಟೆ ತೀರ ಗಂಭೀರವಾಗದೆ ತನ್ನ ಲಾಲಿತ್ಯವನ್ನು ಉಳಿಸಿಕೊಳ್ಳುವುದೂ ಈ ಹಾಸ್ಯಪ್ರವೃತ್ತಿಯಿಂದ. ಹರಟೆಗಾರ ತೂಕಡಿಕೆಯ ದೂತನಾಗದೆ ಮನಸ್ಸಿನ

ಲವಲವಿಕೆಯನ್ನು ಬೆಳೆಸುವ ಮಿತ್ರನಾಗುವುದೂ ಇದರಿಂದಲೇ.

ಹರಟೆಯಲ್ಲಿರುವ ಸೊಗಸು ಈ ಹರಟೆಗಾರನ ವ್ಯಕ್ತಿತ್ವದ ಶ್ರೀಮಂತಿಕೆಯೇ. ಹಿರಿಮೆಯ ನಟನೆಯನ್ನು ಮಾಡದ, ವಿಚಾರಪೂರಿತನಾದ, ದೃಷ್ಟಿಯ ಸಮತೂಕವುಳ್ಳ, ಸಹಾನುಭೂತಿಯುಳ್ಳ ನವಿರಾದ ಹಾಸ್ಯವನ್ನು ನೀಡಬಲ್ಲ ವ್ಯಕ್ತಿಯ ಸಂಪರ್ಕವನ್ನು ಹರಟೆ ನೀಡಬಲ್ಲದಾದುದರಿಂದಲೇ ನಾವು ಅದನ್ನು ಅಷ್ಟು ಸವಿಯಲು ಸಾಧ್ಯ.

### ಬಾಹ್ಯನಿಯಮಗಳಿಲ್ಲ

ಹರಟೆಯ ರೂಪವನ್ನು ಕುರಿತು ಕೊನೆಯದಾಗಿ ಒಂದು ಮಾತು. ಹರಟೆಗೆ ಬಾಹ್ಯ ನಿಯಮಗಳಿಲ್ಲ. ಗಾಳಿ ಇಚ್ಛೆ ಬಂದತ್ತ ಹರಿದಂತೆ, ಹರಟೆಗಾರನ ಮನ ಬಾಗಿದತ್ತ ಹರಟೆ ಬಾಗುತ್ತದೆ, ಹರಟೆಗಾರನು ಮನಸ್ಸೇ ಅದಕ್ಕೆ ನಿಯಮ ಎಂದಾಗ ಒಂದು ಪ್ರಶ್ನೆ ಏಳಬಹುದು: ಯಾವ ತತ್ವಕ್ಕೂ ಒಳಗಾಗದ ಸೃಷ್ಟಿ ಕಲೆಯಲ್ಲಿ, ಸಾಹಿತ್ಯದಲ್ಲಿ ಸೇರಬಲ್ಲುದೆ? ಕಲೆ ಸೌಂದರ್ಯದ ಸೃಷ್ಟಿಯಾದರೆ ಎಲ್ಲ ನಿಯಮಗಳನ್ನೂ ಮೀರಿದ ನಿಶ್ಚಿತ ರೂಪವಿಲ್ಲದ ಸೃಷ್ಟಿಕಲಾತ್ಮಕವಾಗಿರಬಲ್ಲುದೆ? ಇದಕ್ಕೆ ಉತ್ತರ ಹರಟೆಯ ನಿಯಮ ಸಾಹಿತ್ಯ ತೋರಿಕೆಯದು ಮಾತ್ರ ಎಂದು. ಹರಟೆ ಹೊರತೋರಿಕೆಗೆ ಸ್ವೇಚ್ಛೆಯಾಗಿ ಕಂಡುಬಂದರೂ ಹರಟೆಯಲ್ಲಿ ಹರಟೆಗಾರನಿಗೆ ಒಂದು ನಿರ್ದಿಷ್ಟ ಗುರಿಯುಂಟು; ಪ್ರತಿ ಹರಟೆಗೂ ಒಂದು ವಿಶಿಷ್ಟಮನಸ್ಥಿತಿ (Mood) ಉಂಟು. ಈ ನಿರ್ದಿಷ್ಟ ಗುರಿ ಹರಟೆಗಾರ ಆರಿಸಿಕೊಂಡ ವಸ್ತುವಿನ ವಿಷಯ ವೈಜ್ಞಾನಿಕವಾದ ನಿಖರ ಜ್ಞಾನವನ್ನು ಕೊಡುವುದಲ್ಲ, ಒಂದು ದೃಷ್ಟಿಯನ್ನು ಒದುಗನ ಮುಂದಿರುವುದು. ಜಿ. ಬಿ. ಫೀಸ್ಕಲಿ "ಇನ್ ಕ್ರಿಮ್‌ಸನ್ ಸಿಲ್ಕ್" ಎನ್ನುವ ಸೊಗಸಾದ, ಅದ್ಭುತವಾದ ಹರಟೆಯನ್ನು ಬರೆದಿದ್ದಾನೆ. ಇದರಲ್ಲಿ ಹೆಜ್ಜೆಯ ತಯಾರಿಕೆ ಅಥವಾ ರೇಷ್ಮೆಗೆ ಈ ಕೆಂಪು ಬಣ್ಣವನ್ನು ಕೊಡುವ ವಿಧಾನವನ್ನು ಕುರಿತು ಒಂದಕ್ಷರವೂ ಇಲ್ಲ; ಅದರೆ ಇದು ಮನುಷ್ಯನ ಮನಸ್ಸಿನ ವೈಚಿತ್ರ್ಯ, ಅದರಲ್ಲಿ ಆಗುವ ಆಶ್ಚರ್ಯಕರ ಬದಲಾವಣೆಗಳು, ಒಬ್ಬನೇ ವ್ಯಕ್ತಿಯ ಹಲವು ಮುಖಗಳು ಇವುಗಳ ನಿರೂಪಣೆಯುಂಟು. ಲ್ಯಾಂಬನ ಒಂದು ಹರಟೆ ಹೆಸರು "ಓಲ್ಡ್ ಚೈನ್"; ಅದು ಸಾಧಿಸುವುದು ಹಿತಕರವಾದ ಬಡತನ, ಸಾಹಸದ ಸಂತಸವಿಲ್ಲದ ಶ್ರೀಮಂತಿಕೆ ಇವುಗಳ ಹೋಲಿಕೆಯ ಚಿತ್ರ ನಿರೂಪಣೆ. 'ಆಡಳಿತ ಭಾಷೆ' ಎನ್ನುವ ತಲೆ ಬರಹವಿರುವ ಹರಟೆ ಭಾರತದ ಆಡಳಿತ ಭಾಷೆ ಇಂಗ್ಲೀಷ ಆಗಿರಬೇಕೆ, ಹಿಂದಿ ಆಗಿರಬೇಕೆ ಎನ್ನುವ ಪ್ರಶ್ನೆಯನ್ನು ಮುಟ್ಟುವುದೇ ಇಲ್ಲ, ಆಡಳಿತದ ಪ್ರತಿನಿತ್ಯದ ವ್ಯವಹಾರದ ಭಾಷೆಯ ವೈಚಿತ್ರ್ಯವನ್ನು ಎತ್ತಿತೋರಿಸುತ್ತದೆ. ತನ್ನ ನಿರ್ದಿಷ್ಟ ಗುರಿಯನ್ನು ಮುಟ್ಟಲು ತನ್ನ ಪೂರ್ವನಿಶ್ಚಿತ ಮನಸ್ಥಿತಿಗೆ ಭಂಗಬರದಂತೆ ನೋಡಿಕೊಳ್ಳಲು ಹರಟೆಗಾರ ಎಚ್ಚರಿಕೆ ವಹಿಸಬೇಕು.

ಹರಟೆಯ ಪ್ರವೃತ್ತಿ, ಅಂಶ ಪ್ರಾಚೀನವಾದವು. ಆದರೆ ಸಾಹಿತ್ಯದ ಒಂದು ರೂಪ ಎನ್ನಿಸಿದ ಹರಟೆ ಇಂಗ್ಲಂಡಿನಲ್ಲಿ ಕಳೆದ ಶತಮಾನದಲ್ಲಿ ಪ್ರಾರಂಭವಾದುದು, ನಮ್ಮಲ್ಲಿ ಈ ಶತಮಾನದಲ್ಲಿ ಹುಟ್ಟಿದುದು. ಜೀವನ ಗಭೀರವಾದಷ್ಟೂ, ಸಮಸ್ಯಾತ್ಮಕವಾದಷ್ಟೂ, ಸಂಕುಚಿತದೃಷ್ಟಿ ಬೆಳೆದಷ್ಟೂ ಹರಟೆ ಮಾಡಬಲ್ಲ ಸೇವೆಯ ಮಟ್ಟ ಹೆಚ್ಚುತ್ತದೆ. ಹರಟೆ ಮನಸ್ಸಿಗೆ ಉಲ್ಲಾಸವನ್ನು ತರಬಲ್ಲದು. ವಿಚಾರಶಕ್ತಿಯನ್ನು ಬೆಳಸಬಲ್ಲದೂ ಸೊಗಸಾದ ವ್ಯಕ್ತಿಗಳನ್ನು ನಮ್ಮ ಸಮೀಪಕ್ಕೆ ತಂದು ಅವರ ಸ್ನೇಹದ ಭಾಗ್ಯವನ್ನು ನೀಡಬಲ್ಲುದು, ಬರಡು ದೈನಿಕ ಜೀವನಕ್ಕೆ ಹಾಸ್ಯ ಗಂಗೆಯನ್ನು ತಂದುಕೊಡಬಲ್ಲುದು.

---

ನೀವು ಉತ್ತರ ಹೇಳಬಹುದಾದಂಥ ಪ್ರಶ್ನೆಗಳನ್ನು ನಿಮ್ಮ ಮಕ್ಕಳು ಕೇಳತೊಡಗಿದಾಗ ಅವರು ದೊಡ್ಡವರಾಗುತ್ತಿದ್ದಾರೆಂದು ತಿಳಿಯಬಹುದು.

—ಜಾನ್ ಪ್ಲೋಪ್



# ಹವಾಮಾನ ಮುನ್ಸೂಚನೆ

ಲೇ: ಯು. ಆರ್. ಆಚಾರ್ಯ

ಪ್ರತಿ ಒಬ್ಬ ಮನುಷ್ಯನೂ ತನ್ನ ಭವಿಷ್ಯವನ್ನು ತಿಳಿದುಕೊಳ್ಳಲು ಆಸೆ ಪಡುತ್ತಾನೆ. ಇದಕ್ಕಾಗಿ ಆತನು ತನ್ನ ಜಾತಕವನ್ನು ಜ್ಯೋತಿಷಿಗಳಿಗೆ ಆಗಿಂದಾಗ್ಗೆ ತೋರಿಸುತ್ತಾನೆ. ಆತನ ಜನನ ಕಾಲದಲ್ಲಿ ಖಗೋಳದಲ್ಲಿ ವಿವಿಧ ಗ್ರಹಗಳು ಇದ್ದ ಸ್ಥಾನದ ಆಧಾರದಮೇಲೆ ಜೋಯಿಸರು ಆತನ ಭವಿಷ್ಯವನ್ನು ಹೇಳುತ್ತಾರೆ. ಜನನಕಾಲದಲ್ಲಿ ಚಂದ್ರನು ಇದ್ದ ಸ್ಥಾನದ ಮೇಲೆ ಹೊಂದಿಕೊಂಡು ರಾಶಿಭವಿಷ್ಯವನ್ನು ಹೇಳುವ ಕ್ರಮವಿದೆ. ರಾಶಿ ಭವಿಷ್ಯವನ್ನು ಎಲ್ಲಾ ವಾರಪತ್ರಿಕೆ ಮತ್ತು ಮಾಸ ಪತ್ರಿಕೆಗಳಲ್ಲಿ ಪ್ರಕಟಿಸುತ್ತಾರೆ. ಪತ್ರಿಕೆಗಳು ಕೈಸೇರಿದೊಡನೆಯೇ ಪ್ರತಿ ಒಬ್ಬನೂ ತನ್ನ ತನ್ನ ಭವಿಷ್ಯವನ್ನು ಮೊದಲು ಓದುವುದರಿಂದ ಈ ರಾಶಿ ಭವಿಷ್ಯವು ಎಷ್ಟೊಂದು ಜನಪ್ರಿಯವಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ. ಪ್ರತಿ ಒಬ್ಬ ವ್ಯಕ್ತಿಗೂ 'ತನ್ನ' ಗಿಂತ ಹೆಚ್ಚಿನ ಆಪ್ತರಿಲ್ಲವಷ್ಟೆ!

## ಗ್ರಹಗಳಿಗೂ ದೈನಂದಿನ ಹವೆಗೂ ಸಂಬಂಧವಿಲ್ಲ

ಅಂತೆಯೇ ಹವಾಮಾನದ ಭವಿಷ್ಯವನ್ನು ಸೂಚಿಸುವ ಒಂದು ಸರಕಾರದ ಇಲಾಖೆಯೇ ಇದೆ. ಹವಾಮಾನದ ಮುನ್ಸೂಚನೆಯನ್ನು ದೈನಿಕ ಪತ್ರಿಕೆಗಳಲ್ಲಿ ಪ್ರಕಟಿಸುತ್ತಾರೆ ಮತ್ತು ಆಕಾಶ ವಾಣಿಯ ಮೂಲಕ ಪ್ರಸಾರ ಮಾಡುತ್ತಾರೆ. ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳಲ್ಲಿ ಟೆಲಿವಿಜನ್ ಮೂಲಕವೂ ಪ್ರದರ್ಶಿಸುತ್ತಾರೆ. ಈ ಇಲಾಖೆಯವರು ಹವಾಮಾನದ ಭವಿಷ್ಯವನ್ನು ಹೇಗೆ ಕಂಡುಹಿಡಿಯುವರು ಎಂದು ನೀವು ಆಶ್ಚರ್ಯಪಡಬಹುದು. ಈ ಭವಿಷ್ಯವನ್ನು ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೂ ಗ್ರಹಗಳ ಸ್ಥಾನದ ಮೇಲೂ, ಅಂದಿನ ನಿತ್ಯ ನಕ್ಷತ್ರ ಮಹಾ ನಕ್ಷತ್ರದ ಮೇಲೂ ಗುಣಿಸಿ ಹೇಳುವರೆಂದು ಕೆಲವರು ನೆನಸಬಹುದು. ಆದರೆ ಗ್ರಹಗಳಿಗೂ, ದೈನಂದಿನ ಹವೆಗೂ ಯಾವ ಸಂಬಂಧವೂ ಇಲ್ಲ.

ಹಳ್ಳಿಯಲ್ಲಿ ಹಿರಿಯರು ಈಗಲೂ ಮಹಾನಕ್ಷತ್ರದ ಆಧಾರದ ಮೇಲೆ ಆ ಊರಿನ ಹವೆಯ ಭವಿಷ್ಯವನ್ನು ಹೇಳುವ ವಾಡಿಕೆಯಿದೆ. ಈ ಭವಿಷ್ಯ ವಾಣಿಯು ಒಮ್ಮೊಮ್ಮೆ ಸರಿಯಾಗುವುದೂ ಇದೆ. ಇದರ ಮರ್ಮವೇನು? ಭೂಮಿಯು ಸ್ವಲ್ಪ ವಾಲಿಕೊಂಡು ವರ್ಷಕ್ಕೊಮ್ಮೆ ಸೂರ್ಯನಿಗೆ ಪ್ರದಕ್ಷಿಣೆ ಬರುವಾಗ ನಮಗೆ ಮಳೆಗಾಲ, ಚಳಿಗಾಲ ಬೇಸಿಗೆಕಾಲ ಎಂಬ ಹವಾಭೇದ ಉಂಟಾಗುತ್ತದೆ. ಭೂಮಿಯಿಂದ ಕಂಡಾಗ ನಮಗೆ ಸೂರ್ಯನೇ ವರ್ಷಕ್ಕೊಮ್ಮೆ ಖಗೋಳದಲ್ಲಿ ಸುತ್ತು ಬರುವಂತೆ ಕಾಣುತ್ತದೆ. ಆದುದರಿಂದ ಸೂರ್ಯನ ಸ್ಥಾನಕ್ಕೂ ನಮ್ಮ ಹವೆಗೂ ಸಂಬಂಧವಿದೆ. ಸೂರ್ಯನ ಪಥದಲ್ಲಿ ೨೭ ನಕ್ಷತ್ರಗಳಿವೆ. ಮತ್ತು ಅವನು ಒಂದೊಂದು ನಕ್ಷತ್ರದಲ್ಲಿ ಸುಮಾರು ೧೩-೧೪ ದಿವಸ ಇರುತ್ತಾನೆ. ಸೂರ್ಯನು ಇರುವ ನಕ್ಷತ್ರವನ್ನು ನಾವು ಮಹಾನಕ್ಷತ್ರವೆಂದು ಕರೆಯುತ್ತೇವೆ. ಆದುದರಿಂದ ಮಹಾನಕ್ಷತ್ರಕ್ಕೂ, ಯಾವುದಾದರೊಂದು ಊರಿನ ಸರಾಸರಿ ಹವೆಗೂ ಸಂಬಂಧವಿದೆ. ಆದರೆ ಸರಾಸರಿ ಹವೆಗೂ ದೈನಂದಿನ ಹವೆಗೂ ಬಹಳ ವ್ಯತ್ಯಾಸವಿದೆ. ಮಳೆಗಾಲದಲ್ಲಿ ಸ್ಥೂಲವಾಗಿ ಹೇಳುವುದಾದರೆ ಮಳೆ ಬರುವುದು ಸ್ವಾಭಾವಿಕವೇ. ಆದರೆ ಪ್ರತಿದಿನವೂ ಮಳೆ ಬರಬೇಕೆಂದಿಲ್ಲ ಮತ್ತು ಮಳೆಯ ತೀಕ್ಷ್ಣತೆಯೂ ಒಂದೇ ತೆರನಾಗಬೇಕಿಲ್ಲ. ಮಹಾನಕ್ಷತ್ರದ ಆಧಾರದ ಮೇಲೆ ಹೇಳುವುದು ಆ ಋತುವಿಗೆ, ಆ ಕಾಲಕ್ಕೆ ಸಂಬಂಧಪಟ್ಟ ಸರಾಸರಿ ಹವೆ ಮಾತ್ರ—ದೈನಂದಿನ ಹವೆಯಲ್ಲ. ಮತ್ತು ಸರಾಸರಿ ಹವೆಯು ಆಯಾಯ ಊರಿಗೆ ಮಾತ್ರ ಅನ್ವಯಿಸುತ್ತದೆ. ಎಲ್ಲ ಊರುಗಳಿಗೂ ಅನ್ವಯಿಸುವುದಿಲ್ಲ. ಉದಾಹರಣೆಗೆ ಮಂಗಳೂರು ಜಿಲ್ಲೆಯಲ್ಲಿ ಜೂನ್ ತಿಂಗಳಿನಲ್ಲಿ ಚನ್ನಾಗಿ ಮಳೆ ಬರುವುದು. ಸುಮಾರು ಜೂನ್ ೨೧ಕ್ಕೆ 'ಆದ್ರಾ' ಮಹಾನಕ್ಷತ್ರ ಆರಂಭವಾಗುವುದು. ಆದುದರಿಂದ ಯಾರಾದರೂ ಈ ಜಿಲ್ಲೆಯವರು 'ಆದ್ರಾ' ಮಹಾನಕ್ಷತ್ರ ಆರಂಭವಾದಾಗ ಮಳೆ ಬರುವುದು ಎಂಬ ಭವಿಷ್ಯವನ್ನು ಹೇಳಿದರೆ ತಪ್ಪಾಗದು. ಆದರೆ ಆದ್ರಾ ನಕ್ಷತ್ರಕ್ಕೂ ಮಳೆಗೂ ಯಾವ ಸಂಬಂಧವೂ ಇಲ್ಲ. ಏಕೆಂದರೆ ಇದೇ ನಕ್ಷತ್ರದಲ್ಲಿ ದಿಲ್ಲಿಯಲ್ಲಿ ಮಳೆ ಇಲ್ಲ. ರಣಬಿಸಿಲು ಕಾಯುತ್ತದೆ. ಜೂನ ೨೧ಕ್ಕೆ ಆರಂಭವಾಗುವ ಆದ್ರಾ ನಕ್ಷತ್ರವು ಇಡೀ ಹಿಂದೂ ದೇಶಕ್ಕೆ, ಹೆಚ್ಚು ಕಡಿಮೆ ಇಡೀ ಭೂಲೋಕಕ್ಕೆ ಅನ್ವಯಿಸುತ್ತದೆ. ಆದರೆ ಭೂಲೋಕದ ಎಲ್ಲ ಕಡೆಗಳಲ್ಲೂ ಒಂದೇ ತೆರನಾದ ಹವೆ ಇರುವುದಿಲ್ಲ. ಆದುದರಿಂದ ಮಹಾನಕ್ಷತ್ರಕ್ಕೂ ಹವಾಮಾನಕ್ಕೂ ಕೇವಲ ಪ್ರಾದೇಶಿಕ ಕಾಕತಾಳೀಯ ಸಂಬಂಧ ಮಾತ್ರ ಇರುವುದು. ದೈನಂದಿನ ಹವಾಮಾನವು ಗ್ರಹಗಳಮೇಲಾಗಲೀ ನಕ್ಷತ್ರದ ಮೇಲಾಗಲೀ ತಿಥಿವಾರದ ಮೇಲಾಗಲೀ ಹೊಂದಿಕೊಂಡಿಲ್ಲವೆಂದು ನಿರ್ಧಾರವಾಗಿ ಹೇಳಬಹುದು. ಹವಾಮಾನದ ಮುನ್ಸೂಚನೆಗೆ ಪಂಚಾಂಗವು ಸಹಾಯವಾಗಲಾರದು.

## ಯಾರ್ಯಾರಿಗೆ ಅವಶ್ಯಕವಾಗಿದೆ

ಹವಾಮಾನದ ಮುನ್ಸೂಚನೆಯಿಂದ ರೈತರಿಗೆ ಬಹಳ ಉಪಕಾರವಿದೆ. ಮಳೆಯಿಂದ ತಾನೇ ಬೆಳೆ. ಮಳೆಯ ಮೇಲೆ ಹೊಂದಿಕೊಂಡು ನೆಡುವ ಮತ್ತು ಕೊಯ್ಯುವ ಕೆಲಸ ನಡೆಯಬೇಕು. ನೆರೆ ಬರುವ ಸಂಭವವಿದ್ದರೆ ಸ್ವಲ್ಪ ಬೇಗನೇ ಕೊಯ್ದು ಬೆಳೆಯನ್ನು ಉಳಿಸಿಕೊಳ್ಳಬಹುದು. ಮದುವೆ ಮುಂ

ಜಿಯು ಏರ್ಪಾಡಿಗೂ, ಪಂದ್ಯಾಟ ಬಯಲಾಟದ ಏರ್ಪಾಡಿಗೂ ಹವೆಯ ಮುನ್ಸೂಚನೆ ಅತ್ಯಾವಶ್ಯಕ. ವ್ಯಾಪಾರಸ್ಥರಿಗೂ, ಸಿನೇಮಾ ತೆಗೆಯುವವರಿಗೂ ಮಳೆಯ ಮುನ್ಸೂಚನೆಯಿಂದ ಲಾಭವಿದೆ. ನೀರಾವರಿಯ ಇಂಜಿನೀಯರರಿಗಂತೂ ಮಳೆ ಮತ್ತು ನೆರೆಯ ಮುನ್ಸೂಚನೆ ಅತ್ಯಾವಶ್ಯಕವಾಗಿದೆ. ನಡುಮಧ್ಯ ಸಾಗರದಲ್ಲಿ ಸುಳಿಯುವ ಸುಂಟರ ಗಾಳಿಯ ಸುದ್ದಿ ನಾವಿಕರಿಗೆ ಅತ್ಯುಪಯುಕ್ತವಾಗಿದೆ. ಎಷ್ಟೋ ವೇಳೆ ಹವೆಯ ಭವಿಷ್ಯವಾಣಿಯು, ಹಲವಾರು ಬೆಸ್ತರಿಗೂ ಕಡಲಕರೆಯಲ್ಲಿ ಹಾಯ್ದು ಡೋಣಿಯನ್ನು ಚಲಾಯಿಸುವವರಿಗೂ ಜೀವದಾನವನ್ನು ಮಾಡಿರುವುದೆಂದರೆ ಅತಿಶಯೋಕ್ತಿಯಾಗಲಾರದು. ಆದರೆ ಇವರೆಲ್ಲರಿಗಿಂತಲೂ ಮಿಗಿಲಾಗಿ ವಿಮಾನ ಸಂಚಾಲಕರಿಗೆ ಈ ತರದ ಮುನ್ಸೂಚನೆಯು ಅತ್ಯಾವಶ್ಯಕವಾಗಿದೆ. ಏಕೆಂದರೆ ವಿಮಾನವು ವಾಯುಮಂಡಲದಲ್ಲಿ ಹಾರುತ್ತದೆ. ಗುಡುಗು ಮಿಂಚು, ಮಳೆ ಮೋಡವೂ ವಾಯುಮಂಡಲದಲ್ಲೇ ಜರಗುತ್ತವೆ. ವಿಮಾನಸಂಚಾರಕ್ಕೆ ಈ ತರದ ಗುಡುಗು ಮಿಂಚು, ಮೋಡ, ಮಳೆಯು ಕಂಟಕಪ್ರಾಯವಾಗಿದೆ. ವಿಮಾನವು ಒಂದು ನಿಲ್ದಾಣದಿಂದ ಹೊರಟು ಇನ್ನೊಂದು ನಿಲ್ದಾಣಕ್ಕೆ ಪ್ರಯಾಣ ಬೆಳೆಸುವ ಮುಂಚೆ ಅದರ ದಾರಿಯಲ್ಲಿ ವಿವಿಧ ಮಟ್ಟಗಳಲ್ಲಿ ಗಾಳಿ ಯಾವ ದಿಕ್ಕಿನಿಂದ ಯಾವ ವೇಗದಲ್ಲಿ ಬೀಸುತ್ತದೆ, ವಾಯುಮಂಡಲದಲ್ಲಿ ಎಷ್ಟು ದೂರದ ವರೆಗೆ ನೋಡಲು ಸಾಧ್ಯವಾಗುತ್ತದೆ, ದಾರಿಯುದ್ದಕ್ಕೂ ಹವಾಮಾನದ ಸ್ಥಿತಿಗತಿ ಹೇಗಿದೆ ಎಂಬುದನ್ನು ಅದರ ಸಂಚಾಲಕನು ವಿವರವಾಗಿ ತಿಳಿದುಕೊಳ್ಳಬೇಕಾಗುತ್ತದೆ. ಹವೆಯು ಪ್ರತಿಕೂಲವಾಗಿದ್ದರೆ ಅವನು ಆ ಪ್ರಯಾಣವನ್ನೇ ನಿಲ್ಲಿಸುತ್ತಾನೆ. ಇಲ್ಲವೇ ದುಷ್ಟ ಹವೆಯ ಭಾಗವನ್ನು ಬಿಟ್ಟು ಅದಕ್ಕೆ ಸುತ್ತಾಗಿ ತನ್ನ ಗುರಿಯನ್ನು ತಲಪುತ್ತಾನೆ. ಈ ತರದ ಹವಾಮಾನದ ಮುನ್ಸೂಚನೆಯನ್ನು ಕೊಡಲು ನಮಗೆ ಹೇಗೆ ಸಾಧ್ಯವಾಗುತ್ತದೆಂದು ಸ್ಥೂಲವಾಗಿ ಈ ಲೇಖನದಲ್ಲಿ ವಿವರಿಸಲಾಗಿದೆ.

## ಹವಾಮಂಡಲ

ನಮ್ಮ ಭೂಮಿಯು ಸುತ್ತು ಸುಮಾರು ೫೦೦ ಮೈಲು ಎತ್ತರದ ವರೆಗೆ ವಾತಾವರಣವಿದೆ. ಈ ವಾತಾರಣವು ಭೂಮಿಗೆ ಅಂಟಿಕೊಂಡಿದ್ದು ಅದರ ಜೊತೆಯಲ್ಲೆ ದಿನಕ್ಕೊಮ್ಮೆ ತಿರುಗುತ್ತದೆ. ವಾತಾವರಣವು ಭೂಮಿಯಿಂದ ಮೇಲೆ ಹೋದಂತೆ ವಿರಳವಾಗುತ್ತ ಹೋಗುತ್ತದೆ. ಸುಮಾರು ೩-೪ ಮೈಲು ಎತ್ತರದ ಒಳಗೇ ವಾತಾವರಣದ ಒಟ್ಟು ದ್ರವ್ಯರಾಶಿಯ ಅರ್ಧಾಂಶವು ಅಡಕವಾಗಿದೆ. ನಾವು ಮೇಲೆ ಏರಿದಂತೆ ಸೂರ್ಯನಿಗೆ ಸಮೀಪ ಹೋಗುವೆವಾದರೂ ವಾತಾವರಣದ ಶಾಕ ಕಡಿಮೆಯಾಗುತ್ತ ಹೋಗುವುದು. (ಆದುದರಿಂದಲೇ ಸೆಕೆ ಕಾಲಕ್ಕೆ ಜನರು ಸಿಮ್ಲಾ, ನೀಲಗಿರಿ ಮೊದಲಾದ ಎತ್ತರ ಬೆಟ್ಟದ ಸ್ಥಳಕ್ಕೆ ಹೋಗುತ್ತಾರೆ.) ಆದರೆ ಸುಮಾರು ೫೦ ಸಾವಿರ ಅಡಿಗಿಂತಲೂ ಅಂದರೆ ೧೦ ಮೈಲಿಗಿಂತಲೂ ಎತ್ತರ ಹೋದರೆ ಶಾಕವು ಕಡಿಮೆಯಾಗುವ ಬದಲು ಏರುತ್ತ ಹೋಗುತ್ತದೆ. ವಾತಾವರಣದಲ್ಲಿ ಎಲ್ಲ ಮಳೆ, ಮೋಡ, ಗುಡುಗು ಮಿಂಚು ಈ ೧೦ ಮೈಲಿನ ಒಳಗೇ ನಡೆಯುತ್ತದೆ. ವಾತಾವರಣದ ಕೆಳಗಿನ ಈ ಭಾಗವನ್ನು 'ಹವಾಮಂಡಲ' (Troposphere) ಎಂದು ಕರೆಯಬಹುದು.

ಇಡೀ ವಾತಾವರಣವು ಭೂಮಿಯ ಒಟ್ಟಿಗೆ ತಿರುಗುವುದು ಮಾತ್ರವಲ್ಲದೆ ಇದರಲ್ಲಿ ಅಲ್ಲಲ್ಲಿ ವಾಯುವಿನ ಪ್ರವಾಹವಿರುತ್ತದೆ. ಈ ಪ್ರವಾಹವನ್ನು ನಾವು 'ಗಾಳಿ' ಎಂದು ಕರೆಯುತ್ತೇವೆ. ಉಷ್ಣವಲಯದಲ್ಲಿ ಈ ಗಾಳಿಯು ಉತ್ತರಾರ್ಧದಲ್ಲಿ ಈಶಾನ್ಯದಿಂದಲೂ ದಕ್ಷಿಣಾರ್ಧದಲ್ಲಿ ಆಗ್ನೇಯದಿಂದಲೂ ಬೀಸುತ್ತದೆ. ಇವಕ್ಕೆ ವಾಣಿಜ್ಯಮಾರುತ (Trade winds) ಎಂದು ಹೆಸರು. ಸಮಶೀತೋಷ್ಣವಲಯದಲ್ಲಿ ಗಾಳಿಯು ಪಶ್ಚಿಮದಿಂದ ಬೀಸುತ್ತದೆ. ಈ ಪ್ರವಾಹದಲ್ಲಿ ಸುಮಾರು ೬-೭ ಮೈಲು ಎತ್ತರದಲ್ಲಿ ಅಡಕವಾಗಿ ಗಂಟೆಗೆ ನೂರು ಇನ್ನೂರು ಮೈಲು ವೇಗದ ಇನ್ನೊಂದು ಚಿಕ್ಕ ಪ್ರವಾಹವಿದೆ. ಇದಕ್ಕೆ 'ಜೆಟ್ ಸ್ಟ್ರೀಮ್' (Jet stream) ಎಂದು ಹೆಸರು. ಧ್ರುವವಲಯದಲ್ಲಿ ಗಾಳಿ ಪೂರ್ವದಿಂದ ಬೀಸುತ್ತದೆ. ಅಲ್ಲದೆ ಒಂದೇ ವಲಯದಲ್ಲಿ ಕೆಳಗಡೆ ಗಾಳಿಯು ಪಶ್ಚಿಮದಿಂದ ಬೀಸಿದರೆ ಮೇಲೆ ಪೂರ್ವದಿಂದ ಬೀಸುತದೆ. ಭೂಮಧ್ಯ ಪ್ರದೇಶದಲ್ಲಿ ಗಾಳಿಯು ಮೇಲೇಕ್ಕೇರುತ್ತದೆ; ಧ್ರುವ ಪ್ರದೇಶಗಳಲ್ಲಿ ಅದು ಕೆಳಗೆ ಕುಸಿಯುತ್ತದೆ. ವಾತಾವರಣದಲ್ಲಿ ಅಲ್ಲಲ್ಲಿ ಸುಳಿಗಾಳಿ, ಸುಂಟರಗಾಳಿ ಉಂಟಾಗಿ ಊರಿಂದೂರಿಗೆ ಚಲಿಸುತ್ತದೆ. ವಾತಾವರಣದ ಈ ಎಲ್ಲ ಪ್ರವಾಹವನ್ನು ಅದರ 'ಸಾಮಾನ್ಯ ಪರಿಚಲನೆ' (General circulation) ಎಂದು ಕರೆಯುತ್ತೇವೆ. ಇದರ ಮೇಲೆ ಎಲ್ಲ ವಲಯಗಳ ಸರಾಸರಿ ಹವೆ ಹೊಂದಿಕೊಂಡಿದೆ. ವಾಯುಮಂಡಲದ ಸಾಮಾನ್ಯ ಪರಿಚಲನೆಯಲ್ಲಿ ದೈನಂದಿನ ಅಲ್ಪಸ್ವಲ್ಪ ಬದಲಾವಣೆ ಉಂಟಾಗುತ್ತದೆ. ಇದರ ಮೇಲೆ ನಮ್ಮ ದೈನಂದಿನ ಹವೆಯು ಹೊಂದಿಕೊಂಡಿದೆ. ಹವಾಮಾನದ ಭವಿಷ್ಯವನ್ನು ಹೇಳಬೇಕಾದರೆ ವಾತಾವರಣದ ಪರಿಚಲನೆಯನ್ನು ಅರಿತುಕೊಳ್ಳಬೇಕು.

ಗಾಳಿಯ ಪ್ರವಾಹಕ್ಕೆ ಶಕ್ತಿ ಬೇಕಾಗುವುದು. ಈ ಶಕ್ತಿಯನ್ನು ಸೂರ್ಯನು ಒದಗಿಸುತ್ತಾನೆ.

ವಾತಾವರಣದ ಹೊರಮೈಯ ಮೇಲೆ ಸೂರ್ಯ
ಕಿರಣ ಬೀಳುತ್ತದೆ. ಈ ಕಿರಣಗಳಿಗೆ ವಾತಾವ
ಣವು ಪಾರದರ್ಶಕವಾಗಿರುವುದರಿಂದ ಆ ವಾತ
ವನ್ನು ಬಿಸಿಮಾಡದೇನೇ ಸೂರ್ಯನ ತಾಪ ಭೂಮಿ
ಗೆ ಬಂದು ಸೇರುತ್ತದೆ. ಆದರೆ ಕೆಲವಂಶ ಮೋ
ಗಳಿಂದಲೂ ಕೆಲವಂಶ ಭೂಮಿಯ ತಳದಿಂದಲ
ಪ್ರತಿಫಲಿಸಲ್ಪಡುತ್ತದೆ. ಸುಮಾರು ಅರ್ಧಾಂ
ಹೀಗೆ ನಷ್ಟವಾದರೂ ಉಳಿದ ಅರ್ಧಾಂಶ ಭೂಮಿ
ಯಿಂದ ಹೀರಲ್ಪಟ್ಟು ಅದರ ಉಷ್ಣತೆ ಏರುತ್ತದ
ಭೂಮಿಯಲ್ಲಿ ಕೆಲಭಾಗ ನೀರು ಇರುವುದರಿಂ
ನೆಲದಷ್ಟು ಬೇಗ ಜಲ ಬಿಸಿಯಾಗುವುದಿಲ್ಲ
ಭೂಮಿಯ ತಳ ಹೀಗೆ ಕಾದು ಅದರಿಂದ ವಾತ
ವರಣದ ಕೆಳಗಿನ ಅಂಶ ಬಿಸಿ ಏರುವುದು. ಬಿ
ಗಾಳಿ ಅಲ್ಲಲ್ಲಿ ಕಾರಂಜಿಯಂತೆ ಮೇಲೇರುವುದು
ವಾತಾವರಣವನ್ನು ಕಾಯಿಸುವ ಕುಲಿಮೆ ಸೂ
ನಲ್ಲ, ಭೂಮಿ. ಆದುದರಿಂದಲೇ ಭೂಮಿಯಿಂ
ಎತ್ತರ ಹೋದಂತೆ ಶಾಕವು ಕಡಿಮೆಯಾಗುತ
ಹೋಗುತ್ತದೆ. ಸೂರ್ಯನಿಂದ ಭೂಮಿಗೆ ಬರುವ
ಶಕ್ತಿಯೂ ಪ್ರತಿದಿನ ಅಲ್ಪಸ್ವಲ್ಪ ಬದಲಾವಣ
ಯಾಗುತ್ತದೆ. ಮೋಡದ ಪರಿಮಾಣವು ಹೆಚ
ಕಡಿಮೆಯಾಗಿ ಅದರಿಂದ ಪ್ರತಿಫಲಿಸಲ್ಪಡು
ಅಂಶವೂ ಹೆಚ್ಚು ಕಡಿಮೆಯಾಗುತ್ತದೆ. ಇದರಿಂದ
ವಾತಾವರಣದ ಪರಿಚಲನೆಯಲ್ಲಿ ಅಲ್ಪಸ್ವಲ್ಪ
ವ್ಯತ್ಯಾಸ ಉಂಟಾಗುತ್ತದೆ. ಹವೆಯಲ್ಲೂ
ವ್ಯತ್ಯಾಸ ಉಂಟಾಗುತ್ತದೆ.

## ಮಳೆಯಾಗುವದು ಹೇಗೆ !

ಗಾಳಿಯಲ್ಲಿ ಅಲ್ಪಸ್ವಲ್ಪ ನೀರಿನ ಹನೆಯಿದ
ಹೀಗೆ ನೀರಿನ ಹನೆಯಿಂದ ಸ್ವಲ್ಪ ಒದ್ದೆಯಾಗಿರುವ
ವಾಯುವು ಮೇಲಕ್ಕೇರಿದಂತೆ ಅದು ತಣ್ಣಗಾಗಿ
ನೀರಿನ ಹನೆ ಹುಂಡುಹುಂಡಾಗಿ ಹನಿಗೂಡುತ್ತದೆ
ಈ ಹುಂಡುಗಳ ಸಮೂಹವೇ ಮೋಡ
ಮೋಡದ ಒಳಗಿನ ವಾಯು ಇನ್ನೂ ಮೇಲಕ್ಕೇರಿ
ಆರಿ, ಆ ಹುಂಡುಗಳೇ ಮಳೆಹನಿಯಾಗಿ ಕೆಳಗೆ
ಬೀಳುತ್ತವೆ. ನಮ್ಮ ವಾತಾವರಣದ ಎಲ್ಲ
ಹವೆಗೂ ಸೂರ್ಯನ ಉಷ್ಣವೇ ಕಾರಣ. ನಮ್ಮ
ಭೂಮಿಯನ್ನು ಸೇರುವ ಉಷ್ಣದ ಅಂಶವು ದೈನಂ
ದಿನ ಸ್ವಲ್ಪ ಹೆಚ್ಚು ಕಡಿಮೆಯಾಗಿ ನೀರು ಆವಿ
ಯಾಗಿ ವಾತಾವರಣವನ್ನು ಸೇರುವ ಅಂಶವೂ
ಹೆಚ್ಚು ಕಡಿಮೆಯಾಗುತ್ತದೆ. ಇದರಿಂದಲೂ ಹವ

ಯಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಇವೆಲ್ಲವನ್ನೂ ನಿಖರವಾಗಿ ತಿಳಿಯದೆ ಹವೆಯ ಭವಿಷ್ಯವನ್ನು ಹೇಳುವುದಾದರೂ ಹೇಗೆ?

ಅಂತೂ ಹವೆಯು ವಾತಾವರಣದಲ್ಲಿ ಜರಗುವ ವಿಶಿಷ್ಟ ಕ್ರಿಯೆ. ಈ ಕ್ರಿಯೆಗೆ 'ಕಾರ್ಯ-ಕಾರಣ' ಸಂಬಂಧವಿದೆ. ವಾತಾವರಣದ ಪ್ರಸ್ತುತ ಸ್ಥಿತಿಗತಿ ಮತ್ತು ಅದರ ಮೇಲೆ ಬೀಳುವ ಸೂರ್ಯನ ಶಕ್ತಿ ಮುಂದಿನ ಹವೆಗೆ 'ಕಾರಣ'. ವಾತಾವರಣವು ಭೌತಶಾಸ್ತ್ರದ ನಿಯಮವನ್ನು ಪಾಲಿಸುತ್ತದೆ. ಇದನ್ನು ಅರಿತುಕೊಂಡು ಈ 'ಕಾರಣ' ದಿಂದ ಭವಿಷ್ಯದಲ್ಲಿ ಜರಗುವ 'ಕಾರ್ಯ' ವನ್ನು ಊಹಿಸಬೇಕು.

ಹವಾಮಾನದ ಭವಿಷ್ಯವನ್ನು ತಿಳಿಯಬೇಕಾದರೆ ಅದರ ವರ್ತಮಾನ ಸ್ಥಿತಿಯನ್ನು ತಿಳಿದುಕೊಳ್ಳುವುದು ಅವಶ್ಯ. ಇದಕ್ಕಾಗಿ ಎಲ್ಲಾ ದೇಶಗಳಲ್ಲೂ ಆಯಾಯ ಸರಕಾರದವರು ವೇಧಶಾಲೆ (Observatory) ಗಳನ್ನು ನಿರ್ಮಿಸಿರುತ್ತಾರೆ. ನಮ್ಮ ದೇಶದಲ್ಲೂ ಜಿಲ್ಲೆಗೊಂದರಂತೆ ಸುಮಾರು ೩೦೦ ವೇಧಶಾಲೆಗಳಿವೆ. ಇವುಗಳಲ್ಲಿ ದಿನಕ್ಕೆ ೫ ಬಾರಿ ನಿರ್ದಿಷ್ಟ ಸಮಯ ೧೪೩ ಪ್ರಕೃತ ಹವಾಮಾನದ ಪರಿಸ್ಥಿತಿಯನ್ನು ಕಂಡುಹಿಡಿಯುತ್ತಾರೆ. ಗಾಳಿಯ ಒತ್ತಡ, ಗಾಳಿ ಬೀಸುವ ದಿಕ್ಕು ಮತ್ತು ವೇಗ, ಗಾಳಿಯ ಉಷ್ಣತೆ, ಅದರಲ್ಲಿರುವ ನೀರಿನ ಪನೆಯ ಅಂಶ, ದಿನದ ಪರಮಾವಧಿ ಮತ್ತು ಕನಿಷ್ಟ ಉಷ್ಣತೆ, ಮಳೆಯ ಪರಿಮಾಣ ಇವೆಲ್ಲವನ್ನೂ ಉಪಕರಣಗಳಿಂದ ಅಳೆಯುತ್ತಾರೆ. ಮೋಡದ ..., ಪರಿಮಾಣ, ಎತ್ತರ, ಗಾಳಿಯ ಪಾರದರ್ಶಕತೆ, ಹವೆಯ ಸ್ಥಿತಿ ಮೊದಲಾದುವನ್ನು ಮಾಹಿತಿಯ ಮೇಲೆ ಅಂದಾಜು ಮಾಡುತ್ತಾರೆ. ಈ ಎಲ್ಲ ವರದಿಯನ್ನು ಸ್ವಚ್ಛವಾಗಿ ಪುಸ್ತಕದಲ್ಲಿ ಬರೆದಿಡುತ್ತಾರೆ. ಭಾರತದಲ್ಲಿ ಹೀಗೆ ೬೦ ವರ್ಷಗಳ ವರದಿ ಇದೆ.

ಆಡಳಿತೆಗೆ ಅನುಕೂಲವಾಗುವಂತೆ ಇಡೀ ಹಿಂದೂದೇಶವನ್ನು ನಾಲ್ಕು ವಿಭಾಗ ಮಾಡಿ ಅವುಗಳಿಗೆ ದಿಲ್ಲಿ, ಕಲಕತ್ತಾ, ಮುಂಬಯಿ ಮತ್ತು ಮದ್ರಾಸು ಪಟ್ಟಣಗಳನ್ನು ಕೇಂದ್ರವಾಗಿ ನಿಯಮಿಸಿದ್ದಾರೆ. ಈ ಎಲ್ಲ ವೇಧಶಾಲೆಗಳಲ್ಲಿ ಕಂಡುಕೊಂಡ ಹವಾಮಾನದ ವರದಿಯನ್ನು ಸಂಕೇತವಾಗಿ ಸಂಖ್ಯಾರೂಪದಲ್ಲಿ ನಿರ್ದೇಶಿಸಿ ತಂತಿಯ ಮೂಲಕ ಆಯಾಯ ಭಾಗದ ಕೇಂದ್ರಕ್ಕೆ ಕಳುಹಿಸುತ್ತಾರೆ. ಈ ನಾಲ್ಕು ಕೇಂದ್ರಗಳೂ, ತಮಗೆ ಬಂದ ವರದಿಯನ್ನು ಒಟ್ಟುಗೂಡಿಸಿ, ತಮ್ಮದೇ ಆದ ಆಕಾಶವಾಣಿಯ ಮೂಲಕ ಕ್ಲಿಪ್ತಕಾಲದಲ್ಲಿ ಪ್ರಸಾರಮಾಡುತ್ತವೆ. ಈ ಪ್ರಸಾರವನ್ನು ದಿಲ್ಲಿಯಲ್ಲಿ ಕೇಳಿ, ಒಟ್ಟುಗೂಡಿಸಿ, ಇಡೀ ದೇಶದ ವರದಿಯನ್ನು ಒಳ ಮತ್ತು ಹೊರದೇಶಗಳ ಉಪಯೋಗಕ್ಕಾಗಿ ತಿರುಗಿ ಪ್ರಸಾರಮಾಡುತ್ತಾರೆ. ಈ ಪ್ರಸಾರವು ದಿನದ ೨೪ ಗಂಟೆಯೂ ಒಂದಲ್ಲ ಒಂದು ನಡೆಯುತ್ತಲೇ ಇರುತ್ತದೆ.

ವಾತಾವರಣದಲ್ಲಿ ವಿವಿಧ ಮಟ್ಟಗಳಲ್ಲಿ ಗಾಳಿಯ ವೇಗವನ್ನು ನಿಷ್ಕರಿಸುವ ವೇಧಶಾಲೆಗಳು ನಮ್ಮ ದೇಶದಲ್ಲಿ ಸುಮಾರು ೫೦ ಇವೆ. ಇಲ್ಲಿ ರಬ್ಬರಿನ ಬುಗ್ಗೆ (balloon)ಗೆ ಜಲಜನಕ ವಾಯುವನ್ನು ತುಂಬಿಸಿ ಮೇಲೆ ಬಿಟ್ಟುಬಿಡುವರು. ಜಲಜನಕವು ಗಾಳಿಗಿಂತ ಹಗುರವಾಗಿರುವುದರಿಂದ ಬುಗ್ಗೆ ಮೇಲೇರುವುದು. ಹಾಗೆಯೇ ಗಾಳಿಯ ಪ್ರವಾಹದಿಂದ ಮುಂದೆ ಒಯ್ಯಲ್ಪಡುವದು. ಪ್ರತಿ ನಿಮಿಷವೂ ಅದರ ಸ್ಥಾನವನ್ನು ಒಂದು ವಿಶೇಷ ತರದ ದುರ್ಬೀನಿನ (Theodolite) ಸಹಾಯದಿಂದ ಕಂಡುಹಿಡಿದು ಗಾಳಿಯ ಪ್ರವಾಹದ ವೇಗ ಮತ್ತು ದಿಕ್ಕನ್ನು ನಿರ್ಧರಿಸುವರು. ಕೆಲವೊಮ್ಮೆ ಈ ಬುಗ್ಗೆ ನೂರು ಸಾವಿರ ಅಡಿ ಮೇಲೆ ಹೋಗುವುದೂ ಉಂಟು. ಈ ಬುಗ್ಗೆ ಮೋಡದ ಒಳಗೆ ಸೇರಿಕೊಂಡರೆ ಅದು ಅಗೋಚರವಾಗುವುದು ತಾನೆ? ಅದಕ್ಕಾಗಿ ಈಗೀಗ ಬುಗ್ಗೆಯನ್ನು ರೇಡಾರಿನ ದೃಷ್ಟಿಯಿಂದ (ಕಣ್ಣಿಗೆ ಅಗೋಚರವಾದರೂ) ಹತ್ತಿಪ್ಪತ್ತು ಮೈಲು ಎತ್ತರದ ವರೆಗೂ ನೋಡಿಕೊಂಡು ಅಲ್ಲಿಯ ವರೆಗಿನ ಗಾಳಿಯನ್ನು ನಿರ್ಧರಿಸುವರು. ಈ ೫೦ ವೇಧಶಾಲೆಗಳಲ್ಲಿ ಆರಾರು ಗಂಟೆಗಳಿಗೊಮ್ಮೆ ದಿನಕ್ಕೆ ೪ ಬಾರಿ ಗಾಳಿಯ ಗತಿಯನ್ನು ಕಂಡುಹಿಡಿಯುವರು. ಈ ವರ್ತಮಾನವನ್ನು ಸಂಖ್ಯಾಸಂಕೇತದಿಂದ ನಿರ್ದೇಶಿಸಿ ಪ್ರಸಾರ ಮಾಡುವರು. ರೇಡಾರಿನ ವೇಧಶಾಲೆಗಳು ನಮ್ಮ ದೇಶದಲ್ಲಿ ಬರೇ ಹತ್ತು ಇವೆ.

## ವಾತಾವರಣವನ್ನರಿಯುವ ಕ್ರಮ

ಹವೆಯು ಜರಗುವುದು ವಾತಾವರಣದಲ್ಲಿ. ಅದಕ್ಕಾಗಿ ನಾವು ವಾತಾವರಣದ ವಿವಿಧ ಮಟ್ಟಗಳಲ್ಲಿ ಅದರ ಒತ್ತಡ, ಉಷ್ಣತೆ ಮತ್ತು ಆರ್ದ್ರತೆಯನ್ನು ಕಂಡುಹಿಡಿಯಬೇಕಾಗುತ್ತದೆ. ಇದಕ್ಕಾಗಿ ದೊಡ್ಡ ಬುಗ್ಗೆಗಳಲ್ಲಿ ಜಲಜನಕವಾಯುವನ್ನು ತುಂಬಿಸಿ ಅದಕ್ಕೆ ಒತ್ತಡ, ಉಷ್ಣತೆ ಮತ್ತು ಆರ್ದ್ರತೆಯನ್ನು ಅಳೆಯುವ ಸಲಕರಣೆಗಳನ್ನು ಜೋಡಿಸಿ ಬಿಟ್ಟುಬಿಡುವರು. ಈ ಸಲಕರಣೆಗಳ ಜೊತೆಯಲ್ಲಿ ಒಂದು ಹಗುರವಾದ ಚಿಕ್ಕ ಆಕಾಶವಾಣಿ ಪ್ರೇಷಕ (Transmitter) ವನ್ನು ಸೇರಿಸಿಡುವರು. ಬುಗ್ಗೆ ವಾತಾವರಣದಲ್ಲಿ ಮೇಲೇರಿದಂತೆ ವಾತಾವರಣದ ವಿವಿಧಮಟ್ಟಗಳ ಒತ್ತಡ, ಉಷ್ಣತೆ ಮತ್ತು ಆರ್ದ್ರತೆಯ ಪರಿಮಾಣದ ಸಂಖ್ಯೆಯನ್ನು ಒಂದು ಸಂಜ್ಞೆಯ ಮೂಲಕ ಪ್ರಸಾರ ಮಾಡುತ್ತಿರುವುದು. ಅದನ್ನು ಕೆಳಗೆ ವೇಧಶಾಲೆಯಲ್ಲಿ ರೇಡಿಯೋ ಮೂಲಕ ಹಿಡಿದು ತಿಳಿದುಕೊಳಬಹುದು. ಇಂತಹ ವೇಧಶಾಲೆಗಳು ನಮ್ಮ ದೇಶದಲ್ಲಿ ೧೨ ಇವೆ. ದಿನಕ್ಕೆರಡು ಬಾರಿ ಹೀಗೆ ಬುಗ್ಗೆಗಳನ್ನು ಕಳುಹಿಸಿ ವಾತಾವರಣದ ಭೌತಿಕ ಸ್ಥಿತಿಯನ್ನು ಅರಿತುಕೊಳ್ಳುವರು. ಒಂದೊಂದು ಬುಗ್ಗೆ ಮತ್ತು ಸಲಕರಣೆಗಳನ್ನು ಮೇಲೆ ಕಳುಹಿಸಿದರೆ ಸುಮಾರು ನೂರು ರೂಪಾಯಿ ಖರ್ಚು ತಗಲುವದು. ಬುಗ್ಗೆ ಒಮ್ಮೆ ಮೇಲೆ ಹೋದ ನಂತರ ಅತೀ ಎತ್ತರದಲ್ಲಿ ಅದು ಒಡೆದು ಸಲಕರಣೆಗಳು ಎಲ್ಲೋ ಕೆಳಗೆ ಬೀಳುವುವು. ನಂತರ ಅದನ್ನು ಹೆಕ್ಕುವುದು ಕಷ್ಟ. ಕೆಲವು ಸಿಕ್ಕಿದರೂ ಅದರಿಂದ ಹೆಚ್ಚಿನ ಉಪಯೋಗವಿಲ್ಲ. ಹೀಗೆ ಈ ಒಂದು ತರದ ವರ್ತಮಾನವನ್ನು ಸಂಗ್ರಹಿಸಲಿಕ್ಕೆ ಮಾತ್ರವೇ ನಮ್ಮ ಸರಕಾರಕ್ಕೆ ದಿನಕ್ಕೆ ೨೪೦೦ ರೂಪಾಯಿ ವೆಚ್ಚ ತಗಲುವುದು. ಈ ವರದಿಯನ್ನು ಸಂಜ್ಞೆಯ ಸಂಖ್ಯಾರೀತಿಯಲ್ಲಿ ಪ್ರಸಾರಗೊಳಿಸುವರು.

ಹೀಗೆ ಹವಾಮಾನದ ಪ್ರಕೃತ ಸ್ಥಿತಿಯ ವರದಿಯನ್ನು ಆಕಾಶವಾಣಿಯ ಗ್ರಾಹಕ (Radio Receivers) ಗಳ ಮೂಲಕ ಎಲ್ಲಾ ಹವಾಮಾನದ ಮುನ್ಸೂಚನೆಯ ದಫ್ತರಗಳಲ್ಲಿ ಸಂಗ್ರಹಿಸುವರು. ಇಂತಹ ದಫ್ತರುಗಳು ದಿಲ್ಲಿ, ಕಲ್ಕತ್ತಾ, ಮುಂಬಯಿ, ಮದ್ರಾಸು, ನಾಗಪುರ ಮತ್ತು ಪುಣೆಗಳಲ್ಲಿಯೂ, ಇತರ ವಿಮಾನನಿಲ್ದಾಣಗಳಲ್ಲೂ ಇವೆ. ಹೀಗೆ ಸಂಗ್ರಹಿಸಿದ ವರದಿಯನ್ನು ಒಂದು ದೊಡ್ಡ ಭೂಪಟದಲ್ಲಿ ಆಯಾಯ ಜಾಗದಲ್ಲಿ ಚಿತ್ರರೂಪದಲ್ಲಿ ಬರೆಯುವರು. ವಿವಿಧ ಮಟ್ಟಗಳಲ್ಲಿ ಗಾಳಿಯ ಪ್ರವಾಹವನ್ನು ಇನ್ನೊಂದು ಭೂಪಟದಲ್ಲಿ ಸೂಚಿಸುವರು. ವಾತಾವರಣದ ಒತ್ತಡ ಎಲ್ಲೆಲ್ಲಿ ಸರಿಸಮಾನವಾಗಿದೆಯೋ ಆ ಎಲ್ಲಾ ಊರುಗಳ ಮೇಲೆ ಒಂದು ಗೆರೆಯನ್ನು ಎಳೆಯುವರು. ಹೀಗೆ ಸಮಾನ ಒತ್ತಡದ ಗೆರೆ (Isobar) ಗಳನ್ನು ಭೂಪಟದ ಮೇಲೆ ಬಿಡಿಸಿ ಎಲ್ಲಿ ಒತ್ತಡ ಕಡಿಮೆ ಎಲ್ಲಿ ಹೆಚ್ಚು ಎಂದು ಕಂಡು ಹಿಡಿಯುವರು. ವಾತಾವರಣದ ಒತ್ತಡಕ್ಕೂ ಅದರ ಸುತ್ತು ಬೀಸುವ ಗಾಳಿಗೂ ಸಂಬಂಧವಿದೆ. ಇದರಿಂದ ಸುಳಿಗಾಳಿ, ಸುಂಟರಗಾಳಿ ಎಲ್ಲಿಯಾದರೂ ಮೂಡಿದರೆ ತಿಳಿದು ಬರುತ್ತದೆ. ಅದರ ಸ್ಥಾನವನ್ನು ಕಂಡುಹಿಡಿಯಬಹುದು. ಅದರ ತೀಕ್ಷ್ಣತೆಯನ್ನೂ ನಿರ್ಧರಿಸಬಹುದು. ಹೆಚ್ಚಾಗಿ ಈ ತರದ ಸುಂಟರ ಗಾಳಿಯು ಸಮುದ್ರದಲ್ಲಿ ಹುಟ್ಟುವುವು. ನಮ್ಮಲ್ಲಿ ಬಂಗಾಲ

ಕೊಲ್ಲಿಯಲ್ಲೂ, ಅರಬ್ಬಿ ಸಮುದ್ರದಲ್ಲೂ ಮೂಡಿ ಬರುವುವು. ಸಮುದ್ರದ ಹವೆಯ ಸ್ಥಿತಿಯನ್ನು ಅದರ ಮೇಲೆ ತೇಲುವ ಹಡಗುಗಳಿಂದ ತಿಳಿದು ಕೊಳ್ಳುವರು. ಎಲ್ಲಾ ಹಡಗುಗಳೂ ನೆಲದ ಮೇಲಿರುವ ವೇಧಶಾಲೆಯಂತೆ ಕ್ಲಪ್ತ ಕಾಲಗಳಲ್ಲಿ ಹವೆಯ ವರದಿಯನ್ನು ಆಕಾಶವಾಣಿಯ ಮೂಲಕ ಬಂದರಕ್ಕೆ ಕಳುಹಿಸುವುವು. ಸುಂಟರ ಗಾಳಿಯ ಪ್ರಕೃತದ ಸ್ಥಿತಿಗತಿಯನ್ನು ತೆಗೆದುಕೊಂಡು ಅದು ಹೋಗುವ ದಾರಿಯನ್ನು ನಿರ್ಧರಿಸುವರು ಮತ್ತು ಅದರ ದಾರಿಯಲ್ಲಿ ಹವೆ ಯಾವ ತರದ್ದಿರಬಹುದೆಂದು ಭವಿಷ್ಯವನ್ನು ಹೇಳುವರು. ಈ ತರದ ಸುಂಟರ ಗಾಳಿಗಳು ಸಮುದ್ರದಿಂದ ಭೂಮಿಗೆ ಪ್ರವೇಶಿಸುವಾಗ ಆ ದಡದಲ್ಲಿ ವಿಪರೀತ ಮಳೆ, ನೆರೆ, ತುಫಾನು ಗಾಳಿ ಎಲ್ಲಾ ಉಂಟಾಗಿ ಅಲ್ಲಿಯ ಜನರನ್ನು ಅನೇಕ ತರದ ಕಷ್ಟನಷ್ಟಗಳಿಗೆ ಗುರಿ ಮಾಡುವವು. ಇದರ ಸೂಚನೆ ಮುಂಚಿತ ದೊರಕಿದರೆ ಜನರು ಮುಂಜಾಗ್ರತೆ ತೆಗೆದುಕೊಳ್ಳಬಹುದು.

### ಅಂತಾರಾಷ್ಟ್ರೀಯ ಹವಾ ಇಲಾಖೆ

ಹವೆ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಚಲಿಸುತ್ತದೆ. ಅದಕ್ಕೆ ಯಾರೂ ತಡೆ ಹಾಕುವವರಿಲ್ಲ. ಗಡಿನಾಡಿನಲ್ಲಿ ಅದು ಸುಂಕ ಕೊಡಬೇಕಾಗಿಲ್ಲ. ಅದುದರಿಂದ ನಮ್ಮ ದೇಶದ ಹವೆಯನ್ನು ನಿರ್ಧರಿಸಲು ನಮಗೆ ನಮ್ಮ ನೆರೆಹೊರೆಯ ದೇಶದ ಹವೆಯ ವರದಿಯ ಅಗತ್ಯವಿದೆ ಇದಕ್ಕಾಗಿಯೇ ಅಂತಾರಾಷ್ಟ್ರೀಯ ಹವಾ ಇಲಾಖೆಯ ಸಂಸ್ಥೆಯೊಂದು ಸ್ಥಾಪಿತವಾಗಿ ಎಲ್ಲಾ ದೇಶಗಳಿಗೂ ಒಂದೇ ಸಂಜ್ಞೆಯನ್ನು ಒದಗಿಸಿಕೊಟ್ಟಿದ್ದಾರೆ. ಎಲ್ಲ ದೇಶದವರೂ ತಮ್ಮ ತಮ್ಮ ದೇಶದ ಹವೆಯ ವರದಿಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಹವಾ ಚಿತ್ರಪಟವನ್ನು ಬಿಡಿಸುವುದೂ ಹವಾಮಾನ ಭವಿಷ್ಯವನ್ನು ಬರೆದುಕೊಡುವುದೂ ಎಲ್ಲವೂ ಅಂತಾರಾಷ್ಟ್ರೀಯ ರೀತಿಯಿಂದಲೇ ನಡೆಯುತ್ತಿರುವುದು. ಲಂಡನ್ನಿನಿಂದ ಹೊರಟ ವಿಮಾನವು ಜಪಾನಿಗೆ ಹೋಗುತ್ತದೆನ್ನಿ. ಆ ವಿಮಾನವು ದಾರಿಯಲ್ಲಿ ಎಷ್ಟು ರಾಜ್ಯಗಳನ್ನು ಹಾದು ಹೋಗುವುದಿಲ್ಲ. ಈ ಎಲ್ಲ ವಿಮಾನ ನಿಲ್ದಾಣಗಳಿಂದ ಮುಂದಿನ ನಿಲ್ದಾಣದ ವರೆಗಿನ ಹವೆಯ ಭವಿಷ್ಯದ ವರದಿಯನ್ನು ವಿಮಾನ ಸಂಚಾಲಕನು ಪಡೆಯುತ್ತಾನೆ ಮತ್ತು ಹವೆಯ ಚಿತ್ರಪಟವನ್ನು ನೋಡುತ್ತಾನೆ. ಅದುದರಿಂದ ಇಡೀಭೂಲೋಕಕ್ಕೂ ಹವೆಯ ಮಟ್ಟಿಗೆ ಒಂದೇ ಭಾಷೆಇರಬೇಕು.

ಹವೆಯ ಭವಿಷ್ಯವಾಣಿ ರೂಪಾಯಿಗೆ ನೂರು ನಯೇಪೈಸೆ ನಿಜವಾಗುವದೆಂದು ನಾನು ಹೇಳುವದಿಲ್ಲ. ಶೇಕಡಾ ೭೫ರಷ್ಟು ನಿಜವಾದರೂ ಅದೇ ವಿಶೇಷ. ಈ ಅತೃಪ್ತಸ್ಥಿತಿಗೆ ಮೂರು ಕಾರಣಗಳಿವೆ. ಹವಾಮಾನಶಾಸ್ತ್ರವು ಕೇವಲ ವಾತಾವರಣಶಾಸ್ತ್ರವೇ. ಈ ವಾತಾವರಣದ ಪರಿಚಲನೆಯೇ ನಮಗೆ ಇನ್ನೂ ಖಚಿತವಾಗಿ ತಿಳಿದಿಲ್ಲ. ವಾತಾವರಣದ ಮೇಲೆ ಬೀಳುವ ಸೂರ್ಯನ ಶಕ್ತಿಯೂ ಎಷ್ಟೆಂದು ನಿಖರವಾಗಿ ಹೇಳಲಾಗುವುದಿಲ್ಲ. ವಾತಾವರಣಕ್ಕೆ ದಿನಾಲು ಸೇರುವ ನೀರಿನ ಆವಿ ಎಷ್ಟೆಂದು ಹೇಳಲಾಗುವುದಿಲ್ಲ. ವಾತಾವರಣದಲ್ಲಿ ನಡೆಯುವ ಅನೇಕ ಕ್ರಿಯೆಗಳ ಮರ್ಮವು ಇನ್ನೂ ತಿಳಿದಿಲ್ಲ. ವಾತಾವರಣದ ಪ್ರಸ್ತುತ ಸ್ಥಿತಿಯೂ ಸಾಕಷ್ಟು ನಮಗೆ ತಿಳಿದಿಲ್ಲ. ಉದಾಹರಣೆಗೆ, ನಮ್ಮ ಭೂಲೋಕದಲ್ಲಿ ಕಳೆದ ೧೫೦ ಕೋಟಿ ವರ್ಷಗಳಿಂದ ಮಳೆ ಬರುತ್ತಾ ಇದೆ. ಆದರೆ ಇನ್ನೂ ವಿಜ್ಞಾನಿಗೆ ಮೋಡದಿಂದ ಮಳೆ ಹೇಗೆ ಉಂಟಾಗುವುದೆಂಬುದರ ಅರಿವು ಸಂಪೂರ್ಣ ಉಂಟಾಗಲಿಲ್ಲ. ಈ ಸಮಸ್ಯೆಯನ್ನು ಬಿಡಿಸಲಿಕ್ಕೆ ಅಹೋರಾತ್ರಿ ಆತನು ಪ್ರಯತ್ನಿಸುತ್ತಿದ್ದಾನೆ.

ಹವಾಮಾನದ ಮುನ್ಸೂಚನೆಯನ್ನು ಕೊಡುವ ಶಾಸ್ತ್ರ ಇನ್ನೂ ಬಾಲ್ಯಾವಸ್ಥೆಯಲ್ಲಿ ಇದೆ. ಆದರೆ ಇತ್ತೀಚೆಗೆ ಇದು ಬಹು ಬೇಗನೇ ವೃದ್ಧಿಯಾಗುತ್ತ ಇದೆ. ವಾತಾವರಣದ ವಿಚಾರ ತಿಳಿಯಬೇಕಾದ ಅಂಶ ಎಷ್ಟೋ ಇದೆ. ಪ್ರಕೃತದ ಐ. ಜಿ. ವೈ. ಯ ಯೋಜನೆಯಿಂದ (International Geophyical year) ವಾತಾವರಣಶಾಸ್ತ್ರ, ಹವಾಮಾನಶಾಸ್ತ್ರ ಹೆಚ್ಚಿನ ಲಾಭವನ್ನು ಪಡೆಯಲಿದೆ.

ಹವೆಯು ಉಂಟಾಗಿರುವುದು ವಾತಾವರಣದಲ್ಲಿ. ಅದರ ವಿವಿಧಮಟ್ಟಗಳಲ್ಲಿ ಅದರ ಒತ್ತಡ, ಉಷ್ಣತೆ, ಆರ್ದ್ರತೆಯ ಪರಿಣಾಮವನ್ನು ನಾವು ತಿಳಿದುಕೊಂಡರೇನೇ ಹವೆಯ ಭವಿಷ್ಯವನ್ನು ಹೇಳಬಹುದು. ಪ್ರತಿ ಕ್ಷಣವೂ ವಾತಾವರಣದಲ್ಲಿ ಅದರ ಭೌತಿಕ ಸ್ಥಿತಿಯು ಬದಲಾಗುತ್ತಲೇ ಇದೆ. ನಮ್ಮ ಹಿಂದೂ ದೇಶದ ಉದ್ದಳತೆ ೧೭೦೦ ಮೈಲು. ಅಗಲಳತೆ ೧೭೦೦ ಮೈಲು. ಇದರ ಮೇಲೆ ೧೦ ಮೈಲು ಎತ್ತರದ ವರೆಗೆ ಸುಮಾರು ೨·೮ ಕೋಟಿ ಘನಮೈಲು ವಾತಾವರಣವಿದೆ. ಇದರಲ್ಲಿ ಮೂಲೆಮೂಲೆಯಲ್ಲಿ ವಿವಿಧ ಮಟ್ಟಗಳಲ್ಲಿ ಬದಲಾವಣೆ ಕ್ಷಣಕ್ಷಣಕ್ಕೂಆಗುತ್ತಿದೆ. ಅದನ್ನು ಅಳೆಯುವುದು ಹೇಗೆ ? ತಿಳಿಯುವುದು ಹೇಗೆ ? ಅಳೆಯುವ ಕ್ರಮ, ರೀತಿ ನಮಗೆ ತಿಳಿದಿದೆ. ಬುಗ್ಗೆಗೆ ಯಂತ್ರ ಜೋಡಿಸಿ ಮೇಲೆ ಬಿಟ್ಟರಾಯಿತು. ಆದರೆ ಇದಕ್ಕೆ ಖರ್ಚು ಇಲ್ಲವೇ ? ೨·೪ ಕೋಟಿ ಘನಮೈಲು ವಿಸ್ತಾರದ ವಾತಾವರಣದಲ್ಲಿ 'ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ' ಎಂಬಂತೆ ನಾವು ಬರೇ ೧೨ ಸ್ಥಳಗಳಲ್ಲಿ ದಿನಕ್ಕೆ ರಡು ಭಾರಿ ಮಾತ್ರ ಅದರ ಭೌತಿಕ ಸ್ಥಿತಿಯನ್ನು ಅಳೆಯುತ್ತೇವೆ. ಹವಾಮಾನದ ಮುನ್ಸೂಚನೆ ಇನ್ನಷ್ಟು ಬೇಕಾದರೆ ಇಂತಹ ವೇಧಶಾಲೆಗಳು ನಮ್ಮ ದೇಶದಲ್ಲಿ ನೂರಾದರೂ ಇರಬೇಕು. ಇಲ್ಲಿ ದಿನಕ್ಕೆ ನಾಲ್ಕು ಸಲವಾದರೂ ಅಳತೆ ಮಾಡಬೇಕು. ಅಂದರೆ ಈ ಯೋಜನೆಗೆ ದಿನಕ್ಕೆ ೪೦ ಸಾವಿರ ರೂ. ಯಷ್ಟು ಹಣ ವೆಚ್ಚ ಮಾಡಬೇಕಾಗುತ್ತದೆ. ಆದರೆ ಇಷ್ಟೊಂದು ಹಣ ವೆಚ್ಚ ಮಾಡಲಿಕ್ಕೆ ಪ್ರಕೃತ ನಮ್ಮ ಸರಕಾರದಿಂದ ಸಾಧ್ಯವಿಲ್ಲ. ಎಲ್ಲಾದರೂ ದ್ವಿತೀಯ ಮತ್ತು ತೃತೀಯ ಪಂಚವರ್ಷ ಯೋಜನೆ ಮುಗಿದ ನಂತರ ಸಾಧ್ಯವಾದೀತು. ಅದುದರಿಂದಲೇ ನಮ್ಮ ಹವಾಭವಿಷ್ಯವಾಣಿಯು ಕೆಲವು ವೇಳೆ ತಪ್ಪಾಗುವುದು. ಸಾಮಾನ್ಯ ಜನರು ಅಜ್ಞಾನದಿಂದ ವೃಥಾ ಹವಾ ಇಲಾಖೆಯನ್ನು ದೂರುತ್ತಾರೆ. ನಮ್ಮ ಕಷ್ಟ ಜನರಿಗೇನು ಗೊತ್ತು ಪಾಪ !

ವಾತಾವರಣಕ್ಕೆ ಭೀಮನ ಬಲವಿದೆ. ಅದರಲ್ಲಿ ತೋರುವ ಗುಡುಗು ಮಿಂಚಿಗೆ, ಸುಳಿಗಾಳಿ ಸುಂಟರಗಾಳಿಗೆ ಅಪಾರವಾದ ಆಘಾತಶಕ್ತಿ ಇದೆ. ಲಕ್ಷಾಂತರ ಚದುರುಮೈಲು ಪ್ರದೇಶವನ್ನು ನೆರೆಯಿಂದ ಮುಳುಗಿಸುವ ತ್ರಾಣವಿದೆ. ಒಂದೊಂದು ಮಿಂಚಿನ ಮೇಘದಲ್ಲಿ ಹತ್ತು ಲಕ್ಷ ವೋಲ್ಟಿನ ವಿದ್ಯುಚ್ಛಕ್ತಿಯಿದೆ; ಲಕ್ಷಾಂತರ ಅಶ್ವಶಕ್ತಿಯ ಬಲವಿದೆ. ಒಂದೊಂದು ಸುಂಟರಗಾಳಿಯಲ್ಲೂ ಹತ್ತು ಅಣುಬಾಂಬಿನ ಶಕ್ತಿ ಅಡಕವಾಗಿದೆ. ಇಷ್ಟೊಂದು ಪ್ರತಾಪವುಳ್ಳ ವಾತಾವರಣದ ಕಾರ್ಯಕಲಾಪವನ್ನು ತಿಳಿದುಕೊಳ್ಳುವುದೇ ಮಾನವನಿಗೆ ಕಷ್ಟಕರವಾಗಿರುವಾಗ ಅದರ ಭವಿಷ್ಯವನ್ನು ಹೇಳುವುದು ಇನ್ನಷ್ಟು ದುಸ್ಸಾಧ್ಯವಲ್ಲವೇ ?

ಪ್ರಕೃತಿಯ ರಹಸ್ಯ ಬಹಳ ಗೂಢವಾಗಿದೆ ಮತ್ತು ಬಹಳ ಅಗಾಧವಾಗಿದೆ. ಈ ರಹಸ್ಯವನ್ನು ಹೊರಗೆಡಹಲು ವಿಜ್ಞಾನಿ ಪಣತೊಟ್ಟಿದ್ದಾನೆ. ಈ ಹೋರಾಟದಲ್ಲಿ ಆತನು ಅಲ್ಪಸ್ವಲ್ಪ ಜಯಶಾಲಿಯಾಗಿದ್ದಾನೆ. ಈ ಹೋರಾಟದ ಒಂದು ದೃಶ್ಯ ಹವಾಮಾನದ ಮುನ್ಸೂಚನೆಯ ಕ್ಷೇತ್ರದಲ್ಲಿ ಜರುಗುತ್ತಿದೆ. ಈ ಕಾರಣರಂಗದಲ್ಲಿ ಹವಾ ವಿಜ್ಞಾನಿ ಇನ್ನೂ ಹೆಚ್ಚಿನ ಜಯವನ್ನು ಹೊಂದಲಿರುವನೆಂಬದರಲ್ಲಿ ಸಂದೇಹವಿಲ್ಲ.

# ಭಾರತೀಯ ಚಿತ್ರರಂಗದ ಕುಂದುಕೊರತೆಗಳು

**ಭಾರತದ ಚಿತ್ರೋದ್ಯಮವು ಒಂದು ರಜತ ಮಹೋತ್ಸವವನ್ನು ಕಳೆದ ವರುಷವೇ ಆಚರಿಸಿತು. ಈ ಇಪ್ಪತ್ತೈದು ವರುಷಗಳಲ್ಲಿ ಅನೇಕ ರಂಗಗಳಲ್ಲಿ, ತಾಂತ್ರಿಕ ರಂಗದಲ್ಲಿ ಪ್ರಗತಿಯಾಗಿದೆ ನಿಜ. ಆದರೆ ಮುಖ್ಯವಾಗಿ ವಿಶೇಷ ಪ್ರಗತಿಯಾಗಬೇಕಾಗಿದೆ. ಅಲ್ಲದೇ ಇತ್ತೀಚೆಗೆ ಅನುಕರಣೆಯ ಪ್ರವೃತ್ತಿಯಿಂದಾಗಿ ಅನೇಕ ಅನಿಷ್ಟಗಳು ಹೊಕ್ಕಿರುವವು. ಇವೆಲ್ಲ ನಿವಾರಣೆಯಾಗಿ ನಮ್ಮ ಚಿತ್ರಗಳು ಸಾಂಸ್ಕೃತಿಕ ಪ್ರಚಾರದ ಸಾಧನಗಳಾಗಬೇಕಾಗಿದೆ.**

ಲೇಖಕರು: ಶ್ರೀ. ಎಸ್. ವ್ಹಿ. ಪಾಟೀಲ

ಭಾರತೀಯ ಚಲಚ್ಚಿತ್ರೋದ್ಯಮವು ಒಂದು ರಜತಮಹೋತ್ಸವವನ್ನು ಆಚರಿಸಿದರೂ ಅದರಲ್ಲಿ ಹೇಳಿಕೊಳ್ಳುವಂತಹ ಸುಧಾರಣೆಯೇನೂ ಆಗಿಲ್ಲವೆಂದು ಹೇಳಿದರೆ ಅನೇಕರಿಗೆ ಆಶ್ಚರ್ಯವೂ ಸೋಜಿಗವೂ ಎನಿಸಬಹುದು. ಸುಧಾರಣೆ ಒಂದು ದೃಷ್ಟಿಯಿಂದ ಆಗಿದೆ, ಒಂದು ದೃಷ್ಟಿಯಿಂದ ಆಗಿಲ್ಲ. ಛಾಯಾಗ್ರಹಣ, ಧ್ವನಿಗ್ರಹಣಗಳ ದೃಷ್ಟಿಯಿಂದ ಈ ಸುಧಾರಣೆಯಾಗಿದ್ದರೆ ಕಥನತಂತ್ರದ ದೃಷ್ಟಿಯಿಂದ ಮಾತ್ರ ಬಹಳಷ್ಟು ಸುಧಾರಣೆ ಆಗಬೇಕಾಗಿರುವದು.

ಚಿತ್ರದಲ್ಲಿ ಕಥನ ತಂತ್ರವು ಬಹಳ ಪ್ರಾಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತದೆ. ಅದು ಚಿತ್ರದ ಜೀವಾಳವೆಂದರೂ ಸರಿ. ಇಂತಹ ಸಂಗತಿಯ ಬಗೆಗೆ ನಮ್ಮ ಚಿತ್ರ ನಿರ್ಮಾಪಕರು ಅಷ್ಟೊಂದು ಲಕ್ಷ್ಯವನ್ನು ಪೂರೈಸುತ್ತಿಲ್ಲ. ಕಥೆಯ ಮೇಲೆ ಚಿತ್ರವು ಆಧಾರವಾಗಿರದೇ ಚಿತ್ರದ ಹೆಸರನ್ನು ಮೊದಲು ನಿರ್ಧರಿಸಿಕೊಂಡೋ, ಕೆಲವೊಂದು ತಾರೆಯರಿಗೆ ವಿಶೇಷ ಪ್ರಾಮುಖ್ಯ ಕೊಡುವ ಸನ್ನಿವೇಶಗಳನ್ನುಸೇರಿಸಿಯೋ ನಮ್ಮ ಅನೇಕ ಚಿತ್ರಗಳ ಕಥಾವಸ್ತುಗಳು ರೂಪಗೊಂಡಿರುವವು. ಹೀಗಾಗಿ ಅವು ಹೆಸರಿಗೆ ಮಾತ್ರ ಚಲಚ್ಚಿತ್ರವಾಗಿರುವವಲ್ಲದೆ ನಿಜವಾಗಿ ,ಚಲಚ್ಚಿತ್ರಗಳೆನಿಸುವದಿಲ್ಲ. ಭಾರತದಲ್ಲಿ ಪ್ರತಿವರುಷ ಸುಮಾರು ಮೂರುನೂರು ಚಿತ್ರಗಳು ತಯಾರಾಗುತ್ತಿದ್ದರೂ ಹೇಳಿಕೊಳ್ಳುವಂತಹ ಚಿತ್ರಗಳು ಕೇವಲ ಎಂಟು ಹತ್ತು ಮಾತ್ರ ದೊರೆಯುವವು.

ಉತ್ತಮ ಕಥಾವಸ್ತುವಿದ್ದರೂ ಅದನ್ನು ಸರಿಯಾಗಿ ಬೆಳೆಸಿಕೊಂಡು ಬಾರದ ಚಿತ್ರಗಳೂ ಅನೇಕವಿರುವವು. ಇತ್ತೀಚೆಗೆ ಪ್ರದರ್ಶನಕ್ಕೆ ಬಂದ ಆಗ್ರಾರೋಡ ಮತ್ತು ಛೋಟಿಬಾಬು ಚಿತ್ರಗಳಲ್ಲಿ ಕೊನೆಯ ಭಾಗದಲ್ಲಿ ಉತ್ತಮ ಬೆಳವಣಿಗೆ ಪಡೆದ ಕಥಾವಸ್ತು ಮೊದಲರ್ಧದಲ್ಲಿ ಸಪ್ಪೆಯಾಗಿರುವದು. ಇದರಿಂದಾಗಿ ಅವು ಉತ್ತಮ ಚಿತ್ರಗಳಾಗುವದು ತಪ್ಪಿರುವದು.

ನಮ್ಮ ಚಿತ್ರಗಳಲ್ಲಿ ಭಾವನೆಗಿಂತ ಸಂಭಾಷಣೆಗೆ ಹಬ್ಬು ದೊರೆತಿರುವುದು ಇನ್ನೊಂದು ದೊಡ್ಡ ಕುಂದೆಂದು ಹೇಳಬಹುದು. ಹೆಚ್ಚಾಗಿ ಸಂಭಾಷಣಾ ಪ್ರಧಾನ ಚಿತ್ರಗಳೇ ಇರುವವು. ಅನೇಕ ಪಾತ್ರಗಳು ವಿವಿಧ ಪ್ರಸಂಗಗಳಲ್ಲಿ ತಮ್ಮ ಸಮಸ್ಯೆಗಳನ್ನು ಸಂಭಾಷಣೆಗಳ ರೂಪದಲ್ಲಿಯೇ ವ್ಯಕ್ತಪಡಿಸುವವು. ನಾಯಿಕೆಯು ದುಃಖದ ಪ್ರಸಂಗದಲ್ಲಿ ಮನೆಯ ದೇವರಾದ ಕೃಷ್ಣನ ವಿಗ್ರಹದೆದುರು ನಿಂತೋ ಕುಳಿತೋ ತನ್ನ ದುಃಖದ ಬಗೆಗೆ ಉದ್ವೇಗಕರವಾದ ಆತ್ಮಸಂಭಾಷಣೆ ನಡೆಸುವಳು. ಇದರಲ್ಲಿ ಒಮ್ಮೊಮ್ಮೆ ಬದಲಾವಣೆಯಾಗಿ ತನ್ನ ತಂದೆ-ತಾಯಿಗಳ ಭಾವಚಿತ್ರದೆದುರು ನಿಂತು ತನ್ನ ದುಃಖವನ್ನು ತೋಡಿಕೊಳ್ಳುವಳು. ನಾಯಕನು ಪ್ರೇಮಭಂಗವಾದಾಗ ಇಲ್ಲವೇ ಪ್ರೇಮಿಯು ತನ್ನನ್ನು ಸುಲಭವಾಗಿ ಪ್ರೇಮಿಸುವದಿಲ್ಲವೆಂದು ಕಂಡು ಬಂದಾಗ ಎಲ್ಲೆಲ್ಲೊ ತಿರುಗಾಡುವನು; ಉದ್ವೇಗಗೊಂಡು ಹಾಡುವನು. ಹೆಂಡತಿಗೆ ಯಾವದೇ ದುಃಖದ ಪ್ರಸಂಗ ಬಂದಾಗ ತನ್ನ ಪತಿಯ ಸ್ಮರಣೆ ತಂದುಕೊಡುವಂತಹ ವಸ್ತುಗಳ ಮುಂದೆ ನಿಂತು ದುಃಖಿಸುವಳು; ತನ್ನ ಮಗನು ಅಡ್ಡದಾರಿ ಹಿಡಿಯುವನೆಂದು ಸಿಟ್ಟಿಗೆದ್ದ ತಂದೆ ಅವನಿಗೆ ಉಪದೇಶಪರವಾದ ಉದ್ದುದ್ದ ಭಾಷಣಗಳನ್ನು ಬಿಗಿಯುವನು.

ಹೀಗಾಗಿ ಈ ಸನ್ನಿವೇಶಗಳೆಲ್ಲ ಹೆಚ್ಚಾಗಿ ನಾಟಕೀಯವೆನಿಸುವವು. ಅವುಗಳಲ್ಲಿ ಭಾವನೆಯನ್ನು ವ್ಯಕ್ತಪಡಿಸುವ ರೀತಿ ಸಂಭಾಷಣೆಯೊಂದಲ್ಲದೇ ಬೇರೇನೂ ಇಲ್ಲವೆಂದು ತಿಳಿದಂತೆ ಕಂಡುಬರುವದು. ಈ ತಂತ್ರವನ್ನು ಚಿತ್ರೋದ್ಯಮದ ಪ್ರಾರಂಭದಲ್ಲಿ ಜಗತ್ತಿನಲ್ಲೆಲ್ಲ ಅನುಸರಿಸಲಾಗುತ್ತಿದ್ದರೂ ಇಂದು ಜಗತ್ತಿನ ಉಳಿದ ಭಾಗಗಳಲ್ಲಿ ಅನೇಕ ವಿಧದಲ್ಲಿ ಸುಧಾರಣೆಯಾಗಿದ್ದರೂ ಭಾರತದಲ್ಲಿ ಮಾತ್ರ ಈ ವಿಷಯದಲ್ಲಿ ಆಗಿರುವದಿಲ್ಲ.

ರಂಗಭೂಮಿಯಲ್ಲಿ ಹೆಚ್ಚಾಗಿ ಈ ತಂತ್ರವನ್ನು ಅನುಸರಿಸುವದು ಅವಶ್ಯವಿರುತ್ತದೆ. ಅಲ್ಲಿ ದೂರ ದೂರ ಕುಳಿತ ಪ್ರೇಕ್ಷಕರಿಗೆ ಮುಖದಲ್ಲಿ ವ್ಯಕ್ತಪಡಿಸುವ ಸೂಕ್ಷ್ಮ ಭಾವನೆಗಳನ್ನು, ವ್ಯತ್ಯಾಸಗಳನ್ನು ಗುರುತಿಸುವದು ಸಾಧ್ಯವಾಗುವದಿಲ್ಲ. ಅದಕ್ಕಾಗಿ ಸಂಭಾಷಣೆಗಳ ಮುಖಾಂತರವಾಗಿ, ಧ್ವನಿಯ ಏರಿಳಿತದಿಂದ ಭಾವನೆಗಳನ್ನು ಪ್ರೇಕ್ಷಕರಿಗೆ ವ್ಯಕ್ತಪಡಿಸಿ ತೋರಿಸಬೇಕಾಗುವದು. ಆದರೆ ಚಲಚ್ಚಿತ್ರಗಳಲ್ಲಿ ಇದು ಅವಶ್ಯವಿರುವದಿಲ್ಲ.

ಚಲಚ್ಚಿತ್ರಗಳಲ್ಲಿ ಪ್ರೇಕ್ಷಕರ ಅಂತರದ ಪ್ರಶ್ನೆಯೇ ಉದ್ಭವಿಸುವದಿಲ್ಲ. ಎಷ್ಟು ದೂರ ಕುಳಿತವನೂ ಪ್ರತಿಯೊಂದು ವ್ಯತ್ಯಾಸವನ್ನು, ಸೂಕ್ಷ್ಮ ಭಾವನೆಯನ್ನು ಸುಲಭವಾಗಿ ಗುರುತಿಸುವಂತೆ ಛಾಯಾಗ್ರಹಣದ ವ್ಯವಸ್ಥೆಯಿರುತ್ತದೆ. ದಿಗ್ದರ್ಶಕರು ಯಾವ ಯಾವ ಭಾವನೆಗಳು, ಯಾವ ಯಾವ ಅಂಶಗಳು ಪ್ರೇಕ್ಷಕರಿಗೆ ಕಾಣಬೇಕೆಂದು ನಿರ್ಧರಿಸುವರೋ ಅವನ್ನೆಲ್ಲವನ್ನು ಪ್ರೇಕ್ಷಕರು ಕಾಣುವರು. ಕೇವಲ ಮುಖವೊಂದನ್ನೇ ತೋರಿಸಬೇಕೆಂದು ಬಯಸಿದಲ್ಲಿ ಇಡೀ ಪರದೆಯ ತುಂಬ ಕಾಣುವಷ್ಟು ದೊಡ್ಡದಾಗಿ ಮುಖವನ್ನು ತೋರಿಸಬಹುದು. ನೃತ್ಯದ ಕಾಲದಲ್ಲಿ ಕಾಲುಗಳು ಹೇಗೆ ಮತ್ತು ಎಷ್ಟು ತ್ವರಿತದಿಂದ ಚಲಿಸಬಹುದೆಂಬ



'ಅಂಜಲಿ' ಚಿತ್ರದಲ್ಲಿ ಒಂದು ದೃಶ್ಯ



ಕ. ವಿ. ಸಂ. ೧೬.



' ಮುಸಾಫಿರ' ಚಿತ್ರದಲ್ಲಿ ದಿಲೀಪ ಕುಮಾರ, ಡೇಸಿ ಇರಾಣಿ

ದನ್ನು ಸಹ ಇದೇ ರೀತಿಯಲ್ಲಿ ತೋರಿಸಬಹುದಾಗಿದೆ. ಯಾವದೇ ಅಂಶವನ್ನು ದೊಡ್ಡದಾಗಿ ಮಾಡಿ ತೋರಿಸಲು ಸಾಧ್ಯವಿರುವದರಿಂದ ಅಲ್ಲಿಯ ಸೂಕ್ಷ್ಮ ಅಂಶಗಳು ಹಾಗೂ ವ್ಯತ್ಯಾಸಗಳನ್ನು ಪ್ರೇಕ್ಷಕರೆಲ್ಲರೂ ಸುಲಭವಾಗಿ ಕಂಡುಕೊಳ್ಳಬಹುದಾಗಿದೆ.

ಇಲ್ಲಿ ಒಂದು ಚಿಕ್ಕ ಸನ್ನಿವೇಶದ ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಬ್ಬ ಹೆಣ್ಣುಮಗಳು ಚಿತ್ರಮಂದಿರದ ಆವಾರದಲ್ಲಿ, ಕಚೇರಿಯಿಂದ ನೇರವಾಗಿ ಅಲ್ಲಿಗೆ ಬರುವ ತನ್ನ ಪತಿಯ ಮಾರ್ಗಪ್ರತೀಕ್ಷೆ ಮಾಡುತ್ತಿರುವಳು ಅವನದು ವಿಲಂಬವಾಗತೊಡಗುತ್ತದೆ. ಚಿತ್ರವು ಪ್ರಾರಂಭವಾಗುವದರಲ್ಲಿದೆ. ಇನ್ನೂ ಅವನ ದರ್ಶನವಿಲ್ಲ. ಹೊರಗೆ ನಿಂತಿರುವ ಜನರೆಲ್ಲ ಒಳಗೆ ಹೋಗುತ್ತಾರೆ. ಅವಳು ಉದ್ವಿಗ್ನಳಾಗುತ್ತಾಳೆ. ತಡಮಾಡಿ ಅನೇಕರು ಬಂದು ಅವಳ ಬಳಿ ಹಾದು ಹೋಗುತ್ತಾರೆ. ಅವಳು ಅವರೆಲ್ಲರನ್ನೂ ನೋಡುತ್ತಾಳೆ. ಅವಳ ಪತಿ ಅವರಲ್ಲಿ ಕಾಣದ್ದರಿಂದ ಅಸಹಾಯಳಾಗುತ್ತಾಳೆ. ಚಿತ್ರವು ಪ್ರಾರಂಭವಾಗುತ್ತದೆ. ಆವಾರವೆಲ್ಲ ಬರಿದಾಗುತ್ತದೆ. ಅವಳು ಕಳವಳಗೊಂಡಂತೆ ಕಾಣುವದು. ಅವಳು ಹೊರಗೆ ಬರಬೇಕೆಂದು ಹೊರಡುತ್ತಾಳೆ. ಒಂದು ಟ್ಯಾಕ್ಸಿ ಬಂದು ನಿಲ್ಲುತ್ತದೆ. ಆದರಿಂದ ಒಬ್ಬನು ಹೊರಗೆ ಬಂದು ಬಹು ಚಿಕ್ಕ ಧ್ವನಿಯಲ್ಲಿ " ಬಹಳ ತಡವಾಯಿತು. ಏನು ಮಾಡಲಿ. ಕೆಲಸ ಲಗೂ ಮುಗಿಯಲಿಲ್ಲ '' ಎನ್ನುತ್ತಾನೆ. ಅವಳ ಕಡೆಗೆ ನೋಡುತ್ತಾನೆ. ಅವಳು ಮೌನಿಯಾಗಿಯೇ ಇರುತ್ತಾಳೆ. " ನನಗೆ ನಿನಗಿಷ್ಟು ತೊಂದರೆ ಕೊಡಬೇಕೆಂಬ ಇಚ್ಛೆಯಿರಲಿಲ್ಲ. ಆದರೂ... .. '' ಎಂದು ಕ್ಷಮಾಪಣೆಯ ಧ್ವನಿಯಲ್ಲಿ ಮತ್ತೆ ಕೇಳಿಕೊಳ್ಳುತ್ತಾನೆ. ಈ ಹೊತ್ತಿಗೆ ಅವರು ಟಕೀಟ ಆಫಿಸ ವರೆಗೆ ಬಂದಿರುತ್ತಾರೆ. ಅವನಿಗೆ ಏನು ಮಾಡಬೇಕೆಂಬುದು ತೋಚದಾಗುತ್ತದೆ. " ನೀನು ಬಹಳ ಕೋಪಗೊಂಡಿರುವೆಯಾ '' ಎಂದು ಹೆಂಡತಿಗೆ ಕೇಳುತ್ತಾನೆ. ಇಡೀ ಪ್ರಸಂಗದಲ್ಲಿ ಅವಳು ಈಗ ಅವನ ಕಡೆಗೆ ಮೊದಲ ಬಾರಿ ನೋಡುವಳು. ಅವಳ ಮುಖದ ಮೇಲಿದ್ದ ವಿಷಣ್ಣಭಾವವು ಮಾಯವಾಗುವದು. ಒಳಗೆ ಹೋಗುವ ಕಾಲಕ್ಕೆ " ಇಲ್ಲ ನಾನೇನು ಸಿಟ್ಟಿಗೆದ್ದಿಲ್ಲ '' ಎಂದು ಪತಿಗೆ ಹೇಳುತ್ತಾಳೆ.

ಅವನು ಬಂದ ಕೂಡಲೇ ತನ್ನ ಪತ್ನಿ ಸಿಟ್ಟಿಗೆದ್ದಿರುವದು ಗೊತ್ತಾಗುತ್ತದೆ. ಅವಳ ಮುಖಭಾವ, ನಿಂತ ನಿಲುವು ಇವೇ ಅವನಿಗೆ ಅವಳ ಸಿಟ್ಟನ್ನು ತೋರಿಸಿಕೊಡುವವು. ಅವಳು ಸಂಭಾಷಣೆಯಿಂದ ತನ್ನ ಸಿಟ್ಟನ್ನು ವ್ಯಕ್ತಪಡಿಸುವ ಕಾರಣವೇ ಬೀಳುವದಿಲ್ಲ. ಇದೇ ಜೀವನಕ್ಕೆ ಸಮಿಪವರ್ತಿಯಾಗಿರುವ ಚಲಚ್ಚಿತ್ರವೆಂದು ಹೇಳಬಹುದು. ಇದನ್ನು ಬಿಟ್ಟು ಇಲ್ಲಿ ಅವಳ ಸಿಟ್ಟನ್ನು ತೋರಿಸಲು ಹೊರಬಂದಕೂಡಲೇ ಸಿಕ್ಕಾಪಟ್ಟೆ ಕೂಗುವ ಸಂಭಾಷಣೆಯನ್ನು ಹಾಕಿದರೆ ಆ ಸನ್ನಿವೇಶದ ಘನತೆ ಹಾಳಾಗುವದಷ್ಟೆ ಅಲ್ಲ ಅದು ಜೀವನದಲ್ಲಿ ಕಂಡುಬಾರದ ಅಸ್ವಾಭಾವಿಕವಾದ ಘಟನೆಯಾಗಿ ಪರಿಣಮಿಸುವದು.

ನಮ್ಮ ಇಂದಿನ ಚಲಚ್ಚಿತ್ರಗಳಲ್ಲಿ ಕಂಡುಬರುವ ಅತಿ ಮಹತ್ವದ ಕುಂದು ಮತ್ತು ಕೊರತೆ ಇದಾಗಿರುವದು. ಮಾನವೀಯ ಭಾವನೆಗಳನ್ನು ವ್ಯಕ್ತಪಡಿಸುವ ಗೋಜಿಗೆ ಹೋಗುವದಿಲ್ಲ. ಈ ರೀತಿ ಭಾವನೆ ವ್ಯಕ್ತಪಡಿಸುವ ತಂತ್ರವು ಚಿತ್ರದ ಜೀವಾಳದಂತಿದ್ದು ಅದು ನಮ್ಮಲ್ಲಿ ಬೆಳೆದು ಬರಬೇಕಾಗಿದೆ. ನಮ್ಮ " ಚಿತ್ರನಾಟಕ '' ಗಳ ಬರೆಹಗಾರರು ಸಂಭಾಷಣೆಗೆ ಪ್ರಾಶಸ್ತ್ಯ ಕೊಟ್ಟು ಚಿತ್ರನಾಟಕಗಳನ್ನು ಬರೆಯುವ ವರೆಗೆ, ದಿಗ್ದರ್ಶಕರು ಹೆಚ್ಚು ಲಕ್ಷ್ಯಕೊಡದೆ ಅವನ್ನು ಚಿತ್ರಿಸುತ್ತ ಹೋಗುವವರೆಗೆ ನಾವು ಈ ಕೊರತೆಯನ್ನು ಹೋಗಲಾಡಿಸಿ ಉತ್ತಮ ಚಿತ್ರಗಳನ್ನು ನಿರೀಕ್ಷಿಸುವದು ಸಾಧ್ಯವಿಲ್ಲ. ನಮ್ಮ ಚಿತ್ರ ನಾಟಕಗಳಲ್ಲಿ ವಿಶಾಲವಾದ ಸನ್ನಿವೇಶಗಳು ತುಂಬಿರುವವಲ್ಲದೆ ಪಾತ್ರಗಳು ವಿಶೇಷವಾಗಿ ಸಂಭಾಷಣೆಯಲ್ಲಿ ಮಗ್ನವಾಗುವವು. ಇದರಿಂದ ನಮ್ಮ ಚಿತ್ರಗಳಲ್ಲಿಯ ಪಾತ್ರಧಾರಿಗಳು ಒಂದು ರೀತಿಯಿಂದ ಸಂಭಾಷಣಕಾರರಾಗಿ ಪರಿಣಮಿಸಿರುವರೆಂದೇ ಹೇಳಬೇಕು.

ಈಗ ಅಂತಾರಾಷ್ಟ್ರೀಯ ಖ್ಯಾತಿ ಪಡೆದ " ಜಾಗತೆ ರಹೋ '' ನಮ್ಮ ಸಾಮಾನ್ಯ ಚಿತ್ರಗಳಿಗಿಂತ ಭಿನ್ನವಾಗಲು ಮಾನವೀಯ ಭಾವನೆಗಳನ್ನು ವ್ಯಕ್ತಪಡಿಸುವ ಹೃದಯಸ್ಪರ್ಶಿ ಸನ್ನಿವೇಶಗಳಿಂದ ಕೂಡಿರುವದೇ ಕಾರಣವಾಗಿದೆ. ಅದರಲ್ಲಿ ನಗರಕ್ಕೆ ಉದ್ಯೋಗ ದೊರಕಿಸಲು ಬಂದ ಹಳ್ಳಿಯವನು ಅನೇಕ ಸಂಕಷ್ಟಗಳನ್ನೆದುರಿಸಿದರೂ ಒಂದು ಚಕಾರ ಶಬ್ದ ಮಾತಾಡುವದಿಲ್ಲ. ಅವನು ಯಾವ ರೀತಿ ಅನುಭೋಗಿಸುತ್ತಿರುವನೆಂಬುದನ್ನು ಅವನ ಮುಖಭಾವದಿಂದ, ಚಲನವಲನಗಳಿಂದಲೇ ತಿಳಿಯುವಂತೆ ಚಿತ್ರಣ ಕಾರ್ಯವು ನಡೆದಿರುವದು. ಈ ಪಾತ್ರಧಾರಿಯೂ ಸಂಭಾಷಣೆಗಿಳಿದಿದ್ದರೆ ಇಡೀ ಚಿತ್ರದ ಸ್ವಾರಸ್ಯವೇ ಕೆಟ್ಟು ಹೋಗುತ್ತಿತ್ತು. ಈ ಹಿಂದೊಮ್ಮೆ ಪ್ರದರ್ಶನಕ್ಕೆ ಬಂದ " ರತ್ನದೀಪ '' ಚಿತ್ರದಲ್ಲಿಯೂ ಇದೇ ರೀತಿ ಭಾವನಾತ್ಮಕವಾದ



'ಜಾಗತೆ ರಹೋದಲ್ಲಿ' ರಾಜಕಪೂರ

ಅನೇಕ ಹೃದಯಸ್ಪರ್ಶಿ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಪತ್ನಿಯಿಂದ ವಂಚನೆಗೊಳಗಾದ ಯುವಕನು ಬೇರೊಬ್ಬರನ್ನು ಹಣಕ್ಕಾಗಿ ವಂಚಿಸಲು ಹೋಗಿ ತಾನು ಘೋರ ಅನ್ಯಾಯಮಾಡಿರುವದಾಗಿ ಕಂಡುಕೊಳ್ಳುವ ಸನ್ನಿವೇಶಗಳು ಯಾವದೇ ಸಂಭಾಷಣೆಗಳಿಲ್ಲದೆ ಮುಖಭಾವಗಳಿಂದಲೇ ಪರಿಸ್ಥಿತಿಯನ್ನು ಸೂಚಿಸುವಂತಿರುವವು. ಇದೇ ವಾಸ್ತವತೆಯೆನಿಸುವ ಚಿತ್ರೀಕರಣ; ಜೀವನಕ್ಕೆ ಸಮೀಪವೆನಿಸುವ ಚಲಚ್ಚಿತ್ರ.

ಇತ್ತೀಚೆಗೆ ಇನ್ನು ಕೆಲವೊಂದು ಅನಿಷ್ಟಗಳು ನಮ್ಮ ಚಿತ್ರಗಳಲ್ಲಿ ಸೇರಿಕೊಂಡಿರುವವು. 'ಬಾಲ ...ಮು' ನೃತ್ಯದ ಸನ್ನಿವೇಶ ಪ್ರತಿಯೊಂದು ...ತ್ರಕ್ಕೆ ಅವಶ್ಯವಿರಲಿ ಇಲ್ಲದಿರಲಿ ಬೇಕೇಬೇಕು. ಸಂದರ್ಭವಿರಲಿ ಇಲ್ಲದಿರಲಿ ಯಾವನಾದರೊಬ್ಬ ಹಾಡುಗಾರ ನೃತ್ಯಗಾರ ತಾತ್ವಿಕ ಗೀತಗಳನ್ನು ಹಾಡುತ್ತಹೋಗಬೇಕು ಇಲ್ಲವೆ ನರ್ತಿಸಬೇಕು. ಭೊಟಿಬಾಬು ಚಿತ್ರದಲ್ಲಿಯ ಈ ಪ್ರಸಂಗಗಳನು, ಇಲ್ಲಿ ಲಕ್ಷಿಸಬೇಕು. ನೀಲಂಘಾಟದಂತಹ ಚಿಕ್ಕ ಹಳ್ಳಿಯಲ್ಲಿ ಒಬ್ಬ ಮುದುಕ, ಹುಡುಗನೊಂದಿಗೆ ತಾತ್ವಿಕ ಗೀತ ಹಾಡುತ್ತ ಹೋಗುವದು, ತಿರುಗಿ ಬರುವದನ್ನು ಚಿತ್ರಿಸಲಾಗಿದೆ. ಇಲ್ಲಿ ಅವನು ನಾಯಕನೆದುರು ಒನ್ಮೆ ಬಂದು ಹೋದರಾಯಿತು. ಅವನ ಕೆಲಸ ಮುಗಿಯಿತು. 'ಅಭಿಮಾನ'ದಲ್ಲಿಯೂ ಇಂತಹ ಸನ್ನಿವೇಶಗಳಿವೆ. ಅನೇಕ ಚಿತ್ರಗಳಲ್ಲಿ ಇವು ಈಗ ಬರುತ್ತಿದ್ದು ಇದೊಂದು ಸುಂಕುರೋಗವೇ ಆದಂತಾಗಿರುವದು. ಅನವಶ್ಯಕವಾಗಿ ಗೀತೆಗಳನ್ನು ಸೇರಿಸುವದು ಸಂಪ್ರದಾಯವೇ ಆಗತೊಡಗಿರುವದು. ದುಃಖದ ಸನ್ನಿವೇಶದಲ್ಲಿ, ಸುಖದ ಸನ್ನಿವೇಶದಲ್ಲಿ, ಹಾಸ್ಯದ ಸನ್ನಿವೇಶದಲ್ಲಿ ಗೀತಗಳು ಹೇರಳವಾಗಿ ತೂರಿಕೊಂಡು ಬರುವವು. ಸಂತೋಷಗೊಂಡಾಗ ಹಾಡಬಹುದೆಂದು ಇಟ್ಟುಕೊಳ್ಳೋಣ. ದುಃಖದ ಪ್ರಸಂಗಗಳಲ್ಲಿ-ನಿಜವಾದ ಜೀವನದಲ್ಲಿ- ಎಷ್ಟು ಜನರು ಹಾಡಬಹುದು? ಇದಕ್ಕೆಲ್ಲ ನಿರ್ಮಾಪಕರು ಕೊಡುವ ಉತ್ತರ ಒಂದೇ ಒಂದು. ಜನರ ಬೇಸರ ಕಳೆದು ಮನೋರಂಜನೆ ಮಾಡಲು ಚಿತ್ರಗಳು ಇರುವವೇ ಹೊರತು ಜೀವನದ ಪ್ರತಿಕೃತಿಗಳು ಅವಲ್ಲ. ಇಂತಹ ಚಿತ್ರಗಳನ್ನು ನಿರ್ಮಿಸಿಯೇ ಪ್ರೇಕ್ಷಕರಲ್ಲಿ ಕೀಳು ಅಭಿರುಚಿಯನ್ನು ನಮ್ಮ ನಿರ್ಮಾಪಕರು ಉಂಟು ಮಾಡಿರುವರೆಂದು ವಿಷಾದದಿಂದ ಹೇಳಬೇಕಾಗಿದೆ.

ಭಾರತೀಯ ಚಿತ್ರಗಳಲ್ಲಿ ಒಂದೆರಡಾದರೂ ಅಂತಾರಾಷ್ಟ್ರೀಯ ಖ್ಯಾತಿಗಳಿಸುವಷ್ಟು ಉತ್ತಮ ಮಟ್ಟಕ್ಕೆ ಬಂದಿರುವದು ಇದ್ದುದರಲ್ಲಿಯೇ ಸಮಾಧಾನಕರವಾದ ಸಂಗತಿಯಾಗಿರುವದು. ಆದರೆ ಆಂತರಿಕ ಪೇಟೆಯಲ್ಲಿಯೂ ಅವು ನಿರೀಕ್ಷೆ ಮೀರಿ ಹಣಗಳಿಸುತ್ತಿರುವದು ಸಮಾಧಾನಕರವಾದ ಸಂಗತಿಯೇ. ಇಷ್ಟು ಹಣ ಬರುತ್ತಿದ್ದರೂ ನಿರ್ಮಾಪಕರು ಆರ್ಥಿಕ ದುಃಸ್ಥಿತಿಗೊಳಗಾಗುವದು ತಪ್ಪುತ್ತಿಲ್ಲ.

ಚಿತ್ರ ನಿರ್ಮಾಣದ ವೆಚ್ಚ ಹೆಚ್ಚಿರುವದೇ ಇದಕ್ಕೆ ಮುಖ್ಯ ಕಾರಣವೆಂದು ಸಾಮಾನ್ಯವಾಗಿ ಹೇಳಬಹುದಾದರೂ ನಿರ್ಮಾಪಕರೇ ಒಂದು ದೃಷ್ಟಿಯಿಂದ ಕಾರಣೀಭೂತರಾಗಿರುವರು. ಚಿತ್ರಗಳನ್ನು ವಾಸ್ತವಿಕ ಸನ್ನಿವೇಶಗಳಿಂದ ಸರಳ ರೀತಿಯಲ್ಲಿ ನಿರ್ಮಿಸವೇ ಇಲ್ಲದ ತೊಡಕುಗಳನ್ನು ತಂದು ಹಾಕಿಕೊಳ್ಳುವದು. ತಮ್ಮ ಚಿತ್ರದಲ್ಲಿ ಇಂಥಿಂಥ ಸನ್ನಿವೇಶಗಳು ಅವಶ್ಯಬೇಕೆಂದು ಪೂರ್ವಕಲ್ಪನೆಯಿಂದ ಅವುಗಳಿಗೆ ಅನವಶ್ಯಕವಾಗಿ ವೆಚ್ಚ ಮಾಡುವರು. ಇದಕ್ಕೂ ಹೆಚ್ಚಾಗಿ ಯಾವದಾದರೂ ಒಂದು ಚಿತ್ರದಲ್ಲಿ ಒಬ್ಬ ತಾರೆ ಯಶಸ್ವಿಯಾದರೆ ಅವಳು ತಮ್ಮ ಚಿತ್ರದಲ್ಲಿ ಹೇಗಾದರೂ ಅಭಿನಯಿಸಲೇಬೇಕೆಂದು ಹವ್ಯಾಸಕ್ಕೆ ಬಿದ್ದು ಆ ತಾರೆಯ ಯೋಗ್ಯತೆ ಮೀರಿ ಅವಳಿಗೆ ಹಣ ಕೊಟ್ಟು ಕರಾರು ಮಾಡಿಕೊಳ್ಳುವರು. ಹೀಗಾಗಿ ತಾರಾಬೆಲೆ ಇಂದು ಗಗನಕ್ಕೆ ಮುಟ್ಟಿರುವದು. ಒಂದೊಂದು ಚಿತ್ರದಲ್ಲಿ ಅಭಿನಯಿಸಲು ಒಬ್ಬೊಬ್ಬ ತಾರೆ ಲಕ್ಷ ರೂಪಾಯಿಗಳಿಗೂ ಮಿಕ್ಕಿ ಹಣ ಕೇಳುತ್ತಾರೆ. ಕೆಲ ತಾರೆಯರೇ ಅನೇಕ ಚಿತ್ರಗಳಲ್ಲಿ ಅಭಿನಯಿಸಬೇಕಾಗಿ ಬರುತ್ತಿರುವದೂ ಇದಕ್ಕೊಂದು ಕಾರಣವಾಗಿರುವದು. ನಿರ್ಮಾಪಕರು ಹೊಸಬರನ್ನು ತಂದು ಚಿತ್ರ ನಿರ್ಮಿಸಲು ಒಪ್ಪುವುದಿಲ್ಲ. ಇದ್ದ ಪ್ರಮುಖ ತಾರೆಯರೇ ಎಲ್ಲ ಚಿತ್ರಗಳಿಗೂ ಬೇಕೆಂದರೆ ಅವರಾದರೂ ಏನು ಮಾಡಿಯಾರು? 'ಬಹಾರ' ಚಿತ್ರದಿಂದ ಹಿಂದಿ ಚಲಚ್ಚಿತ್ರ ರಂಗ ಪ್ರವೇಶಿಸಿದ ವೈಜಯಂತಿ ಮಾಲಾ ಈ ಒಂದೇ ವರುಷ ಆಶಾ, ನಯಾ ದೌರ, ನಯಿದೆಹಲಿಗಳಲ್ಲಿ ಅಭಿನಯಿಸಿರುವಳಲ್ಲದೆ ಮಧುಮತಿ, ಕಾಥಪುತಳಿ, ಸಿತಾರಾಂಸೆ ಆಗೆ ಅಮರದೀಪಂಗಳಲ್ಲಿ ಈಗ ಅಭಿನಯಿಸುತ್ತಿರುವಳು. ನೂತನಳೂ ಇದೆ ಮಾಲಿಕೆಯಲ್ಲಿರುವಳು. ಈ ಹಿಂದೊಮ್ಮೆ ಬಿನಾ ರಾಯ, ಸುರೈಯಾರಿಗೆ ಚಿತ್ರರಂಗದಲ್ಲಿ ತೆರೆದ ಮಹರ್ದೆಶೆ ಇಂದು ಇವರ ಪಾಲಿಗೆ ಬಂದಿದೆಯೇನೊ! ಆದರೆ ಚಿತ್ರ ಪ್ರೇಮಿಗಳಿಗೆ ಮಾತ್ರ ಅದೇ ಮುಖಗಳನ್ನು ಕಾಣುವ ದುರ್ಭಾಗ್ಯ ಕಾದಿರುವದು !!

ರಂಗಯೋಜನೆಗೆ ಅಪಾರ ಹಣ ವೆಚ್ಚವಾಗುವದು ನಿಲ್ಲಬೇಕು. ಸರಳವಾದ ಸಾಮಾನ್ಯವಾದ ಆದರೆ ವಾಸ್ತವಿಕವಾದ ರೀತಿಯಲ್ಲಿ ಸನ್ನಿವೇಶಗಳನ್ನು ದೃಶ್ಯಗಳನ್ನು ಚಿತ್ರಿಸುವಂತಾಗಬೇಕು. ಸಾಮಾಜಿಕ ಚಿತ್ರಗಳಲ್ಲಿಯೂ ಆಡಂಬರದ ದೃಶ್ಯಗಳನ್ನು ಸೇರಿಸುವ ಚಟ ನಮ್ಮ ನಿರ್ಮಾಪಕರಲ್ಲಿ ಬೆಳೆದು ಬಂದಿರುವದು. ಈ ಎಲ್ಲ ಕುಂದು ಕೊರತೆಗಳನ್ನು ಹೋಗಲಾಡಿಸಿಕೊಳ್ಳದೆ ಭಾರತೀಯ ಚಿತ್ರಗಳು ನಿಜವಾಗಿಯೂ ಭಾರತೀಯ ಚಿತ್ರಗಳೆನಿಸಿಕೊಳ್ಳಲಾರವು.

ಭಾರತದ ಸಂಸ್ಕೃತಿಯ ಪ್ರಚಾರಕ ಸಾಧನಗಳೆನಿಸುವ ಚಿತ್ರಗಳಲ್ಲಿ ಭಾರತೀಯ ಜೀವನವು ಯಥಾವತ್ತಾಗಿ ಮೂಡಿ ಬರುವಂತೆ ನಿರ್ಮಾಪಕರು ದಿಗ್ದರ್ಶಕರು ನೋಡಿಕೊಳ್ಳಬೇಕು. ವಿದೇಶಿ ಅಂಶಗಳನ್ನು ಅವು ಎಷ್ಟೇ ಉತ್ತಮವಿದ್ದರೂ ಅನುಕರಿಸಿ ಅವೇ ಭಾರತೀಯರವೆಂದು ಸಾಧಿಸುವ ಪ್ರಯತ್ನ ಬಿಡಬೇಕು. ಯಾವದೇ ಕಥಾವಸ್ತುವಿರಲಿ ಅದು ಸರಿಯಾಗಿ ಬೆಳವಣಿಗೆ ಹೊಂದಬೇಕು. ಸಂಭಾಷಣೆಗಳು ಗೀತಗಳು ಕಡಿಮೆಯಾಗಿ ಭಾವನೆ ವ್ಯಕ್ತವಾಗುವದಕ್ಕೆ ಹೆಚ್ಚು ಅವಕಾಶ ಕೊಡಬೇಕು. ಇದರಿಂದ ಈಗ ತಾಂತ್ರಿಕ ಪ್ರಗತಿಯನ್ನು ಸಾಧಿಸಿದ ಭಾರತೀಯ ಚಿತ್ರೋದ್ಯಮವು ಇತರ ರಂಗಗಳಲ್ಲಿಯೂ ಪ್ರಗತಿ ಸಾಧಿಸಿ ಜಾಗತಿಕ ಪೇಟೆಯಲ್ಲಿ ಸುಲಭವಾಗಿ ಸ್ಪರ್ಧಿಸಬಹುದಾಗಿರುವದು.

---

# ಕಾಲೇಜಿನ ಪ್ರಥಮ ದಿನ

( ಲಘು ಲೇಖನ )

ಲೇಖಕರು: ಶ್ರೀ. ಬಾಬು ಬೆಂಡಿಗೇರಿ, ಎಮ್. ಎ.' ಎಲ್ ಎಲ್. ಬಿ., ಹುಬ್ಬಳ್ಳಿ

ಪ್ರತಿ ವರ್ಷದ ಜೂನ್ ಹದಿನೈದನೇ ದಿನಾಂಕದಂದು ನನಗೆ ಎಲ್ಲಿಲ್ಲದ ಬೇಸರ. ಯಾಕಂದರೆ ಆ ದಿನ ನನ್ನ ಮನಸ್ಸು ಏನೇನೋ ಜ್ಞಾಪಿಸಿಕೊಳ್ಳುವುದರಲ್ಲಿಯೇ ಮಗ್ನವಾಗಿರುತ್ತದೆ. ಎಲ್ಲ ಕೆಲಸಗಳನ್ನು ಬದಿಗಿರಿಸಿ ಹಿಂದಿನ ದಿನಗಳಲ್ಲಿ ನಡೆದುಹೋದ ಘಟನೆಗಳನ್ನು ಮೆಲಕು ಹಾಕುತ್ತ ಕೂಡ್ರುವುದೇ ಆ ದಿನದ ನನ್ನ ಪ್ರಧಾನ ಕೆಲಸ. ಆ ದಿನಕ್ಕೆ ಅಂಥ ಮಹತ್ವವಿದೆ. ಮಹತ್ವ ಯಾಕಂದರೆ ಆ ದಿನ ಎಲ್ಲ ಕಾಲೇಜುಗಳು ಅರಂಭವಾಗುತ್ತವೆ.

ಮಳೆ ನಿಂತರೂ ಮಳೆಯ ಹನಿ ನಿಲ್ಲಲಿಲ್ಲವೆನ್ನುವಂತೆ ಕಾಲೇಜ್ ಶಿಕ್ಷಣ ಮುಗಿಸಿದರೂ ಕಾಲೇಜಿನ ದಿನಗಳನ್ನು ಜ್ಞಾಪಿಸಿಕೊಳ್ಳುವುದು ಕಾಲೇಜಿನಲ್ಲಿ ಓದಿದವರೆಲ್ಲರಿಗೆ ಒಂದು ಚಟವಾಗಿಬಿಟ್ಟದೆ. ಅದು ನಾವು ಓದಿದ ಕೋಣೆಗಳಲ್ಲಿ ಸಾವಿರಾರು ವಿದ್ಯಾರ್ಥಿ ಓದಿಹೋಗಿದ್ದರೂ ಆ ಕೋಣೆಗಳು ನಮ್ಮ ಮನೆಯಲ್ಲಿನ ದೇವರ ಕೋಣೆಗಳಷ್ಟು ನಮಗೆ ಪವಿತ್ರ. ನಮಗೆ ಕಲಿಸಿದ ಶಿಕ್ಷಕರಲ್ಲಿ ಒಬ್ಬರೂ ಆ ಕಾಲೇಜುಗಳಲ್ಲಿ ಇರದಿದ್ದರೂ ನಮಗೆ ಮಾತ್ರ ಆ ಶಿಕ್ಷಕರಿನ್ನೂ ಇದ್ದಂತೆಯೇ! ಅನೇಕ ವರ್ಷಗಳು ಗತಿಸಿದ್ದರೂ ಕಾಲೇಜಿನ ಕಟ್ಟಡವೇ ಬದಲಾಗಿದ್ದರೂ ನಾವು ಓದಿದ ಕಾಲೇಜ್ ಮಾತ್ರ ಬದಲಾಗುವಂತಿಲ್ಲ. ನಮ್ಮ ಮನಸ್ಸು ಯಾವ ಬದಲಾವಣೆಗಳನ್ನು ಮಾಡಿಕೊಳ್ಳಲೂ ಸಿದ್ಧವಾಗುವುದಿಲ್ಲ!

ಪ್ರತಿ ಜೂನ್ ಹದಿನೈದರಂದು ವಿದ್ಯಾರ್ಥಿಗಳು ತನ್ನ ಪತಿಯ ಮನೆಗೆ ಪ್ರಥಮ ಸಲ ಹೋಗುವ ಕನ್ಯೆಯಂತೆ ಸಂಭ್ರಮದಿಂದ ಹೋಗುತ್ತಿರುವುದನ್ನು ನೋಡಿದಾಗ ಅವರೊಂದಿಗೆ ನಾನೂ ಸುಮ್ಮನೇ ಕಾಲೇಜಿಗೆ ಹೋಗಿ ಬರಬೇಕೆನಿಸುತ್ತಿತ್ತು! ಸೌಲಭ್ಯಗಳು ದೊರೆತಿದ್ದರೆ ನಾನಿನ್ನೂ ಓದುವವನೇ! ಆದರೆ ಶಿಕ್ಷಣಕ್ಕೆ ಕೊನೆ ಎಲ್ಲಿದೆ? ಮಾನವನ ಆಸೆ ಆಮಿಷಗಳಿಗೆ ಮಾತ್ರ ಕೊನೆ.

ಜೂನ್ ಹದಿನೈದರಂದು ನನಗಾಗುತ್ತಿದ್ದ ಕಸಿವಿಸೆಯನ್ನು ಕಂಡೋ ಏನೋ ದೇವರು ನನ್ನ ಮೇಲೆ ಕೃಪಾದೃಷ್ಟಿಯನ್ನು ಬೀರಿದ. ಒಂದು ವರ್ಷದ ಜೂನ್ ಹದಿನೈದನೇ ದಿನಾಂಕ ನಾನೂ ಕಾಲೇಜಿಗೆ ಹೋಗಲು ಸಿದ್ಧನಾಗಿ ನಿಂತಿದ್ದೆ.

ಹಿಂದಿನದೇ ಸಂಭ್ರಮ. ಅದೇ ಕುತೂಹಲ. ಅದೇ ಹಿಗ್ಗು. ಆದರೆ ಇದ್ದ ವ್ಯತ್ಯಾಸ ಇಷ್ಟೇ. ಹಿಂದೆ ನಾನು ವಿದ್ಯಾರ್ಥಿಯಾಗಿ ಕಾಲೇಜಿಗೆ ಹೋಗುತ್ತಿದ್ದೆ. ಈಗ ಪ್ರೊಫೆಸರ ಆಗಿ ಕಾಲೇಜಿಗೆ ಹೊರಟು ನಿಂತಿದ್ದೆ.

ಒಂದು ದೃಷ್ಟಿಯಿಂದ ನೋಡಿದರೆ ವಿದ್ಯಾರ್ಥಿಗಳಿಗೂ ಪ್ರೊಫೆಸರರಿಗೂ ಹೆಚ್ಚಿನ ಭೇದವಿಲ್ಲ. ಯಾಕೆಂದರೆ ಇಂದಿನ ವಿದ್ಯಾರ್ಥಿಯೇ ನಾಳಿನ ಪ್ರೊಫೆಸರ್. ಮೊದಲು ಗಿಡ ಹುಟ್ಟಿತೋ ಬೀಜ ಹುಟ್ಟಿತೋ ಎಂಬ ಬಿಡಿಸಲಾಗದ ಸಮಸ್ಯೆಯಂತೆ ಈ ಶಿಕ್ಷಕ ವಿದ್ಯಾರ್ಥಿಯ ಸಮಸ್ಯೆಯೂ ಒಂದು. ಯಾಕಂದರೆ ಶಿಕ್ಷಕ ಹಿಂದೊಮ್ಮೆ ವಿದ್ಯಾರ್ಥಿಯಾಗಿರದಿದ್ದರೆ ಶಿಕ್ಷಕನಾಗಲು ಸಾಧ್ಯವಿಲ್ಲ. ಶಿಕ್ಷಕನಿರದಿದ್ದರೆ ವಿದ್ಯಾರ್ಥಿ ಇರಲು ಸಾಧ್ಯವಿಲ್ಲ. ಆದುದರಿಂದಲೇ ಕಾಲೇಜಿಗೆ ವಿದ್ಯಾರ್ಥಿಯೆಂದು ಹೋದರೂ ಅಷ್ಟೇ, ಶಿಕ್ಷಕನೆಂದು ಹೋದರೂ ಅಷ್ಟೇ, ಎಂಬುದು ನನ್ನ ಸಿದ್ಧಾಂತವಾಗಿತ್ತು.

ಕಾಲೇಜಿಗೇನೋ ಹೋದುದಾಯಿತು. ಆದರೆ ಅಲ್ಲಿಯ ವಿದ್ಯಾರ್ಥಿಗಳಿಗೆ ಮಾತ್ರ ಶಿಕ್ಷಕ=ವಿದ್ಯಾರ್ಥಿ ಎಂಬ ಲೆಕ್ಕ ಗೊತ್ತಿದ್ದಂತೆ ತೋರಲಿಲ್ಲ. ಅವರ ದೃಷ್ಟಿಗೆ ನಾನು ವಸ್ತು ಸಂಗ್ರಹಾಲಯಕ್ಕೆ ತಂದಿರಿಸಿದ ವಸ್ತುವಾಗಿ ಪರಿಣಮಿಸಿದ್ದೆ.

ದಿನದ ಇಪ್ಪತ್ನಾಲ್ಕು ತಾಸುಗಳಲ್ಲಿ ಹದಿನೆಂಟು ತಾಸುಗಳನ್ನು ಪತ್ರಿಕಾ ಕಚೇರಿಯಲ್ಲಿ ಕಳೆದ, ಮನುಷ್ಯ ಸಂಪರ್ಕವನ್ನೇ ತಪ್ಪಿಸಿಕೊಂಡ ನನಗೂ ವಸ್ತು ಸಂಗ್ರಹಾಲದಲ್ಲಿರಿಸಬಹುದಾದ ವಸ್ತು ನಾನಾಗಿರಬಹುದು ಎಂಬ ಭಾವನೆ ಬರಹತ್ತಿತ್ತು!

ಶಿಕ್ಷಕ = ವಿದ್ಯಾರ್ಥಿ ಎಂಬ ಲೆಕ್ಕದಲ್ಲಿ ವಿದಾರ್ಥಿಗಳಿಗೇಕೆ ನಂಬಿಕೆ ಇಲ್ಲವೆಂದು ಗೊತ್ತಾಗಲು ನನಗೆ ಹೆಚ್ಚು ಕ್ಷಣ ಹಿಡಿಯಲಿಲ್ಲ. ಹಿಂದೆ ನಾನು ಇನ್ನಿತರ ನೂರಾರು ವಿದ್ಯಾರ್ಥಿಗಳೊಂದಿಗೆ ವೇದಿ

[illegible] ನಿಂತ ಒಬ್ಬನೇ ಒಬ್ಬ ವ್ಯಕ್ತಿಯನ್ನು ನೋಡುತ್ತಿದ್ದೆ. ಅತನು ಹೇಳಿದುದನ್ನೆಲ್ಲ ವೇದ ವಾಕ್ಯವೆಂಬಂತೆ ಕಿವಿಗೊಟ್ಟು ಕೇಳುತ್ತಿದ್ದೆ. ಆದರೆ ಈಗ ವೇದವಾಕ್ಯವನ್ನು ಉದ್ಘೋಷಿಸುವ ಜವಾಬ್ದಾರಿ ನನ್ನ ಮೇಲೆ ಇದೆಯೆಂದು ಹೊಳೆದಾಗಲೇ ನನಗೆ ನನ್ನ ತಪ್ಪುಗಣಿತದ ಅರಿವಾದುದು !

ಅಂದಿನ ವರೆಗೆ ಮೂರು ಸಲ ಮಾತ್ರ 'ಭಾಷಣ' ಮಾಡಿದ ಅನುಭವ ನನ್ನದು. ಅದೂ ಆಂಗ್ಲೊ—ಕನ್ನಡ ಭಾಷೆಯಲ್ಲಿ ! ಜತೆಗೆ ಭಾಷಣ ಮಾಡುವುದು ನಿರುಪಯೋಗಿಗಳ ಕೆಲಸವೆಂದು ಭಾವಿಸಿದ ನನ್ನ ಮನೋನಿರ್ಧಾರ ಬೇರೆ !

ಗಂಟೆಯಾದ ಮೇಲೆ ನಾನು ವೇದಿಕೆಯ ಮೇಲೆ ಹೋಗಿ ನಿಂತೆ. ಕರತಾಡನದಿಂದ ವಿದ್ಯಾರ್ಥಿಗಳ ಸ್ವಾಗತವಾಯಿತು. ಕಾಗದ ಬಾಣಗಳು ಹಾರಿದವು. ಎಲ್ಲರಿಗೂ ( ನನ್ನನ್ನು ಸೇರಿ) "ಈ ಹೊಸ ಪ್ರೊಫೆಸರ್ ಹೇಗೆ ಮಾತನಾಡುತ್ತಾನೆ ನೋಡೋಣ" ಎನ್ನುವ ಕುತೂಹಲ-

ನೂರಾರು ಕಣ್ಣುಗಳು ನನ್ನನ್ನೇ ನೋಡುತ್ತಿದ್ದವು. ನನ್ನ ಮುಖ ಬೆವತು ಹೋಯಿತು. ಕೆಳಗಿದ್ದ ಭೂಮಿ ಸರಿಯುತ್ತಿರುವಂತೆ ಭಾಸವಾಗುತಿತ್ತು. ಸುತ್ತಲೂ ನೋಡಿದರೆ ಕುತೂಹಲ ಪೂರಿತ ನೋಟಗಳು. ಸ್ಮಶಾನ ಮೌನ ಆವರಿಸಿದೆ. ನಾನು ಮಾತನಾಡದೆ ಗತಿಯೇ ಇಲ್ಲ !

ನಾನು ಮಾತನಾಡಲು ಆರಂಭಿಸಿದೆ. ಬರಿ ಬೇರೆಯವರ ಮಾತುಗಳನ್ನು ಕೇಳಿದ ನನ್ನ ಅನುಭವಕ್ಕೆ ವಿಪರೀತವಾಗಿ, ನನ್ನ ಶಬ್ದಗಳನ್ನೇ ನಾನು ಕೇಳಬೇಕಾಯಿತು. ಸನಿಹದಲ್ಲೆಲ್ಲೋ ಟೇಪ ರಿಕಾರ್ಡಿಂಗ್ ಮಾಡಿ ನನ್ನ ಮಾತುಗಳನ್ನು ಪುನಃ ಬಿತ್ತರಿಸುತ್ತಿದ್ದಂಥ ಅನುಭವ.

ಎದೆ ಡವಡವ ಹಾರಹತ್ತಿತು. ಗಂಟಲು ಒಣಗಹತ್ತಿತು. ಕೈಕಾಲು ನಡಗುತ್ತಿದ್ದವು. ಇಷ್ಟೆಲ್ಲ ನಡೆದ ಮೇಲೆ ಧ್ವನಿಯಾದರೂ ಏಕೆ ಸುಮ್ಮನೆ ಕುಳಿತೀತು. ಅದೂ ನನ್ನ ವಿರುದ್ಧ ಒಳಸಂಚು ಮಾಡಿತು. ಅದು ನನ್ನ ಧ್ವನಿಯೇ ಎನ್ನುವಷ್ಟು ವ್ಯತ್ಯಾಸ. ಇನ್ನೊಂದು ಗಳಿಗೆಗೆ ಪ್ರಾಣ ಕಳೆದುಕೊಳ್ಳಬಹುದಾದವನು ಮಾತನಾಡುವಷ್ಟು ಕ್ಷೀಣವಾಗಿತ್ತು ನನ್ನ ಧ್ವನಿ.

ವಿವೇಕಾನಂದರ ಬಗ್ಗೆ ಆಗ ನಾನು ಮಾತನಾಡುತ್ತಿದ್ದೆ. ಒಬ್ಬ ಕಿಡಿಗೇಡಿ ವಿದ್ಯಾರ್ಥಿ ಎದ್ದು ನಿಂತು ಕೇಳಿಯೇ ಬಿಟ್ಟ. "ಶಿಷ್ಯರು ಗುರುಗಳನ್ನು ಪರೀಕ್ಷಿಸಬಹುದೇ, ಸರ್"

ಆ ಪ್ರಶ್ನೆಯ ಹಿಂದಿದ್ದ ಕಿಡಿಗೇಡಿತನ ನನಗೆ ಅರ್ಥವಾಯಿತು. ಹಾಸ್ಯಪ್ರಸಂಗ ನನ್ನ ಮೇಲಿದ್ದುದರಿಂದ ನಾನು ಈ ಸಂದರ್ಭದಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ. ನಾನು ಹೇಳಿದೆ—"ಓಹೋ, ಅದಕ್ಕೇನು ? ಈಗ ಅದೇ ನಡೆದಿದೆಯಲ್ಲ." ಖೊಳ್ಳೆಂದು ವಿದ್ಯಾರ್ಥಿಗಳು ನಗುವ ಸದ್ದು ಕೇಳಿಬಂತು.

ನನ್ನ "ಪ್ರಥಮ ಭಾಷಣ" ಮುಗಿಸಿ ಹೊರಬಂದಾಗ ನಾನು ಏನು ಹೇಳಿದೆನೆಂಬುದು ನನಗೇ ಗೊತ್ತಾಗಲಿಲ್ಲ. ಇನ್ನು ವಿದ್ಯಾರ್ಥಿಗಳಿಗೇನು ತಿಳಿದಿರಬೇಕು !

---

# ಇಂಗ್ಲಂಡದಲ್ಲಿ ಪ್ರತಿಯೊಬ್ಬರಿಗೆ ಶಿಕ್ಷಣ

**ಇಂಗ್ಲಂಡು ಅನೇಕ ವಿಷಯಗಳಲ್ಲಿ ಮುಂದುವರಿದ ರಾಷ್ಟ್ರವಾಗಿರುವಂತೆ ಶಿಕ್ಷಣರಂಗದಲ್ಲಿಯೂ ಮುಂದರಿದಿದೆ. ಈಗ ಪ್ರತಿಯೊಂದು ವ್ಯಕ್ತಿಗೂ ಅವನ ಯೋಗ್ಯತೆಗೆ ತಕ್ಕ ಶಿಕ್ಷಣವು ದೊರೆಯುವಂತೆ ಏರ್ಪಾಡು ಮಾಡಲಾಗಿರುವದು.**

ಲೇಖಕರು: ಶ್ರೀ ವಿ. ಎಸ್. ಕುಸನೂರ ಎಂ. ಈಡಿ.

ಶಿಕ್ಷಣಪದ್ಧತಿಯನ್ನು ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸ್ಥಿತಿಗನುಸರಿಸಿ ಪ್ರಗತಿಪರಗೊಳಿಸಲು ಇಂಗ್ಲಂಡ ದೇಶದಲ್ಲಿ ನಿರಂತರ ಪ್ರಯತ್ನಗಳು ನಡೆದಿರುವವು. ಜಗತ್ತಿನಲ್ಲಿ ಸಂಭವಿಸುವ ಘಟನೆಗಳಿಗನುಸರಿಸಿ ಆಂತರಿಕ ಬದಲಾವಣೆಗಳನ್ನು ಅದು ಮಾಡಿಕೊಳ್ಳುತ್ತ ಬಂದಿರುವದು.

ದ್ವಿತೀಯ ಮಹಾಯುದ್ಧದ ಪರಿಣಾಮವು ಈ ದೇಶದ ಮೇಲೆ ಬಹಳಷ್ಟಾಯಿತು. ಅನೇಕ ವಸಾಹತುಗಳಿಗೆ ಸ್ವಾತಂತ್ರ್ಯ ಕೊಡಲಾಯಿತು. ಅದರ ನಿರ್ಯಾತ ವ್ಯಾಪಾರ ಕಡಿಮೆಯಾಯಿತು. ಹೀಗಾಗಿ ಸಿರಿವಂತರಿಗಿಂತ ಜನಸಾಮಾನ್ಯರಿಗೆ ದೇಶದ ರಾಜಕಾರಣದಲ್ಲಿ ಹೆಚ್ಚು ಇಂಬು ದೊರೆಯಿತು-. ಅದು ಸುಧಾರಣೆಗಳನ್ನು ಸಾಧಿಸುವದರೊಂದಿಗೆ ತನ್ನ ಸಂಪ್ರದಾಯಗಳನ್ನು ಪಾಲಿಸುತ್ತಿರುವದು. ಸಾಂಸ್ಕೃತಿಕ ಪರಂಪರೆಯಲ್ಲಿ ಸಹ ಅದು ಕಾಲಕಾಲಕ್ಕೆ ಅನುಗುಣವಾದ ಬದಲಾವಣೆಗಳನ್ನು ಮಾಡುತ್ತ ಬಂದಿರುವದು.

೧೯೨೬ರಲ್ಲಿಯ ಹೇಡೊ ವರದಿಯಿಂದ ಇಂಗ್ಲಂಡದ ಶಿಕ್ಷಣ ಪದ್ಧತಿಯಲ್ಲಿ ತೀವ್ರ ಪ್ರಗತಿ ಆರಂಭವಾಯಿತು. ರಾಷ್ಟ್ರದ ಅಭ್ಯುದಯಕ್ಕಾಗಿ ದೇಶದಲ್ಲಿಯ ಪ್ರತಿಯೊಬ್ಬರೂ ಸುಶಿಕ್ಷಿತರಾಗುವದು ಅವಶ್ಯವೆಂದು ಹೇಳಿ ಪ್ರತಿಯೊಬ್ಬರಿಗೂ ಶಿಕ್ಷಣ ದೊರೆಯಬೇಕೆಂದು ಸಾರಿತು. ಇದರಿಂದ ಪ್ರಾಥಮಿಕ ಶಿಕ್ಷಣದಲ್ಲಿ ಅನೇಕ ಸುಧಾರಣೆಗಳಾದವು.

೧೯೪೪ ರಲ್ಲಿ ಹಿಂದಿನ ಎಲ್ಲಾ ವರದಿಗಳನ್ನು ಅನುಲಕ್ಷಿಸಿ ಹೊಸ ಶಿಕ್ಷಣ ಕಾಯ್ದೆಯನ್ನು ಜಾರಿಯಲ್ಲಿ ತರಲಾಯಿತು. ಈ ಎಲ್ಲ ಸುಧಾರಣೆಗಳಲ್ಲಿ ಇಂಗ್ಲಂಡು ಸಾಮಾಜಿಕ, ಧಾರ್ಮಿಕ, ವೈಜ್ಞಾನಿಕ ವಿಷಯಗಳಲ್ಲಿ ಒಂದೊಂದು ಮುಂದಡಿಯಿಡುತ್ತಿರುವದನ್ನು ನಾವು ಕಾಣುತ್ತೇವೆ.

ಇಂಗ್ಲಂಡದಲ್ಲಿ ಶಿಕ್ಷಣದ ಸುಧಾರಣೆ ಪ್ರಾರಂಭವಾದುದು ೧೯೦೨ ರಲ್ಲಿ. ಅದಕ್ಕೂ ಪೂರ್ವದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಘಟ್ಟಗಳಲ್ಲಿ ಒಂದು ನಿರ್ದಿಷ್ಟವಾದ ವ್ಯವಸ್ಥೆಯು ಇದ್ದಿರಲಿಲ್ಲ. ಆ ವರುಷ ಬೇರೆ ಬೇರೆ ರೀತಿಯಲ್ಲಿ ಸಾಗುತ್ತಿದ್ದ ಪ್ರಾಥಮಿಕ ಶಾಲೆಗಳನ್ನು ಒಂದುಗೂಡಿಸಿ ಒಂದು ಕಟ್ಟಿನಲ್ಲಿ ತರಲಾಯಿತು. ಅದೇ ವರುಷ ೫ ರಿಂದ ೧೫ ವರುಷಗಳೊಳಗಿನ ಮಕ್ಕಳ ಒತ್ತಾಯದ ಶಿಕ್ಷಣ ಪದ್ಧತಿಯನ್ನು ಜಾರಿಯಲ್ಲಿ ತರಲಾಯಿತು. ಆಗ ರಾತ್ರಿ ಶಾಲೆಗಳಿದ್ದರೂ ಅವುಗಳಲ್ಲಿ ಓದುವವರ ಸಂಖ್ಯೆಯು ತೀರ ಕಡಿಮೆಯಿದ್ದಿತು.

೧೮೬೧ರ ವರೆಗೆ ಇಂಗ್ಲೀಷ ಸರಕಾರವು ಮಾಧ್ಯಮಿಕ ಶಿಕ್ಷಣದ ಕಡೆಗೆ ಕಣ್ಣೆತ್ತಿ ಸಹ ನೋಡಿರಲಿಲ್ಲ. ಮಾಧ್ಯಮಿಕ ಶಿಕ್ಷಣಕ್ಕಾಗಿ ವೆಚ್ಚ ಮಾಡುವ ಯೋಗ್ಯತೆಯುಳ್ಳ ಸಿರಿವಂತರಿಗಾಗಿ ಮಾತ್ರ ಅಲ್ಲಲ್ಲಿ ಕೆಲವು ಮಾಧ್ಯಮಿಕ ಶಾಲೆಗಳಿದ್ದವು. ಈ ಶಿಕ್ಷಣ ಪಡೆದವರಲ್ಲಿ ನೂರಕ್ಕೆ ಐದರಷ್ಟು ವಿದ್ಯಾರ್ಥಿಗಳು ಮಾತ್ರ ವಿಶ್ವವಿದ್ಯಾಲಯದ ಅಭ್ಯಾಸಕ್ಕೆ ಹೋಗುತ್ತಿದ್ದರು. ಈ ಮಾಧ್ಯಮಿಕ ಶಾಲೆಗಳಲ್ಲಿ ಪ್ರಿಪರೇಟರಿ ಹಾಗೂ ಪಬ್ಲಿಕ ಎಂಬೆರಡು ಬಗೆಯ ಶಾಲೆಗಳಿದ್ದವು. ಇಲ್ಲಿಯ ಶಿಕ್ಷಣದ ವೆಚ್ಚವು ಮಾತ್ರ ಅಪಾರವಾಗುತ್ತಿತ್ತು.

ಶಿಕ್ಷಣದ ಮೇಲ್ವಿಚಾರಣೆಗಾಗಿದ್ದ ಶಿಕ್ಷಣ ಮಂಡಳವು ಖಾಸಗಿ ಶಾಲೆಗಳಲ್ಲಿಯ ಪದ್ಧತಿಯನ್ನು ಸುಧಾರಿಸಲು ಯತ್ನಿಸಿತು. ಆರ್ಥಿಕ ದೃಷ್ಟಿಯಿಂದಲೂ ಪಠ್ಯಪುಸ್ತಕ ಮತ್ತು ಅಭ್ಯಾಸ ಪತ್ರಿಕೆ ವಿಷಯದಲ್ಲಿಯೂ ಆಡಳಿತದಲ್ಲಿಯೂ ಅನೇಕ ಹಿತಕರವಾದ ಬದಲಾವಣೆಗಳನ್ನು ಇದು ಮಾಡಿತು.

ಇಂಗ್ಲಂಡದಲ್ಲಿ ಶಿಕ್ಷಣದ ಯೋಜನೆಯನ್ನು ರಾಷ್ಟ್ರೀಯ ಸರಕಾರ ಮಾಡುತ್ತಿದ್ದು ಪಠ್ಯಪುಸ್ತಕ ಶಿಕ್ಷಕರು ಹಾಗೂ ಒಳಾಡಳಿತವನ್ನು ಸ್ಥಾನಿಕ ಸರಕಾರಕ್ಕೆ ಬಿಟ್ಟು ಕೊಡಲಾಗಿರುವದು. ಕೆಲ ಪ್ರಸಂಗಗಳಲ್ಲಿ ರಾಷ್ಟ್ರೀಯ ಸರಕಾರವು ಈ ಆಡಳಿತದಲ್ಲಿ ಕೈ ಹಾಕುವದುಂಟು. ಸರಕಾರವು ವಿಶೇಷ ಲಕ್ಷ್ಯ ತೊಡಗಿಸಿದ ನಂತರ ಮಾಧ್ಯಮಿಕ ಶಿಕ್ಷಣವು ಜನಸಾಮಾನ್ಯರಿಗೂ ಲಭಿಸುವಂತಾಯಿತು.

ಸರಕಾರವು ಶಿಕ್ಷಣ ಶಾಖೆಯಲ್ಲಿ ಕೈಹಾಕಿ ಅದಕ್ಕೆ ಧನ ಸಹಾಯ ಮಾಡುವ ಮೊದಲು ಪ್ರೊಟೆಸ್ಟಂಟ ಕೆಥೊಲಿಕ ಧರ್ಮಗುರುಗಳು ಚರ್ಚುಗಳ ಪರವಾಗಿ ಶಾಲೆಗಳನ್ನು ನಡೆಸಿ ವಿದ್ಯಾದಾನದ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಇಲ್ಲಿಯ ಶಿಕ್ಷಣವು ಧರ್ಮೋಪದೇಶದ ತಳಹದಿಯ ಮೇಲಿದ್ದುದರಿಂದ ಪಕ್ಷಪಂಗಡಗಳನ್ನು ಅದು ಹುಟ್ಟಿಸುತ್ತಿತ್ತು. ಮೇಲಾಗಿ ಇವುಗಳಲ್ಲಿ ಆಧುನಿಕ ಸಲಕರಣೆಗಳಾಗಲಿ, ಉತ್ತಮ ಕಟ್ಟಡಗಳಾಗಲಿ ಇರಲಿಲ್ಲ. ಆದರೆ ಚರ್ಚುಗಳ ಶಾಲೆಗಳಲ್ಲಿ ಸುಧಾರಣೆ ಮಾಡಬೇಕೆನ್ನುವ ಪ್ರಯತ್ನ ಸಫಲವಾಗಲಿಲ್ಲ. ೧೯೪೪ ರ ಕಾಯ್ದೆ ಮೇರೆಗೆ ಕೌನ್ಸಿಲ ಸ್ಕೂಲ ಮತ್ತು ವಾಲಂಟರಿ ಸ್ಕೂಲ ಎಂದು ಎರಡು ವಿಧಗಳಲ್ಲಿ ವಿಂಗಡಿಸಲಾಯಿತು.

ಇದೇ ವರುಷದಲ್ಲಿ ಸ್ಪಾಜ ವರದಿಯಲ್ಲಿ

ಸೂಚಿಸಿದ ಮೇರೆಗೆ ಎಲ್ಲ ತರಗತಿಯ ಜನರಿಗೆ ಪ್ರಯೋಜನಕಾರಿಯಾಗುವಂತೆ ಗ್ರಾಮರ ಸ್ಕೂಲ, ಟೆಕ್ನಿಕಲ್ ಸ್ಕೂಲ, ಮಾಡರ್ನ ಸ್ಕೂಲ ಹೀಗೆ ಮೂರು ವಿಧದ ಶಾಲೆಗಳನ್ನು ರೂಢಿಯಲ್ಲಿ ತರಲಾಯಿತು.

ಇವುಗಳಲ್ಲಿ ಗ್ರಾಮರ ಸ್ಕೂಲು ಸಾಹಿತ್ಯದ ಅಭ್ಯಾಸವನ್ನು ಒದಗಿಸುತ್ತದೆ. ಅಭಿಜಾತ ಸಾಹಿತ್ಯ ಹಾಗೂ ಆಧುನಿಕ ಸಾಹಿತ್ಯಗಳ ವಿಶೇಷ ಅಭ್ಯಾಸಕ್ಕೆ ಇಲ್ಲಿ ಅನುಕೂಲತೆಯಿರುವದು. ವಿದ್ಯಾರ್ಥಿಗಳ ೧೮ ವಯಸ್ಸಿನ ವರೆಗೂ ಮಾಧ್ಯಮಿಕ ಶಿಕ್ಷಣವು ದೊರೆಯುತ್ತದೆ. ಅನೇಕ ವಿದ್ಯಾರ್ಥಿಗಳು ೧೬ನೇ ವಯಸ್ಸಿಗೆ ಇಲ್ಲಿಯ ತಮ್ಮ ಶಿಕ್ಷಣವನ್ನು ಮುಗಿಸುವರು. ಆದರೆ ೧೮ ವರುಷಗಳ ವರೆಗೆ ಇಲ್ಲಿದ್ದು ಪೂರ್ಣ ಅಭ್ಯಾಸ ಮಾಡಿದವರಿಗೆ ವಿಶ್ವ-ವಿದ್ಯಾಲಯ ಅಭ್ಯಾಸಕ್ಕೆ ಹೋಗುವ ಅರ್ಹತೆ ದೊರೆಯುವದು.

ಗ್ರಾಮರ ಸ್ಕೂಲ ಹಾಗೂ ಟೆಕ್ನಿಕಲ್ ಸ್ಕೂಲುಗಳ ಮೊದಲಿನೆರಡು ವರುಷಗಳ ಅಭ್ಯಾಸ ಕ್ರಮವು ವಿದ್ಯಾರ್ಥಿಗಳಿಗೆ ಬದಲು ಮಾಡಲು ಅವಕಾಶ ದೊರೆಯಬೇಕೆಂದು ಒಂದೇ ಇರುವದು. ಯಾವದಾದರೊಂದು ಶಾಲೆಯ ಅಭ್ಯಾಸ ಕ್ರಮ ತಮಗೆ ಸರಿಹೊಂದದಿದ್ದರೆ ಅವರು ಶಾಲೆಗಳನ್ನು ಬದಲಿಸಬಹುದಾಗಿರುವದು.

ಚಿಕ್ಕಮಕ್ಕಳು ತಮ್ಮ ೧೧ನೇ ವಯಸ್ಸಿನಲ್ಲಿ ಪ್ರಾಥಮಿಕ ಶಾಲೆಯಿಂದ ಮಾಧ್ಯಮಿಕ ಶಾಲೆಗೆ ಸೇರುವಾಗ ಆರ್ಥಿಕವಾಗಿ ಕೆಲವೊಂದು ಸೌಕರ್ಯಗಳಿರುವದಲ್ಲದೇ ಮೇಲೆ ಹೇಳಿರುವ ಮೂರು ವಿಧದ ಶಾಲೆಗಳಲ್ಲಿ ಬೇಕಾದ ಒಂದಕ್ಕೆ ಸೇರಬಹುದಾಗಿರುವದು.

ಹದಿಮೂರನೇ ವಯಸ್ಸಿನಲ್ಲಿ ವಿದ್ಯಾರ್ಥಿಗಳು ಒಂದು ಶಾಲೆಯಿಂದ ಇನ್ನೊಂದು ಶಾಲೆಗೆ ಹೋಗಬೇಕಾದಲ್ಲಿ ಆಯಾ ಶಾಲೆಗಳಿಗೂ ವಿದ್ಯಾರ್ಥಿಗಳಿಗೂ ತೊಂದರೆಯಾಗಬಾರದೆಂದು ಪಠ್ಯಪುಸ್ತಕಗಳನ್ನೂ ವಿಷಯಗಳನ್ನೂ ಒಂದೇ ಮಾಡಿರುವರಲ್ಲದೇ ಇಂಥ ಹುಡುಗರಿಗಾಗಿಯೇ ಕಾಂಪ್ರೆಹೆನ್ಸಿವ್ ಶಾಲೆಗಳನ್ನು ತೆರೆಯುವ ಯೋಜನೆಯನ್ನು ಮಾಡಲಾಗಿರುವದು. ಇಲ್ಲಿ ಮೊದಲಿನ ತರಗತಿಯಲ್ಲಿ ಒಂದೇ ವಿಧವಾದ ವಿಷಯಗಳನ್ನು ಕಲಿಸಿ ಮುಂದೆ ಅವರನ್ನು ಬೇರೆ ಬೇರೆ ವಿಷಯಗಳಲ್ಲಿ ಪ್ರವೀಣರನ್ನಾಗಿ ಮಾಡುವಂತೆ ಅನುಕೂಲತೆಯೊದಗಿಸುವ ಉದ್ದೇಶವಿರುವದು.

ಇಪ್ಪತ್ತನೆಯ ಶತಮಾನದ ವರೆಗೆ ತಾಂತ್ರಿಕ-ಔದ್ಯೋಗಿಕ ಶಿಕ್ಷಣವನ್ನು ರಾತ್ರಿಯ ಶಾಲೆಗಳೂ ಪೋಲಿಟೆಕ್ನಿಕ್ ಸಂಸ್ಥೆಗಳೂ ನೋಡುತ್ತಿದ್ದವು. ೧೯೧೩ ರಲ್ಲಿ ಶಿಕ್ಷಣ ಮಂಡಲವು ಜುನಿಯರ ಟೆಕ್ನಿಕಲ್ ಸ್ಕೂಲುಗಳನ್ನು ಸ್ಥಾಪಿಸಿತು. ಮುಂದೆ ಜುನಿಯರ ಕಮರ್ಶಿಯಲ್ ಸ್ಕೂಲ, ಸ್ಕೂಲ ಆಫ್ ಆರ್ಟ್ಸ ಸ್ಥಾಪಿತವಾದವು. ಈ ಶಾಲೆಗಳಲ್ಲಿ ೧೩ ವರ್ಷದ ಮೇಲಿನ ಬಾಲ—ಬಾಲಿಕೆಯರಿಗೆ ಒಂದು ವಿಶೇಷವಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ನಂತರ ಪ್ರವೇಶ ದೊರೆಯುತ್ತಿತ್ತು

ಈ ಶಾಲೆಗಳಲ್ಲಿ ಸಾಧಾರಣ ೩-೪ ವರುಷ ಶಿಕ್ಷಣ ದೊರೆತು ವಿದ್ಯಾರ್ಥಿಗಳು ಕೆಲವೊಂದು ವ್ಯಾಪಾರ ಉದ್ಯೋಗಗಳಿಗೆ ಅರ್ಹತೆ ಪಡೆಯುತ್ತಿದ್ದರು. ವಿಶೇಷ ತರಬೇತಿಯು ಔದ್ಯೋಗಿಕ ಶಿಕ್ಷಣವು ೧೩ ನೇ ವಯಸ್ಸಿನಿಂದಲೇ ಪ್ರಾರಂಭವಾಗುವದು.

ಹಳ್ಳಿಗಳಲ್ಲಿ ವಿಶೇಷವಾಗಿ ಕಂಟ್ರಿ ಕಾಲೇಜುಗಳನ್ನು ತೆರೆದು ಅವುಗಳ ಮುಖಾಂತರ ವೃತ್ತಿ ಮತ್ತು ಸಂಸ್ಕೃತಿ ಶಿಕ್ಷಣ ಕೊಡುವ ವ್ಯವಸ್ಥೆ ಮಾಡಿದೆ. ಮೊದಲನೇ ಮಹಾಯುದ್ಧದ ವರೆಗೂ ಇಂಗ್ಲಂಡದಲ್ಲಿ ಒಕ್ಕಲತನ ಶಿಕ್ಷಣದ ವ್ಯವಸ್ಥೆಯಿರಲಿಲ್ಲ. ಈ ಯುದ್ಧಾನಂತರ ಒಕ್ಕಲುತನ ಶಿಕ್ಷಣಕ್ಕೆ ಶಾಲೆ ಕಾಲೇಜುಗಳು ಸ್ಥಾಪಿತವಾದವು.

ಇಂಗ್ಲಂಡಿನಲ್ಲಿ ಪೂರ್ವಕಾಲದಿಂದಲೂ ಆಕ್ಸ-ಫರ್ಡ ಕೇಂಬ್ರಿಜ್ ವಿಶ್ವವಿದ್ಯಾಲಯಗಳು, ೧೯ನೇ ಶತಮಾನದಲ್ಲಿ ಉದ್ಭವಿಸಿದ ಡರಹ್ಯಾಮ ವಿಶ್ವ-ವಿದ್ಯಾಲಯ ಇವು ಉಚ್ಚತರಗತಿಯ ವಿಶ್ವವಿದ್ಯಾ-ಲಯ ಶಿಕ್ಷಣವನ್ನೊದಗಿಸುತ್ತ ಬಂದಿರುವವು. ಈ ವಿಶ್ವವಿದ್ಯಾಲಯುಗಳಲ್ಲಿ ಅಭ್ಯಾಸ ಮಾಡುವವರು ಇಲ್ಲಿಯೇ ವಾಸಮಾಡಿಕೊಂಡಿದ್ದು ಪ್ರಾಧ್ಯಾಪಕರಿಂದ ಹೆಚ್ಚಿನ ಪ್ರಯೋಜನ ಪಡೆಯುತ್ತಾರೆ. ಮೊದಲಿನವೆರಡು ವಿಶ್ವವಿದ್ಯಾಲಯುಗಳು ಆರ್ಥಿಕ ಹಾಗೂ ಸಲಕರಣೆಗಳ ದೃಷ್ಟಿಯಿಂದ ಸುಸಜ್ಜಿತವಿರುವವು. ಸರಕಾರದಿಂದ ಇವು ಆರ್ಥಿಕ ಸಹಾ-ಯುವನ್ನು ಅಪೇಕ್ಷಿಸುವದಿಲ್ಲ.

ಆದರೆ ಇಲ್ಲಿಯು ಶಿಕ್ಷಣದ ವೆಚ್ಚ ಮಾತ್ರ ಬಹಳ. ಪ್ರತಿಯೊಬ್ಬ ವಿದ್ಯಾರ್ಥಿ ವರ್ಷಕ್ಕೆ ೨೫೦ ಪೌಂಡು ವೆಚ್ಚ ಮಾಡಬೇಕಾಗುವದು. ವಿಶ್ವವಿದ್ಯಾಲಯುಗಳು ನೂರಾರು ಶಿಷ್ಯವೇತನಗಳನ್ನೊದಗಿಸುತ್ತವೆ. ಕೆಲವು ಶಿಷ್ಯವೃತ್ತಿಗಳೂ ಇವೆ. ಇವು ಯಾವೂ ಬಡವರಿಗೆ. ಪ್ರಯೋಜನಕಾರಿಯಾಗಿರುವದಿಲ್ಲ. ಲಂಡನ ವಿಶ್ವವಿದ್ಯಾಲಯು ಹಾಗೂ ಇನ್ನಿತರ ಕೆಲ ವಿಶ್ವವಿದ್ಯಾಲಯುಗಳು ಹೆಚ್ಚು ವೆಚ್ಚದವಿರುವದಿಲ್ಲ. ಅವು ನಿವಾಸಿಕ ವಿಶ್ವವಿದ್ಯಾಲಯುಗಳಲ್ಲ.

ಈ ಎಲ್ಲ ವಿಶ್ವವಿದ್ಯಾಲಯುಗಳಲ್ಲಿ ದರ್ಶನಶಾಸ್ತ್ರ, ಆರ್ಟ, ವಿಜ್ಞಾನ, ಕಾಯ್ದೆ, ಮೆಡಿಸಿನ್, ಇಂಜನಿ-ಯರಿಂಗ ಈ ವಿಷಯುಗಳಲ್ಲಿ ಶಿಕ್ಷಣವನ್ನು ಕೊಡಲಾಗುವದು. ಪದವೀಶಿಕ್ಷಣವು ಮೂರು ವರ್ಷಗಳದ್ದಿರುವದು. ಸ್ನಾತಕೋತ್ತರ ಅಭ್ಯಾಸವು ಎರಡು ವರುಷಗಳದಿರುವದು. ಆಕ್ಸಫರ್ಡ, ಕೇಂಬ್ರಿಜ ವಿಶ್ವವಿದ್ಯಾಲಯುಗಳಲ್ಲಿ ಸ್ನಾತಕೋತ್ತರ ಪದವಿಗೆ ಪರೀಕ್ಷೆ ಬೇಕಾಗಿಲ್ಲ ; ಹಣ ತುಂಬಿದರೆ ಸಾಕು.

ಈ ಎಲ್ಲ ವಿಶ್ವವಿದ್ಯಾಲಯುಗಳಲ್ಲಿ ಹೆಣ್ಣುಮಕ್ಕಳಿಗೆ ಗಂಡಸರಿಗಿರುವ ಎಲ್ಲ ಹಕ್ಕು ಬಾಧ್ಯತೆಗಳೂ ಸಮಾನತೆಯೂ ಇರುವವು. ಲಂಡನದಲ್ಲಿ ಒಟ್ಟು ವಿದ್ಯಾರ್ಥಿಗಳಲ್ಲಿ ನಾಲ್ಕರಲ್ಲಿ ಒಂದು ಭಾಗದಷ್ಟು ಹೆಣ್ಣುಮಕ್ಕಳಿರುವರು. ಆಕ್ಸ್‌ಫರ್ಡ ಹಾಗೂ ಕೇಂಬ್ರಿಜ್ ವಿಶ್ವವಿದ್ಯಾಲಯುಗಳಲ್ಲೂ ಒಂದು ಹತ್ತಾಂಶದಷ್ಟು ಇರುವರು. ಅವರಿಗೆ ಮಾಧ್ಯಮಿಕ ಶಿಕ್ಷಣದ ಏರ್ಪಾಡೂ ಚೆನ್ನಾಗಿದ್ದು ೧೯ ನೇ ಶತಮಾನದಲ್ಲಿಯೇ ಈ ಶಾಲೆಗಳು ತೆರೆಯಲ್ಪಟ್ಟಿರುವವು.

ಶಿಕ್ಷಕರ ತರಬೇತಿಕ್ರಮದಲ್ಲಿ ಸುಯೋಜಿತ ಪದ್ಧತಿಯಿರುವದಿಲ್ಲ. ಮಾಧ್ಯಮಿಕ ಶಿಕ್ಷಣದನಂತರ ಎರಡು ವರುಷ ತರಬೇತಿ ಪಡೆಯಬೇಕಾಗುವದು. ವಿಶ್ವವಿದ್ಯಾಲಯುದ ಪದವೀಧರರು ಒಂದೇ ವರುಷ ತರಬೇತಿ ಪಡೆಯಬೇಕಾಗುವದು.

ಹೀಗೆ ಇಂಗ್ಲಂಡದಲ್ಲಿ ಶಿಕ್ಷಣವನ್ನು ವ್ಯಕ್ತಿಯ ಯೋಗ್ಯತೆಗೆ ಸರಿಹೋಗುವಂತೆ ಯಾವದೇ ಭೇದಭಾವವಿಲ್ಲದೆ ಕೊಡುವಂತೆ ಸುಯೋಜಿಸಲಾಗುತ್ತಿದೆ. ಹಳೆಯುದನ್ನು ಪೂರ್ಣ ಬಿಡದೆ ಹೊಸ ಮಾರ್ಗದಲ್ಲಿ ಈ ಶಿಕ್ಷಣವು ಮುಂದರಿಯುತ್ತದೆ.

# ಆಗುಂಬೆ: ಒಂದು ನಿಮಿಷಾವಲೋಕನ

ಲೇಖಕರು: ಶ್ರೀ ಕುಲಮರ್ವ ಬಾಲಕೃಷ್ಣ

ಆಗುಂಬೆಯು ಉದಯಾಸ್ತದ ಸೊಗಸನ್ನು ಡಿ.ವಿ.ಜಿ. ಯವರ ಮಂಕುತಿಮ್ಮನೇನೋ ಹಾಡಿದ್ದಾನೆ. ಆದರೆ ಆಗುಂಬೆಯೋ ? ಮಂಕುತಿಮ್ಮನನ್ನು ಹಿಂದೆ ಹಾಕಿ ಕಾಲನೊಂದಿಗೆ ಮುಂದುವರಿಯುತ್ತಿರುವಂತೆ ಕಾಣುತ್ತದೆ. ಮೊನ್ನೆ ನಾನು ದಕ್ಷಿಣ ಕನ್ನಡದ ಸೋಮೇಶ್ವರದಿಂದ ಆಗುಂಬೆಯ ಘಟ್ಟವೇರುತ್ತಿರುವಾಗ ನನ್ನ ಈ ಅಭಿಪ್ರಾಯ ಸ್ಥಿರವಾಯಿತು.

ಸುಮಾರು ೬ ಮೈಲಿ ಎತ್ತರಕ್ಕೆ ಘಟ್ಟದ ರಸ್ತೆ ಹತ್ತಿಪ್ಪತ್ತು ಗಜಗಳಷ್ಟು ಕುಸಿದಿದ್ದುದರಿಂದ ಕೆಳಗಿನಿಂದ ಬಂದ ಟ್ಯಾಕ್ಸಿ ಅಲ್ಲಿ ನಿಂತಿತು. ಮೇಲಿನಿಂದ ಬರಬೇಕಾದ ಟ್ಯಾಕ್ಸಿ ಇನ್ನೂ ಬಂದಿರಲಿಲ್ಲ. ಆಗುಂ-ಬೆಯ ಪರ್ವತಾವಳಿಗಳ ಬೆಡಗನ್ನು ನೋಡಲು ಇದೊಂದು ಸದಾವಕಾಶವೆಂದುಕೊಂಡು ರಸ್ತೆಯ ಮಗ್ಗುಲಲ್ಲೆ ಸ್ವಲ್ಪ ದೂರ ನಡೆದಾಡಿದೆ.

ಸೂರ್ಯ ಮುಳುಗುವುದು ತಡವೇನೂ ಇಲ್ಲ. ಪಡುಗಡಲಿನತ್ತ ಅತ ಭರದಿಂದ ಇಳಿಯುತ್ತಿರುವಾಗ ದಪ್ಪವಾದ ಮೋಡವೊಂದು ಅವನಿಗೆ ಅಡ್ಡವಾಯಿತು. ಆದರೂ ಮೋಡದ ಮರೆಯಿಂದಲೂ ತೂರಿಬಂದ ಅವನ ಕಿರಣಗಳು ಹೊಳೆಯುತ್ತಿ-ದ್ದವು. ಕೆಳಗಡೆ ಸಮುದ್ರ ಪಾತಳಿಯ ನೀರಿನ ಕೆಲಭಾಗ ಅಷ್ಟು ದೂರದಿಂದಲೂ ಪಳಪಳನೆ ಹೊಳೆಯುತ್ತಿತ್ತು. ಯಾವ ಚಿತ್ರಕಾರನಿಗೂ ಎಟಕದ ಚಿತ್ರಶೈಲಿ ನಿಸರ್ಗ ಚಿತ್ರಕಾರನದು ಎಂದುಕೊಂಡೆ ಮನಸ್ಸಿನಲ್ಲಿಯೆ.

ಕಾಫಿ ಹುಡಿಯನ್ನು ಚೆಲ್ಲಿದಂಥ ಮೋಡಗಳು ಕೆಲವು ಸೂರ್ಯನ ಸುತ್ತಲಿದ್ದರೆ ದೂರದಲ್ಲಿ ಹಿಂಜದ ಹತ್ತಿಯಂಥವು ಮತ್ತೆ ಕೆಲವು. ಕೆಳಗಡೆ ಹಸಿರು ಹಸಿರಾಗಿ ಏರು ತಗ್ಗಾದ ಕಾಡು. ಸಾಗರದಾಚೆ ನಮ್ಮ ಕಣ್ಣು ಹೇಗೆ ಹಾಯಲಾರದೋ ಈ ವನರಾಜಿಯಾಚೆಯೂ ದಾಟುವ ಸಾಹಸ ನಮ್ಮ ಕಣ್ಣಿನಿಂದಾಗದು. ಅಂಥ ಗಂಭೀರವಾದ ವಿಶಾಲವಾದ ನೋಟ.

ನೋಡುತ್ತಿದ್ದಂತೆಯೇ ಸೂರ್ಯ ನೀರಿನಲ್ಲಿ ಮುಳುಗು ಹಾಕುವದರಲ್ಲಿದ್ದ. ಅರುಣಿಮೆಯ ಕುಂಕುಮ ವಿಕಿರಣೆಯಾಯಿತು. ಈ ದೃಶ್ಯವನ್ನು ಹಿಡಿದಿಟ್ಟುಕೊಳ್ಳಬಾರದೇಕೆ ? ಎಂದು ನಾನು ಕೆಮರಾದ ಗುಂಡಿಯೊತ್ತಿದೆ.

ಕತ್ತಲು ಹಸಿರು ಕಾಡಿನ ಮೇಲೆಯೂ ತನ್ನ ಕಪ್ಪು ಪರದೆಯನ್ನು ಇಳಿ ಬಿಡುವದರಲ್ಲಿತ್ತು. ಮೇಲಿಂದ ನಮಗಾಗಿ ಟಾಕ್ಸಿ ಇನ್ನೂ ಬಂದಿರಲಿಲ್ಲ. ಸಹಪ್ರವಾಸಿಕರು ಟಾಕ್ಸಿ ಸರ್ವೀಸಿನವನ್ನು ಹೊಗಳಲು ಪ್ರಾರಂಭ ಮಾಡಿದ್ದರು. ನಾನು ರಸ್ತೆಯ ಬದಿಗೆ ಕಟ್ಟಿಸಿದ ಕಲ್ಲಿನ ತಿಟ್ಟೆಯ ಮೇಲೆ ಕುಳಿತುಕೊಂಡು ಇನ್ನೂ ಈಗಲೇ ಪಡುಗಡಲಲ್ಲಿ ಮುಳುಗಿ ಮಾಯವಾದ ಸ್ವಪ್ನವನ್ನು ನೆನಪಿಗೆ ತರುತ್ತಲಿದ್ದೆ.

ಕಡಲಿಗಿಂತ ಸ್ವಲ್ಪ ಈಚೆಗೆ ಬೆಳಕಿನ ಒಂದು ಚಕ್ರನೃತ್ಯ ನಡೆದಿತ್ತು. ಇದೇನಿದು? ಯಾವ ದೆವ್ವದ ಆರಾಧನೆ ? ಎಂದು ನಾನು ಆಲೋಚಿಸುತ್ತಿರುವಷ್ಟರಲ್ಲಿ "ಓ ಅಲ್ಲಿ ನೋಡಿ ಮಣಿಪಾಲದ ಬೆಳಕು" ಎಂದು ಸಹಪ್ರವಾಸಿಕರಲ್ಲಿ ಒಬ್ಬ ಆ ಕಡೆಗೇ ಬೊಟ್ಟು ಮಾಡಿ ತೋರಿಸಿದ. ಟ್ಯಾಕ್ಸಿ ತಡವಾಯಿತೆಂದು ಒಟಗುಡುತ್ತಿದ್ದವರೂ ಅತ್ತ ನೋಡಿದರು.

ಕತ್ತಲು ಹೆಚ್ಚಿದಂತೆ ಈ ಬೆಳಕಿನ ಚಕ್ರನೃತ್ಯ ರಮ್ಯವಾಗುತ್ತ ನಡೆಯಿತು. ಉಡುಪಿಯ ಸಮೀಪದ ಪಾರೆಕಲ್ಲಿನ ಬೋಳುಗುಡ್ಡ ಮಣಿಪಾಲ—ಇಂದು ಆಗುಂಬೆಯ ಸೌಂದರ್ಯವನ್ನು ಹೆಚ್ಚಿಸುತ್ತಿದೆ. ಆ ಬೆಳಕಿನ ಚಕ್ರನೃತ್ಯ ಮುಳುಗುವ ಸೂರ್ಯನ ಪ್ರತಿಸೃಷ್ಟಿಯಂತೆ ರಾತ್ರಿಯುದ್ದಕ್ಕೂ ನಡೆದೇ ಇರುತ್ತದೆ. ಮಣಿಪಾಲದಲ್ಲಿ ಕಾಲೇಜುಗಳ ಸಂತೆಯೇ ದಿನದಿನಕ್ಕೆ ನೆರೆಯುತ್ತಿರುವಾಗ ಆಗುಂಬೆಯ ಉದಯಾಸ್ತವನ್ನಷ್ಟೆ ಹಾಡಿದ ಮಂಕುತಿಮ್ಮ ಹಿಂದೆ ಉಳಿದುದರಲ್ಲಿ ಸೋಜಿಗವಾದರೂ ಏನು ?

ಆಗುಂಬೆಯ ಕಡಿದಾದ ಪರ್ವತಾವಳಿಗಳಲ್ಲಿ ಎಂಟು ಮೈಲುದ್ದದ ಟಾರು ರಸ್ತೆ ಒಂದು ಕೃತ್ರಿಮ ನಾಲೆಯಂತೆ. ಆದರೆ ಪಕ್ಕದಲ್ಲಿಯೇ ನಿಸರ್ಗದ ನಿರ್ಝರಿಣಿ ಅಲ್ಲಿ ಇಲ್ಲದಿಲ್ಲ. ಅದನ್ನು ನೋಡಬೇಕು ಸೋಮೇಶ್ವರದಿಂದ. ಬೆಟ್ಟದ ಕೋಡಿನಲ್ಲಿ ಮೂಡಿದ ತೊರೆಯೊಂದು ಪರ್ವತಾಗ್ರದವರೆಗೂ ಬಂದು ಅಲ್ಲಿಂದ ಸೋಮೇಶ್ವರದ ಕಡೆಗೆ ಆತ್ಮಹತ್ಯೆ ಮಾಡಿಕೊಳ್ಳಲೆಂಬಂತೆ ಧುಮುಕುತ್ತದೆ. ಸೂರ್ಯನಿನ್ನೂ ಮೂಡಿ ಬರುತ್ತಿರುವಾಗ ಅವನ ಕಿರಣಾವಳಿಗಳು ಈ ನಿರ್ಝರಿಣಿಯ ಮೇಲೆ ಬಿದ್ದಾಗ ಆ ಸೊಗಸು, ನಾಚಿ ನಸುನಗುವ ಮುಗ್ಧೆಗಿಂತ ಕಡಮೆಯದುದೇನೂ ಅಲ್ಲ.

ಆಗುಂಬೆ ಬೆಟ್ಟದ ಮೇಲೇರಿ ಬಂದರೆ ಇದೊಂದು ತಪೋವನ ಎಂದು ತೋರಬೇಕು. ಎಲ್ಲಿಲ್ಲದ ಶಾಂತಿ ನೆಮ್ಮದಿ ಮನಸ್ಸನ್ನು ಆವರಿಸಿ ಬಿಡುತ್ತದೆ. ಬೆಳಗಿನ ಮಂಜೋ, ಸಂಜೆಯ ಕುಳಿರುಗಾಳಿಯೋ ಅದಕ್ಕೆ ಕಾರಣವಾಗಿರಬಹುದು. ಆದರೆ ಅದಕ್ಕೂ ಮುಖ್ಯವಾದುದು ಆ ಬಯಲು, ಆದರ ವಿಶಾಲತೆ, ವೈಭವ ಜೀವನ.

ತಿಳಿ ನೀರು ಹರಿವ ಹಳ್ಳ, ಅಡಕೆಯ ತೋಟ, ಹತ್ತಾರು ಮನೆಗಳ ಊರು, ಕಾಡು, ಹೊಲ ಇವು ಎಲ್ಲ ಕಡೆಯಲ್ಲೂ ದೊರೆಯಲಾರವು. ದೊರೆತರೂ ಒಂದಕ್ಕೊಂದು ಇಷ್ಟು ಹೊಂದಿಕೆ



ಆಗುಂಬೆಯ ಸೂರ್ಯಾಸ್ತ

ಯಿಂದ ಇರಲಾರವೆಂದು ನನ್ನ ಭಾವನೆ. ಮಳೆಗಾಲದಲ್ಲಿ ಅತ್ಯಂತ ಹೆಚ್ಚು ಮಳೆ ಸುರಿಯುವ ಬೆಟ್ಟದೂರು ಆಗುಂಬೆ. ಹಾಗೆಂದು ಮಲೆರಾಯನ ( ಮಲೇರಿಯಾ ) ಅಂಜಿಕೆಯಿಂದ ಈ ಊರಿಗೆ ಬರಲಂಜುವರು ಎಷ್ಟೋ ಜನರು. ಹಾಗೆ ನೋಡಿದರೆ ಮಡಿಕೇರಿಯಲ್ಲಿಲ್ಲವೆ ? ಚಳಿ, ಮಲೆರಾಯ ಎಲ್ಲವೂ ? ಆದರೂ ಅದಿಂದು ನಂದನವನವಾಗಿದೆ. ಆಗುಂಬೆಯೂ ನಾಳೆ ಆಗಬಹುದು. ದ್ವಿತೀಯ ಯೋಜನೆಯಲ್ಲಿ ಅಲ್ಲದಿದ್ದರೆ ತೃತೀಯ ಯೋಜನೆಯಲ್ಲಾದರೂ ಆಗಬೇಕು. ಇಲ್ಲಿ ಯಾವ ರೀತಿಯ ತೋಟಗಾರಿಕೆ ಬೆಳೆದೀತೋ ಅದನ್ನು ಬೆಳೆಸಬೇಕು. ಮಳೆಗಾಲದಲ್ಲಲ್ಲದಿದ್ದರೂ ಚಳಿಗಾಲದಲ್ಲಿ ಬೆಳೆವ ಕೆಲವು ಬೆಳೆಗಳನ್ನು ಸುಧಾರಿತ ರೀತಿಯಿಂದ ಬೆಳೆಸುವ ಪ್ರಯತ್ನಗಳಾಗಬೇಕು.

ಸೂರ್ಯನ ಮೂಡುಮುಳುಗಿಗಷ್ಟೇ ಆಗುಂಬೆಯ ಹೆಸರು ಉಳಿದರೆ ತಾನೆ ಏನು ಬಂತು ?

ಆಗುಂಬೆಯ ಗಟ್ಟವೇರುವ ರಸ್ತೆಯ ಕೆಲಭಾಗ ಈಗ ಕುಸಿದು ಬಿದ್ದಿದೆ. ಬೀಳದೆ ಏನು ಮಾಡೀತು? ಬರಿಯ ಕಲ್ಲು ಕಟ್ಟುಪ್ಪುಣಿಯ ಮೇಲೆ ನಿಂತಿದೆ ಕೆಲವೆಡೆ ರಸ್ತೆ. ಅದರ ರಿಪೇರಿಯೂ ನಡೆದಿದೆ. ಹತ್ತಾರು ಸುತ್ತು ಹಾಕಿ ಏರುವ ರಸ್ತೆಗುಂಟ ಸೌಂದರ್ಯ ಇನ್ನೂ ಬೆಳೆಯಬೇಕು. ಪ್ರಕೃತಿಯು ಇದ್ದ ಸೌಂದರ್ಯವನ್ನು ಒಪ್ಪ ಓರಣಗೊಳಿಸದಿದ್ದರೆ ಹೋಗಲಿ, ರಸ್ತೆ ನಿರಪಾಯವೂ ಭದ್ರವೂ ಆಗಿರುವಂತೆ ಭದ್ರ ತಳಪಾಯಬೇಡವೆ ?

ಆಗುಂಬೆ ಸಣ್ಣ ಹಳ್ಳಿಯಾದರೂ ಅದಕ್ಕೆ ಒಂದು ಅಪೂರ್ವ ಆಕರ್ಷಣೆಯಿದೆಯೆಂದು ನನ್ನ ಭಾವನೆ. ಅದೇ ಆಕರ್ಷಣೆ ಮೊನ್ನೆ ಕೊನೆಯ ಬಸ್ಸಿನಲ್ಲಿ ನಾನು ತೀರ್ಥಹಳ್ಳಿಗೆ ಹೋಗಿ ತಂಗುವುದನ್ನು ನಿವಾರಿಸಿ ನನ್ನನ್ನು ಅಲ್ಲಿಯೇ ಉಳಿಯುವಂತೆ ಮಾಡಿತು. ಮೊದಲ ಬಾರಿ ನಾನು ಆಗುಂಬೆಗೆ ಹೋದಾಗ ನಿವೃತ್ತ ನ್ಯಾಯಾಧೀಶರೊಬ್ಬರು ಅಲ್ಲಿ ಬಂದು ಮೊಕ್ಕಾಂ ಮಾಡಿದ್ದರು. ಕಾಶೀ, ರಾಮೇಶ್ವರ ಎಂದು ತೀರ್ಥಯಾತ್ರೆ ಕೈಗೊಳ್ಳಬೇಕಾದವರು ಅವರು. ಅಂಥವರನ್ನು ಆಗುಂಬೆಯ ತಪೋವನವೇಕೋ ಆಕರ್ಷಿಸಿ ಪುನಃಪುನಃ ತನ್ನೆಡೆಗೆ ಬರಮಾಡಿಕೊಳ್ಳುತ್ತಿತ್ತು.

ಗಟ್ಟದ ಮೇಲಿನವರಿಗೂ ಗಟ್ಟದ ಕೆಳಗಿನವರಿಗೂ ಆಗುಂಬೆ ಒಂದು ವಿಹಾರ ಕ್ಷೇತ್ರ. ನಡೆದು ಬರುವ ವಿಹಾರಿಗಳ ಸಂಖ್ಯೆಯೇನೋ ಕಡಮೆ ಇರಬಹುದು. ಅದಕ್ಕೆ ಆಮುಟ್ಟದ ಜನರಲ್ಲಿ ಸೌಂದರ್ಯದೃಷ್ಟಿ ಇನ್ನೂ ಜಾಗೃತವಾಗದಿರುವುದು ಕಾರಣವೆನ್ನಬಹುದು. ಆದರೆ ಕಾರಿನಲ್ಲಿ ಟ್ಯಾಕ್ಸಿಯಲ್ಲಿ, ಬಸ್ಸಿನಲ್ಲಿ ಬಂದು ಆಗುಂಬೆಯನ್ನು ನೋಡಿ ಹೋಗುವವರು ಬಹಳ ಜನ.

ಇದಕ್ಕೂ ಅಧಿಕಸಂಖ್ಯೆಯಲ್ಲಿ ಆಗುಂಬೆಯಿಂದ ತೃಪ್ತರಾಗುವ ಜನರುಂಟು. ಅವರು ನನ್ನಂಥ ಪ್ರಯಾಣಿಕರು. ಗಟ್ಟದಮೇಲೆ ಹೋಗುವ ಕೆಳಗಿನವರು, ಕೆಳಗೆ ಇಳಿಯುವ ಮೇಲಿನವರು ಹೆಚ್ಚಾಗಿ ಆಗುಂಬೆಯ ದಾರಿಯನ್ನೇ ಆರಿಸುತ್ತಾರೆ. ಧರ್ಮಸ್ಥಳ, ಸುಬ್ರಹ್ಮಣ್ಯ, ಉಡುಪಿ ಮುಂತಾದ ಕ್ಷೇತ್ರಪ್ರವಾಸಿಗಳೂ ಆಗುಂಬೆಯ ಸೌಂದರ್ಯಕ್ಕೆ ಮರುಳಾಗುತ್ತಾರೆ.

ಆಗುಂಬೆಯ ನಿಮಿಷಾವಲೋಕನದಿಂದ ಏನು ತೋರಿತೋ ಅದನ್ನಿಲ್ಲಿ ಬರೆದಿದ್ದೇನೆ. ಅಲ್ಲೇ ವಾಸಿಸಿ ಅಲ್ಲಿನವನೆನಿಸಿಕೊಂಡಿದ್ದರೆ ನನಗೆ ಏನೆನಿಸೀತು ಎಂದೀಗ ಊಹಿಸಲಾರೆ.

---

# The Bellary Central Cooperative Stores Limited

Telegrams: RAMSUGAR
P. O. Box No. 21

## BELLARY No. Y. 349

Phone: 52 (Office)
12 (Chairman's residence)

OUR MOTTO IS "EACH FOR ALL & ALL FOR EACH" and our Sole and Supreme Object—"SERVICE". We have many achievements to our credit and our latest and most magnificent of them being

**THE SUGAR FACTORY at Kampli**

Going into Production shortly

*WATCH THE DATE*

We are wholesale & Retail Dealers in Food grains, Pulses, Cement, Iron and Steel Materials, manures etc.

if you want your money's Worth, please make your purchases in our RETAIL SHOP



ANOTHER
4·5 LAKHS
OPEN FOR
SUBSCRIPTION
Subscribe liberally




Our SOAP NUT POWDER is known for its purity and quality. Convince yourself by using it once. Have you tried our pure, delicious COFFEE POWDER? If you have not, you are missing a pleasure every day. Try it Here & now.



BRIGHT PROSPECTS
ASSURED.
HURRY UP LEST YOU SHOULD BE DISAPPOINTED.

## Here are a tew facts that interest you

| | | |
|---|---|---|
| i) | Capacity of the Sugar Plant | 800 tons |
| ii) | Area of the factory Site | 112.88 acres. |
| iii) | Authorised share capital | Rs. 25/- lakhs. |
| iv) | Paid up share capital | Rs. 20.6 lakhs. |
| | Govt. Subscription | Rs. 10 lakhs. |
| v) | Value of each share | Rs. 50/- |

(Entrance fee annas eight per share subject to a maximum of Rs. 10/-)

ನಮ್ಮ ಅಸಂಖ್ಯಾತ ಗ್ರಾಹಕರಿಗೂ. . . .
ಹಿತಚಿಂತಕರಿಗೂ ನೂತನ ವರ್ಷದ ಅಭಿನಂದನೆ.

ಸತತ ೨೯ ವರ್ಷಗಳಿಂದ

✕ ಲೋಕಪ್ರಿಯವಾದ

✕ ಸರ್ವರ ಅಭಿವೃದ್ಧಿಗಾಗಿ

ನಮ್ಮ ಈ ಕೆಳಗಿನ ಬೀಡಿಗಳನ್ನೇ ಉಪಯೋಗಿಸಿರಿ.

- ರಾಯಲ್
- ದೊಡ್ಡ ಪಿಸ್ತೂಲ
- ಸಣ್ಣ ಪಿಸ್ತೂಲ

ಮೆಸರ್ಸ

## ಎಚ್. ಸಾಳವೆ ಕದಮ ಅ್ಯಾಂಡ ಕಂಪನಿ

ನಿಪ್ಪಾಣಿ (ಜಿ. ಬೆಳಗಾವಿ).

ಶಾಖೆಗಳು:
ನಿಪ್ಪಾಣಿ, ಕೊಲ್ಹಾಪೂರ, ಬೆಳಗಾವಿ, ಹುಬ್ಬಳ್ಳಿ, ಮಿರಜಿ.

ಡೀಪೋ:
ನಿಪ್ಪಾಣಿ, ಬೆಳಗಾವಿ, ಕೊಲ್ಹಾಪೂರ.

ನಮ್ಮ ಅಸಂಖ್ಯಾತ ಗ್ರಾಹಕರಿಗೂ ಹಾಗೂ ಹಿತಚಿಂತಕರಿಗೂ
ಈ ದೀಪಾವಳಿ ಹಾಗೂ ಹೊಸ ವರ್ಷವು
ಸುಖಸಮೃದ್ಧಿಯನ್ನೀಯಲಿ

ನಮ್ಮಲ್ಲಿ ಸರ್ವಪ್ರಕಾರದ ಪೆಟ್ರೋಲ ಕಾರಗಳು, ಹಾಗೂ
ಪೆಟ್ರೋಲ ಮತ್ತು ಡಿಜಲ್ ಮೋಟಾರ ಟ್ರಕ್ಕುಗಳು
ಇವುಗಳ ಎಲ್ಲ ಪ್ರಕಾರದ ರಿಪೇರಿಗಳನ್ನು
ಯೋಗ್ಯ ದರಗಳಲ್ಲಿ ಸಕಾಲಕ್ಕೆ ಮಾಡಿಕೊಡುತ್ತೇವೆ.

ಅದರಂತೆ

- ವ್ಹಾಲ್ವ ರೀಫೇಸಿಂಗ,
- ವ್ಹಾಲ್ವಶೀಟ ರೀಫೇಸಿಂಗ
- ವ್ಹಾಲ್ವಶೀಟ ರಿಂಗ ಫಿಟಿಂಗ
- ಬ್ಲಾಕ ರೀಬೋರಿಂಗ
- ಬ್ಲಾಕಸ್ಲೀವ್ಹ ಜ ಫಿಟಿಂಗ ಮತ್ತು
- ಎಲ್ಲ ಪ್ರಕಾರದ ಲೇಥುಗಳ ಮೇಲಿನ ಕೆಲಸ ಗಳಿಗೆ ಸುಪ್ರಸಿದ್ಧವಿವೆ.

## ಜನತಾ ಮೋಟಾರ ವರ್ಕ್ಸ

ಪ್ರೊಪ್ರಾಯಿಟರ:
ರಾಯಪ್ಪಾ ಮೇಸ್ತ್ರಿ

ಧಾರವಾಡ ರೋಡ •••••• ಬೆಳಗಾವಿ

ಬಳ್ಳಾರಿ ನಗರಕ್ಕೆ ಬಂದಾಗ ಮರೆಯದಿರಿ . . .
ರೇಲ್ವೆ ನಿಲ್ದಾಣದಿಂದ ಕೇವಲ ೨ ನಿಮಿಷಗಳ ನಡಿಗೆ

## ಮೀನಾಕ್ಷಿ ಭವನ

ಫೋನ ನಂ. 114

(ಲಕ್ಷ್ಮೀನಾರಾಯಣ ಗುಡಿ ಬೀದಿ)

ಆದರ್ಶ ಬೋರ್ಡಿಂಗ್ ಮತ್ತು ಲಾಜಿಂಗ ಗೃಹ



- ಶುಚಿ–ರುಚಿಯಾದ ಊಟ
- ಮನ ಮೆಚ್ಚುವಫ ಲಹಾರ
- ಆಹ್ಲಾದಕರ ಕಾಫಿ ಮತ್ತು ಚಹ
- ನಮ್ರ ಸೇವೆ
- ಅತ್ಯುತ್ತಮ ವಸತಿ ಸೌಕರ್ಯ

ಇವು ನಮ್ಮ ವೈಶಿಷ್ಟ್ಯಗಳು

ನಮ್ಮ ಒಡೆತನದ ಇತರ ಶಾಖೆಗಳು

ಮೀನಾಕ್ಷಿ ಗಾರ್ಡನ್ ಹೋಟೆಲ್
ಆದವಾನಿ ಬಸ್ ನಿಲ್ದಾಣದ ಹತ್ತಿರ ಬೆಂಗಳೂರ್ ರೋಡ್, ಬಳ್ಳಾರಿ–೨

ಮೀನಾಕ್ಷಿ ಕಾಫೀ ಬಾರ್
ದಲಾಲಿ ಬಜಾರ ಬೆಂಗಳೂರ್ ರೋಡ್, ಬಳ್ಳಾರಿ–೨

ಮಾಲಕರು:— ಕೆ. ಶ್ರೀನಿವಾಸಾಚಾರ್, ಅ್ಯಂಡ ಸನ್ಸ್

ದೀಪಾವಳಿಯು ನಮ್ಮ ಗ್ರಾಹಕರಿಗೆ ಸುಖದಾಯಕವಾಗಲಿ



ನಮ್ಮ ಅಸಂಖ್ಯಾತ ಗ್ರಾಹಕರಿಗೆ ದೀಪಾವಳಿ ಹಾಗೂ
ಹೊಸ ವರ್ಷವು ಸುಖದಾಯಕವಾಗಲಿ

# ನಿಪ್ಪಾಣಿ ವಿಲಾಸ

## ಬೀಡಿಗಳನ್ನೇ ಉಪಯೋಗಿಸಿರಿ!

ಎಲ್ಲೆಡೆಯಲ್ಲಿಯೂ ದೊರೆಯುತ್ತವೆ !



ಶುದ್ಧ ಅಕೋಳಿ ತಂಬಾಕ, ಶ್ರೇಷ್ಠ ಗೊಂದೀ ಯಲೆಗಳು
ಹಾಗೂ ಅಚ್ಚುಕಟ್ಟಾಗಿ ಕಟ್ಟಿದವು



## ಜಿ. ಎನ್. ಕುರಬೇಟಿ ಅ್ಯಂಡ ಬ್ರದರ್ಸ

ನಿಪ್ಪಾಣಿ — (ಜಿ. ಬೆಳಗಾವಿ)

ಡಿಪೋ:— ವಿಜಾಪೂರ

ತಂತಿ: "ಮೈಸೂರ ಕಾಫೀ' ಚಿಕ್ಕಮಗಳೂರ ಫೋನ: ೩೫

# ದಿ ಮೈಸೂರ ಕಾಫೀ ಕ್ಯೂರಿಂಗ ವರ್ಕ್ಸ ಲಿ.

**ಏಜಂಟರು:** ಕಾಫೀ ಬೋರ್ಡ

**ತಯಾರಕರು:** ಆವೆಯಿಂದ ಹದಮಾಡಿದ ಮೂಳೆ ಗೊಬ್ಬರ

**ಪೂರೈಕೆಗಾರರು:** ಸ್ಪ್ರೇ ಯಂತ್ರಗಳು ಹಾಗೂ ಸ್ಪ್ರೇ ವಸ್ತುಗಳು ಸಹಿತವಾಗಿ ತೋಟಗಾರಿಕೆಯ ಎಲ್ಲ ಸಲಕರಣೆಗಳನ್ನು ಪೂರೈಸುತ್ತೇವೆ

**ಹಂಚಿಕೆಗಾರರು:** ಮದ್ರಾಸದ ಮೈಸೂರ ಫರ್ಟಿಲೈಜರ್ಸ ಕಂಪನಿಯವರು ತಯಾರಿಸುವ **ಕಮಲ ಬ್ರ್ಯಾಂಡ** ಗೊಬ್ಬರಗಳ ಮಿಶ್ರಣಗಳನ್ನು ಹಂಚುತ್ತೇವೆ

ವಿವರಗಳಿಗೆ ದಯವಿಟ್ಟು ಸಂಪರ್ಕವನ್ನಿಡಿರಿ:

**ಮ್ಯಾನೇಜರ,**

**ಮೈಸೂರ ಕಾಫೀ ಕ್ಯೂರಿಂಗ ವರ್ಕ್ಸ ಲಿ.,**

ಪೋಸ್ಟ ಬಾಕ್ಸ ನಂ. ೨೩, **ಚಿಕ್ಕಮಗಳೂರ**

ತೀರ ಸಮೀಪದ ರೇಲ್ವೆ ಸ್ಟೇಶನ್: "**ಕಡೂರ**"



**ದೀಪಾವಳಿ ಹಾಗೂ ಹೊಸವರ್ಷವು ನಮ್ಮ ಪಾಲುಧಾರಕರಿಗೂ ಖಾತೇದಾರರಿಗೂ ಸುಖಪ್ರದವಾಗಲಿ!**

# ದಿ ಬ್ಯಾಂಕ ಆಫ್ ಮಹಾರಾಷ್ಟ್ರ ಲಿ.

ಸ್ಥಾಪಿತ: ೧೯೩೫

**ಶೆಡ್ಯೂಲ್ಡ ಬ್ಯಾಂಕ** ಹೆಡ್ ಆಫೀಸ್: **ಪುಣೆ-೨**

**ಡೈರೆಕ್ಟರರ ಮಂಡಳ:**

ಶ್ರೀ ವ್ಹಿ. ಪಿ. ವರ್ದೆ (ಚೇರಮನ್), ಶ್ರೀ ಎನ್. ಜಿ. ಪವಾರ (ವ್ಹಾಯ್ಸ್-ಚೇರಮನ್), ಶ್ರೀ ಡಿ. ಕೆ. ಸಾಠೆ, ಶ್ರೀ ಎಂ. ವ್ಹಿ. ಶಹಾ, ಶ್ರೀ ಎಫ್. ಡಿ. ಪದುಮಜಿ, ಶ್ರೀ ಬಿ. ಎನ್. ಗುಪ್ತೆ, ಶ್ರೀ ಎಂ. ಬಿ. ಜಾಂಭೇಕರ, ಶ್ರೀ ಎಂ. ಎಸ್. ಪರಖೆ.

**ಶಾಖೆಗಳು:**

ಅಹಮದನಗರ, ಅಕೋಲಾ, ಅಮರಾವತಿ, ಔರಂಗಾಬಾದ ಬೆಳಗಾವಿ, ಭಿವಂಡಿ, ಮುಂಬಯಿ (ಫೋರ್ಟ, ಗಿರಗಾಂವ, ದಾದರ, ಹಾಗೂ ಝುವೇರಿ ಬಝಾರ) ಚಾಳೀಸಗಾಂವ, ಧೂಳಿಯಾ, ಹರಿಹರ, ಹುಬ್ಬಳ್ಳಿ, ಹೈದ್ರಾಬಾದ (ದಕ್ಷಿಣ), ಜಳಗಾಂವ, ಜಾಲನಾ, ಕಲ್ಯಾಣ, ಕಿರ್ಲೋಸ್ಕರವಾಡಿ, ಕೊಲ್ಹಾಪೂರ, ಕೋಪರಗಾಂವ, ನಾಗಪುರ, ನಾಂದೇಡ, ನಾಸಿಕ, ಪನವೇಲ, ಪುಣೆ (ಭವಾನಿಪೇಟ, ಡೆಕ್ಕನ ಜಮಖಾನಾ ಹಾಗೂ ಖಡಕಿ), ರತ್ನಾಗಿರಿ, ಸಾಂಗಲಿ, ಸೊಲ್ಲಾಪೂರ ಶ್ರೀರಾಮಪುರ ಹಾಗೂ ಠಾಣೆ.

**ಹೆಡ್ ಆಫೀಸ:**

**ದರೋಲೆ ಬಾಜೀರಾವ ರೋಡ, ಪುಣೆ ೨** (ಫಲ್ಟನ್ ಗಲ್ಲಿ ಹಾಗೂ ಮುರಾರಜಿ ಪೇಟ)

**ಪಿ. ವ್ಹಿ. ಜೋಗ**
ಮ್ಯಾನೇಜರ



ನಮ್ಮ ಗ್ರಾಹಕ ವೃಂದಕ್ಕೆಲ್ಲ ದೀಪಾವಳಿಯು ಸುಖಪ್ರದವಾಗಲಿ!



## ಕರ್ನಾಟಕದಲ್ಲಿಯೇ ನಿರಂತರವಾಗಿ ನಿಲ್ಲಿಸಿದ ಒಂದೇ ಒಂದಾದ



# ಟೈಪ ಫೌಂಡ್ರಿ



ಮುದ್ರಣಾಲಯದ ಒಡೆಯರಿಗೆ:—

**ನಾವು ಎಲ್ಲ ಬಗೆಯ ಇಂಗ್ಲೀಷ, ಕನ್ನಡ, ಮರಾಠಿ ಹಾಗೂ ಹಿಂದೀ ಟೈಪುಗಳನ್ನು ತಯಾರಿಸಿ ಕೊಡುತ್ತೇವೆ. ಇದಲ್ಲದೇ ಬ್ರಾಸ ರೂಲುಗಳು, ಬ್ರಾಸ ಕಂಪೋಜಿಂಗ ಸ್ಟಿಕ್ಕುಗಳು, ಲೆಡ್ ಕಟರುಗಳು, ಪರಪೋರೇಟಿಂಗ ಮಶಿನ್ನುಗಳು, ಚಾವಿಯಿಂದ ಕೂಡಿದ ಹೆಂಪಲ್ ಕ್ವಾಯಿನ್ನುಗಳು ಹಾಗು ಟೈಪು ಕೇಸುಗಳು ನಮ್ಮಲ್ಲಿ ದೊರೆಯುತ್ತವೆ.**

**ನಾವು ಶ್ರೇಷ್ಠವಾದ ಕಾಪರ ಅಲಾಯ್ ಇಂಗ್ಲೀಷ ಟೈಪ ಮೆಟಲ್ ಮಾತ್ರ ಉಪಯೋಗಿಸುವೆವು**

**ಕನ್ನಡದಲ್ಲಿ ಅನೇಕ ಬಗೆಯ ಹೊಸ ಹೊಸ ಟೈಪುಗಳನ್ನು ಮಾಡುತ್ತೇವೆ.**

# ಶ್ರೀ ಆನಂದ ಟೈಪ ಫೌಂಡ್ರಿ

## ಕೊಪ್ಪೀಕರ ರೋಡ, ಹುಬ್ಬಳ್ಳಿ

**ಕರ್ನಾಟಕದ ಪ್ರಖ್ಯಾತ ಮುದ್ರಣಾಲಯಗಳು, ದೈನಿಕ, ಸಾಪ್ತಾಹಿಕ ಹಾಗೂ ಮಾಸಿಕ ವೃತ್ತಪತ್ರಿಕೆಗಳು ನಮ್ಮ ಟೈಪುಗಳನ್ನೇ ಉಪಯೋಗಿಸುತ್ತಾರೆ!**

ಗತಿಸಿ ಹೋದ ಉಷಃಕಾಲಕ್ಕೆ
ನಾವು ಸೇರಿದವರಲ್ಲ. ಆದರೆ
ಬರಲಿರುವ ಉಜ್ವಲ ಭವಿತವ್ಯಕ್ಕೆ
ನಾವು ಹೊಂದಿದವರಾಗಿದ್ದೇವೆ.

— ಶ್ರೀ. ಅರವಿಂದರು.



# ದಿ ಬ್ಯಾಂಕ ಆಫ್ ಕರ್ನಾಟಿಕ ಲಿ.

## ಮುಖ್ಯ ಕಚೇರಿ :——ಹುಬ್ಬಳ್ಳಿ

ಶಾಖೆಗಳು :

ಬೆಳಗಾವಿ, ಬನಹಟ್ಟಿ,
ಧಾರವಾಡ, ಗದಗ,
ಜಮುಖಂಡಿ, ಕುಂದಗೋಳ,
ಮತ್ತು ಸವಣೂರ

ದುಡಿಯುವ ಬಂಡವಲು :
ಅರ್ಧ ಕೋಟಿ ಮಿಕ್ಕಿದೆ

ಠೇವುಗಳಿಗೆ ಆಕರ್ಷಕ ಬಡ್ಡಿದರಗಳಿವೆ.

ವಿವರಗಳಿಗೆ : ಮುಖ್ಯ ಕಚೇರಿಯೊಂದಿಗೆ ಇಲ್ಲವೆ ಶಾಖೆಗಳೊಂದಿಗೆ ಸಂಪರ್ಕ ಬೆಳೆಸಿರಿ....

ನಮ್ಮ ಎಲ್ಲ ಗ್ರಾಹಕರಿಗೂ ಮತ್ತು ಹಿತೈಷಿಗಳಿಗೂ
ದೀಪಾವಳಿಯು ಸಕಲೈಶ್ವರ್ಯವನ್ನು ದಯಪಾಲಿಸಲಿ!

**ಮೊಹರೆ ಹಣಮಂತರಾವ**
ಚೇರಮನ್

Tel: "RANGAPPA" Post Box No. 61 Phone: 48

# CHANNAGERI RANGAPPA & SONS

**DAVANGERE CITY**

Partners:

**Shanti Picture House**
Delux Theatre
**National Industries**
Oil Mill Owners
**National Electric Stores**
Electrical Contractors
Sub Stockists
**for Godrej Steel Products**

Stockists:

**Asbestos Cement Ltd.**
**Associated Electrical Industries Ltd.**
*Branches*:
**Shimoga & Chitaldurg**
Dealers in
**Parles Products**

Visit our Show room at Poona-Bangalore road.

---

ನೂತನ ವರ್ಷದ ಶುಭಾಶಯಗಳು

# ರೀಗಲ್ ವಾಚ್ ಕಂಪೆನಿ



ಗುಡ್ಸೆಡ್ ರೋಡು, ದಾವಣಗೆರೆ ಸಿಟಿ

**ದೀಪಾವಳಿಯ ಇಳಿಸಿದ ರೇಟುಗಳು**

ರಿಜಿಸ್ಟರ್ಡ್ ಕಂಪನಿಯ ವಾಚುಗಳು ಕ್ಲಾಕು ಮತ್ತು ಟೈಂಪೀಸುಗಳು ಯೋಗ್ಯಬೆಲೆಗೆ ಸಿಕ್ಕುತ್ತವೆ.

---

# ಅಶೋಕ ಮೆಟಲ್ ವರ್ಕ್ಸ

ಪಗಡಿಗಲ್ಲಿ, **ಹುಬ್ಬಳ್ಳಿ**

ನಮ್ಮಲ್ಲಿ ಸಮೆ, ಆರತಿ, ಧೂಪಾರ್ತಿ, ನೀಲಂಜನ, ಘಂಟೆ, ಅಖಂಡ ತಂಬಿಗೆ ಮುಂತಾದ ಯಾವತ್ತೂ ನಿತ್ಯೋಪಯೋಗಿ ಸಾಮಾನುಗಳು ವಿಧವಿಧ ಆಕರ್ಷಕ ನಮೂನೆಗಳಲ್ಲಿ ಸಿದ್ಧವಾಗುತ್ತವೆ. ಗ್ರಾಹಕರು ಸಂಪರ್ಕ ಬೆಳೆಸಿರಿ.

**ಹಳೆ ಹಿತ್ತಾಳಿ, ಲೋಹ, ತಾಮ್ರ ವಗೈರೆ ರಾಶಿ ಖರೀದಿ ಮಾಡುತ್ತೇವೆ.**

ಪ್ರೊ:— **ಜಿ. ಸಿ. ಹೊಸಕಟ್ಟಿ**

● ದೀಪಾವಳಿಯ ಅಭಿನಂದನೆಗಳು ●

---

# गुरु प्रेम बिडी




**दत्तात्रय रामचंद्र सांगलीकर**
कोल्हापूर.

ದೀಪಾವಳಿಯ ಶುಭಾಶಯಗಳು

---

ಹೊಸ ಆಡಳಿತೆಯಲ್ಲಿ
ಅತ್ಯಾಧುನಿಕ ಅವಶ್ಯಕತೆಗಳಿಂದ ಸುಸಜ್ಜಿತವಾದ

# ಪ್ರಭಾತ ಬೋರ್ಡಿಂಗ ಹಾಗೂ ಲಾಜಿಂಗ ಹೌಸ

**೧೩೪೬, ರಾಮಲಿಂಗಖಿಂಡಿ, ಬೆಳಗಾವಿ**

✠ ಅತ್ಯುತ್ತಮ ರುಚಿಕರ ಊಟ
✠ ವಸತಿ ಸೌಕರ್ಯ — ನಮ್ರಸೇವೆ — ನಮ್ಮ ವೈಶಿಷ್ಟ್ಯಗಳು.

ಪ್ರೊ. **ಎಸ್. ಎಚ್. ಶಿವತ್ತಯ್ಯಾ.**

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ

---

# ಕರ್ನಾಟಕ ನಶ್ಯ

ಮಂಗಳೂರು

ತಯಾರಕರು
**ಕರ್ನಾಟಕ ಸ್ನಫ್ ಎಂಡ್ ಬೀಡಿ ವರ್ಕ್ಸ್, ಮಂಗಳೂರು.**

ದೀಪಾವಳಿಯು ನಮ್ಮೆಲ್ಲ ಗ್ರಾಹಕರಿಗೆ ಸುಖಪ್ರದವಾಗಲಿ

---



**ತಗಾಯಿ ಸಾಲದ ಮೇಲೆ ಜಗತ್ಪ್ರಸಿದ್ಧ ಕೂಪರ ಆಯಿಲ್ ಇಂಜನುಗಳು.**

ಮೈಸೂರ ರಾಜ್ಯದಲ್ಲಿ ಹಿಟ್ಟಿನ ಗಿರಣಿಗಳಿಗೆ ಲಾಯಿಸನ್ಸ ಕಾರಣವಿಲ್ಲ.

ನಾವು 5-H-P. ದಿಂದ 256-H-P. ಇಂಜನುಗಳನ್ನು ಪೂರೈಸುತ್ತೇವೆ.

**ಎಮ್. ಎಸ್. ಢೇಕಣೆ**, ಮಶಿನರಿ ವ್ಯಾಪಾರಿಗಳು, **ಹುಬ್ಬಳ್ಳಿ.**

